# ಟಿಪ್ಪು ಕೋಟೆಗಳ ರಚನೆ, ತಂತ್ರಜ್ಞಾನ ಮತ್ತು ಮೌಖಿಕ ಕಥನಗಳು

(ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
ಶಿವಕುಮಾರಿ ಎಂ.ಎಸ್.

ಮಾರ್ಗದರ್ಶಕರು
ಡಾ. ವಿಜಯ್ ಪೂಣಚ್ಚ ತಂಬಂಡ
ಪ್ರಾಧ್ಯಾಪಕರು

ಮಾತೆಂಬುದು ಜ್ಯೋತಿರ್ಲಿಂಗ

ಚರಿತ್ರೆ ವಿಭಾಗ
ಸಮಾಜ-ವಿಜ್ಞಾನ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೭

# ಟಿಪ್ಪು ಕೋಟೆಗಳ ರಚನೆ, ತಂತ್ರಜ್ಞಾನ ಮತ್ತು ಮೌಖಿಕ ಕಥನಗಳು

(ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸುತ್ತಿರುವ ಮಹಾಪ್ರಬಂಧ)



ಸಂಶೋಧಕರು
**ಶಿವಕುಮಾರಿ ಎಂ.ಎಸ್.**

ಮಾರ್ಗದರ್ಶಕರು
**ಡಾ.ವಿಜಯ್ ಪೂಣಚ್ಚ ತಂಬಂಡ**
ಪ್ರಾಧ್ಯಾಪಕರು

ಚರಿತ್ರೆ ವಿಭಾಗ
ಸಮಾಜ–ವಿಜ್ಞಾನ ನಿಕಾಯ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬
೨೦೧೭

# ಮಾರ್ಗದರ್ಶಕರ ದೃಢೀಕರಣ ಪತ್ರ

**'ಟಿಪ್ಪು ಕೋಟೆಗಳ ರಚನೆ, ತಂತ್ರಜ್ಞಾನ ಮತ್ತು ಮೌಖಿಕ ಕಥನಗಳು'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದ ಪಿಎಚ್.ಡಿ ಪದವಿಗಾಗಿ ಶಿವಕುಮಾರಿ ಎಂ.ಎಸ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 19. 12. 2017
ಸ್ಥಳ : ವಿದ್ಯಾರಣ್ಯ

(ಡಾ. ವಿಜಯ್ ಪೂಣಚ್ಚ ತಂಬಂಡ)
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಸಂಶೋಧಕರ ಘೋಷಣಾ ಪತ್ರ

**'ಟಿಪ್ಪು ಕೋಟೆಗಳ ರಚನೆ, ತಂತ್ರಜ್ಞಾನ ಮತ್ತು ಮೌಖಿಕ ಕಥನಗಳು'** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಡಾ.ವಿಜಯ್ ಪೂಣಚ್ಚ ತಂಬಂಡ ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 19.12.2017
ಸ್ಥಳ : ವಿದ್ಯಾರಣ್ಯ

Shivakumari.M.S.

**(ಶಿವಕುಮಾರಿ ಎಂ.ಎಸ್)**
ಸಂಶೋಧನ ವಿದ್ಯಾರ್ಥಿ
ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಪರಿವಿಡಿ

# ಪಾರಿಭಾಷಿಕ ಪದಗಳು

| | | |
|---|---|---|
| ೧. ಅಂಬುಗಿಂಡಿ | : | ತೆನೆ / ಕುಂಬೆಯಲ್ಲಿ ನಿರ್ಮಿಸಿರುವ ಕಿರಿದಾದ ರಂಧ್ರಗಳು. ಈ ರಂಧ್ರಗಳ ಮೂಲಕ ಹೊರಗಿನ ಶತ್ರುಗಳ ಮೇಲೆ ಧಾಳಿ ನಡೆಸಲಾಗುತ್ತಿತ್ತು. |
| ೨. ಆಳ್ವೇರಿ | : | ಕೋಟೆಯ ತೆನೆ / ಕೈಪಿಡಿ ಹಿಂಬದಿಯ ಸುತ್ತ ಓಡಾಡಲು ನಿರ್ಮಿಸಿರುವ ದಾರಿ ಅಥವಾ ಪಹರೆ ಕಟ್ಟೆ. |
| ೩. ಇಳಿಜಾರು ಹಾದಿ | : | ಕೋಟೆಯ ಮೇಲ್ಭಾಗಕ್ಕೆ ಏರಲು ಮತ್ತು ಇಳಿಯಲು ನಿರ್ಮಿಸಿರುವ ಓರೆದಾರಿ (ರ್‍ಯಾಂಪ್). |
| ೪. ಕುಂಬೆ | : | ಕೋಟೆ ಗೋಡೆಯ ಮೇಲ್ಭಾಗದಲ್ಲಿ ಪಹರೆ ಕಟ್ಟೆಗೆ ಹೊಂದಿಕೊಂಡಂತೆ ನಿರ್ಮಿಸಿರುವ ಕೈಪಿಡಿ ಗೋಡೆ. |
| ೫. ಕೈಪಿಡಿ | : | ಕುಂಬೆ / ಕೋಟೆ ಗೋಡೆಯ ಮೇಲ್ಭಾಗದಲ್ಲಿ ಪಹರೆಕಟ್ಟೆಗೆ ಹೊಂದಿಕೊಂಡಂತೆ ಇರುವ ಕಿರುಗೋಡೆ. |
| ೬. ಕೊತ್ತಳ | : | ಕೋಟೆಯ ಗೋಡೆಗಳಿಗೆ ಹೊಂದಿಕೊಂಡಂತೆ ಹೊರ ಚಾಚಿರುವ ಚೌಕಾಕಾರದ / ವೃತ್ತಾಕಾರದ ಕೋಟೆಯ ಭಾಗ. |
| ೭. ಕಂದಕ | : | ಕೋಟೆಯ ಸುತ್ತಲು ಇರುವ ಅಗಳು ಅಥವಾ ಕೋಟೆಯ ಸುತ್ತಲು ಇರುವ ನೀರು ತುಂಬುವ ಹೊಂಡ. |
| ೮. ಗಿರಿದುರ್ಗ | : | ಬೆಟ್ಟದ ಮೇಲೆ ನಿರ್ಮಿಸಲ್ಪಟ್ಟಿರುವ ಕೋಟೆ |
| ೯. ಜಲದುರ್ಗ | : | ನೈಸರ್ಗಿಕವಾಗಿ ಸುತ್ತಲು ನೀರಿನಿಂದ ಆವೃತ್ತವಾಗಿರುವ ಕೋಟೆ |
| ೧೦. ತಾರಾಮಂಡಲ | : | ಹೈದರಾಲಿ ಮತ್ತು ಟಿಪ್ಪು ಸುಲ್ತಾನನ ಕಾಲದಲ್ಲಿ ನಿರ್ಮಿಸಲ್ಪಟ್ಟ ಮದ್ದುಗುಂಡು, ರಾಕೆಟ್ ಮೊದಲಾದ ಅಗ್ನಿ ಅಸ್ತ್ರಗಳ ಉತ್ಪಾದನಾ ಕಾರ್ಖಾನೆ. |
| ೧೧. ತೆನೆ | : | ಕೋಟೆ ಗೋಡೆಗಳ ಮೇಲೆ ಮೇಲ್ಮುಖ ಮೊನಚಾಗಿರುವಂತೆ ನಿಲ್ಲಿಸಿರುವ ಬಿಡಿಬಿಡಿಯಾದ ಕಟ್ಟೆ. |
| ೧೨. ದಿಡ್ಡಿ | : | ಕೋಟೆಯ ಹೆಬ್ಬಾಗಿಲಿನಲ್ಲಿ ಅಥವಾ ಅದರ ಪಕ್ಕದಲ್ಲಿ ಇರುವ ಸಣ್ಣಬಾಗಿಲು. ಹೆಬ್ಬಾಗಿಲು ಮುಚ್ಚಿರುವಾಗ ಇದು ತೆರೆದಿರುವುದು. |

೧೩. **ದೊಣೆ** : ಬೆಟ್ಟದ ಮೇಲಿರುವ ಸ್ವಾಭಾವಿಕವಾದ ಹೊಂಡ ಅಥವಾ ಕೊಳ.

೧೪. **ನೆಲದುರ್ಗ** : ಮೈದಾನದಲ್ಲಿ ನಿರ್ಮಿಸಲ್ಪಟ್ಟಿರುವ ಕೋಟೆ.

೧೫. **ಪಹರೆಕಟ್ಟೆ** : ಕೈಪಿಡಿ / ಕುಂಬೆಗೆ ಹೊಂದಿಕೊಂಡಂತೆ ಕೋಟೆಯ ಮೇಲ್ಭಾಗದಲ್ಲಿ ಓಡಾಡಲು ನಿರ್ಮಿಸಿರುವ ದಾರಿ.

೧೬. **ಬತೇರಿ** : ಕೋಟೆ ಮೇಲಿನ ತೋಪುಖಾನೆ.

೧೭. **ಬಾಣದಾಳು** : ರಾಕೆಟ್ ಉಡಾಯಿಸುವ ಸೈನಿಕ.

೧೮. **ಬುರುಜು** : ಫಿರಂಗಿಗಳನ್ನು ನೆಲೆಗೊಳಿಸಿರುವ ಕೊತ್ತಲ / ಬತೇರಿ.

೧೯. **ಬಂದೂಕುಕಿಂಡಿ** : ಕುಂಬೆ / ಕೈಪಿಡಿಗಳಲ್ಲಿ ನಿರ್ಮಿಸಿರುವ ವಿವಿಧ ಕೋನಗಳ ರಂಧ್ರಗಳು. ಇದರ ಮೂಲಕ ಹೊರಗಿನ ಶತ್ರುಗಳ ಮೇಲೆ ಬಂದೂಕಿನಿಂದ ಆಕ್ರಮಣ ನಡೆಸಲಾಗುತ್ತಿತ್ತು. ಅಂಬುಗಿಂಡಿಗಳಂತೆಯೇ ಇವುಗಳನ್ನು ಬಳಸಲಾಗುತ್ತಿತ್ತು.

೨೦. **ಮದ್ದಿನಮನೆ** : ಮದ್ದು, ಗುಂಡುಗಳನ್ನು ಸಂಗ್ರಹಿಸುವ ಕೋಣೆ / ಸ್ಥಳ.

೨೧. **ಮಳೆಕೋಯ್ಲು** : ನೀರಿನ ಸಂರಕ್ಷಣಾ ವಿಧಾನ.

೨೨. **ಮುಗಿಲಟ್ಟಣೆ** : ಕೋಟೆಯ ಒಳಭಾಗದಲ್ಲಿರುವ ಎತ್ತರವಾದ. ವೀಕ್ಷಣಾಗೋಪುರ.

೨೩. **ಮಿನಾರೇಟ್** : ಕೋಟೆಯ ಕೈಪಿಡಿ ಗೋಡೆಯ ಮೂಲೆಗಳಲ್ಲಿ ಗಾರೆಯಿಂದ ನಿರ್ಮಿಸಲ್ಪಟ್ಟಿರುವ ನೀಳವಾದ ಕಿರುಕಂಬ.

೨೪. **ವನದುರ್ಗ** : ದಟ್ಟವಾದ ಅರಣ್ಯದ ನಡುವೆ ನಿರ್ಮಿಸಲ್ಪಟ್ಟಿರುವ ಕೋಟೆ.

೨೫. **ಹುಲಿಮೊಗ** : ಕೋಟೆಯ ಹೆಬ್ಬಾಗಿಲು.

# ಸಂಕ್ಷೇಪಣೆಗಳು

| | | |
|---|---|---|
| ಇ.ಕ | : | ಇನ್‌ಸ್ಕ್ರಿಪ್ಷನ್ಸ್ ಆಫ್ ಕರ್ನಾಟಕ |
| ಅ.ಶಾ. | : | ಅರ್ಥಶಾಸ್ತ್ರ |
| ಇ.ದರ್ಶ | : | ಇತಿಹಾಸ ದರ್ಶನ |
| ಇ.ಚಾ.ಬಾ | : | ಇನ್‌ಸ್ಕ್ರಿಪ್ಷನ್ಸ್ ಆಫ್ ದಿ ಚಾಲುಕ್ಯಾಸ್ ಆಫ್ ಬಾದಾಮಿ |
| ಇ.ದರ್ಪ | : | ಇತಿಹಾಸ ದರ್ಪಣ |
| ಎ.ಇಂ | : | ಎಪಿಗ್ರಾಫಿಯ ಇಂಡಿಕಾ |
| ಎ.ಇಂ.ಆ | : | ಆನ್ ಎನ್‌ಸೈಕ್ಲೋಪೀಡಿಯ ಆಫ್‌ಇಂಡಿಯನ್‌ಆರ್ಕಿಯೋಲಜಿ. |
| ಎ.ಕ | : | ಎಪಿಗ್ರಾಫಿಯ ಕರ್ನಾಟಿಕ |
| ಐ.ಸಿ.ಎಚ್.ಆರ್ | : | ಇಂಡಿಯನ್ ಕೌನ್ಸಿಲ್ ಆಫ್ ಹಿಸ್ಟಾರಿಕಲ್ ರಿಸರ್ಚ್ |
| ಎಂ.ಎ.ಆರ್ | : | ಆನ್ಯೂಯಲ್ ರಿಪೋರ್ಟ್ ಆಫ್ ದಿ ಮೈಸೂರ ಆರ್ಕಿಯೋಲಜಿಕಲ್ ಡಿಪಾರ್ಟ್‌ಮೆಂಟ್ |
| ಕ.ವಿ.ಶಾ.ಸಂ | : | ಕರ್ನಾಟಕ ವಿಶ್ವವಿದ್ಯಾಲಯ ಶಾಸನ ಸಂಪುಟ |
| ಕ್ಯೂ.ಜೆ.ಎಂ.ಎಸ್ | : | ದಿ ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ |
| ಕಂ.ನ.ರಾ.ವಿ | : | ಕಂಠೀರವ ನರಸರಾಜ ವಿಜಯ |
| ಕಂಪನಿ | : | ಇಂಗ್ಲಿಷ್ ಈಸ್ಟ್ ಇಂಡಿಯಾ |
| ಚ.ಅ | : | ಚರಿತ್ರೆ ಅಧ್ಯಯನ |
| ಜ.ಕ.ಸ್ಟ | : | ಜರ್ನಲ್ ಆಫ್ ಕರ್ನಾಟಕ ಸ್ಟಡೀಸ್ |
| ಜಂ.ನಾ | : | ಜಂಗ್ ನಾಮ |
| ಪ್ರ.ಕಂ.ಇಂ. | : | ಪ್ರವಾಸಿ ಕಂಡ ಇಂಡಿಯಾ |
| ಮ.ಸ್ಮೃ | : | ಮನುಸ್ಮೃತಿ |
| ಮೈ.ವಿ.ವಿ.ಕೋ | : | ಮೈಸೂರು ವಿಶ್ವವಿದ್ಯಾಲಯ ವಿಶ್ವಕೋಶ |
| ರಾ.ನಾ | : | ರಾಜೇಂದ್ರನಾಮೆ |
| ಶ್ರೀಮ. ವಂ. | : | ಶ್ರೀಮನ್ಮಹಾರಾಜರವರ ವಂಶಾವಳಿ |
| ಸ.ಶು.ಕಾ | : | ಸತ್ಯಶುದ್ಧ ಕಾಯಕ |
| ಸೌ.ಇಂ.ಇ | : | ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ |

# ಅಧ್ಯಾಯ-೧

# ಪ್ರಸ್ತಾವನೆ

ಆಧುನಿಕ ಭಾರತದ ಚರಿತ್ರೆ ಮಾತ್ರವಲ್ಲ ಯೂರೋಪಿನ ಚರಿತ್ರೆ ಬರವಣಿಗೆಗಳಲ್ಲಿಯೂ ಕೇಂದ್ರಬಿಂದುವಾದ ಟಿಪ್ಪು ಸುಲ್ತಾನನ ಚರಿತ್ರೆಯ ಮುಖ್ಯವಾದ ಆಕರ್ಷಣೆ ಅವನ ಸುತ್ತ ಹೆಣೆದಿರುವ ರಾಜಕೀಯ ಚರಿತ್ರೆ. ಮೈಸೂರು ಅರಸರ ಬಲಹೀನತೆಯನ್ನು ಉಪಯೋಗಿಸಿಕೊಂಡು ಪ್ರವರ್ಧಮಾನಕ್ಕೆ ಬಂದ ಹೈದರಾಲಿ ಖಾನನು ಮೈಸೂರು ಸಂಸ್ಥಾನದ ಚರಿತ್ರೆಗೆ ಭಿನ್ನವಾದ ಆಯಾಮವನ್ನು ನೀಡಿದ್ದನು. ಇವನ ಕಾಲಘಟ್ಟದಲ್ಲಿ ಕನ್ನಡ ಭಾಷಿಕರಿಗೆ ಮೀಸಲಾಗಿದ್ದ ಮೈಸೂರು ಸಂಸ್ಥಾನವು ಕೊಡಗು, ತುಳು, ಮಲೆಯಾಳ, ತಮಿಳು, ತೆಲುಗು, ಮರಾಠಿ, ಉರ್ದು ಭಾಷಿಕರಿರುವ ಪ್ರದೇಶಗಳಿಗೂ ವಿಸ್ತರಿಸಿತು. ಆ ಮೂಲಕ ಬಹುತೇಕ ದಕ್ಷಿಣ ಭಾರತದ ಬಹಳಷ್ಟು ಪ್ರದೇಶಗಳಿಗೆ ತನ್ನ ಸಂಸ್ಥಾನವನ್ನು ವಿಸ್ತರಿಸಿ ದಕ್ಷಿಣ ಭಾರತದ ಅತ್ಯಂತ ಪ್ರಬಲ ಅರಸನಾದನು. ಆ ಪರಂಪರೆ ಅವನ ಮಗ ಟಿಪ್ಪುವಿನ ಕಾಲಕ್ಕೂ ಮುಂದುವರಿಯಿತು. ಹೈದರನಿಗಿಲ್ಲದ ಶತ್ರುಗಳು, ರಾಜಕೀಯ ಜಂಜಾಟಗಳು ಟಿಪ್ಪುವನ್ನು ಕಾಡಿದರೂ, ಟಿಪ್ಪುವು ತನ್ನ ಕೌಶಲ್ಯ ಮತ್ತು ಚತುರತೆಯಿಂದ ತನ್ನ ಸಂಸ್ಥಾನವನ್ನು ರಕ್ಷಿಸಲು ಅಪರಿಮಿತವಾಗಿ ಪ್ರಯತ್ನಪಟ್ಟನು. ದಕ್ಷಿಣ ಭಾರತದ ಬಹಳಷ್ಟು ದೇಸಿ ಅರಸರು ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿಯ ಜೊತೆಗೆ ಮೈತ್ರಿಕೂಟವನ್ನು ರಚಿಸಿ, ಟಿಪ್ಪುವನ್ನು ಮಣಿಸಲು ಯತ್ನಿಸಿದರು. ತನ್ನ ಸಂಸ್ಥಾನದ ಒಳಗಿನ ಶತ್ರುಗಳು ಕೂಡ ಟಿಪ್ಪುವನ್ನು ನಾಶಮಾಡಲು ಹವಣಿಸುತ್ತಿದ್ದರು. ಹೀಗಾಗಿ ಟಿಪ್ಪುವಿಗೆ ತನ್ನನ್ನು ತನ್ನ ಸಂಸ್ಥಾನವನ್ನು ಆ ಮೂಲಕ

ತನ್ನ ಸಂಸ್ಥಾನದ ಜನರನ್ನು ಕಾಪಾಡುವ ಜವಾಬ್ದಾರಿಯಿತ್ತು. ಈ ಹಿನ್ನೆಲೆಯಲ್ಲಿ ಅವನು ತನ್ನ ರಕ್ಷಣಾ ವ್ಯವಸ್ಥೆಯನ್ನು ಬಲಪಡಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಅವನ ರಕ್ಷಣಾ ವ್ಯವಸ್ಥೆಯ ಪ್ರಮುಖವಾದ ಭಾಗವೇ ಅವನ ಕಾಲದ ಕೋಟೆಗಳು. ಹೈದರನು ಆಕ್ರಮಿಸಿದ ಕೋಟೆಗಳನ್ನು ಹಾಗೂ ತಾನು ಆಕ್ರಮಿಸಿದ ಕೋಟೆಗಳನ್ನು ತನ್ನ ರಕ್ಷಣಾ ನೀತಿಯನ್ನು ಅನುಷ್ಠಾನಗೊಳಿಸಲು ಟಿಪ್ಪುವು ಸಜ್ಜುಗೊಳಿಸಿದ. ಇಂತಹ ನೂರಾರು ಕೋಟೆಗಳನ್ನು ಅವನು ಆಧುನೀಕರಣಗೊಳಿಸಿ, ತನ್ನ ಸೈನ್ಯವನ್ನಿಟ್ಟನು. ತನ್ನಲ್ಲಿನ ಯುದ್ಧೋಪಕರಣಗಳನ್ನು, ಮದ್ದುಗುಂಡುಗಳನ್ನು, ಫಿರಂಗಿ ರಾಕೆಟ್‌ಗಳನ್ನು ಇಂತಹ ಸುಸಜ್ಜಿತ ಕೋಟೆಗಳಲ್ಲಿಟ್ಟನು. ರಕ್ಷಣೆಯ ದೃಷ್ಟಿಯಿಂದ ಆಯಕಟ್ಟಿನ ಜಾಗದಲ್ಲಿರುವ ಕೋಟೆಗಳನ್ನು ಈ ಕಾರಣಗಳಿಗಾಗಿ ಅವನು ಬಲಪಡಿಸಿದನು.

ಪ್ರಸ್ತುತ ಮಹಾಪ್ರಬಂಧವು ಬಹುಮುಖ್ಯವಾಗಿ ಟಿಪ್ಪುವಿನ ಕೋಟೆಗಳ ರಚನಾ ವಿನ್ಯಾಸಗಳನ್ನು ಅಭ್ಯಸಿಸುತ್ತದೆ. ಇದರೊಂದಿಗೆ ಟಿಪ್ಪುವು ಹೊಸಹೊಸ ತಂತ್ರಜ್ಞಾನದ ಮೂಲಕ ಆ ಕೋಟೆಗಳನ್ನು ಸಂಸ್ಥಾನ ರಕ್ಷಣೆಗಾಗಿ ಸಿದ್ಧಗೊಳಿಸಿದ ವಿವರಗಳನ್ನು ಅಭ್ಯಸಿಸುವ ಪ್ರಯತ್ನವನ್ನು ಮಾಡಲಾಗುತ್ತದೆ. ಶಿಷ್ಟ ಸಾಹಿತ್ಯದಿಂದ, ಪತ್ರಾಗಾರ ದಾಖಲೆಗಳಿಂದ ರೂಪುಗೊಳಿಸಬಹುದಾದ ಈ ಬಗೆಯ ಚರಿತ್ರೆಯನ್ನು ಕೋಟೆಯೊಂದಿಗೆ ಅವಿನಾಭಾವ ಸಂಬಂಧ ಹೊಂದಿದ್ದ ಜನಸಾಮಾನ್ಯರ ಮೌಖಿಕ ಪರಂಪರೆಯನ್ನು ದಾಖಲಿಸುವುದರೊಂದಿಗೆ ಚರಿತ್ರೆ ಬರವಣಿಗೆಯ ಇನ್ನೊಂದು ಮಗ್ಗುಲನ್ನು ಅರ್ಥ ಮಾಡಿಕೊಳ್ಳುವ ಉದ್ದೇಶವನ್ನು ಈ ಮಹಾಪ್ರಬಂಧವು ಹೊಂದಿದೆ. ಈ ಮೂಲಕ ಕರ್ನಾಟಕ ಚರಿತ್ರೆಯಲ್ಲಿ ಅಷ್ಟೇನೂ ಚರ್ಚೆಗೊಳಗಾಗದೆ ಟಿಪ್ಪುವಿನ ಕಾಲದಲ್ಲಿ ಪ್ರವರ್ಧಮಾನದಲ್ಲಿದ್ದ ವಿಜ್ಞಾನ, ತಂತ್ರ ಜ್ಞಾನ, ಕೌಶಲ್ಯಗಳು ಮುಂತಾದ ವಿಚಾರಗಳ ಬಗ್ಗೆ ಬೆಳಕು ಚೆಲ್ಲಲು ಪ್ರಯತ್ನಿಸಲಾಗುವುದು. ಕರ್ನಾಟಕ ಚರಿತ್ರೆಯ ಬರವಣಿಗೆಯಲ್ಲಿ ಅಷ್ಟೇನು ಮುಖ್ಯವಾಗಿ ಪರಿಗಣಿಸಲ್ಪಡದ 'ರಾಜಕೀಯೇತರ' ಚರಿತ್ರೆಯ ವಿವಿಧ ಆಯಾಮಗಳನ್ನು ಅಭ್ಯಸಿಸುವ ಪ್ರಯತ್ನವನ್ನು ಈ ಸಂದರ್ಭದಲ್ಲಿ ಮಾಡಲಾಗಿದೆ.

ಹಾಗೆ ನೋಡಿದರೆ ಯೂರೋಪಿಯನ್ ಶಕ್ತಿಗಳು ಕನ್ನಡ ಪ್ರದೇಶಗಳಿಗೆ ಕಾಲಿಡುವ ಮೊದಲೇ ಹೈದರ್ ಟಿಪ್ಪುವು ಭಾರತೀಯ ತಂತ್ರಜ್ಞಾನದ ಮೂಲಕ ತಮ್ಮ ಸಂಸ್ಥಾನವನ್ನು ಆಧುನೀಕರಣಗೊಳಿಸಲು ಆರಂಭಿಸಿದರು ಎನ್ನುವುದು ಗಮನಾರ್ಹವಾಗಿದೆ. ಹಾಗಾಗಿಯೇ ಕಂಪನಿ ಸರ್ಕಾರ ಅಥವಾ ಟಿಪ್ಪುವಿನ ಸರ್ಕಾರ ಪ್ರವರ್ಧಮಾನಕ್ಕೆ ಬರುವ ಮೊದಲೇ ಕೋಟೆ ನಿರ್ಮಾಣದಲ್ಲಿ ಕಂಡು ಕೊಳ್ಳಲಾದ ತಂತ್ರಜ್ಞಾನದ ವಿವರಗಳನ್ನು ಇದೇ ಸಂದರ್ಭದಲ್ಲಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ. ಅಂತಹ ಪರಂಪರೆಯ ಮುಂದುವರಿಕೆಯನ್ನು ಹೈದರ್ – ಟಿಪ್ಪುವಿನ ಕಾಲಘಟ್ಟದಲ್ಲಿ ಕಾಣಬಹುದು.

ಟಿಪ್ಪುವು ಅದಕ್ಕೆ ಆವನ ಕೌಶಲ್ಯದಿಂದಾಗಿ, ರಾಜತಾಂತ್ರಿಕ ನಿಲುವುಗಳಿಂದಾಗಿ, ಫ್ರೆಂಚ್‌ರೊಂದಿಗೆ ತಾನು ಹೊಂದಿದ್ದ ಸಂಬಂಧಗಳಿಂದಾಗಿ ತನ್ನ ಹಿಂದಿನ ಪರಂಪರೆಯನ್ನು ಮತ್ತಷ್ಟು ಆಧುನೀಕರಣಗೊಳಿಸಿದನು. ಹೀಗಾಗಿ ಕನ್ನಡ ಭಾಷಿಕ ಪ್ರದೇಶಗಳಲ್ಲಿ ಆಧುನಿಕತೆ ಎನ್ನುವುದು ಕಂಪನಿ ಸರ್ಕಾರ ಪ್ರವರ್ಧಮಾನಕ್ಕೆ ಬರುವ ಮೊದಲೇ ರೂಪುಗೊಂಡಿತ್ತು ಎಂಬುದನ್ನು ಗಮನಿಸಬಹುದಾಗಿದೆ. ಕಂಪನಿ ಸರ್ಕಾರವು ವಸಾಹತು ಶಕ್ತಿಯಾಗಿ ಸ್ಥಿತ್ಯಂತರವಾಗುವ ಮೊದಲಿದ್ದ ಕೋಟೆಗಳ ಸ್ವರೂಪ, ರಚನೆ, ತಂತ್ರಜ್ಞಾನ ಇತ್ಯಾದಿಗಳನ್ನು ಈ ಹಿನ್ನೆಲೆಯಲ್ಲಿ ಪುನರ್‌ರಚಿಸುವ ಪ್ರಯತ್ನವನ್ನು ಪ್ರಸ್ತುತ ಮಹಾಪ್ರಬಂಧವು ಹೊಂದಿದೆ.

***

ಈಗಾಗಲೇ ಚರ್ಚಿಸಿದಂತೆ ಇತಿಹಾಸದ ಆರಂಭ ಕಾಲದಿಂದ ವಿಕಾಸ ಹೊಂದುತ್ತಾ ಬಂದಿರುವ ದಕ್ಷಿಣ ಭಾರತದ ಕೋಟೆಗಳು ೧೮ನೆಯ ಶತಮಾನದ ಉತ್ತರಾರ್ಧದಲ್ಲಿ ತಾಂತ್ರಿಕವಾಗಿ ಉಚ್ಛ್ರಾಯ ಸ್ಥಿತಿ ತಲುಪಿದವು. ರಕ್ಷಣಾ ವಿನ್ಯಾಸ, ತಂತ್ರಜ್ಞಾನ ಮತ್ತು ಆಕ್ರಮಣವನ್ನು ಪ್ರತಿರೋಧಿಸುವ ದೃಷ್ಟಿಯಿಂದ ಈ ಕಾಲದ ಕೋಟೆಗಳು ಮುಖ್ಯವಾಗುತ್ತವೆ. ಈ ಕಾಲಘಟ್ಟದಲ್ಲಿ ಒಂದು ಕಡೆ ಯೂರೋಪ್ ಮಾದರಿಯ ಕೋಟೆಗಳ ತಂತ್ರಜ್ಞಾನದ ಆಗಮನದ ಜೊತೆಗೆ ಹೊಸ ಹೊಸ ಆಕ್ರಮಣದ ಶಸ್ತ್ರಾಸ್ತ್ರಗಳ ಪರಿಚಯವನ್ನು ಗುರುತಿಸಬಹುದಾಗಿದೆ. ಮತ್ತೊಂದು ಕಡೆ ಜಗತ್ತಿನ ವಿವಿಧ ಭಾಗಗಳಿಂದ ತನ್ನ ಸಂಸ್ಥಾನಕ್ಕೆ ತಂತ್ರಜ್ಞರು ಮತ್ತು ತಂತ್ರಜ್ಞಾನವನ್ನು ಬರಮಾಡಿಕೊಂಡ ಟಿಪ್ಪು ಸುಲ್ತಾನನ ಪ್ರಯತ್ನವನ್ನು ಗಮನಿಸಬಹುದಾಗಿದೆ.[೧] ಇದರಿಂದಾಗಿ ದಕ್ಷಿಣ ಭಾರತದ ಕೋಟೆಗಳಲ್ಲಿ ಗಮನಾರ್ಹವಾದ ಬದಲಾವಣೆಗಳು ಘಟಿಸಿದವು.

ಟಿಪ್ಪು ಸುಲ್ತಾನನು ತನ್ನ ತಂದೆಯಿಂದ ಬಳುವಳಿಯಾಗಿ ಬಂದ ಮೈಸೂರು ಸಂಸ್ಥಾನವನ್ನು ದಕ್ಷಿಣ ಭಾರತದಾದ್ಯಂತ ವಿಸ್ತರಿಸುವ ಮಹತ್ವಕಾಂಕ್ಷೆಯಿಂದ ಕೋಟೆ ಮತ್ತು ಸೇನೆಗಳನ್ನು ಅಭಿವೃದ್ಧಿಪಡಿಸಿದನು. ಆಯಕಟ್ಟಿನ ಕೋಟೆಗಳು ಸಂಸ್ಥಾನದ ರಕ್ಷಣಾ ಸಾಧನಗಳಾದರೆ, ಸೈನ್ಯವು ಆಕ್ರಮಣದ ಸಾಧನಗಳಾಗಿದ್ದವು. ಆದ್ದರಿಂದ ಇವೆರಡನ್ನೂ ಪರಿಣಾಮಕಾರಿಗೊಳಿಸಿದನು. ಅವುಗಳ ಮೂಲಕ ತನ್ನ ಕಾರ್ಯ ಸಾಧನೆಗೆ ಪ್ರಯತ್ನಿಸಿದನು. ಇದು ಬ್ರಿಟಿಷರೊಂದಿಗೆ ಸಂಘರ್ಷಕ್ಕೆ ಎಡೆಮಾಡಿಕೊಟ್ಟಿತು. ಆದ್ದರಿಂದ ಟಿಪ್ಪುವು ಸಂಸ್ಥಾನದ ರಕ್ಷಣೆಗಾಗಿ ಆಧುನಿಕ ತಂತ್ರಜ್ಞಾನಗಳೊಂದಿಗೆ ಕೆಲವು ಕೋಟೆಗಳನ್ನು ಹೊಸದಾಗಿಯೂ ಹಾಗೂ ಹಳೆಯ ಕೋಟೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿಯೂ ಪುನರ್‌ರಚಿಸಿದನು. ಈ ಹಿನ್ನೆಲೆಯಲ್ಲಿ ಟಿಪ್ಪುವಿನ ಕಾಲದ ಕೋಟೆಗಳ ರಚನೆ ಮತ್ತು ಅವುಗಳಲ್ಲಿನ ತಂತ್ರಜ್ಞಾನವನ್ನು ಅರ್ಥ ಮಾಡಿಕೊಳ್ಳುವುದು ಅವಶ್ಯವಾಗಿದೆ.

ಟಿಪ್ಪುವಿನ ಕಾಲದಲ್ಲಿ ಕೋಟೆಗಳ ಸ್ವರೂಪ ಮತ್ತು ರಚನೆಯಲ್ಲಾಗಿರುವ ಬದಲಾವಣೆ ಹಾಗೂ ಹೊಸ ಸೇರ್ಪಡೆಗಳನ್ನು ಗುರುತಿಸಬಹುದು. ಹೀಗೆ ಬದಲಾಗಿರುವ ತಂತ್ರಜ್ಞಾನವನ್ನು ಟಿಪ್ಪು ಪೂರ್ವದ ಕೋಟೆಗಳೊಂದಿಗೆ ತುಲನೆ ಮಾಡಿ ಅರ್ಥ ಮಾಡಿಕೊಳ್ಳುವ ಉದ್ದೇಶವನ್ನು ಪ್ರಸ್ತುತ ಮಹಾಪ್ರಬಂಧವು ಇಟ್ಟುಕೊಂಡಿದೆ. ಅದಕ್ಕಾಗಿ ಟಿಪ್ಪುವಿನ ಕಾಲದ ಆಯ್ದ ಕೆಲವು ಕೋಟೆಗಳನ್ನು ಪ್ರಾತಿನಿಧಿಕವಾಗಿ ತೆಗೆದುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ. ಅಲ್ಲದೆ, ಹೊಸ ತಂತ್ರಜ್ಞಾನದ ಮೂಲ ಮತ್ತು ಬಳಕೆಗೆ ತರಲಾದ ಹೊಸ ಶಸ್ತ್ರಾಸ್ತ್ರಗಳು; ಅವುಗಳನ್ನು ನಿರ್ಮಿಸಲು ಕಾರಣ ಮತ್ತು ಪ್ರೇರಣೆಗಳನ್ನು ಚರ್ಚೆಗೆತ್ತಿಕೊಳ್ಳಲಾಗಿದೆ.

ಮೊದಲನೆಯದಾಗಿ, ವೃತ್ತಾಕಾರದ ಕೊತ್ತಳ, ಇಳಿಜಾರು ಹಾದಿಗಳು, ವಿಶಾಲವಾದ ಪಹರೆಕಟ್ಟೆ, ಆಳೆತ್ತರದ ಕೈಪಿಡಿಗಳು, ವಿಶಿಷ್ಟವಾದ ಮದ್ದಿನ ಮನೆಗಳು ಇತ್ಯಾದಿಗಳು. ಎರಡನೆಯದಾಗಿ, ಅಗ್ನಿಅಸ್ತ್ರಗಳ ತಯಾರಿಕೆಗಾಗಿಯೇ ಸಂಸ್ಥಾನದ ನಾಲ್ಕು ಕೋಟೆಗಳಲ್ಲಿ ತಾರಾಮಂಡಲಗಳ ನಿರ್ಮಾಣ. ಮೂರನೆಯದಾಗಿ, ಹಿಂದಿನ ಮಣ್ಣಿನ ಕೋಟೆಗಳನ್ನು ಗಾರೆ ಮತ್ತು ಕಲ್ಲನ್ನು ಬಳಸಿ ಬಲಗೊಳಿಸಲಾಯಿತು. ನಾಲ್ಕನೆಯದಾಗಿ, ಕೋಟೆಗಳ ರಚನೆಯ ತಂತ್ರಜ್ಞಾನದಲ್ಲಿ ನೆರವಾದ ಫ್ರೆಂಚ್ ವಿನ್ಯಾಸಕಾರರು. ಐದನೆಯದಾಗಿ, ಶಸ್ತ್ರಾಸ್ತ್ರಗಳಾದ ಫಿರಂಗಿ, ಬಂದೂಕುಗಳನ್ನು ತಯಾರಿಸಲು ಫ್ರೆಂಚ್ ತಂತ್ರಜ್ಞರ ಸಹಕಾರ. ಆರನೆಯದಾಗಿ, ಚೀನಾದಿಂದ ಪರಿಚಯಗೊಂಡಿದ್ದ ರಾಕೆಟ್ ತಂತ್ರಜ್ಞಾನವನ್ನು ವಿಶ್ವದಲ್ಲಿಯೇ ಬಲಿಷ್ಠ ಸಾಧನವಾಗಿ ರೂಪಿಸಿ, ಪರಿಣಾಮಕಾರಿಯಾಗಿ ಯುದ್ಧಗಳಲ್ಲಿ ಬಳಸಲಾಯಿತು. ಏಳನೆಯದಾಗಿ, ಜಲಸಂರಕ್ಷಣೆ ಮತ್ತು ಬಳಕೆಯ ವಿಧಾನ ಹಾಗೂ ನೈರ್ಮಲ್ಯ ವ್ಯವಸ್ಥೆ. ಎಂಟನೆಯದಾಗಿ, ಕೋಟೆಯಲ್ಲಿ ಬಂದಿಖಾನೆಗಳು ಮತ್ತು ವಾಸಸ್ಥಳಗಳಿಗಾಗಿ ಯುಕ್ತಸ್ಥಳಗಳ ಬಳಕೆ. ಹೀಗೆ ಟಿಪ್ಪು ಕಾಲದಲ್ಲಿ ಕೋಟೆಯ ತಂತ್ರಜ್ಞಾನದ ಮೂಲ, ಅವುಗಳ ಅಳವಡಿಕೆಗೆ ಕಾರಣ ಮತ್ತು ಪ್ರೇರಣೆ ಹಾಗೂ ಹೊಸ ಶಸ್ತ್ರಾಸ್ತ್ರಗಳ ಉಪಯೋಗವನ್ನು ಕುರಿತಾದ ಅಂಶಗಳನ್ನು ಪಟ್ಟಿ ಮಾಡಬಹುದು.

### ೧.೧ ಅಧ್ಯಯನದ ಹಿನ್ನೆಲೆ

ಟಿಪ್ಪು ಸುಲ್ತಾನ್ ಫ್ರೆಂಚರ ಜೊತೆಗೆ ಸ್ನೇಹವನ್ನು ಮತ್ತು ಬ್ರಿಟಿಷರ ವಿರುದ್ಧ ಶತ್ರುತ್ವವನ್ನು ಕಟ್ಟಿಕೊಂಡು ಬ್ರಿಟಿಷರ ರಾಜಕೀಯ ವಿಸ್ತರಣೆಗೆ ದೊಡ್ಡ ತಡೆಯುಂಟು ಮಾಡಿದನು. ಈ ರೀತಿಯ ಪ್ರತಿರೋಧಿಸುವ ಶಕ್ತಿಯನ್ನು ಟಿಪ್ಪುವಿಗೆ ತಂದುಕೊಟ್ಟಿದ್ದು ಆತನ ಸೈನಿಕ ಶಕ್ತಿ ಮತ್ತು ರಕ್ಷಣಾ ತಂತ್ರಜ್ಞಾನ. ಟಿಪ್ಪುವಿನ ಸೈನಿಕ ಶಕ್ತಿ ಮತ್ತು ರಕ್ಷಣಾ ವ್ಯವಸ್ಥೆಗಳು ಅವನ ತಂದೆ ಹೈದರಾಲಿಯಿಂದ ಸಹಜವಾಗಿಯೇ ಬಳುವಳಿಯಾಗಿ ಬಂದಿತ್ತು. ಮೈಸೂರು ಸಂಸ್ಥಾನವನ್ನು ಆಧುನೀಕರಣಗೊಳಿಸುವ ಮೊದಲ ಪ್ರಯತ್ನ

ಹೈದರನಿಂದಾಯಿತು. ಅವುಗಳನ್ನು ರಕ್ಷಣಾ ವ್ಯವಸ್ಥೆ ಮತ್ತು ಸೈನಿಕ ವ್ಯವಸ್ಥೆಯಲ್ಲಿಯೂ ಗುರುತಿಸಬಹುದು. ಕರ್ನಾಟಿಕ್ ಯುದ್ಧಗಳಲ್ಲಿ ಮೈಸೂರು ಸೇನೆಯ ಪರವಾಗಿ ಭಾಗವಹಿಸಿದ್ದ ಹೈದರಾಲಿಯು ಅಲ್ಲಿ ಯೂರೋಪ್ ಮಾದರಿಯ ಯುದ್ಧ ತಂತ್ರಜ್ಞಾನ ಮತ್ತು ಸೈನಿಕ ಶಿಸ್ತನ್ನು ಸಮೀಪದಿಂದ ನೋಡಲು, ಅವುಗಳನ್ನು ಕಲಿಯಲು ಮತ್ತು ಅಳವಡಿಸಿಕೊಳ್ಳಲು ಸಾಧ್ಯವಾಯಿತು. ಫ್ರೆಂಚರ ನೆರವಿನಿಂದ ಅವನು ಯೂರೋಪಿಯನ್ ಮಾದರಿಯ ಯುದ್ಧ ತಂತ್ರಜ್ಞಾನ ಮತ್ತು ತರಬೇತಿಯನ್ನು ತನ್ನ ಸೇನೆಗೆ ನೀಡಿದನು. ಹೈದರಾಲಿಯ ಪೂರ್ವಿಕರು ಯೋಧ ಮನೆತನಕ್ಕೆ ಸೇರಿದವರಾದ್ದರಿಂದ ಸಹಜವಾಗಿಯೇ ಅವನಲ್ಲಿ ಯುದ್ಧಕಲೆಯು ಕರಗತವಾಗಿತ್ತು. ಹೈದರಾಲಿಯು ಅಪಾಯಕಾರಿ ಸಂದರ್ಭಗಳಲ್ಲಿಯೂ ಧೃತಿಗೆಡದೆ ಎದುರಾಳಿಗಳನ್ನು ಮಣಿಸುವ ತಂತ್ರಗಳನ್ನು ರೂಪಿಸಬಲ್ಲ ಚತುರನಾಗಿದ್ದನು.[೨] (ವಿಲ್ಕ್ಸ್ ೧೮೧೦: ೩೫೨; ಮೊಹಿಬ್ಬುಲ್ ಹಸನ್ ೧೯೮೮: ೧–೩).

ಟಿಪ್ಪು ಸುಲ್ತಾನನು ಬಾಲ್ಯದಿಂದಲೇ ತನ್ನ ತಂದೆಯಿಂದ ಯುದ್ಧ ತರಬೇತಿಯನ್ನು ಹೊಂದಿದನು. ಯುದ್ಧಗಳಲ್ಲಿ ಭಾಗವಹಿಸುತ್ತಾ ಯುದ್ಧಕಲೆಯನ್ನು ಮೈಗೂಡಿಸಿಕೊಂಡನು. ಹೀಗಾಗಿ ಇವನು ಸಹಜವಾಗಿ ಹೊಸ ಹೊಸ ಶಸ್ತ್ರಾಸ್ತ್ರ ತಂತ್ರಜ್ಞಾನದ ಜೊತೆಜೊತೆಗೆ ರಕ್ಷಣೆಗೂ ಕೂಡ ಹೆಚ್ಚಿನ ಆದ್ಯತೆ ನೀಡತೊಡಗಿದನು. ಫ್ರೆಂಚರೊಡನೆ ಹೈದರನು ಹೊಂದಿದ್ದ ಸೌಹಾರ್ದಯುತ ಸ್ನೇಹ ಸಂಬಂಧವನ್ನು ಟಿಪ್ಪುವು ಕೂಡ ಮುಂದುವರಿಸಿದನು. ಇವನು ತನ್ನ ಸೈನಿಕ ಅಗತ್ಯಗಳಾದ ಫಿರಂಗಿ, ಬಂದೂಕು, ನೌಕೆ ಮೊದಲಾದ ಶಸ್ತ್ರಾಸ್ತ್ರಗಳ ತಂತ್ರಜ್ಞಾನದ ಜೊತೆಗೆ ತಂತ್ರಜ್ಞರನ್ನು ಫ್ರಾನ್ಸ್ ದೇಶದಿಂದ ಬರಮಾಡಿಕೊಂಡನು. ಹೀಗೆ ಟಿಪ್ಪು ಸುಲ್ತಾನನು ಕೂಡ ರಕ್ಷಣೆ ಮತ್ತು ಸೈನಿಕ ವ್ಯವಸ್ಥೆಯಲ್ಲಿ ಹೊಸ ಬದಲಾವಣೆಗಳನ್ನು ತಂದನು. ಇದರೊಂದಿಗೆ ತನ್ನ ಸಂಸ್ಥಾನವನ್ನು ಆಧುನೀಕರಣಗೊಳಿಸಲು ಪ್ರಯತ್ನಿಸಿದನು. ಒಂದು ಕಡೆ ರಕ್ಷಣಾ ವ್ಯವಸ್ಥೆಯನ್ನು, ಇನ್ನೊಂದು ಕಡೆ ತನ್ನ ಸಂಸ್ಥಾನದ ಅಭಿವೃದ್ಧಿಯ ಕನಸನ್ನು ಅನುಷ್ಠಾನಗೊಳಿಸಲು ಟಿಪ್ಪುವು ತೀವ್ರವಾಗಿ ಹೆಣಗಾಡಿರುವುದು ಕಂಡುಬರುತ್ತದೆ. ಇಲ್ಲಿ ಕಂಡು ಬರುವ ಸಾಮಾನ್ಯ ಅಂಶವೆಂದರೆ ಈ ಎರಡು ವಿಚಾರಗಳನ್ನು ಅನುಷ್ಠಾನಕ್ಕೆ ತಂದದ್ದು ಅವನ ಅಧಿಕಾರ ಕೇಂದ್ರದ ಬಹುಮುಖ್ಯ ಭಾಗವಾಗಿದ್ದ ಕೋಟೆಗಳ ಮೂಲಕವೇ. ಆಧುನಿಕ ಕರ್ನಾಟಕ ಚರಿತ್ರೆ ರಚನೆಯ ಸಂದರ್ಭದಲ್ಲಿ ಅದರಲ್ಲಿಯೂ ಟಿಪ್ಪುವಿನ ಚರಿತ್ರೆ ರಚನೆಯ ಸಂದರ್ಭದಲ್ಲಿ ಕೋಟೆಯ ಸ್ವರೂಪ, ತಂತ್ರಜ್ಞಾನ ಹಾಗೂ ಕೋಟೆಗೆ ಸಂಬಂಧಿಸಿದ ವಿವಿಧ ವಿಚಾರಗಳ ಬಗ್ಗೆ ಅಲ್ಲಲ್ಲಿ ಅಲ್ಪಸ್ವಲ್ಪ ವಿವರಗಳಿವೆಯೇ ಹೊರತು ಒಂದು ಸಮಗ್ರ ಅಧ್ಯಯನವನ್ನು ಕಾಣುವುದು ವಿರಳ. ಪ್ರಸ್ತುತ ಮಹಾಪ್ರಬಂಧವು ಈ ಹಿನ್ನೆಲೆಯಲ್ಲಿ ಟಿಪ್ಪುವಿನ ಚರಿತ್ರೆಗೆ ಸಂಬಂಧಿಸಿದ ಈ ಬಗೆಯ ಮಿತಿಗಳನ್ನು ಮೀರಲು ಶ್ರಮಿಸಿದೆ. ಆದ್ದರಿಂದ ಕೋಟೆಗಳ

ಸ್ವರೂಪ, ತಂತ್ರಜ್ಞಾನ, ಐತಿಹ್ಯ ಇತ್ಯಾದಿ ವಿಚಾರಗಳ ಕುರಿತು ಅಧ್ಯಯನವನ್ನು ನಡೆಸುವ ಉದ್ದೇಶದಿಂದ ಪ್ರಸ್ತುತ ಮಹಾಪ್ರಬಂಧವನ್ನು ರೂಪಿಸಲಾಗಿದೆ.

ಟಿಪ್ಪುವಿನ ರಕ್ಷಣಾ ತಂತ್ರಜ್ಞಾನ ಮತ್ತು ಸೈನಿಕ ವ್ಯವಸ್ಥೆಯನ್ನು ರೂಪಿಸುವಲ್ಲಿ ಫ್ರೆಂಚರ ಕೊಡುಗೆ ಗಮನಾರ್ಹವಾಗಿದೆ. ಟಿಪ್ಪುವು ಹೊಸದಾಗಿ ನಿರ್ಮಿಸಿದ ಕೋಟೆಗಳಿಗಿಂತಲೂ ತನ್ನ ಹಿಂದಿನ ಕೋಟೆಗಳಲ್ಲಿ ತಾಂತ್ರಿಕ ಬದಲಾವಣೆಗಳನ್ನು ತಂದಿರುವುದೇ ಹೆಚ್ಚು. ಅವನ ಕಾಲದಲ್ಲಿ ಹೊಸದಾಗಿ ನಿರ್ಮಾಣವಾದ ಕೋಟೆಗಳಲ್ಲಿ ಮಂಜರಾಬಾದ್ ಒಂದು. ಇದನ್ನು ಫ್ರೆಂಚ್ ತಂತ್ರಜ್ಞರ ನೆರವಿನಿಂದ ನಿರ್ಮಿಸಿರುವುದು ಕಂಡುಬರುತ್ತದೆ. ಇದನ್ನು ಯೂರೋಪ್ ಮಾದರಿಯ ಕೋಟೆಯ ಸ್ವರೂಪವಾದ ನಕ್ಷತ್ರಾಕಾರದಲ್ಲಿ ನಿರ್ಮಿಸಿರುವುದನ್ನು ಕಾಣಬಹುದು. ಹೀಗೆ ರಕ್ಷಣೆಯ ಪ್ರಮುಖ ಸಾಧನಗಳಾದ ಕೋಟೆಗಳ ತಾಂತ್ರಿಕ ಅಭಿವೃದ್ಧಿಗೆ ಟಿಪ್ಪುವು ನಿರಂತರ ಪ್ರಯತ್ನಿಸಿದನು. ಅದಕ್ಕಾಗಿ ಹಿಂದೆ ನಿರ್ಮಾಣಗೊಂಡಿದ್ದ ಕೋಟೆಗಳನ್ನು ತಾಂತ್ರಿಕ ದೃಷ್ಟಿಯಿಂದ ಮೇಲ್ದರ್ಜೆಗೇರಿಸುವ ಮೂಲಕ ಸಮಕಾಲೀನ ಅಗತ್ಯತೆಗೆ ತಕ್ಕಂತೆ ಪರಿವರ್ತಿಸಿದನು. ಹೀಗೆ ಕೋಟೆಗಳನ್ನು ಆಧುನಿಕ ಯುದ್ಧತಂತ್ರ ಮತ್ತು ಶಸ್ತ್ರಾಸ್ತ್ರಗಳ ಸವಾಲುಗಳಿಗೆ ಅನುಗುಣವಾಗಿ ರೂಪಿಸುವ ಕೆಲಸ ಮಾಡಿದನು. ಈ ಹಿನ್ನೆಲೆಯಲ್ಲಿ ಕೋಟೆಗಳಲ್ಲಿನ ತಾಂತ್ರಿಕ ಸಂಗತಿಗಳನ್ನು ಅರಿಯುವುದೇ ಪ್ರಸ್ತುತ ಮಹಾಪ್ರಬಂಧದ ಕೇಂದ್ರ ವಿಷಯವಾಗಿದೆ.

ವಸಾಹತುಗಾರರು ಇಡೀ ಭಾರತವನ್ನು ಸ್ವಾಧೀನಪಡಿಸಿಕೊಳ್ಳುವವರೆಗೂ ಕೋಟೆಗಳು ರಕ್ಷಣಾ ಸೂತ್ರದ ಪದಗಳಾಗಿದ್ದವು. ಹೈದರ್ ಮತ್ತು ಟಿಪ್ಪು ಆಳ್ವಿಕೆಯ ಪ್ರದೇಶದಲ್ಲಿ ಸಾವಿರಾರು ಕೋಟೆಗಳಿದ್ದವು. ಅವುಗಳಲ್ಲಿ ಬಹುತೇಕ ಕೋಟೆಗಳು ಇವರು ಅಧಿಕಾರಕ್ಕೆ ಬರುವುದಕ್ಕೆ ಮುನ್ನವೇ ನಿರ್ಮಾಣಗೊಂಡಿದ್ದವು. ಅವು ಬಹುತೇಕ ಮಣ್ಣಿನ ಕೋಟೆಗಳಾಗಿದ್ದವು. ಆದ್ದರಿಂದ ಅವುಗಳನ್ನು ದುರಸ್ತಿಪಡಿಸಿ, ಪುನರ್ರಚಿಸಿ ಕಲ್ಲಿನ ಭದ್ರ ಕೋಟೆಗಳಾಗಿ ಮಾರ್ಪಡಿಸಿ, ಗಾರೆಗಚ್ಚುಗಳಿಂದ ಭದ್ರಪಡಿಸಿದರು. ಜೊತೆಗೆ ಆಯಕಟ್ಟಿನ ಸ್ಥಳಗಳಲ್ಲಿ ಹೊಸದಾಗಿಯೂ ಕೋಟೆಗಳನ್ನು ಕಟ್ಟಿಸಿದರು. ಎತ್ತರವಾದ ಗೋಡೆಗಳು, ಕೊತ್ತಳ–ಬತೇರಿಗಳು, ಕಂದಕಗಳು, ರ್‍ಯಾಂಪ್‌ಗಳು, ಒಳಚರಂಡಿಗಳು, ಕೈಪಿಡಿ ಗೋಡೆಗಳು, ರಹಸ್ಯ ಮಾರ್ಗಗಳು ಮತ್ತು ನೀರುಗುಂಡಿಗಳು, ಎತ್ತರವಾದ ಹೆಬ್ಬಾಗಿಲುಗಳು ನಿರ್ಮಾಣವಾದವು. ಇಂದಿಗೂ ಕಂಡುಬರುವ ಹೈದರ್ ಮತ್ತು ಟಿಪ್ಪು ಕಾಲದ ಮುಖ್ಯ ಕೋಟೆಗಳಲ್ಲಿ ಶ್ರೀರಂಗಪಟ್ಟಣ, ಚಿತ್ರದುರ್ಗ, ನಂದಿದುರ್ಗ, ದೇವನಹಳ್ಳಿ, ದಿಂಡಿಗಲ್, ಅಂಬೂರು, ಬಿದನೂರು, ಮಡಿಕೇರಿ, ಮಿಡಿಗೇಶಿ, ಮಧುಗಿರಿ, ಬೆಂಗಳೂರು, ಮಂಜರಾಬಾದ್ ಮುಂತಾದವುಗಳನ್ನು ಹೆಸರಿಸಬಹುದು. ಈ ಕೋಟೆಗಳು ಬಹು

ಆಯಾಮದ ಹಿನ್ನೆಲೆಯಲ್ಲಿ ನೆಲೆಗೊಂಡಿದ್ದು, ಮಾಹಿತಿ ಸಂಪರ್ಕದ ಸರಪಳಿಗಳಾಗಿಯೂ ಕಾರ್ಯನಿರ್ವಹಿಸುತ್ತಿದ್ದವು.

ಟಿಪ್ಪುವು ಶಸ್ತ್ರಾಸ್ತ್ರಗಳ ಉತ್ಪಾದನೆಗಾಗಿ ಸಂಸ್ಥಾನದ ನಾಲ್ಕು ಸ್ಥಳಗಳಲ್ಲಿ ತಾರಾಮಂಡಲ ಹೆಸರಿನಲ್ಲಿ ಕಾರ್ಖಾನೆಗಳನ್ನು ಸ್ಥಾಪಿಸಿದನು. ಅವುಗಳೇ ಬೆಂಗಳೂರು, ಶ್ರೀರಂಗಪಟ್ಟಣ, ಚಿತ್ರದುರ್ಗ ಮತ್ತು ಬಿದನೂರುಗಳಾಗಿವೆ. ಇಲ್ಲಿ ಮದ್ದು, ಗುಂಡುಗಳನಲ್ಲದೆ, ಫಿರಂಗಿ, ಬಂದೂಕು ಮತ್ತು ರಾಕೆಟ್‌ಗಳನ್ನು ಸಹ ಉತ್ಪಾದಿಸಲಾಗುತ್ತಿತ್ತು. ಈ ಶಸ್ತ್ರಾಸ್ತ್ರಗಳು ಸಮಕಾಲೀನ ಜಗತ್ತಿನಲ್ಲಿ ಅತ್ಯುತ್ತಮ ಯುದ್ಧೋಪಕರಣಗಳಾಗಿದ್ದವು. ಈ ಶಸ್ತ್ರಾಸ್ತ್ರಗಳನ್ನು ಯುದ್ಧಭೂಮಿಯಲ್ಲಿ ಮಾತ್ರವಲ್ಲ; ಕೋಟೆಗಳಲ್ಲಿಯೂ ಪ್ರಯೋಗಿಸಲು ಬೇಕಾದ ವ್ಯವಸ್ಥೆಗಳನ್ನು ಮಾಡಲಾಗಿತ್ತು.[೩]

ಟಿಪ್ಪುವಿನ ಕೋಟೆಗಳನ್ನು ಅಧ್ಯಯನ ದೃಷ್ಟಿಯಿಂದ ಎರಡು ರೀತಿಯಲ್ಲಿ ವರ್ಗೀಕರಣ ಮಾಡಿಕೊಳ್ಳಲಾಗಿದೆ. ಒಂದು – ಸಾಮಾನ್ಯ ಕೋಟೆಗಳು ಮತ್ತು ಎರಡು – ಸೈನಿಕ ಕೋಟೆಗಳು. ಸಾಮಾನ್ಯ ಕೋಟೆಗಳು ಸಂಸ್ಥಾನದಲ್ಲಿ ಗ್ರಾಮಗಳು, ವಾಡೆಗಳು ಮತ್ತು ದೇವಾಲಯಗಳ ಸುತ್ತ ಕಂಡುಬರುವ ಪ್ರಾಕಾರಗಳಾಗಿವೆ. ಪ್ರಸ್ತುತ ಅಧ್ಯಯನವನ್ನು ಪ್ರಾತಿನಿಧಿಕವಾಗಿ ತೆಗೆದುಕೊಳ್ಳಲಾಗಿರುವ ಕೆಲವು ಸೈನಿಕ ಕೋಟೆಗಳ ಸುತ್ತ ಕೇಂದ್ರೀಕರಿಸಲಾಗಿದೆ. ಈ ಕೋಟೆಗಳನ್ನು ಸೈನಿಕ ಶಕ್ತಿ ಮತ್ತು ಅದು ಹೊಂದಿರುವ ಕಂದಾಯ ಪ್ರದೇಶದ ದೃಷ್ಟಿಯಿಂದ ಎರಡು ವಿಧಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳಲ್ಲಿ ಒಂದು; ಪ್ರಧಾನ ಕೋಟೆಗಳು, ಮತ್ತೊಂದು ಸಣ್ಣ ಕೋಟೆಗಳು.

ಟಿಪ್ಪುವಿನ ಕಾಲದ ಮೈಸೂರು ಸಂಸ್ಥಾನವು ಕರ್ನಾಟಕ, ತಮಿಳುನಾಡು, ಕೇರಳ ಮತ್ತು ಆಂಧ್ರಪ್ರದೇಶಗಳ ಕೆಲವು ಭಾಗಗಳನ್ನು ವ್ಯಾಪಿಸಿದ್ದರಿಂದ ನೂರಾರು ಪ್ರಧಾನ ಮತ್ತು ಸಣ್ಣ ಕೋಟೆಗಳನ್ನು ಒಳಗೊಂಡಿತ್ತು. ಹಾಗಾಗಿ ಟಿಪ್ಪು ಆಳ್ವಿಕೆಯ ಕಾಲದ ಕೋಟೆಗಳ ಅಧ್ಯಯನವು ಹಿಡಿತಕ್ಕೆ ಸಿಗದಷ್ಟು ವಿಸ್ತಾರವಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಶ್ರೀರಂಗಪಟ್ಟಣ, ಬೆಂಗಳೂರು, ಚಿತ್ರದುರ್ಗ, ಮಡಿಕೇರಿ, ಮಂಜರಾಬಾದ್, ಶಿರಾ, ನಂದಿದುರ್ಗ, ದೇವನಹಳ್ಳಿ, ಗುಡಿಬಂಡೆ, ಹುಲಿಯೂರುದುರ್ಗ, ಹುತ್ರಿದುರ್ಗಗಳನ್ನು ಮತ್ತು ತಮಿಳುನಾಡಿನ ವೆಲ್ಲೂರು, ಕೇರಳದ ಬೇಕಲ್ ಹಾಗೂ ಆಂಧ್ರಪ್ರದೇಶದ ಪೆನುಗೊಂಡಗಳನ್ನು ಪ್ರಾತಿನಿಧಿಕವಾಗಿ ತೆಗೆದುಕೊಂಡು ಅಧ್ಯಯನ ನಡೆಸಲಾಗಿದೆ.

ಟಿಪ್ಪು ಕಾಲದ ಕೋಟೆಗಳನ್ನು ಅಧ್ಯಯನ ಕೈಗೊಳ್ಳುವ ಸಮಕಾಲೀನ ಸಾಹಿತ್ಯಾಧಾರಗಳ ಜೊತೆಗೆ, ಪತ್ರಾಗಾರದ ದಾಖಲೆಗಳು, ಪತ್ರವ್ಯವಹಾರಗಳು ಮತ್ತು ಕ್ಷೇತ್ರಕಾರ್ಯಗಳು ಪ್ರಮುಖ ಆಧಾರಗಳಾಗಿವೆ. ಇದರ ಜೊತೆಗೆ ಇತ್ತೀಚಿನ ವರ್ಷಗಳಲ್ಲಿ ಚರಿತ್ರೆಯ

ರಚನೆಗೆ ಪ್ರಮುಖ ಆಕರಗಳಾಗಿ ಮೌಖಿಕ ಇತಿಹಾಸವನ್ನು ಬಳಸಿಕೊಳ್ಳಲಾಗುತ್ತಿದೆ. ಈ ಮೊದಲು ಜಾನಪದ ತಜ್ಞರು ಮೌಖಿಕ ಸಾಹಿತ್ಯಗಳನ್ನು ಸಂಗ್ರಹಿಸುವ ಮತ್ತು ದಾಖಲಿಸುವುದರ ಜೊತೆಗೆ ವಿಶ್ಲೇಷಿಸುವ ಪ್ರಯತ್ನವನ್ನೂ ಮಾಡಿದ್ದಾರೆ. ಕರ್ನಾಟಕದಲ್ಲಿ ಜಾನಪದ ತಜ್ಞರು ನಡೆಸಿರುವ ಈ ಬಗೆಯ ಕೆಲಸಗಳನ್ನು ಗಮನಿಸಲಾಗಿದೆ. ಅಲ್ಲದೆ, ಚರಿತ್ರೆಯ ಸಂಶೋಧಕರು ಮೌಖಿಕ ಆಕರಗಳ ಮೂಲಕ ಚರಿತ್ರೆಯನ್ನು ಕಟ್ಟುವ ಪ್ರಯತ್ನವನ್ನು ಕಳೆದೆರಡು ದಶಕಗಳಿಂದ ಮಾಡುತ್ತಿರುವುದನ್ನು ಪರಿಶೀಲಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದಲ್ಲಿ ತಂತ್ರಜ್ಞಾನ ಮತ್ತು ಮೌಖಿಕ ಚರಿತ್ರೆಗಳನ್ನು ವಿಭಿನ್ನ ವಿನ್ಯಾಸಗಳೊಂದಿಗೆ ಹೊಸೆದು ಚರಿತ್ರೆಯನ್ನು ಕಟ್ಟಿಕೊಡುವ ವಿನೂತನ ಪ್ರಯತ್ನ ಮಾಡಲಾಗಿದೆ.

## ೧.೨ ಉದ್ದೇಶ ಮತ್ತು ಮಹತ್ವ

ಪ್ರಸ್ತುತ ಸಂಶೋಧನ ಮಹಾಪ್ರಬಂಧದಲ್ಲಿ ಟಿಪ್ಪು ಕಾಲದ ಕೋಟೆಗಳಲ್ಲಿನ ತಾಂತ್ರಿಕ ವೈಶಿಷ್ಟತೆಗಳನ್ನು ಅಧ್ಯಯನ ಮಾಡುವ ಪ್ರಯತ್ನವನ್ನು ನಡೆಸಲಾಗಿದೆ. ಟಿಪ್ಪುವಿನ ಕಾಲಘಟ್ಟದ ಆರಂಭದವರೆಗೂ ಕೋಟೆಗಳ ರಚನೆ ಮತ್ತು ತಾಂತ್ರಿಕತೆಯ ಲಕ್ಷಣಗಳನ್ನು ಇದೇ ಸಂದರ್ಭದಲ್ಲಿ ಅಭ್ಯಾಸಿಸಲಾಗಿದೆ. ಸಾಮಾನ್ಯವಾಗಿ ಟಿಪ್ಪು ಪೂರ್ವದ ಕೋಟೆಗಳಲ್ಲಿ ಅಧ್ಯಯನದ ದೃಷ್ಟಿಯಿಂದ ದ್ವಾರ, ಕೊತ್ತಳ, ಅಗಳೆ, ತೆನೆ, ಮುಗಿಲಟ್ಟಣೆ, ಕಲ್ಲು ಮತ್ತು ಮಣ್ಣಿನಿಂದ ನಿರ್ಮಿಸಿದ ಗೋಡೆ ಮುಂತಾದ ಭಾಗಗಳನ್ನು ಗುರುತಿಸಬಹುದು. ಇವುಗಳು ಮಧ್ಯಕಾಲದ ಕೊನೆಯ ಭಾಗದವರೆಗೆ ಸಾಂಪ್ರದಾಯಿಕವಾಗಿ ನಿರ್ಮಿಸಲ್ಪಡುತ್ತಿದ್ದ ಕೋಟೆಯ ಮಾದರಿಗಳಾಗಿದ್ದವು. ಮೊದಲಿಗೆ ಈ ಸಾಂಪ್ರದಾಯಿಕ ಕೋಟೆಗಳ ಲಕ್ಷಣಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಈ ಸಾಂಪ್ರದಾಯಿಕ ಕೋಟೆಗಳಲ್ಲಿ ಟಿಪ್ಪುವು ಹಲವು ಮಾರ್ಪಾಟುಗಳನ್ನು ತಂದು ಶತ್ರುಗಳ ಆಕ್ರಮಣವನ್ನು ಪ್ರತಿರೋಧಿಸಬಲ್ಲ ಎಲ್ಲ ಕ್ರಮಗಳನ್ನು ಅನುಸರಿಸಿದನು. ಆ ಮಾರ್ಪಾಟುಗಳನ್ನು ಸಂಶೋಧನೆಯ ಅಧ್ಯಯನದ ಮೂಲಕ ಗುರುತಿಸಲಾಗುವುದು. ಮುಖ್ಯವಾಗಿ ಟಿಪ್ಪು ಕಾಲದ ಕೋಟೆಗಳಲ್ಲಿ ಕಂಡುಬರುವ ವೃತ್ತಾಕಾರದ ಕೊತ್ತಳಗಳ ನಿರ್ಮಾಣ, ಗಾರೆಯೊಂದಿಗೆ ನಿರ್ಮಿಸಿದ ಕಲ್ಲಿನ ಕೋಟೆಗೋಡೆ, ವಿಶಾಲವಾದ ಪಹರೆಕಟ್ಟೆ, ಇಳಿಯಲು ಮತ್ತು ಏರಲು ಜಾರು ಹಾದಿ, ಮದ್ದಿನ ಮನೆಗಳು, ಎತ್ತರವಾದ ಕೈಪಿಡಿಗಳು, ಫಿರಂಗಿಗಳನ್ನು ಇಡುವ ಬತೇರಿಗಳು, ರಾಕೆಟ್. ತಾರಾಮಂಡಲಗಳ ಪ್ರಾಮುಖ್ಯತೆಯನ್ನು ರಕ್ಷಣಾ ತಂತ್ರಜ್ಞಾನದ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಆ ತಂತ್ರಜ್ಞಾನವನ್ನು ಎಲ್ಲಿಂದ ಮತ್ತು ಹೇಗೆ ಟಿಪ್ಪು ಎರವಲು ಪಡೆದನು ಎಂಬುದರ ಚಾರಿತ್ರಿಕ ಮಹತ್ವವನ್ನು ಗುರುತಿಸಲಾಗಿದೆ. ಕೋಟೆಗಳಲ್ಲಿನ ಈ ಹೊಸ ತಂತ್ರಜ್ಞಾನವನ್ನು ಎಷ್ಟು ಪರಿಣಾಮಕಾರಿಯಾಗಿ ರಕ್ಷಣೆಯ ದೃಷ್ಟಿಯಿಂದ ಬಳಸಿಕೊಳ್ಳಲಾಯಿತು ಎಂಬುದನ್ನು

ಚರ್ಚಿಸಲಾಗಿದೆ. ಈ ಎಲ್ಲ ದೃಷ್ಟಿಕೋನಗಳಿಂದ ಕೋಟೆಯ ಚರಿತ್ರೆಯಲ್ಲಿಯೇ ಟಿಪ್ಪುವಿನ ಕಾಲದ ಕೋಟೆಗಳ ಪ್ರಾಮುಖ್ಯತೆ ಮತ್ತು ವೈಶಿಷ್ಟ್ಯವನ್ನು ಅರಿಯುವ ಮೂಲಕ ಅಂದಿನ ಕಾಲದ ಕೋಟೆಗಳ ತಾಂತ್ರಿಕ ಔನತ್ಯವನ್ನು ಗುರುತಿಸಲು ಪ್ರಯತ್ನವನ್ನು ನಡೆಸಲಾಗಿದೆ.

ಏಕೆಂದರೆ, ಭಾರತದಲ್ಲಿ ಹರಪ್ಪ ನಾಗರಿಕತೆಯ ಕಾಲದಿಂದ ಆರಂಭವಾದ ಕೋಟೆಗಳ ಚರಿತ್ರೆಯಲ್ಲಿ ಉಚ್ಛ್ರಾಯ ಕಾಲವೆಂದು ಟಿಪ್ಪುವಿನ ಕಾಲಘಟ್ಟವನ್ನು ಗುರುತಿಸಬಹುದಾಗಿದೆ. ರಕ್ಷಣಾ ದೃಷ್ಟಿಯಿಂದ ಟಿಪ್ಪುವಿನ ಕೋಟೆಗಳನ್ನು ಹೆಚ್ಚಿನ ಪರೀಕ್ಷೆಗೆ ಒಳಪಡಿಸಲಾಗಿದೆ. ಏಕೆಂದರೆ, ರಕ್ಷಣೆ ಮತ್ತು ಆಕ್ರಮಣದ ನೀತಿಗಳೇ ಪ್ರತಿಯೊಬ್ಬ ರಾಜನ ರಾಜಕೀಯ ನಿಲುವುಗಳನ್ನು ರೂಪಿಸುತ್ತದೆ. ಬಲಿಷ್ಠ ರಕ್ಷಣಾ ವ್ಯವಸ್ಥೆ ಮತ್ತು ಆಕ್ರಮಣ ಶಕ್ತಿಗಳನ್ನು ಹೊಂದಿದ್ದವನು ಅನುಸರಿಸುವ ನೀತಿಗೂ, ದುರ್ಬಲ ರಕ್ಷಣಾ ವ್ಯವಸ್ಥೆ ಮತ್ತು ಆಕ್ರಮಣ ಶಕ್ತಿಯನ್ನು ಹೊಂದಿದ್ದವನು ಅನುಸರಿಸುವ ನೀತಿಗೂ ಭಿನ್ನತೆಗಳಿರುತ್ತವೆ. ದುರ್ಬಲನು ಹೊಂದಾಣಿಕೆಯ ನೀತಿಯ ಮೊರೆ ಹೋದರೆ, ಬಲಿಷ್ಠನು ವಿಸ್ತರಣಾ ನೀತಿಯನ್ನು ಅನುಸರಿಸುತ್ತಾನೆ. ಈ ಹಿನ್ನೆಲೆಯಲ್ಲಿ ಕೋಟೆಯ ರಚನೆ ಮತ್ತು ತಂತ್ರಜ್ಞಾನವನ್ನು ಚಾರಿತ್ರಿಕ ಮತ್ತು ವೈಜ್ಞಾನಿಕ ನೆಲೆಗಟ್ಟಿನಲ್ಲಿ ಚರ್ಚಿಸುವುದು ಅವಶ್ಯವಾಗಿದೆ. ಈ ಅಂಶವು ಪ್ರಸ್ತುತ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

ಟಿಪ್ಪುವಿನ ಕಾಲದ ಕೋಟೆಗಳು ತಾಂತ್ರಿಕವಾಗಿ ಸಮಕಾಲೀನ ಇತರ ಸಂಸ್ಥಾನಗಳಲ್ಲಿನ ಕೋಟೆಗಳಿಗಿಂತ ಉನ್ನತವಾಗಿದ್ದವು ಎಂಬುದರಲ್ಲಿ ಎರಡು ಮಾತಿಲ್ಲ. ಅಂತಹ ಬಲಿಷ್ಠ ಕೋಟೆಗಳನ್ನು ಆಕ್ರಮಿಸುವ ಸಂದರ್ಭದಲ್ಲಿ ಬ್ರಿಟಿಷರು ಮತ್ತು ಅವರ ಮಿತ್ರಪಡೆಗಳು ನಡೆಸಿದ ಯುದ್ಧ ತಂತ್ರ ಮತ್ತು ಹೋರಾಟದ ಸಂಗತಿಗಳು ಚಾರಿತ್ರಿಕ ದೃಷ್ಟಿಯಿಂದ ಮಹತ್ವಪೂರ್ಣವಾಗಿವೆ. ಈ ಸಂದರ್ಭಗಳಲ್ಲಿ ರಕ್ಷಣೆಯ ಕೇಂದ್ರಗಳಾದ ಕೋಟೆಗಳು ಆಕ್ರಮಣಕಾರರನ್ನು ಹಿಮ್ಮೆಟ್ಟಿಸುವಲ್ಲಿ ಎಷ್ಟರ ಮಟ್ಟಿಗೆ ಯಶಸ್ವಿಯಾದುವು ಎಂಬುದು ಮುಖ್ಯಪ್ರಶ್ನೆಯಾಗಿದೆ. ಈ ಹಿನ್ನೆಲೆಯಲ್ಲಿ ಶತ್ರುಗಳು ಆಕ್ರಮಿಸಲು ನಡೆಸಿದ ಹೋರಾಟ ಮತ್ತು ಅವರನ್ನು ಹಿಮ್ಮೆಟ್ಟಿಸುವಲ್ಲಿ ಟಿಪ್ಪುವಿನ ಸೇನೆಯು ಕೋಟೆಗಳ ನೆರವಿನಿಂದ ತೋರಿದ ಪ್ರತಿರೋಧಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಇವೆಲ್ಲವುಗಳ ಜೊತೆಗೆ ಪ್ರಸ್ತುತ ಮಹಾಪ್ರಬಂಧದಲ್ಲಿ ಮೌಖಿಕ ಆಕರಗಳ ಮೂಲಕ ಇತಿಹಾಸವನ್ನು ರಚಿಸುವ ಸಂಪ್ರದಾಯವನ್ನು ಎತ್ತಿಹಿಡಿಯಲಾಗಿದೆ. ಮೌಖಿಕ ಕಥನಗಳ ನೆರವಿನಿಂದ ಕೋಟೆಗಳ ಸಾಂಸ್ಕೃತಿಕ ಇತಿಹಾಸವನ್ನು ಅರಿಯುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಪ್ರಸ್ತುತ ಮಹಾಪ್ರಬಂಧದಲ್ಲಿ ಕೇವಲ ಟಿಪ್ಪು ಕಾಲಕ್ಕೆ ಸಂಬಂಧಿಸಿದ ಮೌಖಿಕ ಕಥನಗಳಿಗಷ್ಟೆ ಸೀಮಿತಗೊಳಿಸಿಕೊಳ್ಳದೆ, ಟಿಪ್ಪುವಿಗೂ ಪೂರ್ವದ ಕೋಟೆಗಳಿಗೆ ಸಂಬಂಧಿಸಿದ ಜನಪದೀಯ

ಆಕರಗಳನ್ನು ಕೂಡ ಬಳಸಿಕೊಳ್ಳಲಾಗಿದೆ. ಅವುಗಳನ್ನು ಮೌಖಿಕ ಇತಿಹಾಸದ ಪರಿಪ್ರೇಕ್ಷೆಯೊಳಗೆ ನೋಡಲು ಪ್ರಯತ್ನಿಸಲಾಗಿದೆ.

ಕೋಟೆಗಳ ಚರಿತ್ರೆ ಎಂದರೆ ಕಲ್ಲುಕಟ್ಟಡದ ಕಥೆಯಲ್ಲ; ಅದು ಒಂದು ನಾಗರಿಕತೆ ಅಥವಾ ಸಂಸ್ಕೃತಿಯ ಚರಿತ್ರೆ. ಕೋಟೆಗಳ ಅಧ್ಯಯನ ಎಂಬುದು ಸಮಾಜದ ಸಮಕಾಲೀನ ಸಂದರ್ಭಗಳ ವಿಜ್ಞಾನ, ತಂತ್ರಜ್ಞಾನ, ಕಲೆ, ಕೌಶಲ್ಯ, ಪರಾಕ್ರಮ, ಅರ್ಪಣೆ, ಜೀವನಕ್ರಮ, ಮೊದಲಾದ ಅಂಶಗಳನ್ನೊಳಗೊಂಡ ಅಧ್ಯಯನವಾಗಿದೆ. ಟಿಪ್ಪು ಸುಲ್ತಾನ್ ಸ್ವತಃ ಹೊಸದಾಗಿ ನಿರ್ಮಿಸಿದ ಕೋಟೆಗಳಿಗಿಂತ ಅಧಿಕ ಸಂಖ್ಯೆಯಲ್ಲಿ ಹಿಂದಿನ ಕೋಟೆಗಳನ್ನು ಪುನರ್ರಚಿಸಿ ಬಳಸಿಕೊಂಡನು. ಆ ಕೋಟೆಗಳ ಭಾಗಗಳಲ್ಲಿ ಟಿಪ್ಪು ಸುಲ್ತಾನನು ಪ್ರಮುಖವಾಗಿ ಸಮಕಾಲೀನ ಸಂದರ್ಭಕ್ಕೆ ಅನುಗುಣವಾಗಿ ಮಾಡಿದ ಮಾರ್ಪಾಟುಗಳನ್ನು ಅರಿಯುವುದು ಮಹತ್ವದ್ದಾಗಿದೆ. ಈ ಕಾರಣದಿಂದ ಪ್ರಸ್ತುತ ಅಧ್ಯಯನದಲ್ಲಿ ಕೋಟೆಯ ಭಾಗಗಳಾದ ಕೊತ್ತಳ, ಬತೇರಿ, ಮದ್ದಿನ ಮನೆ, ಕೈಪಿಡಿ, ಪಹರೆಕಟ್ಟೆ, ಇಳಿಜಾರು ಹಾದಿ, ಕೋಟೆಯ ನಿರ್ಮಾಣದಲ್ಲಿ ಬಳಸಿದ ಗಾರೆ, ರಕ್ಷಣೆಗಾಗಿ ಬಳಸಿದ ಸಿಡಿಮದ್ದಿನ ಸಾಧನಗಳಾದ ಫಿರಂಗಿ, ಬಂದೂಕು, ರಾಕೆಟ್ ಮೊದಲಾದವುಗಳ ಹಿನ್ನೆಲೆಯಲ್ಲಿ ಮಾಡಲಾದ ಬದಲಾವಣೆಗಳನ್ನು ಮತ್ತು ಅದರ ಉದ್ದೇಶವನ್ನು ತೀವ್ರವಾದ ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೧.೩. ಅಧ್ಯಯನಗಳ ಸಮೀಕ್ಷೆ

ಕಳೆದ ಮುವತ್ತು ವರ್ಷಗಳ ಹಿಂದಿನವರೆಗೆ ಕೋಟೆಗಳ ಅಧ್ಯಯನದ ಸಾಧ್ಯತೆಗಳು ವಿದ್ವಾಂಸರ ಗಮನವನ್ನು ಸೆಳೆಯುವಲ್ಲಿ ವಿಫಲವಾಗಿದ್ದವು. ಅಲ್ಲಿಂದೀಚೆಗೆ ಭಾರತ ಮತ್ತು ಕರ್ನಾಟಕದ ಮಟ್ಟದಲ್ಲಿ ರಕ್ಷಣಾ ವಾಸ್ತುಶಿಲ್ಪಗಳನ್ನು ಕುರಿತು ಹೆಚ್ಚಿನ ಅಧ್ಯಯನಗಳು ನಡೆಯುತ್ತಿವೆ. ೧೯೮೦ರ ದಶಕದಲ್ಲಿ ಇತಿಹಾಸಕಾರರು ಚರಿತ್ರೆಯ ವೈವಿಧ್ಯಮಯ ವಸ್ತುವಿಷಯಗಳ ಕಡೆಗೆ ಕಣ್ಣುಹಾಯಿಸಿದರು. ನಿರ್ಲಕ್ಷಿತ ಚರಿತ್ರೆಯು ಪ್ರಕರವಾಗಿ ಹೊರಹೊಮ್ಮುತ್ತಿದ್ದ ಕಾಲವದು. ಆವರೆಗೂ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಕೋಟೆಗಳ ಅಧ್ಯಯನ ಕೂಡ ರಕ್ಷಣಾ ವಾಸ್ತುಶಿಲ್ಪದ ಹೆಸರಿನಲ್ಲಿ ಪುರಾತತ್ತ್ವದ ಅಧ್ಯಯನ ಕ್ಷೇತ್ರದಲ್ಲಿ ಅಪಾರ ಮನ್ನಣೆ ಪಡೆದುದು ಕಾಕತಾಳಿಯವೇನಲ್ಲ. ಇತ್ತೀಚಿನ ವರ್ಷಗಳಲ್ಲಿ ಚರಿತ್ರೆಯ ಕ್ಷೇತ್ರದಲ್ಲಿಯೂ ಇಂತಹ ಅಧ್ಯಯನಗಳು ಆರಂಭವಾಗಿರುವುದು ಚರಿತ್ರೆಯ ಬರವಣಿಗೆ ಕ್ರಮದಲ್ಲಿ ಒಂದು ಆಶಾದಾಯಕ ಬೆಳವಣಿಗೆ ಎನ್ನಬಹುದಾಗಿದೆ.

ಕರ್ನಾಟಕದಲ್ಲಿ ಕೋಟೆಗಳನ್ನು ಕುರಿತು ಅಧ್ಯಯನ ನಡೆಸಿದ ಮೊದಲಿಗರಲ್ಲಿ ಬೆಟಗೇರಿ ಕೃಷ್ಣಶರ್ಮ ಅವರು ಪ್ರಮುಖರು. ಅವರು **ಕರ್ನಾಟಕ ಜನಜೀವನ** (೧೯೫೩)

ಕೃತಿಯಲ್ಲಿ ಮೊಟ್ಟಮೊದಲ ಬಾರಿಗೆ ಕೋಟೆಗಳನ್ನು ಕುರಿತು ಬರೆದರು. ಈ ಕೃತಿಯ ಮೊದಲ ಭಾಗ– 'ಕನ್ನಡಿಗರ ಕೋಟೆಗಾಳೆಗವು' ೬೩ ಪುಟಗಳಷ್ಟು ವಿಸ್ತಾರವಾಗಿದೆ. ಕೋಟೆಗಳ ಸ್ವರೂಪ, ಸಾಹಿತ್ಯಗಳಲ್ಲಿ ಕೋಟೆ ಮತ್ತು ಕೋಟೆ ಕಾಳಗದ ಸಂಗತಿಗಳನ್ನು ಕುರಿತು ಬಂದಿರುವ ಪ್ರಾತಿನಿಧಿಕ ಬರವಣಿಗೆ ಇವಾಗಿದೆ. ಈ ಕೃತಿಯಲ್ಲಿ ಕನ್ನಡಿಗರ ಜನಜೀವನದಲ್ಲಿ ಕೋಟೆಯು ಯಾವ ಮಟ್ಟಿಗೆ ಹಾಸುಹೊಕ್ಕಾಗಿತ್ತು ಎಂಬುದನ್ನು ತಿಳಿಸಿದ್ದಾರೆ. ಆದ್ದರಿಂದ ಇದು ಕೋಟೆಗಳ ಮೇಲೆ ಬಂದ ಪೂರ್ಣಪ್ರಮಾಣದ ಕೃತಿಯಲ್ಲದಿದ್ದರೂ, ಕನ್ನಡದಲ್ಲಿ ಮೂಡಿಬಂದ ಆದ್ಯಕೃತಿ ಎಂದು ಪರಿಗಣಿಸಬಹುದು. ಆನಂತರದಲ್ಲಿ ಅಲ್ಲಲ್ಲಿ ಬಿಡಿ ಬಿಡಿ ಲೇಖನಗಳು ಕೋಟೆಗಳನ್ನು ಕುರಿತು ಬಂದವಾದರೂ ಅಕಾಡೆಮಿಕ್ ದೃಷ್ಟಿಯಿಂದ ವಿಮರ್ಶಾತ್ಮಕ ಬರವಣಿಗೆಗಳಾಗಿರಲಿಲ್ಲ.[೪] ಎಂಬತ್ತರ ದಶಕದಲ್ಲಿ ಮೊದಲ ಬಾರಿಗೆ ಎಸ್.ಕೆ. ಜೋಶಿ ಅವರು ಪೂರ್ಣಪ್ರಮಾಣದ ಅಕಾಡೆಮಿಕ್ ಅಧ್ಯಯನವನ್ನು ರಕ್ಷಣಾ ವಾಸ್ತುಶಿಲ್ಪದ ಮೇಲೆ ನಡೆಸಿದರು. ಈ ಅಧ್ಯಯನವು ವಿಶೇಷವಾಗಿ ಕೋಟೆಗಳನ್ನು ಒಳಗೊಂಡ ಅಧ್ಯಯನವಾಗಿದ್ದು, **ಡಿಫೆನ್ಸ್ ಆರ್ಕಿಟೆಕ್ಚರ್ ಇನ್ ಅರ್ಲಿ ಕರ್ನಾಟಕ** ಎಂಬ ಹೆಸರಿನಲ್ಲಿ ಪ್ರಕಟವಾಗಿದೆ (೧೯೮೫). ಇವರು ಕರ್ನಾಟಕದ ಪ್ರಾಚೀನ ಕೋಟೆಗಳಿಂದ ಮಧ್ಯಕಾಲೀನ ಕೋಟೆಗಳವರೆಗೆ ಅಧ್ಯಯನ ನಡೆಸಿದ್ದಾರೆ. ಈ ಕೃತಿಯಲ್ಲಿ ಅವರು ಪುರಾತತ್ತ್ವಿಕ ಹಿನ್ನೆಲೆಯ ಅಧ್ಯಯನಕ್ಕೆ ಹೆಚ್ಚಿನ ಆದ್ಯತೆ ನೀಡಿರುವುದನ್ನು ಕಾಣಬಹುದು. ಇವರ ಅಧ್ಯಯನ ನಂತರ ತೊಂಬತ್ತರ ದಶಕದಲ್ಲಿ ಎಸ್.ಕೆ. ಅರುಣಿ ಅವರು ಪೂನಾದ ಡೆಖನ್ ಕಾಲೇಜಿನಲ್ಲಿ ಸುರಪುರ ಸಂಸ್ಥಾನ ಕುರಿತು ಪಿಎಚ್‌ಡಿ ಅಧ್ಯಯನ ನಡೆಸಿದರು. ಇದನ್ನು ೨೦೦೪ರಲ್ಲಿ **ಸುರಪುರ ಸಂಸ್ಥಾನ** ಎಂಬ ಶೀರ್ಷಿಕೆಯಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಿಸಿದರು. ಈ ಕೃತಿಯಲ್ಲಿ ಕೋಟೆಗಳ ರಕ್ಷಣಾ ವಾಸ್ತುಶಿಲ್ಪವನ್ನು ಕುರಿತು ವಿಶೇಷವಾಗಿ ಅಧ್ಯಯನ ನಡೆಸಿದ್ದಾರೆ. ಈ ಬರವಣಿಗೆಯ ಮೂಲಕ ಹೈದರ್ ಮತ್ತು ಟಿಪ್ಪು ಪೂರ್ವದ ಮತ್ತು ಸಮಕಾಲೀನ ಪಾಳೇಗಾರರ ಕೋಟೆಗಳಲ್ಲಿನ ರಕ್ಷಣಾ ವ್ಯವಸ್ಥೆಯನ್ನು ಅರ್ಥ ಮಾಡಿಕೊಳ್ಳಬಹುದು. ಆನಂತರ ಕನ್ನಡದಲ್ಲಿಯೂ ಕೋಟೆಗಳನ್ನು ಕುರಿತು ಅಧ್ಯಯನಗಳು ಹೆಚ್ಚಿನ ಪ್ರಮಾಣದಲ್ಲಿ ಬರಲಾರಂಭಿಸಿದವು.

ಕರ್ನಾಟಕದ ಕೋಟೆಗಳನ್ನು ಕುರಿತ ಅಧ್ಯಯನಗಳು ತೊಂಬತ್ತರ ದಶಕದಲ್ಲಿ ಲೇಖನಗಳ ರೂಪದಲ್ಲಿ ಕನ್ನಡದಲ್ಲಿ ಪ್ರಕಟವಾದವು. ಇದನ್ನು **ದಿಕ್ಸೂಚಿ** ಮಾಸಪತ್ರಿಕೆಯಲ್ಲಿ ಚನ್ನಬಸಪ್ಪ ಎಸ್. ಪಾಟೀಲರು ಆರಂಭಿಸಿದರು. ಕ್ಷೇತ್ರಕಾರ್ಯಗಳಿಂದ ಕೂಡಿದ ಅವರ ಅಧ್ಯಯನಗಳು ವಿದ್ವಾಂಸರ ಗಮನಸೆಳೆಯುವಲ್ಲಿ ಯಶಸ್ವಿಯಾದವು. ಈ ಲೇಖನಗಳಿಂದ ಸ್ಫೂರ್ತಿಗೊಂಡ ಅನೇಕರು ಕೋಟೆ, ಕೊತ್ತಳಗಳ ಅಧ್ಯಯನದ ಕಡೆಗೆ ಹೋಗುವಂತೆ

ಪ್ರೇರೇಪಿಸಿದವು. ಈ ಲೇಖನಗಳು ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ **ಕರ್ನಾಟಕದ ಕೋಟೆಗಳು ಸಂಪುಟ-೧** (೧೯೯೯) ಎಂಬ ಹೆಸರಿನಿಂದ ಪ್ರಕಟವಾದವು. ಈ ಕೃತಿಯು ಕರ್ನಾಟಕದ ೫೦ ಕೋಟೆಗಳ ಬಗೆಗಿನ ವಿವರಗಳನ್ನು ಸರಳವಾಗಿ ಮತ್ತು ಆಕರ್ಷಕವಾಗಿ ಕಟ್ಟಿಕೊಡುತ್ತದೆ. ಇದರಿಂದ ಪ್ರೇರಿತರಾದ ಅನೇಕ ಸಂಶೋಧನ ವಿದ್ಯಾರ್ಥಿಗಳು ಕೋಟೆಗಳ ಅಧ್ಯಯನದ ಕಡೆಗೆ ಗಮನಹರಿಸುವಂತೆ ಮಾಡಿತು.

ಕರ್ನಾಟಕದ ಆರಂಭಿಕ ಕೋಟೆಗಳನ್ನು ಕುರಿತು ಜೋಷಿ ಅವರು ಅಧ್ಯಯನ ನಡೆಸಿದ ನಂತರ ಕರ್ನಾಟಕದ ವಿವಿಧ ಕಾಲಘಟ್ಟದ ಮತ್ತು ವಿವಿಧ ಪ್ರದೇಶಗಳ ಕೋಟೆಗಳನ್ನು ಕುರಿತು ಮೊದಲು ಕನ್ನಡದಲ್ಲಿ ಬರೆದವರು ಚನ್ನಬಸಪ್ಪ ಪಾಟೀಲರು. ಇವರ ನಂತರ ಹೆಚ್ಚಿನ ಸಂಶೋಧಕರು ಜಿಲ್ಲಾವಾರು ಕೋಟೆಗಳ ಅಧ್ಯಯನದ ಕಡೆಗೆ ಹೊರಳಿಕೊಂಡರು.

ಇತ್ತೀಚಿನ ವರ್ಷಗಳಲ್ಲಿ ಇತಿಹಾಸ ಸಂಶೋಧನಾ ಕ್ಷೇತ್ರದಲ್ಲಿ ಮೌಖಿಕ ಇತಿಹಾಸವು ಹೆಚ್ಚಿನ ಮನ್ನಣೆ ಪಡೆಯುತ್ತಿದೆ. ಈ ಬಗೆಗೆ ಕೆಲವು ಅಧ್ಯಯನಗಳನ್ನು ಕೂಡ ಇತಿಹಾಸಕಾರರು ನಡೆಸಿದ್ದಾರೆ. ಮುಖ್ಯವಾಗಿ, ಎಂ.ವಿ. ವಸು ಅವರ **ಮೌಖಿಕ ಇತಿಹಾಸ** (೨೦೦೪) ಮತ್ತು ವಿಜಯ್ ಪೂಣಚ್ಚ ತಂಬಂಡ ಅವರ **ಪಳಮೆ - ಮೌಖಿಕ ಆಕರಗಳು ಕಟ್ಟಿಕೊಡುವ ಕನ್ನಡ-ಕೊಡಗು-ತುಳುನಾಡಿನ ಅಧ್ಯಯನ** (೨೦೦೪) ಎನ್ನುವ ಕೃತಿಗಳು ಮುಖ್ಯವಾಗಿವೆ. ವಸು ಅವರು ಮೌಖಿಕ ಇತಿಹಾಸದ ಪರಂಪರೆಯು ಚರಿತ್ರೆಯ ಒಂದು ಆಕರವಾಗಿ ನಡೆದು ಬಂದ ದಾರಿಯನ್ನು ಪರಿಚಯಿಸಿದ್ದಾರೆ. ಇವರ ಕೃತಿಯಲ್ಲಿ ವಿಶೇಷವಾಗಿ ಮೈಸೂರು ಒಡೆಯರ ಕಾಲಕ್ಕೆ ಸಂಬಂಧಿಸಿದ ಕೆಲವು ಮೌಖಿಕ ಸಾಹಿತ್ಯದ ಸಂಗತಿಗಳನ್ನು ಪ್ರಾಸಂಗಿಕವಾಗಿ ಪ್ರಸ್ತಾಪಿಸಿ, ವಿಶ್ಲೇಷಿಸಿದ್ದಾರೆ. ತಂಬಂಡ ಅವರು ಏಕೀಕರಣ ಪೂರ್ವದಲ್ಲಿ ಬೇರೆ ಬೇರೆ ಆಳ್ವಿಕೆಗೆ ಒಳಪಟ್ಟಿದ್ದ ಭಿನ್ನಭಿನ್ನ ಭಾಷಿಕ ಪ್ರದೇಶಗಳಾದ ಕನ್ನಡ, ಕೊಡವ ಮತ್ತು ತುಳುನಾಡುಗಳ ಸಾಂಸ್ಕೃತಿಕ ನಾಯಕರ ಕಥನಗಳನ್ನು ಅಭ್ಯಾಸ ಮಾಡುವ ಮೂಲಕ ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದ್ದಾರೆ. ಮುಖ್ಯವಾಗಿ ಸಾಂಪ್ರದಾಯಿಕ ಜಾನಪದ ತಜ್ಞರ "ಶಿಷ್ಟ ಮತ್ತು ಪರಿಶಿಷ್ಟ" ನಮೂನೆಗಳನ್ನು ತೊರೆದು ಅವುಗಳನ್ನು ಪರಸ್ಪರ ಪೂರಕ ಸಾಹಿತ್ಯಗಳಾಗಿ ಅಭ್ಯಾಸ ಮಾಡಲು ಪ್ರಯತ್ನಿಸಿದ್ದಾರೆ. ಪುರಾಣ ಮತ್ತು ಚರಿತ್ರೆಯನ್ನು ವ್ಯತ್ಯಾಸಗೊಳಿಸದೆ ನೋಡುವುದರಿಂದ ಚರಿತ್ರೆಯ ಭಿನ್ನಭಿನ್ನ ಮುಖಗಳನ್ನು ಅರ್ಥ ಮಾಡಿಕೊಳ್ಳಬಹುದು ಎಂಬ ರೊಮಿಲಾ ಥಾಪರ್ ಅವರ ಮಾದರಿಯನ್ನು ಕೃತಿಯ ಉದ್ದಕ್ಕೂ ಬಳಸಿಕೊಂಡಿದ್ದಾರೆ.

ಇವರಲ್ಲದೆ ಬಿ. ಶಿವರಾಮ ಶೆಟ್ಟಿ, ಬಿ. ಸುರೇಂದ್ರರಾವ್ ಮೊದಲಾದವರು ಕೂಡ ಮೌಖಿಕ ಇತಿಹಾಸವನ್ನು ಕುರಿತು ಲೇಖನಗಳನ್ನು ಬರೆದಿದ್ದಾರೆ.[೫] ಶೆಟ್ಟಿ ಅವರು ತಮ್ಮ ಲೇಖನದಲ್ಲಿ ಮೌಖಿಕ ಚರಿತ್ರೆಯನ್ನು ಕಟ್ಟುವ ನಮ್ಮ ವಿಧಾನಕ್ರಮವನ್ನು, ಚರಿತ್ರೆ ಕುರಿತ ಇಂದಿನ ಈ ನಮ್ಮ ಕಥನವನ್ನು ಮೂಲ ಜಿಜ್ಞಾಸೆಗೆ ಒಳಪಡಿಸುವ ಪ್ರಯತ್ನವನ್ನು ಮಾಡಿದ್ದಾರೆ. ಮೌಖಿಕ ಚರಿತ್ರೆಯನ್ನು ಪ್ರತ್ಯೇಕ ಜ್ಞಾನಶಾಖೆಯಾಗಿ ಬೆಳೆಸುವ ಬಗೆಗೆ ಚಿಂತನೆ ನಡೆಸಿದ್ದಾರೆ. ರಾವ್ ಅವರು ತುಳು ನಾಡಿನ ಪಾಡ್ದಾನ ಜಾನಪದ ಸಾಹಿತ್ಯವನ್ನು ಕುರಿತು ಅಧ್ಯಯನ ನಡೆಸಿದ್ದು, ಮೌಖಿಕ ಚರಿತ್ರೆಯಲ್ಲಿ ಅವರ ವಿಧಾನವು ವಿಶಿಷ್ಟವಾಗಿದೆ.

ಆನಂತರ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ, ಚರಿತ್ರೆ ವಿಭಾಗ ಮತ್ತು ಕನ್ನಡ ವಿಭಾಗಗಳಲ್ಲಿ ಕೆಲವು ಸಂಶೋಧನೆಗಳು ಮೌಖಿಕ ಸಾಹಿತ್ಯದ ಹಿನ್ನೆಲೆಯಲ್ಲಿ ನಡೆದಿವೆ. ಅವುಗಳಲ್ಲಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗದಲ್ಲಿ ಪಿಎಚ್.ಡಿ ಸಂಶೋಧನೆಗಾಗಿ ೨೦೦೪ರಲ್ಲಿ ಕೆ.ಎಂ. ಮುದ್ದುವೀರಪ್ಪ ಅವರು ಸಲ್ಲಿಸಿದ **ತುಮಕೂರು ಜಿಲ್ಲೆಯ ಕೋಟೆಕೊತ್ತಳಗಳ ಜಾನಪದೀಯ ಅಧ್ಯಯನ** ಎಂಬ ಮಹಾಪ್ರಬಂಧ ಮುಖ್ಯವಾದುದು. ಇದು ತುಮಕೂರು ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ತುಮಕೂರು ಜಿಲ್ಲೆಯ ಕೋಟೆಗಳ ಸಾಂಸ್ಕೃತಿಕ ಒಳನೋಟಗಳು ಹೆಸರಿನಲ್ಲಿ ಪ್ರಕಟವಾಗಿದೆ. ಈ ಕೃತಿಯು ಜಾನಪದೀಯ ಅಧ್ಯಯನದ ನೆಲೆಯಲ್ಲಿ ನಡೆದ ಮಹತ್ವದ ಬರವಣಿಗೆಯಾಗಿದೆ. ವಿಶೇಷವಾಗಿ ಕ್ಷೇತ್ರಕಾರ್ಯ ಮತ್ತು ಸಂದರ್ಶನಗಳನ್ನು ಆಧರಿಸಿ ಕೋಟೆಗಳ ಹಿಂದಿನ ಸಾಂಸ್ಕೃತಿಕ ಅನನ್ಯತೆಯನ್ನು ಪರಿಚಯಿಸಲು ಪ್ರಯತ್ನಿಸಿದ್ದಾರೆ. ವಿಶೇಷವಾಗಿ ಐತಿಹ್ಯಗಳನ್ನು ಮತ್ತು ಮೌಖಿಕ ಕಥನಗಳನ್ನು ಅಪಾರ ಪ್ರಮಾಣದಲ್ಲಿ ಸಂಗ್ರಹಿಸಿ ಕೊಟ್ಟಿದ್ದಾರೆ. ಪ್ರಸ್ತುತ ಮಹಾಪ್ರಬಂಧದಲ್ಲಿ ಈ ಕೃತಿಯ ಅನೇಕ ವಿವರಗಳನ್ನು ಚರ್ಚೆಗೆತ್ತಿಕೊಳ್ಳಲಾಗಿದೆ. ಇದೇ ರೀತಿ ಚರಿತ್ರೆ ವಿಭಾಗದಲ್ಲಿ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧಗಳಲ್ಲಿ ಬೇಬಿ ಅವರ **ಬೀದರ್ ಕೋಟೆಯ ಐತಿಹ್ಯಗಳು** (೨೦೦೭), ಬಸವರಾಜ ಸಿ. ಅವರ **ಚಿತ್ರದುರ್ಗ ಕೋಟೆಯ ಐತಿಹ್ಯಗಳು** (೨೦೧೦) ಮುಖ್ಯವಾದ ಅಧ್ಯಯನಗಳಾಗಿವೆ. ಈ ಅಧ್ಯಯನಗಳ ಮುಂದುವರಿದ ಭಾಗವಾಗಿ ಮೌಖಿಕ ಇತಿಹಾಸವನ್ನು ಪ್ರಸ್ತುತ ಅಧ್ಯಯನದಲ್ಲಿ ಅಳವಡಿಸಿಕೊಂಡು ನೋಡುವ ಪ್ರಯತ್ನ ಮಾಡಲಾಗಿದೆ.

ಇದಕ್ಕೆ ಪೂರಕವಾಗಿ ಕೋಟೆಗಳ ಮೇಲೆ ನಡೆದಿರುವ ಕೆಲವು ಸಂಶೋಧನೆಗಳನ್ನು ಇಲ್ಲಿ ಹೆಸರಿಸಬಹುದಾಗಿದೆ. ಕರ್ನಾಟಕದ ಕೋಟೆಗಳ ಅಧ್ಯಯನಕ್ಕೆ ಆದ್ಯತೆಗಳು ಕಡಿಮೆಯಾಗಿ ಸ್ಥಳೀಯ ಕೋಟೆಗಳ ಅಧ್ಯಯನಕ್ಕೆ ಸಂಬಂಧಿಸಿದ ಸಂಶೋಧನೆಗಳು ತೀವ್ರಗೊಂಡವು. ಮುಖ್ಯವಾಗಿ, ಎಂ. ಕೊಟ್ರೇಶ್ ಅವರು ಕನ್ನಡ ವಿಶ್ವವಿದ್ಯಾಲಯಕ್ಕೆ

ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ **ಕೋಟೆಕೊತ್ತಳಗಳು ಒಂದು ಅಧ್ಯಯನ: ಬಳ್ಳಾರಿ ಜಿಲ್ಲೆ** (೨೦೦೨) ಮಹಾಪ್ರಬಂಧವನ್ನು ಹೆಸರಿಸಬಹುದು. ಇದನ್ನು ಅವರು **ಬಳ್ಳಾರಿ ಜಿಲ್ಲೆಯ ಕೋಟೆಗಳು** (೨೦೧೧) ಹೆಸರಿನಲ್ಲಿ ಪ್ರಕಟಿಸಿದ್ದಾರೆ. ಕೃತಿಯಲ್ಲಿ ಕೋಟೆಗಳ ವಿವರಣೆಗೆ ನೀಡಿರುವ ಆದ್ಯತೆಯನ್ನು ವಿಶ್ಲೇಷಣೆಗೆ ನೀಡಿರುವುದಿಲ್ಲ. ಇದೇ ಸಮಸ್ಯೆ ನಂತರ ಬಂದ ಬಹುತೇಕ ಸಂಶೋಧನಾ ಪ್ರಬಂಧಗಳಲ್ಲಿಯೂ ಮುಂದುವರಿದಿದೆ. ಮುಖ್ಯವಾಗಿ, ಎಸ್. ತಿಪ್ಪೇಸ್ವಾಮಿ ಅವರ **ರಕ್ಷಣಾ ವಾಸ್ತುಶಿಲ್ಪ: ಚಿತ್ರದುರ್ಗ ಜಿಲ್ಲೆ** (೨೦೦೪), ಮಂಜುನಾಥ್ ಪಾಟೀಲ್ ಅವರ **ಬಿಜಾಪುರ ಜಿಲ್ಲೆಯ ರಕ್ಷಣಾ ವಾಸ್ತುಶಿಲ್ಪಗಳು** (೨೦೧೬), ರವೀಶ್ ಜಿ.ಎಸ್. ಅವರ **ತುಮಕೂರು ಜಿಲ್ಲೆಯ ರಕ್ಷಣಾವಾಸ್ತು** (೨೦೧೬) ಎನ್ನುವ ಪಿಎಚ್.ಡಿ ಮಹಾಪ್ರಬಂಧಗಳನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ.

ಇದೇ ರೀತಿ ರಂಗಪ್ಪ ಎಂ. ಅವರ **ಮೈಸೂರು ಒಡೆಯರ ಕಾಲದ ಕೋಟೆಗಳು ಮತ್ತು ಅರಮನೆಗಳು – ಒಂದು ಅಧ್ಯಯನ** (೨೦೦೬), ಮುನಿರಾಜು ಅವರ **ತುಮಕೂರು ಜಿಲ್ಲೆಯ ಗಿರಿದುರ್ಗಗಳ ಐತಿಹಾಸಿಕ ಅಧ್ಯಯನ** (೨೦೧೨) ಇವುಗಳು ಪಿಎಚ್.ಡಿ ಪದವಿಗಾಗಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧಗಳಾಗಿರುತ್ತವೆ. ಈ ಮೇಲಿನ ಬಹುತೇಕ ಸಂಶೋಧಕರು ದತ್ತಾಂಶ ಸಂಗ್ರಹ ಮತ್ತು ವಿವರಣೆಗಳಿಗೆ ನೀಡಿರುವ ಆದ್ಯತೆಯನ್ನು ವಿಶ್ಲೇಷಣೆಗೆ ನೀಡಿರುವುದಿಲ್ಲ.

ಶ್ರೀಧರ್ ಎಚ್.ಜಿ. ಅವರ ಸಂಶೋಧನಾ ಕೃತಿ **ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ (ಕ್ರಿ.ಶ. ೪೫೦ ರಿಂದ ೧೩೫೦)** (೨೦೦೨) ಒಂದು ಮುಖ್ಯವಾದ ಕೃತಿ. ಈ ಕೃತಿಯ ಮೂರನೇ ಅಧ್ಯಾಯ ಸಂಪೂರ್ಣವಾಗಿ ಕೋಟೆಗಳಿಗೆ ಸಂಬಂಧಿಸಿದ್ದಾಗಿದೆ. ತಮ್ಮ ಅಧ್ಯಯನದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಸಾಹಿತ್ಯ ಮತ್ತು ಶಾಸನಗಳನ್ನು ದುಡಿಸಿಕೊಂಡಿದ್ದಾರೆ. ಇದೊಂದು ಅಧ್ಯಯನಶೀಲ ಕೃತಿಯಾಗಿದೆ. ಯುವ ಸಂಶೋಧಕ ಸುಂಕಂ ಗೋವರ್ಧನ ಅವರ **ಕನ್ನಡ ನಾಡಿನ ಪ್ರಮುಖ ಕೋಟೆಗಳು** (೨೦೧೨) ಒಂದು ಪರಿಚಯಾತ್ಮಕ ಕೃತಿಯಾಗಿದೆ. ಎಸ್.ಕೆ. ಅರುಣಿ ಅವರು **ಕನ್ನಡ ವಿಷಯ ವಿಶ್ವಕೋಶ – ಇತಿಹಾಸ ಮತ್ತು ಪುರಾತತ್ತ್ವಕ್ಕೆ** (೨೦೦೯) ಬರೆದ 'ಕೋಟೆಗಳು' ಎಂಬ ಕಿರು ಲೇಖನವು ಗುಣಮಟ್ಟದ ದೃಷ್ಟಿಯಿಂದ ಮುಖ್ಯವಾದುದಾಗಿದೆ. ಈ ಲೇಖನದಲ್ಲಿ ಆರಂಭಕಾಲದ ಕೋಟೆಗಳಿಂದ ಹಿಡಿದು ಆಧುನಿಕ ಕಾಲಘಟ್ಟದವರೆಗೂ ಕಾಲಕಾಲಕ್ಕೆ ಆಗಿರುವ ಮಾರ್ಪಾಡುಗಳನ್ನು ಮತ್ತು ತಾಂತ್ರಿಕ ಬದಲಾವಣೆಗಳನ್ನು ಸೂಕ್ಷ್ಮವಾಗಿ ಗುರುತಿಸಿದ್ದಾರೆ. ಈ ಬರವಣಿಗೆಗಳೇ ಅಲ್ಲದೆ ಅನೇಕ ಲೇಖನಗಳು, ಸಂಪ್ರಬಂಧಗಳು ಅಲ್ಲಲ್ಲಿ ಪ್ರಕಟವಾಗಿವೆ.

ಕೋಟೆಗಳ ರಚನೆ ಮತ್ತು ರಕ್ಷಣಾ ವಾಸ್ತುಶಿಲ್ಪವನ್ನು ಕುರಿತು ಇತ್ತೀಚಿನ ವರ್ಷಗಳಲ್ಲಿ ಹೊರಬಂದಿರುವ ಮಹತ್ವದ ಕೃತಿ ಎಂದರೆ ಜೀನ್ ಡಿಲೋಷ್ ಅವರ **ಸ್ಟಡೀಸ್ ಆನ್ ಫೋರ್ಟಿಫಿಕೇಷನ್ ಇನ್ ಇಂಡಿಯಾ** (೨೦೦೭). ಈ ಕೃತಿಯಲ್ಲಿ ದಕ್ಷಿಣ ಭಾರತದ ಕೋಟೆಗಳನ್ನು ಕುರಿತು ಅಧ್ಯಯನ ನಡೆಸಲಾಗಿದ್ದರೂ ಕರ್ನಾಟಕದ ಕೋಟೆಗಳ ಮೇಲೆ ಅಧ್ಯಯನವು ಕೇಂದ್ರಿಕೃತವಾಗಿದೆ. ಅಲ್ಲದೆ, ಇಲ್ಲಿನ ಆರು ಅಧ್ಯಾಯಗಳಲ್ಲಿ ಐದನೆಯ ಅಧ್ಯಾಯವು ಮೈಸೂರು ಸಂಸ್ಥಾನದ ಗಿರಿದುರ್ಗಗಳನ್ನು ಕುರಿತಾದುದಾಗಿದೆ. ಡಿಲೋಷ್ ಅವರು ಟಿಪ್ಪು ಕಾಲದ ಕೋಟೆಗಳನ್ನು ಕುರಿತು ವಿಶೇಷವಾದ ಅಧ್ಯಯನ ನಡೆಸಿದ್ದಾರೆ. ಆದ್ದರಿಂದ ಈ ಕೃತಿಯು ಇಲ್ಲಿನ ಅಧ್ಯಯನಕ್ಕೆ ಹೆಚ್ಚು ಉಪಯುಕ್ತವಾಗಬಲ್ಲದು.

ಈ ಬಗೆಯ ಸಂಶೋಧನೆಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಹೈದರ್ ಮತ್ತು ಟಿಪ್ಪು ಸುಲ್ತಾನ್ ಕಾಲದ ಕೋಟೆಗಳ ರಚನೆ ಮತ್ತು ತಂತ್ರಜ್ಞಾನವನ್ನು ಕುರಿತು ಅಧ್ಯಯನ ನಡೆಸಲು ಪ್ರಯತ್ನಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧಕ್ಕೆ ಪೂರಕ ಆಕರ ಸಾಮಗ್ರಿಗಳಾಗಿ ಇನ್ನೂ ಅನೇಕ ಮೂಲ ಆಕರಗಳನ್ನು ಮತ್ತು ಆನುಷಂಗಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಅವುಗಳಲ್ಲಿ ಮುಖ್ಯವಾಗಿ ನಲ್ಲಪ್ಪ ಬರೆದ ಹೈದರ್‌ನಾಮವನ್ನು ತಿ.ತಾ. ಶರ್ಮ ಅವರು **ಚಾರಿತ್ರಿಕ ದಾಖಲೆಗಳು** ಎಂಬ ಕೃತಿಯಲ್ಲಿ ಸಂಪಾದಿಸಿ, ಸಂಗ್ರಹಿಸಿರುತ್ತಾರೆ (೧೯೭೩). ಅದೇ ರೀತಿ 'ಗುಲಾಂ ಮಹಮ್ಮದ ಜುನ್ನೈದಿ' ಎಂಬಾತನು ಹೇಳಿದ ವಿವರಗಳನ್ನು ಖಾಜಿ 'ಮಿಸಕಿಂನ್ ನಸೀರುದ್ದೀನ್' ದಾಖಲಿಸಿದ **ಜಂಗ್‌ನಾಮ** ಕೃತಿಯನ್ನು ಎಸ್.ಎಲ್. ಶ್ರೀನಿವಾಸಮೂರ್ತಿ ಮತ್ತು ವಿ. ವಸಂತಶ್ರೀ ಅವರು ಸಂಪಾದಿಸಿರುತ್ತಾರೆ (೨೦೧೧). ದೊಡ್ಡ ವೀರರಾಜೇಂದ್ರನು ಹೇಳಿಬರೆಸಿದ **ರಾಜೇಂದ್ರನಾಮೆ** (೧೮೦೭) ಕೃತಿಯನ್ನು ಡಿ.ಎನ್. ಕೃಷ್ಣಯ್ಯ ಮತ್ತು ಎಂ.ಎಸ್. ಸುಬ್ಬರಾಯ ಅವರು ಅದಕ್ಕೆ ಕೆಲವು ಭಾಗಗಳನ್ನು ಸೇರಿಸಿ ಕೊಡಗು ಸಂಸ್ಥಾನದ **ರಾಜೇಂದ್ರನಾಮೆ** (೧೯೫೭) ಹೆಸರಿನಲ್ಲಿ ಸಂಪಾದಿಸಿದ್ದಾರೆ. ಈ ಎಲ್ಲ ಕೃತಿಗಳು ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಸೈನಿಕ ಸಾಧನೆಗಳನ್ನು ಮುಖ್ಯವಾಗಿ ಯುದ್ಧ ಮತ್ತು ಒಪ್ಪಂದಗಳ ಸೂಕ್ಷ್ಮ ವಿವರಗಳನ್ನು ಕಟ್ಟಿಕೊಡುತ್ತವೆ. ರಾ.ಹ. ದೇಶಪಾಂಡೆ ಅವರು **ಚರಿತ್ರೆ ಸಂಗ್ರಹ ೧ನೆಯ ಭಾಗ** (೧೮೯೮) ಎಂಬ ಕೃತಿಯಲ್ಲಿ ಹೈದರ್ ಮತ್ತು ಟಿಪ್ಪುವಿನ ವ್ಯಕ್ತಿಚಿತ್ರಗಳನ್ನು ಬರೆದಿದ್ದಾರೆ. ಇವುಗಳಲ್ಲಿಯೂ ಕೆಲವು ಅಪರೂಪದ ವಿವರಗಳಿವೆ.

ಕರ್ನಲ್ ಮಾರ್ಕ್ ವಿಲ್ಕ್ಸ್ ಅವರ **ಹಿಸ್ಟಾರಿಕಲ್ ಸ್ಕೆಚಸ್ ಆಫ್ ದಿ ಸೌಥ್ ಆಫ್ ಇಂಡಿಯಾ ಇನ್ ಆ್ಯನ್ ಅಟೆಂಪ್ಟ್ ಟು ಟ್ರೇಸ್ ದಿ ಹಿಸ್ಟರಿ ಆಫ್ ಮೈಸೂರ್** ಎಂಬ ಕೃತಿಯನ್ನು ಮೂರು ಸಂಪುಟಗಳಲ್ಲಿ ಬರೆದಿದ್ದಾರೆ (ಸಂಪುಟ-೧ ೧೮೧೦; ಸಂಪುಟ-೨ ಮತ್ತು ೩ ೧೮೧೭). ಇವುಗಳಲ್ಲಿ ಹೈದರ್ ಮತ್ತು ಟಿಪ್ಪು ಕುರಿತು ೧೩೫೦

ಪುಟಗಳಿಗೂ ಹೆಚ್ಚು ವಿವರಗಳನ್ನು ವಿಲ್ಕ್ಸ್ ನೀಡಿದ್ದಾನೆ. ವಸಾಹತುಶಾಹಿ ದೃಷ್ಟಿಕೋನವೇ ಪ್ರಧಾನವಾಗಿ ಈ ಬರವಣಿಗೆಗಳಲ್ಲಿ ಇದ್ದರೂ ಕೂಡ ಹೈದರ್ ಮತ್ತು ಟಿಪ್ಪು ಕಾಲದ ಕೋಟೆಗಳಿಗೆ ಸಂಬಂಧಿಸಿದ ಅನೇಕ ವಿವರಗಳು ದೊರಕುತ್ತವೆ. ಅದೇ ರೀತಿ ಫ್ರಾನ್ಸಿಸ್ ಬುಕಾನನ್ ಎಂಬ ವೈದ್ಯನು ಮದ್ರಾಸ್‌ನಿಂದ ಮೈಸೂರು ಸಂಸ್ಥಾನದ ಮೂಲಕ ಮಲಬಾರ್ ಪ್ರಾಂತ್ಯದವರೆಗೆ ನಡೆಸಿದ ಸರ್ವೇಕ್ಷಣೆಯ ವಿವರಗಳನ್ನು **ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರಿ ಆಫ್ ಮೈಸೂರ್, ಕೆನರಾ ಅಂಡ್ ಮಲಬಾರ್** ಹೆಸರಿನ ಮೂರು ಸಂಪುಟಗಳಲ್ಲಿ (೧೮೦೭) ದಾಖಲಿಸಿದ್ದಾನೆ. ಟಿಪ್ಪು ಮರಣದ ನಂತರ ಅವನ ಆಳ್ವಿಕೆಯ ಪ್ರದೇಶಗಳಲ್ಲಿ ಸಮೀಕ್ಷೆ ನಡೆಸುವ ಸಲುವಾಗಿ ಬುಕಾನನರನ್ನು ವೆಲ್ಲೆಸ್ಲಿಯು ಕಳುಹಿಸಿ ಕೊಟ್ಟಿದ್ದನು. ಈ ಕೃತಿಗಳಲ್ಲಿ ತಾನು ನೋಡಿದ ಕೋಟೆಗಳ ವಿವರಗಳ ಜೊತೆಗೆ ಟಿಪ್ಪು ಕಾಲದಲ್ಲಿ ನಡೆದ ಘಟನೆಗಳ ಬಗೆಗೆ ಕೂಡ ವಿವರಿಸಿದ್ದಾನೆ. ಪ್ರಸ್ತುತ ಅಧ್ಯಯನಕ್ಕೆ ಈ ಸಂಪುಟಗಳು ಅಮೂಲ್ಯ ಆಕರಗಳಾಗಿವೆ. ರಿಕ್ಟರ್‌ನ **ಗ್ಯಾಸೆಟಿಯರ್ ಆಫ್ ಕೂರ್ಗ್** (೧೮೭೪) ಕೊಡಗಿನಲ್ಲಿ ಟಿಪ್ಪು ನಡೆಸಿದ ಆಕ್ರಮಣದ ಬಗೆಗೆ ಮಾಹಿತಿ ನೀಡುತ್ತದೆ. ಬಿ.ಎಲ್ ರೈಸ್ ಅವರ **ಮೈಸೂರ್ ಗ್ಯಾಸೆಟಿಯರ್** (೧೮೭೮, ೧೮೯೮) ಮೂರು ಸಂಪುಟಗಳಲ್ಲಿಯೂ ಕೂಡ ಹೈದರ್ ಮತ್ತು ಟಿಪ್ಪು ಸುಲ್ತಾನರ ಬಗೆಗೆ ವಿಶೇಷ ಅಧ್ಯಾಯಗಳಿವೆ. ಮೈಸೂರಿನ ಚೀಫ್ ಕಮಿಷನರ್ ಆಗಿದ್ದ ಲೂಯಿ ಬೆಂಥಾಮ್ ಬೌರಿಂಗ್ ಬರೆದ **ಹೈದರ್ ಅಲಿ ಅಂಡ್ ಟಿಪು ಸುಲ್ತಾನ್: ಅಂಡ್ ದಿ ಸ್ಟ್ರಗಲ್ ವಿಥ್ ದಿ ಮುಸಲ್ಮಾನ್ ಪವರ್ ಆಫ್ ದಿ ಸೌಥ್** (೧೮೯೯) ಕೃತಿಯು ಕೂಡ ವಿಲ್ಕ್ಸ್‌ನ ಬರವಣಿಗೆಯ ಮತ್ತೊಂದು ರೂಪವಾಗಿ ಕಾಣುತ್ತದೆ.

ಹೈದರ್ ಮತ್ತು ಟಿಪ್ಪುವಿನ ಸಮಕಾಲೀನನಾದ ಮೀರ್ ಹುಸೇನ್ ಕಿರ್ಮಾನಿ ಎಂಬಾತನು ಪರ್ಷಿಯನ್ ಭಾಷೆಯಲ್ಲಿ ಬರೆದ ಕೃತಿಗಳನ್ನು ಇಂಗ್ಲಿಷ್‌ಗೆ **ದಿ ಹಿಸ್ಟರಿ ಆಫ್ ಹೈದರ್ ನಾಯಕ ಮತ್ತು ಹಿಸ್ಟರಿ ಆಫ್ ಟಿಪ್ಪು ಸುಲ್ತಾನ್** (೧೮೬೪) ಹೆಸರಿನಲ್ಲಿ ಕರ್ನಲ್ ವಿಲಿಯಂ ಮೈಲ್ ಎಂಬ ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿಯು ಅನುವಾದಿಸಿದ್ದಾನೆ. ಕಿರ್ಮಾನಿಯು ಹೈದರ್ ಮತ್ತು ಟಿಪ್ಪುವಿನ ಸಮಕಾಲೀನನೂ, ಅವರ ಆಪ್ತನೂ ಆಗಿರುವುದರಿಂದ ಅವನು ದಾಖಲಿಸಿರುವ ವಿವರಗಳು ಹೆಚ್ಚು ಉಪಯುಕ್ತವಾಗಬಲ್ಲವು. ಟಿಪ್ಪು ಸುಲ್ತಾನನ ಮಗನಾದ ಗುಲಾಮ್ ಮೊಹಮ್ಮದ್ ಎಂಬಾತನು ಬರೆದ **ದಿ ಹಿಸ್ಟರಿ ಆಫ್ ಹೈದರ್ ಷಾ ಅಲಿಯಾಸ್ ಹೈದರ್ ಅಲಿ ಖಾನ್ ಬಹದೂರ್: ಅಂಡ್ ಆಫ್ ಹಿಸ್ ಸನ್ ಟಿಪ್ಪೂ ಸುಲ್ತಾನ್** (೧೮೫೫) ಕೃತಿಯು ಸೇನೆ, ಫಿರಂಗಿ, ರಾಕೆಟ್ ಮೊದಲಾದ ಶಸ್ತ್ರಾಸ್ತ್ರಗಳ ಬಗೆಗೆ ವಸ್ತುನಿಷ್ಠವಾದ ವಿವರಗಳನ್ನು ಕಟ್ಟಿಕೊಡುತ್ತದೆ. ಹಯವದನ ರಾವ್ ಅವರ **ಮೈಸೂರ್ ಗ್ಯಾಸೆಟಿಯರ್** (ಐದು

ಸಂಪುಟಗಳಲ್ಲಿ ೧೯೨೭–೧೯೩೦) ಮತ್ತು **ಹಿಸ್ಟರಿ ಆಫ್ ಮೈಸೂರ್** (ಮೂರು ಸಂಪುಟಗಳಲ್ಲಿ ೧೯೪೩, ೧೯೪೫ ಮತ್ತು ೧೯೪೬) ಹೈದರ್ ಮತ್ತು ಟಿಪ್ಪು ಕುರಿತು ಅಪಾರ ಮಾಹಿತಿಗಳನ್ನು ಹೊಂದಿರುವ ಕೃತಿಗಳಾಗಿವೆ.

ಸಮಕಾಲೀನವಾಗಿ ನೋಡಬಹುದಾದ ಕೆಲವು ಕೃತಿಗಳಲ್ಲಿ ಮೊಹಿಬ್ಬುಲ್ ಹಸನ್ ಅವರ **ಟಿಪೂ ಸುಲ್ತಾನನ ಇತಿಹಾಸ** (೧೯೮೮). ಇಂಗ್ಲಿಷ್ ಮೂಲದಲ್ಲಿದ್ದ ಈ ಕೃತಿಯನ್ನು ಸಮೇತನಹಳ್ಳಿ ರಾಮರಾಯ ಅವರು ಕನ್ನಡಕ್ಕೆ ತಂದಿದ್ದಾರೆ. ಟಿಪ್ಪು ಕುರಿತು ಕನ್ನಡದಲ್ಲಿ ಬಂದ ಮೊದಲ ಬೃಹತ್ತಾದ ಮತ್ತು ಮಹತ್ವದ ಕೃತಿ ಇದಾಗಿದೆ. ತಿ.ತಾ. ಶರ್ಮ ಅವರ **ಮೈಸೂರು ಇತಿಹಾಸದ ಹಳೆಯ ಪುಟಗಳು** (೧೯೯೬) ಒಂದು ಗಮನಾರ್ಹ ಕೃತಿ. ಬಿ. ಷೇಕ್ ಅಲಿ ಅವರು ಬರೆದಿರುವ ಮತ್ತು ಸಂಪಾದಿಸಿರುವ **ಟಿಪು ಸುಲ್ತಾನ್: ಗ್ರೇಟ್ ಮಾರ್ಟಿಯರ್** (೧೯೯೩), **ಕರ್ನಾಟಕ ಚರಿತ್ರೆ ಸಂಪುಟ–೫** (೧೯೯೭), **ಟಿಪು ಸುಲ್ತಾನ್: ಎ ಸ್ಟಡಿ ಇನ್ ಡಿಪ್ಲೊಮಸಿ ಅಂಡ್ ಕಾನ್‌ಫ್ರಂಟೇಷನ್** (೨೦೦೬) ಕೃತಿಗಳು ಬಹುಮುಖ್ಯ ಕೃತಿಗಳಾಗಿವೆ. ಇರ್ಫಾನ್ ಹಬೀಬ್ ಅವರು ಸಂಪಾದಿಸಿರುವ **ರೆಸಿಸ್ಟೆನ್ಸ್ ಅಂಡ್ ಮಾಡರ್ನೈಜೇಷನ್ ಅಂಡರ್ ಹೈದರ್ ಅಲಿ ಅಂಡ್ ಟಿಪು ಸುಲ್ತಾನ್** (೧೯೯೯) ಕೃತಿಯು ಅಮೂಲ್ಯ ಬರವಣಿಗೆಗಳಿಂದ ಕೂಡಿದ ಕೃತಿಯಾಗಿದೆ. ಇಲ್ಲಿನ ಬರವಣಿಗೆಗಳು ಟಿಪ್ಪುವಿನ ಯುದ್ಧತಂತ್ರಜ್ಞಾನ, ಶಸ್ತ್ರಾಸ್ತ್ರಗಳು ಮತ್ತು ಫ್ರೆಂಚರ ಜೊತೆಗಿನ ಸಂಬಂಧ ಮೊದಲಾದ ಸಂಗತಿಗಳ ಬಗೆಗೆ ಬೆಳಕು ಚೆಲ್ಲುತ್ತವೆ. ಇವಲ್ಲದೆ ಬಿ. ಮುದ್ದಾಚಾರಿ ಅವರ **ಮರಾಠರ ಅತಿಕ್ರಮಣ, ಮೈಸೂರಿನ ಪ್ರತಿಭಟನೆ** (೨೦೦೧) ಕೃತಿಯಲ್ಲಿ ಮೈಸೂರಿನ ಮೇಲೆ ಮರಾಠರ ಆಕ್ರಮಣಗಳು ನಡೆದ ಕುರಿತು ಮತ್ತು ಹೈದರಾಲಿ ಹಾಗೂ ಟಿಪ್ಪು ಸುಲ್ತಾನ್ ಮರಾಠರ ವಿರುದ್ಧ ಸೆಣೆಸಿದ ವಿವರಗಳನ್ನು ಗಮನಿಸಬಹುದಾಗಿದ್ದು, ಕೋಟೆ ಕೇಂದ್ರಿತ ಘಟನೆಗಳನ್ನು ಅವಲೋಕಿಸಬಹುದು. ಇತ್ತೀಚೆಗೆ ಬಂದ ಕ್ಯಾತೆ ಬ್ರಿಟಲ್ ಬ್ಯಾಂಕ್ ಅವರ **ದಿ ಲೈಫ್ ಆಫ್ ಟಿಪು ಸುಲ್ತಾನ್** (೨೦೧೬) ಒಂದು ಜನಪ್ರಿಯ ಪುಸ್ತಕವಾಗಿದೆ. ಇದರಲ್ಲಿ ಟಿಪ್ಪುವಿನ ಜೀವನ ಮತ್ತು ಸಾಧನೆಗಳನ್ನು ವಿಭಿನ್ನ ಕಣ್ನೋಟಗಳಲ್ಲಿ ಕಟ್ಟಿಕೊಟ್ಟಿದ್ದಾರೆ.

ಪ್ರಸ್ತುತ ಮಹಾಪ್ರಬಂಧದಲ್ಲಿ ಕೋಟೆಗಳನ್ನು ಕುರಿತು ದೊರಕುವ ಮೌಖಿಕ ಕಥನಗಳನ್ನು ವಿಶೇಷವಾಗಿ ಅಧ್ಯಯನ ನಡೆಸಲಾಗಿದೆ. ಕೋಟೆಗಳ ನಿರ್ಮಾಣ ಮತ್ತು ಕೋಟೆಯ ಆಕ್ರಮಣದ ಹಿನ್ನೆಲೆಯಲ್ಲಿ ಕೆಲವು ಅಪರೂಪದ ಸಂಗತಿಗಳು ನಮಗೆ ಮೌಖಿಕ ಕಥನಗಳಲ್ಲಿ ದೊರಕುತ್ತವೆ. ಈ ಕುರಿತು ಅಧ್ಯಯನಕ್ಕೆ ಇರುವ ಆಕರಗಳೆಂದರೆ, ಪ್ರಕಟಿತ ಲಾವಣಿಗಳು, ಬಖೈರುಗಳು, ಕೈಫಿಯತ್ತುಗಳ ಜೊತೆಗೆ ಐತಿಹ್ಯಗಳು, ನಂಬಿಕೆ ಮತ್ತು ಆಚರಣೆಗಳು ಹಾಗೂ ಸಂದರ್ಶನಗಳು ಇನ್ನೂ ಮುಂತಾದವುಗಳು. ಅವುಗಳಲ್ಲಿ

ಮುಖ್ಯವಾಗಿ ಲಿಂಗದೇವರು ಹಳೆಮನೆಯವರ **ಧೀರ ಟಿಪ್ಪುವಿನ ಲಾವಣಿಗಳು** (೨೦೦೩) ಮುಖ್ಯವಾದ ಕೃತಿ. ತಮಗೆ ದೊರೆತಿರುವ ಟಿಪ್ಪುವಿಗೆ ಸಂಬಂಧಿಸಿದ ಲಾವಣಿಗಳನ್ನು ಒಂದೆಡೆ ಸಂಗ್ರಹಿಸಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಅಲ್ಲದೆ, ದೇವುಡು ಅವರ **ಕರ್ನಾಟಕ ಸಂಸ್ಕೃತಿ** (೧೯೩೭), ಎಂ. ಜೀವನ ಅವರು ಸಂಗ್ರಹಿಸಿರುವ **ಜಾನಪದ ಗೀತೆಗಳು**, ಎಲ್. ಗುಂಡಪ್ಪ ಅವರ **ನಾಡಪದಗಳು** (೧೯೪೩), ಬಸವರಾಜ ಮಲಶೆಟ್ಟಿ ಅವರ **ಕೋಲಾಟದ ಪದಗಳು** (೧೯೮೧), ಕ್ಯಾತನಹಳ್ಳಿ ರಾಮಣ್ಣ ಅವರು ಸಂಪಾದಿಸಿರುವ **ಫ್ಲೀಟರು ಸಂಗ್ರಹಿಸಿದ ಲಾವಣಿಗಳು** (೧೯೯೧), ಎಂ.ಎಂ. ಕಲಬುರ್ಗಿ ಸಂಪಾದಿಸಿರುವ **ಕರ್ನಾಟಕದ ಕೈಫಿಯತ್ತುಗಳು** (೧೯೯೪), ಡಿ. ಲಿಂಗಯ್ಯನವರು ಸಂಪಾದಿಸಿರುವ **ಯಲಹಂಕ ನಾಡಪ್ರಭುಗಳ ಜಾನಪದ ಸಂಪುಟ** (೨೦೦೬) ಇವುಗಳಲ್ಲದೆ ಎಚ್.ಎಲ್. ನಾಗೇಗೌಡ, ವಿಜಯಲಕ್ಷ್ಮಿ ಸೀತಾಪುರ, ಆರ್. ಸಂಧ್ಯಾರೆಡ್ಡಿ, ಜಿ.ಶಂ. ಪರಮಶಿವಯ್ಯ, ಪಿ.ಕೆ. ರಾಜಶೇಖರ, ನಂ. ತಪಸ್ವಿಕುಮಾರ್, ಹಿ.ಚಿ. ಬೋರಲಿಂಗಯ್ಯ, ಮಂಜುನಾಥ ಬೇವಿನಕಟ್ಟಿ, ಮೊಗಳ್ಳಿ ಗಣೇಶ್, ಹರಿಶ್ಚಂದ್ರ ದಿಗ್ಗಂಗಿಕರ್ ಮೊದಲಾದವರ ಬರವಣಿಗೆಗಳನ್ನು ಅಧ್ಯಯನದ ಸಂದರ್ಭದಲ್ಲಿ ಪರಾಮರ್ಶಿಸಲಾಗಿದೆ.

ಇವಲ್ಲದೆ ಇನ್ನೂ ಅನೇಕ ಕೃತಿ ಮತ್ತು ಲೇಖನಗಳನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಸಾಂದರ್ಭಿಕವಾಗಿ ಬಳಸಿಕೊಳ್ಳಲಾಗಿದೆ.

## ೧.೪ ಅಧ್ಯಯನ ವ್ಯಾಪ್ತಿ

ಪ್ರತಿಯೊಂದು ಸಂಶೋಧನಾ ಅಧ್ಯಯನಗಳು ನಿರ್ದಿಷ್ಟ ಚೌಕಟ್ಟಿನಲ್ಲಿ ಕೂಡಿದ್ದರೆ ಪರಿಣಾಮಕಾರಿಯಾಗಿ ಮತ್ತು ತಲಸ್ಪರ್ಶಿ ಅಧ್ಯಯನವಾಗಿ ಮೂಡಿಬರಲು ಸಾಧ್ಯವಿರುತ್ತದೆ. ಆದ್ದರಿಂದ ಅಧ್ಯಯನಕ್ಕೆ ಒಂದು ಚೌಕಟ್ಟನ್ನು ಹಾಕಿಕೊಳ್ಳುವುದು ಸೂಕ್ತವಾಗಿರುತ್ತದೆ. **ಟಿಪ್ಪು ಕೋಟೆಗಳ ರಚನೆ, ತಂತ್ರಜ್ಞಾನ ಹಾಗೂ ಮೌಖಿಕ ಕಥನ** ಎಂಬ ಪ್ರಸ್ತುತ ಅಧ್ಯಯನದ ಶೀರ್ಷಿಕೆಯೇ ಹೇಳುವಂತೆ ಮೈಸೂರನ್ನು ಆಳಿದ ಟಿಪ್ಪು ಸುಲ್ತಾನನ ಕಾಲದ ಕೋಟೆಗಳನ್ನು ಕುರಿತಾಗಿದೆಯಾದರೂ, ತನ್ನ ವ್ಯಾಪ್ತಿಯನ್ನು ಪ್ರಾತಿನಿಧಿಕವಾದ ಕೋಟೆಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಏಕೆಂದರೆ, ವಿಶಾಲ ಭೌಗೋಳಿಕ ಪ್ರದೇಶವನ್ನು ಆಳಿದ ಟಿಪ್ಪು ಸುಲ್ತಾನನ ನೂರಾರು ಕೋಟೆಗಳು ಕರ್ನಾಟಕ, ಆಂಧ್ರಪ್ರದೇಶ, ತೆಲಂಗಾಣ, ತಮಿಳುನಾಡು ಮತ್ತು ಕೇರಳ ರಾಜ್ಯಗಳಿಗೆ ಸೇರಿವೆ. ಈ ಎಲ್ಲ ಕೋಟೆಗಳನ್ನು ಸಮಗ್ರವಾಗಿ ಅಧ್ಯಯನಕ್ಕೆ ಒಳಪಡಿಸುವುದು ಬಹಳ ಕಷ್ಟದ ಕೆಲಸ. ಆದ್ದರಿಂದ ವಿವಿಧ ಭೌಗೋಳಿಕ ಪರಿಸರ ಮತ್ತು ಸಂಸ್ಥಾನಗಳಿಗೆ ಸೇರಿದ ಕೆಲವು ಪ್ರಾತಿನಿಧಿಕವಾದ ಕೋಟೆಗಳನ್ನು ಆಯ್ದುಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇದು ಅಧ್ಯಯನದ

ಮಿತಿಯೂ ಹೌದು ಶಕ್ತಿಯೂ ಹೌದು.

ಇಲ್ಲಿನ ಮತ್ತೊಂದು ಅಂಶವನ್ನು ಸ್ಪಷ್ಟಪಡಿಸುವುದು ಮುಖ್ಯವಾಗಿದೆ. ಟಿಪ್ಪು ಕಾಲದ ಕೋಟೆಗಳು ಎಂದರೆ ಅದು ಅವನ ತಂದೆ ಹೈದರಾಲಿಯ ಕಾಲದ ಜೊತೆಗೂ ಹೆಣೆದುಕೊಂಡಿದೆ. ಇಲ್ಲಿ ಟಿಪ್ಪು ಸುಲ್ತಾನನ ಕೋಟೆಗಳು ಅಂದರೆ ಅದು ಅನೇಕ ವಿಧದಲ್ಲಿ ಹೈದರಾಲಿಯ ಕೋಟೆಗಳೂ ಆಗಿರುತ್ತವೆ. ಆದ್ದರಿಂದ ಅಧ್ಯಯನದ ನಡುವೆ ಅಲ್ಲಲ್ಲಿ ಹೈದರಾಲಿಯು ಬಂದು ಹೋಗುವುದುಂಟು. ಏಕೆಂದರೆ ತಂದೆ ಮಗನ ಆಳ್ವಿಕೆಯು ಕೇವಲ ೩೮ ವರ್ಷಗಳಾಗಿದ್ದು, ಈ ಅವಧಿಯಲ್ಲಿ ಇವರು ಹೊಸದಾಗಿ ನಿರ್ಮಿಸಿದ ಕೋಟೆಗಳು ತೀರ ಕಡಿಮೆ. ಆದ್ದರಿಂದ ಇವರು ಆಯಕಟ್ಟಿನ ಸ್ಥಳಗಳಲ್ಲಿದ್ದ ಹಿಂದಿನ ಕೋಟೆಗಳನ್ನು ಆಯ್ದುಕೊಂಡು ಅವುಗಳನ್ನು ಪುನರ್ರಚಿಸುವ ಕೆಲಸಕ್ಕೆ ಕೈಹಾಕಿದರು. ಟಿಪ್ಪು ಸ್ವತಂತ್ರವಾಗಿ ನಿರ್ಮಾಣ ಮಾಡಿಸಿದ ಏಕೈಕ ಕೋಟೆ ಎಂದರೆ ಮಂಜರಾಬಾದ್ ಕೋಟೆ. ಇನ್ನುಳಿದ ಕೋಟೆಗಳೆಲ್ಲವೂ ಮರುನಿರ್ಮಾಣಗಳೇ ಆಗಿವೆ.

ಪ್ರಸ್ತುತ ಅಧ್ಯಯನದಲ್ಲಿ ಕೋಟೆಗಳ ಮೌಖಿಕ ಕಥನವನ್ನೂ ಪ್ರತ್ಯೇಕವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಲ್ಲಿನ ಮಿತಿಯೊಂದನ್ನು ಹೇಳಲೇಬೇಕು. ಹೈದರ್ ಮತ್ತು ಟಿಪ್ಪು ಕಾಲದ ಮೌಖಿಕ ಕಥನಗಳು ಬಹಳ ಕಡಿಮೆ ಇವೆ. ಆದ್ದರಿಂದ ಮೌಖಿಕ ಕಥನದ ವಿಷಯ ವಿಸ್ತಾರವನ್ನು ಹಿಗ್ಗಿಸಿಕೊಳ್ಳುವ ದೃಷ್ಟಿಯಿಂದ ಟಿಪ್ಪು ಆಳ್ವಿಕೆಗೂ ಪೂರ್ವಕಾಲಕ್ಕೆ ಸಂಬಂಧಿಸಿದ ಮೌಖಿಕ ಕಥನಗಳನ್ನೂ ಇಲ್ಲಿ ಪರಿಗಣಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೧.೫ ಅಧ್ಯಯನ ವಿಧಿ-ವಿಧಾನ

ಸಂಶೋಧನೆಗಳನ್ನು ನಡೆಸುವಾಗ ಅಧ್ಯಯನಕ್ಕೊಂದು ಚೌಕಟ್ಟು ಇರುವಂತೆ ಅಧ್ಯಯನ ವಿಧಾನವೂ ಇರಬೇಕು. ಅಧ್ಯಯನವನ್ನು ಯಾವ ಮಾದರಿಯಲ್ಲಿ ನಡೆಸಲಾಗುತ್ತಿದೆ ಎಂಬುದನ್ನು ತಿಳಿಯದೆ ಹೋದರೆ ಅಧ್ಯಯನದ ಊಹಾತ್ಮಕವಾದವನ್ನು ಪರಿಶೀಲಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಅಧ್ಯಯನ ವಿಧಾನ ಸಂಶೋಧನೆಯಲ್ಲಿ ಪ್ರಧಾನವಾಗಿದೆ.

ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯ ಪ್ರಧಾನವಾದುದು. ಕೋಟೆಗೆ ಸಂಬಂಧಿಸಿದ ಶಾಸನಗಳು, ಸಮಕಾಲೀನ ದಾಖಲೆಗಳು, ವಿದೇಶಿ ಬರವಣಿಗೆಗಳು, ಪತ್ರಾಗಾರದ ದಾಖಲೆಗಳು, ಪತ್ರವ್ಯವಹಾರಗಳು, ಕೈಫಿಯತ್ತುಗಳು, ಬಖೈರುಗಳು ಮೊದಲಾದ ಮೂಲ ಮತ್ತು ಆನುಷಂಗಿಕ ಆಕರಗಳನ್ನು ಅಧ್ಯಯನಕ್ಕೆ ಅವಲಂಬಿಸಲಾಗಿದೆ. ಇವುಗಳ ಜೊತೆಗೆ ಕೋಟೆಗಳ ಬಗೆಗೆ ಇರುವ ಮೌಖಿಕ ಕಥನಗಳಿಗಾಗಿ ಸಂದರ್ಶನಗಳನ್ನು ನಡೆಸುವುದು, ಲಾವಣಿ, ಐತಿಹ್ಯ, ಕಥೆ, ಗೀತೆ, ಒಗಟು ಮೊದಲಾದವುಗಳನ್ನು ಹಾಡುಗಾರರಿಂದ ಮತ್ತು ಜನಸಾಮಾನ್ಯರಿಂದ ಸಂಗ್ರಹಿಸುವುದು ಹಾಗೂ ಈಗಾಗಲೆ ಸಂಗ್ರಹಿಸಿರುವ

ಮತ್ತು ದಾಖಲಾಗಿರುವ ಮೌಖಿಕ ಆಕರಗಳು ಮತ್ತು ಅಧ್ಯಯನಗಳನ್ನು ಆಧಾರಗಳಾಗಿ ಬಳಸಿಕೊಳ್ಳಲಾಗಿದೆ. ಇವಲ್ಲದೆ ಅನೇಕ ಶಿಷ್ಟ ಸಾಹಿತ್ಯಗಳಲ್ಲಿ ಬಂದಿರುವ ಕೋಟೆಗಳ ಬಗೆಗಿನ ವಿವರಣೆಗಳು, ವರ್ಣನೆಗಳನ್ನು ಕುರಿತು ಅಧ್ಯಯನ ನಡೆಸಲಾಗಿದೆ. ಈವರೆಗೂ ಅಪ್ರಕಟಿತವಾಗಿರುವ ಸಂಶೋಧನ ಮಹಾಪ್ರಬಂಧಗಳನ್ನು ಕೂಡ ಮುಖ್ಯ ಆಕರಗಳಾಗಿ ಬಳಸಿಕೊಳ್ಳಲಾಗಿದೆ. ಮತ್ತೊಂದು ನೆಲೆಯಲ್ಲಿ ವಿವಿಧ ಕಾಲಘಟ್ಟದ ರಕ್ಷಣಾ ವಾಸ್ತುಶಿಲ್ಪದ ಲಕ್ಷಣಗಳು, ವಿಶೇಷತೆಗಳನ್ನು ಗುರುತಿಸುವುದು ಅವಶ್ಯವಾಗಿದೆ. ಅದಕ್ಕಾಗಿ ವ್ಯಾಪಕ ಕ್ಷೇತ್ರಕಾರ್ಯವನ್ನು ನಡೆಸಲಾಗಿದೆ. ಇವುಗಳ ಜೊತೆಗೆ ಅಧ್ಯಯನದ ಸಂದರ್ಭದಲ್ಲಿ ಮೌಖಿಕ ಸಾಹಿತ್ಯಗಳಲ್ಲಿ ಕಂಡುಬರುವ ಕೋಟೆಯ ಭಾಗಗಳಾದ ಕೊತ್ತಳ, ಬತೇರಿ, ದ್ವಾರ ಮೊದಲಾದವುಗಳಿಗಾಗಿ ನಡೆದಿರಬಹುದಾದ ನರಬಲಿಯ ಬಗೆಗೆ ವಿಮರ್ಶೆ ಮತ್ತು ವಿಶ್ಲೇಷಣೆಗಳನ್ನು ನಡೆಸಲಾಗಿದೆ.

ಹೀಗೆ ನಡೆಸಿದ ಅಧ್ಯಯನವನ್ನು ತೌಲನಿಕ ಮತ್ತು ರಾಚನಿಕ ವಿಧಾನಗಳ ಮೂಲಕ ಪರಿಶೀಲನೆಗೆ ಒಳಪಡಿಸಲಾಗುವುದು. ತೌಲನಿಕ ವಿಧಾನದಲ್ಲಿ ಟಿಪ್ಪು ಪೂರ್ವದ ಕೋಟೆಗಳಿಗೂ ಮತ್ತು ಟಿಪ್ಪು ಕಾಲದ ಕೋಟೆಗಳಿಗೆ ಇರುವ ಭಿನ್ನತೆಗಳೇನು ಎಂಬುದನ್ನು ಅಧ್ಯಯನದ ಮೂಲಕ ಗುರುತಿಸಿಕೊಳ್ಳಲಾಗಿದೆ. ಟಿಪ್ಪು ಪೂರ್ವದ ಕೋಟೆಗಳಲ್ಲಿ ಕೋಟೆಯ ಭಾಗಗಳಾದ ಬತೇರಿ, ಪಹರೆಕಟ್ಟೆ, ಕೊತ್ತಳ, ಕೋಟೆ ಗೋಡೆ, ನಿರ್ಮಾಣಕ್ಕೆ ಬಳಸಿರುವ ಸಾಧನಗಳು, ನೀರಿನ ವ್ಯವಸ್ಥೆ, ವಾಸದ ನೆಲೆಗಳು ಮುಂತಾದವುಗಳ ರಚನೆ ಹೇಗಿದೆ ಮತ್ತು ಟಿಪ್ಪು ಕಾಲದಲ್ಲಿ ಅವುಗಳ ಸ್ವರೂಪದಲ್ಲಿ ಉಂಟಾಗಿರುವ ಮಾರ್ಪಾಟುಗಳೇನು ಎಂಬುದನ್ನು ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸಲಾಗಿದೆ. ಹೊಸ ಬದಲಾದ ಅಂಶಗಳಿಗೆ ಕಾರಣಗಳೇನು ಎಂಬುದನ್ನು ವೈಧಾನಿಕ ವಿಧಾನದ ಮೂಲಕ ಕಂಡುಕೊಳ್ಳುವುದರಿಂದ ಟಿಪ್ಪುವಿನ ಕೋಟೆಗಳ ಚಾರಿತ್ರಿಕ ಮಹತ್ವವನ್ನು ಅರ್ಥೈಸಲಾಗಿದೆ.

ವಿಶೇಷವಾಗಿ ತಾಂತ್ರಿಕ ವಿಷಯಕ್ಕೆ ಸಂಬಂಧಿಸಿದಂತೆ ಕೋಟೆಗಳ ಸ್ವರೂಪದಲ್ಲಿ ಮಾಡಿರುವ ಬದಲಾವಣೆಗಳನ್ನು ಗುರುತಿಸುವುದು ಪ್ರಸ್ತುತ ಮಹಾಪ್ರಬಂಧದ ಮತ್ತೊಂದು ಉದ್ದೇಶವಾಗಿರುವುದರಿಂದ ವೈಜ್ಞಾನಿಕ ಮತ್ತು ಪ್ರಾಯೋಗಿಕ ನೆಲೆಗಟ್ಟಿನಲ್ಲಿ ಅರ್ಥ ಮಾಡಿಕೊಳ್ಳಲಾಗಿದೆ. ಇದಕ್ಕೆ ಪೂರಕವಾಗಿ ಸಮಕಾಲೀನ ಯುದ್ಧತಂತ್ರಜ್ಞಾನ ಮತ್ತು ಯುದ್ಧಕಲೆಯ ಬಗೆಗೂ ತಿಳಿಯುವುದು ಅವಶ್ಯಕವಾಗಿದೆ. ಸಿಡಿಮದ್ದಿನ ಉತ್ಪಾದನೆ, ರಾಕೆಟ್ ತಯಾರಿಕೆ, ಫಿರಂಗಿ ಉತ್ಪಾದನೆ ಮೊದಲಾದ ತಾಂತ್ರಿಕ ಮತ್ತು ವೈಜ್ಞಾನಿಕ ಅಧ್ಯಯನಗಳನ್ನು ಚಾರಿತ್ರಿಕ ವಿಕಸನ ಕ್ರಮದಲ್ಲಿ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಲಾಗಿದೆಯೇ ವಿನಃ ಶುದ್ಧ ವೈಜ್ಞಾನಿಕ ಪರಿಭಾಷೆಯಲ್ಲಿ ಅಲ್ಲ. ಕೋಟೆಗಳ ರಚನೆಯಲ್ಲಿ ಬಳಸಿರುವ ಗಾರೆ, ಫಿರಂಗಿಗಳ ವಿನ್ಯಾಸವು ಅವುಗಳು ಗುಂಡನ್ನು

ಎಸೆಯುವ ಸಾಮರ್ಥ್ಯ, ಫಿರಂಗಿಯ ನಿರ್ಮಾಣಕ್ಕೆ ಬಳಸಿದ ಲೋಹ, ರಾಕೆಟ್‌ಗಳು ಕ್ರಮಿಸಬಹುದಾದ ಸಾಮರ್ಥ್ಯ ಇವೆಲ್ಲವುಗಳನ್ನು ವೈಜ್ಞಾನಿಕವಾಗಿ ಮತ್ತು ಪ್ರಯೋಗಕ್ಕೆ ಒಳಪಡಿಸಿ ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಟಿಪ್ಪು ಕಾಲದ ಕೋಟೆಗಳನ್ನು ಅವನ ಹಿಂದಿನ ಕಾಲದಲ್ಲಿದ್ದ ಕೋಟೆಗಳಿಗೆ ತುಲನೆ ಮಾಡಿ ಮತ್ತು ರಚನೆಯ ಹಿಂದಿನ ವಾಸ್ತು ವಿನ್ಯಾಸದ ಉದ್ದೇಶಗಳನ್ನು ರಾಚನಿಕ ವಿಧಾನದ ಮೂಲಕ ಹಾಗೂ ಸಿಡಿಮದ್ದಿನ ಸಾಧನಗಳನ್ನು ವಸ್ತುಸಂಗ್ರಹಾಲಯಗಳಲ್ಲಿ ಸೂಕ್ಷ್ಮವಾಗಿ ಅವಲೋಕಿಸಿ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ.

ಈ ಅಧ್ಯಯನ ಮತ್ತೊಂದು ಬಹುಮುಖ್ಯವಾದ ಭಾಗ ಮೌಖಿಕ ಕಥನ. ಈಗಾಗಲೇ ಮೇಲೆ ಚರ್ಚಿಸಿರುವಂತೆ ಶುದ್ಧ ವಿಜ್ಞಾನ ಮತ್ತು ಜನಪದ ಎರಡನ್ನು ಒಗ್ಗಿಸಿ ಸಂಶೋಧನೆಗೆ ಒಳಪಡಿಸುವ ಪ್ರಯತ್ನ ಬಹಳ ವಿಶಿಷ್ಟವಾಗಿದೆ. ರಕ್ಷಣಾ ವಾಸ್ತುಶಾಸ್ತ್ರ ಹಾಗೂ ಜಾನಪದ ನಂಬಿಕೆಗಳೆರಡನ್ನು ಇಲ್ಲಿ ಸಂಕರಗೊಳಿಸಲಾಗಿದೆ. ಕೋಟೆಗಳ ಪ್ರಾಯೋಗಿಕ ಅಧ್ಯಯನದ ಜೊತೆ ಜೊತೆಗೆ ಸಂದರ್ಶನಗಳು, ಜಾನಪದಗೀತೆ, ಕಥೆಗಳ ಸಂಗ್ರಹಗಳು ಕೂಡ ಮುಖ್ಯಭಾಗವಾಗಿವೆ. ಈ ಅಧ್ಯಾಯಗಳು ಕೇವಲ ಟಿಪ್ಪುವಿನ ಕೋಟೆಗಳಿಗೆ ಸೀಮಿತಗೊಳ್ಳದೆ ಟಿಪ್ಪು ಪೂರ್ವದ ಕಾಲಕ್ಕೆ ಸೇರಿದ ಮೌಖಿಕ ಕಥನಗಳನ್ನು ಇಲ್ಲಿ ತರಲಾಗಿದೆ. ಈ ನಿಟ್ಟಿನಲ್ಲಿ ಇದೊಂದು ಬಹುಶಿಸ್ತೀಯ ಅಧ್ಯಯನವಾಗಿದೆ.

### ೧.೬ ಅಧ್ಯಯನದ ಸ್ವರೂಪ

ಪ್ರಸ್ತುತ ಮಹಾಪ್ರಬಂಧವು ಟಿಪ್ಪು ಕೋಟೆಗಳ ರಚನೆ, ತಂತ್ರಜ್ಞಾನ ಮತ್ತು ಮೌಖಿಕ ಕಥನ ಎನ್ನುವ ಶೀರ್ಷಿಕೆಯನ್ನು ಹೊಂದಿದ್ದು, ವಿಶ್ಲೇಷಣಾತ್ಮಕ ಮತ್ತು ತೌಲನಿಕ ಸ್ವರೂಪದ ಅಧ್ಯಯನ ಇದಾಗಿದೆ. ಇದರಲ್ಲಿ ಆರು ಅಧ್ಯಾಯಗಳಿದ್ದು, ಅವುಗಳ ವಿಸ್ತೃತ ಸ್ವರೂಪವನ್ನು ಕ್ಷೇತ್ರಕಾರ್ಯ, ಸಂದರ್ಶನಗಳು ಮತ್ತು ಚಾರಿತ್ರಿಕ ಆಕರಗಳ ಸಹಾಯದಿಂದ ತುಲನೆ ನಡೆಸಿ ವಿಶ್ಲೇಷಿಸಲಾಗಿದೆ.

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಪ್ರವೇಶ, ಉದ್ದೇಶ, ಮಹತ್ವ, ವಿಧಿ ವಿಧಾನ, ಈವರೆಗಿನ ಅಧ್ಯಯನಗಳ ಸಮೀಕ್ಷೆ, ಸ್ವರೂಪವನ್ನು ಕುರಿತು ಮೊದಲಿಗೆ ಚರ್ಚಿಸಲಾಗಿದೆ. ಟಿಪ್ಪು ಕೋಟೆಗಳು ಏಕೆ ಮಹತ್ವಪೂರ್ಣವಾದವುಗಳಾಗಿವೆ ಎಂಬುದನ್ನು ಅರಿಯುವ ಸಂಶೋಧನ ವಿಧಾನಗಳನ್ನು ಇಲ್ಲಿ ಚರ್ಚಿಸಲಾಗಿದೆ. ಅದನ್ನು ಕಂಡುಕೊಳ್ಳುವ ಸಲುವಾಗಿ ಅನುಸರಿಸುವ ಸಂಶೋಧನಾ ಮಾರ್ಗಗಳನ್ನು ಮತ್ತು ಬಳಸುವ ಆಕರಗಳನ್ನು ಚರ್ಚೆ ಮಾಡಲಾಗಿದೆ. ಇಲ್ಲಿ ಕೋಟೆಗಳ ಚರಿತ್ರೆಯ ಮೇಲೆ ಈವರೆಗೆ ಬಂದಿರುವ

ಪ್ರಮುಖ ಕೃತಿಗಳ ಸಮೀಕ್ಷೆಯನ್ನು ನಡೆಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಟಿಪ್ಪು ಸುಲ್ತಾನನಿಗೂ ಪೂರ್ವದ ಕೋಟೆಯಲ್ಲಿ ಬೆಳೆದು ಬಂದಿರುವ ತಾಂತ್ರಿಕ ವಿಕಾಸವನ್ನು ಕುರಿತು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ. ಹರಪ್ಪ ನಾಗರಿಕತೆಯ ಕಾಲದಿಂದ ಹದಿನೆಂಟನೆಯ ಶತಮಾನದ ಉತ್ತರಾರ್ಧದ ಕಾಲಘಟ್ಟದವರೆಗೂ ಸಮೀಕ್ಷಾತ್ಮಕವಾಗಿ ಅಧ್ಯಯನವನ್ನು ನಡೆಸಲಾಗಿದೆ. ಇದರ ಮುಖ್ಯ ಉದ್ದೇಶ ಕೋಟೆಗಳ ವಿಕಾಸವು ಟಿಪ್ಪು ಕಾಲಘಟ್ಟದವರೆಗೂ ಹೇಗೆ ಬೆಳೆದು ಬಂದಿತು ಎಂಬುದನ್ನು ಅರ್ಥ ಮಾಡಿಕೊಳ್ಳುವುದಾಗಿದೆ. ಇದರಿಂದ ಟಿಪ್ಪು ಕಾಲಘಟ್ಟದಲ್ಲಿ ಆಗಿರುವ ಬದಲಾವಣೆಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯ.

ಮೂರನೆಯ ಅಧ್ಯಾಯವು ಪ್ರಸ್ತುತ ಮಹಾಪ್ರಬಂಧದ ಹೃದಯಭಾಗವಿದ್ದಂತೆ. ಈ ಅಧ್ಯಾಯದ ಆರಂಭದಲ್ಲಿ ಆಯ್ದ ಕೋಟೆಗಳ ಸಂಕ್ಷಿಪ್ತ ಚರಿತ್ರೆಯನ್ನು ಅವಲೋಕಿಸಲಾಗಿದೆ. ಇದರಲ್ಲಿ ಪ್ರತಿ ಕೋಟೆಗಳ ಹುಟ್ಟಿನಿಂದ ಆರಂಭಿಸಿ ವಿವಿಧ ಕಾಲಘಟ್ಟಗಳಲ್ಲಿ ಅವು ಪಡೆದುಕೊಂಡ ಸ್ವರೂಪವನ್ನು ಚರ್ಚಿಸುತ್ತಾ ಬರಲಾಗಿದ್ದು, ಅಂತಿಮವಾಗಿ ಹೈದರಾಲಿ ಅಥವಾ ಟಿಪ್ಪು ಕೈವಶವಾಗುವುದೊಂದಿಗೆ ಮುಕ್ತಾಯಗೊಳ್ಳುತ್ತದೆ. ನಂತರದ ಘಟಕದಲ್ಲಿ ಮುಖ್ಯ ಭಾಗವಾದ ತಂತ್ರಜ್ಞಾನವನ್ನು ಕುರಿತು ತುಲನಾತ್ಮಕವಾಗಿ ಅಧ್ಯಯನ ನಡೆಸಲಾಗಿದೆ. ಮುಖ್ಯವಾಗಿ ಶ್ರೀರಂಗಪಟ್ಟಣ, ಚಿತ್ರದುರ್ಗ, ಬೆಂಗಳೂರು, ಗುಡಿಬಂಡೆ, ದೇವನಹಳ್ಳಿ, ಶಿರಾ, ನಂದಿದುರ್ಗ, ಬೇಕಲ್, ವೆಲ್ಲೂರು, ಮಂಜರಾಬಾದ್, ಮಡಿಕೇರಿ, ಹುತ್ರಿದುರ್ಗ, ಹುಲಿಯೂರುದುರ್ಗದ ಕೋಟೆಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಟಿಪ್ಪು ಕಾಲದ ಕೋಟೆಗಳು ತಾಂತ್ರಿಕವಾಗಿ ಎಷ್ಟು ಶ್ರೀಮಂತವಾಗಿದ್ದವು ಎಂಬುದನ್ನು ಇದರ ಮೂಲಕ ಅರ್ಥ ಮಾಡಿಕೊಳ್ಳಲು ಸಾಧ್ಯವಿದೆ.

ಮುಖ್ಯವಾಗಿ ಕೋಟೆಗಳಲ್ಲಿ ಹೊಸದಾಗಿ ಪರಿಚಯವಾದ ಮದ್ದಿನ ಮನೆ, ರ್‍ಯಾಂಪ್, ವಿಶಾಲವಾದ ಪಹರೆಕಟ್ಟೆ, ಎತ್ತರವಾದ ಕೈಪಿಡಿ, ವೃತ್ತಾಕಾರದ ಕೊತ್ತಳ ಮತ್ತು ಬತೇರಿಗಳು, ಅವುಗಳ ಮೇಲೆ ಪ್ರತಿಷ್ಠಾಪಿಸುವ ಫಿರಂಗಿ ಮೊದಲಾದ ಶಸ್ತ್ರಾಸ್ತ್ರಗಳು, ಆಕ್ರಮಣದ ಸಂದರ್ಭದಲ್ಲಿ ಶತ್ರುಗಳ ಮೇಲೆ ತೂರಿಬಿಡಲಾಗುವ ರಾಕೆಟ್‌ಗಳು, ಬಂದೂಕುಗಳು, ಗಾರೆ ಮತ್ತು ಕಲ್ಲು ಹಾಗೂ ಇಟ್ಟಿಗೆಗಳಿಂದ ನಿರ್ಮಾಣವಾದ ಕೋಟೆ ಗೋಡೆಗಳು ಇವೇ ಮುಂತಾದ ಕೋಟೆಯ ಭಾಗಗಳನ್ನು ಕುರಿತು ಪರಿಶೀಲಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಕೋಟೆಗಳ ಚಾರಿತ್ರಿಕ ಘಟನಾವಳಿಗಳಿಗೆ ಸಂಬಂಧಿಸಿದ ವಿವರಗಳನ್ನು ನೀಡಲಾಗಿದೆ. ಈ ಭಾಗದಲ್ಲಿ ಹೈದರಾಲಿಯ ಏಳಿಗೆ ಮತ್ತು ಸೈನಿಕ

ಸಾಧನೆಗಳನ್ನು ಕುರಿತು ವಿವರವಾಗಿ ಚರ್ಚಿಸಿದೆ. ಅದರ ಮುಂದಿನ ಭಾಗದಲ್ಲಿ ಟಿಪ್ಪುವು ನಡೆಸಿದ ಸೈನಿಕ ಸಾಧನೆ ಮತ್ತು ಪ್ರಮುಖ ಕೋಟೆಗಳಲ್ಲಿ ನಡೆದ ಆಕ್ರಮಣದ ಸಂದರ್ಭಗಳನ್ನು ಚಿತ್ರಿಸಲು ಪ್ರಯತ್ನಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಕೋಟೆಗಳಿಗೆ ಸಂಬಂಧಿಸಿದ ಮೌಖಿಕ ಕಥನಗಳನ್ನು ಕುರಿತು ಚರ್ಚಿಸಲಾಗಿದೆ. ಇಲ್ಲಿ ಕೇವಲ ಟಿಪ್ಪು ಮತ್ತು ಹೈದರಾಲಿಯ ಕಾಲಕ್ಕೆ ಸಂಬಂಧಿಸಿದ ಮೌಖಿಕ ಕಥನಗಳನ್ನು ತೆಗೆದುಕೊಂಡಿಲ್ಲ. ಬದಲಿಗೆ ಹೈದರ್ ಪೂರ್ವಕಾಲದ ಕೋಟೆಗಳಿಗೂ ಸಂಬಂಧಿಸಿದ ಎಲ್ಲಾ ಬಗೆಯ ಕಥನಗಳನ್ನು ಸಂಗ್ರಹಿಸಲಾಗಿದೆ. ಇದರ ಉದ್ದೇಶ ಕೋಟೆಗಳ ಬಗೆಗೆ ಜನಮಾರ್ಗದಲ್ಲಿ ಏನು ಭಾವನೆಗಳಿದ್ದವು ಎಂಬುದನ್ನು ತಿಳಿಯುವುದಾಗಿದೆ.

ಕೊನೆಯ ಭಾಗವು ಸಮಾರೋಪವನ್ನು ಒಳಗೊಂಡಿದೆ. ಮಹಾಪ್ರಬಂಧದಲ್ಲಿ ಚರ್ಚಿಸಲಾದ ಮತ್ತು ಪರಿಶೀಲಿಸಲಾದ ಟಿಪ್ಪುವಿನ ಕೋಟೆಯ ಅಧ್ಯಯನದ ಫಲಿತಗಳನ್ನು ಸಂಗ್ರಹಿಸಲಾಗಿದೆ. ಈವರೆಗಿನ ಅಧ್ಯಯನದ ಫಲಿತಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ. ವಿಶೇಷವಾಗಿ ಟಿಪ್ಪು ಕೋಟೆಗಳನ್ನು ತಾಂತ್ರಿಕ ಮತ್ತು ಕೌಶಲ್ಯದ ದೃಷ್ಟಿಯಿಂದ ಎಷ್ಟರ ಮಟ್ಟಿಗೆ ಉನ್ನತಿಯನ್ನು ಸಾಧಿಸಿದ್ದವು ಎಂಬುದನ್ನು ಪರೀಕ್ಷೆಗೆ ಒಳಪಡಿಸಿ ತಿಳಿದುಕೊಂಡ ಅಂಶಗಳ ಮೇಲೆ ಬೆಳಕು ಚೆಲ್ಲುತ್ತದೆ. ಇಲ್ಲಿನ ವಾಸ್ತು ವಿನ್ಯಾಸದ ಕಾರಣ, ಕೋಟೆಯಲ್ಲಿ ಅದರ ಮಹತ್ವ ಅದರ ಚಾರಿತ್ರಿಕ ವಿಕಾಸದ ಕ್ರಮಗಳನ್ನು ಸಹ ಇಲ್ಲಿ ಕಾಣಬಹುದಾಗಿದೆ.

***

## ಟಿಪ್ಪಣಿಗಳು

೧. ಬಂದೂಕು, ತೋಪು, ಕತ್ತಿ, ಚೂರಿಗಳ ತಯಾರಿಕೆಯು ಬಹು ಉನ್ನತಮಟ್ಟದ ಕೌಶಲವನ್ನು ಬಯಸುತ್ತದೆ. ಕಿರ್ಮಾನಿ ಹೇಳುವಂತೆ: "ಅವನ ಕೆಲಸಗಾರರು ಅದ್ಭುತ ವಿವರಣೆಯುಳ್ಳ ಬಂದೂಕುಗಳನ್ನು, ಸಿಂಹ-ಮುಖದ ತುಪಾಕಿಗಳನ್ನು, ಎರಡು ಅಥವಾ ಮೂರುನಳಿಗೆಗಳ ಕೋವಿಗಳನ್ನು ತಯಾರಿಸುತ್ತಿದ್ದರು... ಕೋವಿಯ ಗುಂಡುಗಳು ಭೇದಿಸಲಾಗದಂತಹ ಒಂದು ಬಗೆಯ ಗುರಾಣಿಯನ್ನೂ ತಯಾರಿಸುತ್ತಿದ್ದರು." ಬಂದೂಕು ಮತ್ತು ಕೋವಿಗಳನ್ನು ಫ್ರೆಂಚ್ ವಿನ್ಯಾಸದಲ್ಲಿ ತಯಾರಿಸುತ್ತಿದ್ದರು. ಹೈದರನ ಸೇವೆಯಲ್ಲಿದ್ದ ಮಾನ್ಸಿಯರ್ ಲಾಫೋಲಿ ಪ್ರಧಾನ ವಿನ್ಯಾಸಕಾರನಾಗಿದ್ದನು.

ಟಿಪ್ಪುವು ೧೭೮೭ ಏಪ್ರಿಲ್ ೨ ರಂದು ಫ್ರಾನ್ಸ್ ದೇಶದಿಂದ ಇನ್ನೂ ಹೆಚ್ಚುಜನ ತಂತ್ರಜ್ಞರನ್ನು ಕರೆತರಲು ಆದೇಶಿಸಿದನು: "ಹತ್ತುಜನ ಫಿರಂಗಿ ನಿರ್ಮಿಸುವವರು, ಹತ್ತುಜನ ಹಡಗು ಕಟ್ಟುವವರು, ಗಾಜು, ಕನ್ನಡಿಗಳ ತಯಾರಕರು ಹತ್ತುಜನ; ಹಡಗು ಗಡಿಯಾರಗಳನ್ನು ಮತ್ತು ಗಾಲಿಗಳನ್ನು, ನೀರೆತ್ತುವುದಕ್ಕೆ ಮತ್ತು ಇತರ ಕೆಲಸಗಳನ್ನು ಮಾಡುವವರು ಹತ್ತು ಮಂದಿ ಖುದಾದ್ ಸರಕಾರಕ್ಕೆ ಅಗತ್ಯವಾಗಿದ್ದಾರೆ. ಫ್ರೆಂಚ್ ಸರದಾರರಿಗೆ ಇದನ್ನು ತಿಳಿಸಿ, ಈ ವಸ್ತುಗಳನ್ನು ತಯಾರಿಸಲು ನಮಗೆ ಇಚ್ಛೆಯಿರುವುದಾಗಿ ಹೇಳಬೇಕು. ನಮಗೂ ಅವರಿಗೂ ಇರುವ ಸ್ನೇಹ-ವಿಶ್ವಾಸಗಳ ಆಧಾರದಿಂದ, ಅವರ ಹಿತಗಳನ್ನು ಇಲ್ಲಿ ಬೆಳೆಸುವ ಒಂದು ಕ್ರಮವಾಗಿ, ಮೇಲೆ ಹೇಳಿದ ಎಲ್ಲ ಬಗೆಯ ಕಸಬುಗಳಲ್ಲಿ ನಿಷ್ಣಾತರಾದ ತಲಾ ಹತ್ತು ಜನ ಕುಶಲಕರ್ಮಿಗಳನ್ನು ಕಳುಹಿಸುವಂತೆ ಕೋರುವುದು. ಅವರನ್ನು ಪಡೆದುಕೊಂಡು ಅಲ್ಲಿಂದ ಹೊರಡುವುದಕ್ಕೆ ಮುಂಚಿತವಾಗಿಯೇ ಅವರಿಗೆ ಸೂಕ್ತವಾದ ವೇತನವನ್ನು ನಿಗದಿಪಡಿಸತಕ್ಕದ್ದು" (ಷೇಕ್‌ಅಲಿ ೧೯೮೭: ೪೮೦).

ಟಿಪ್ಪುವು ಪೋರ್ಚುಗೀಸ್, ಡಚ್, ಫ್ರೆಂಚ್ ಮತ್ತು ಇಂಗ್ಲಿಷ್ ನೌಕಾ ವ್ಯವಸ್ಥೆಯನ್ನು ಆಳವಾಗಿ ಅಧ್ಯಯನ ನಡೆಸಿದ್ದನು. ಈ ದೇಶಗಳಿಂದ ತಂತ್ರಜ್ಞರನ್ನು ಮೈಸೂರಿಗೆ ಆಕರ್ಷಿಸಲು ಸಮರ್ಥನಾಗಿದ್ದನು. ಬಂಗಾಳ ಮತ್ತು ಮಸ್ಕತ್‌ಗಳಿಂದ ರೇಷ್ಮೆಹುಳುಗಳನ್ನು ಮೈಸೂರಿಗೆ ತರಿಸಿದನು (ಷೇಕ್‌ಅಲಿ ೧೯೮೭: ೪೮೧-೨).

ಸಕಲೇಶ್ವರದ ಸಮೀಪದ ಮಂಜರಾಬಾದ್ ಕೋಟೆಯನ್ನು ಫ್ರೆಂಚ್ ತಂತ್ರಜ್ಞರ ನೆರವಿನಿಂದ ಯೂರೋಪ್ ಮಾದರಿಯ ನಕ್ಷತ್ರಾಕಾರದ ಕೋಟೆಯನ್ನು ನಿರ್ಮಿಸಿದನು. ನಕ್ಷತ್ರಾಕಾರದ ಕೋಟೆಗಳನ್ನು ಫ್ರಾನ್ಸ್‌ನಲ್ಲಿ ಕಾಣಬಹುದು. ಫೋರ್ಟ್ ದಿ ಬೆಲ್‌ಗಾರ್ಡ್, ಸಿಟಿಡೆಲ್ ಆಫ್ ಬೆಸಂಕಾನ್, ಫೋರ್ಟ್ ಕ್ಯಾರೆ, ಫೋರ್ಟ್ ದಿ ಜೋಕ್ಸ್, ಫೋರ್ಟ್ ದಿ ಟೆಟ್ಸ್ ಮುಂತಾದವು ಹೆಸರಿಸಬಹುದಾದ ನಕ್ಷತ್ರಾಕಾರದ ಕೋಟೆಗಳಾಗಿವೆ.

೨. ಹೈದರನು ತನ್ನ ಐದಾರು ಮಂದಿ ನಿಷ್ಠಾವಂತರನ್ನು ಕಟ್ಟಿಕೊಂಡು ರಾತ್ರೋರಾತ್ರಿಯೇ ಹೆರಿಗೆ ನೋವಿನಿಂದ ಬಳಲುತ್ತಿದ್ದ ಹೆಂಡತಿ ಮತ್ತು ಹಿರಿಯ ಮಗ ಟಿಪ್ಪು ಸುಲ್ತಾನ ಹಾಗೂ ಪರಿವಾರವನ್ನು

ತೊರೆದು ಕುದುರೆಯನ್ನೇರಿ ಆನೇಕಲ್ಲಿಗೆ ತೆರಳಿದನು. ಅವನು ೨೦ ಗಂಟೆಗಳಲ್ಲಿ ಕ್ರಮಿಸಿದ ದೂರ ೯೮ ಮೈಲಿಗಳಾಗಿತ್ತು. ಸುಮಾರು ೭೦ ಮೈಲಿಗಳ ದೂರವನ್ನು ಒಂದೇ ಕುದುರೆಯ ಮೇಲೆ ಚಲಿಸಿದ್ದನು. ಒಂದು ಕಡೆ ಮರಾಠರ ಸೈನ್ಯ ಮತ್ತೊಂದು ಕಡೆ ಮೈಸೂರು ಸೈನ್ಯಕ್ಕೆ ಸಿಕ್ಕದಂತೆ ಸುರಕ್ಷಿತ ಸ್ಥಳವನ್ನು ಸೇರಿ ತನ್ನ ಸೈನ್ಯವನ್ನು ಸಂಘಟಿಸಬೇಕಿತ್ತು. ಇದೇ ವೇಳೆ ಹೈದರನ ಸೈನ್ಯ ಬಾರಾಮಹಲ್‌ನಲ್ಲಿ ಫ್ರೆಂಚರಿಗೆ ನೆರವಾಗಲು ತನ್ನ ಚಿಕ್ಕಪ್ಪ ಮಖ್ದುಂ ಸಾಹೇಬನ ನೇತೃತ್ವದಲ್ಲಿ ಸೇನೆಯನ್ನು ಕಳುಹಿಸಿದ್ದನು. ಕೂಡಲೆ ಹಿಂತಿರುಗುವಂತೆ ಕರೆ ಕಳುಹಿಸಿದನು. ಬೆಂಗಳೂರಿನ ಸಾಹುಕಾರರಿಂದ ನಾಲ್ಕು ಲಕ್ಷ ರೂಪಾಯಿಗಳನ್ನು ಸಾಲ ಪಡೆದು ತನ್ನ ಸಂಪನ್ಮೂಲವನ್ನು ಹೆಚ್ಚಿಸಿಕೊಂಡನು. ಒಟ್ಟಾರೆ ೧೭೬೦ ರ ಆಗಸ್ಟ್ ನಿಂದ ಮೇ ೧೭೬೧ ರವರೆಗೆ ಹೈದರನಿಗೆ ಅಗ್ನಿಪರೀಕ್ಷೆಯ ಕಾಲವಾಗಿತ್ತು. ಆ ಅಗ್ನಿ ಪರೀಕ್ಷೆಯಲ್ಲಿ ಯಶಸ್ವಿಯಾದ ಹೈದರನು ಮತ್ತೆ ಸೈನಿಕ ಸಾಧನೆಯ ವಿಚಾರದಲ್ಲಿ ಹಿಂತಿರುಗಿ ನೋಡಿದ್ದಿಲ್ಲ.

೩. ಫಿರಂಗಿಗಳನ್ನು ಪರಿಣಾಮಕಾರಿಯಾಗಿ ಪ್ರಯೋಗಿಸುವ ದೃಷ್ಟಿಯಿಂದ ವೃತ್ತಾಕಾರದ ಕೊತ್ತಳಗಳನ್ನು ಮತ್ತು ಎತ್ತರವಾದ ವೃತ್ತಾಕಾರದ ಬುರುಜುಗಳನ್ನು ನಿರ್ಮಿಸಿರುವುದನ್ನು ಟಿಪ್ಪು ಕಾಲದ ಕೋಟೆಗಳಲ್ಲಿ ಕಾಣಬಹುದು. ಈ ಕೊತ್ತಳ ಮತ್ತು ಬುರುಜುಗಳಿಗೆ ಫಿರಂಗಿ ಮೊದಲಾದ ಶಸ್ತ್ರಾಸ್ತ್ರ ಸಲಕರಣೆಗಳನ್ನು ಸಾಗಿಸಲು ಅನುಕೂಲವಾಗುವ ಇಳಿಜಾರು ಹಾದಿಗಳನ್ನು ನಿರ್ಮಿಸಲಾಗಿತ್ತು. ಅದೇ ರೀತಿ ಬಂದೂಕುಗಳನ್ನು ಪ್ರಯೋಗಿಸಲು ಪಹರೆಕಟ್ಟೆಗೆ ಹೊಂದಿಕೊಂಡಿರುವ ಕೈಪಿಡಿಗಳಲ್ಲಿ ವಿವಿಧ ಕೋನಗಳಲ್ಲಿ 'ಬಂದೂಕುಕಿಂಡಿ'ಗಳನ್ನು ನಿರ್ಮಿಸಿರುವುದನ್ನು ಗುರುತಿಸಬಹುದು. ಅದೇ ರೀತಿ ರಾಕೆಟ್‌ಗಳ ಉಡಾವಣೆಗೆ ಬೇಕಾದ ವೇದಿಕೆಗಳನ್ನು ನಿರ್ಮಿಸಿಕೊಂಡಿರುವ ನಿದರ್ಶನವನ್ನು ಶ್ರೀರಂಗಪಟ್ಟಣದ ಕೋಟೆಯಲ್ಲಿ ಕಾಣಬಹುದು.

೪. ಪ್ರಮುಖವಾಗಿ ಅಫಣಿ ಶಂಕರ ಎಸ್. ೧೯೯೧, 'ಚಿತ್ರದುರ್ಗ ಕೋಟೆಯ ಕೆಲವು ಬತೇರಿಗಳು', **ಸತ್ಯಶುದ್ಧ ಕಾಯಕ**, ಸಂಪುಟ-೨, ಸಂಚಿಕೆ ೧-೨ ಪು.೮೪-೮೯; ಎಸ್.ಕೆ. ಜೋಶಿ, ೧೯೯೪, 'ಸನ್ನತಿದುರ್ಗದ ಪುನರ್ದರ್ಶನ' **ಇತಿಹಾಸ ದರ್ಶನ**, ಸಂಪುಟ ೯, ಪು.೧೫-೧೬; ಚನ್ನಬಸಪ್ಪ ಎಸ್. ಪಾಟೀಲ, ೧೯೯೩-೧೯೯೫, 'ಮಾತಾಡುವ ಕೋಟೆಗಳು' **ದಿಕ್ಸೂಚಿ** ಮಾಸಪತ್ರಿಕೆಯಲ್ಲಿ ಜುಲೈ ೧೯೯೩ ರಿಂದ ಜೂನ್ ೧೯೯೫ ರವರೆಗೆ ಬಂದ ಅಂಕಣ ಬರಹಗಳು ಮತ್ತು ಇದೇ ಲೇಖಕರ ೧೯೯೪, 'ರಾಯಚೂರು ಜಿಲ್ಲೆಯ ಕೋಟೆಗಳು' **ಎಡೆತೊರೆನಾಡು ಸ್ಮರಣ ಸಂಚಿಕೆ,** ರಾಯಚೂರು, ೧೯೯೪, 'ಮಹಾನಾಡ ಪ್ರಭುಗಳ ಕೋಟೆ ಕೊತ್ತಳಗಳು' **ಮಹಾನಾಡು ಪ್ರಭುಗಳು:ಬಿಜ್ಜಾವರ-ಮಧುಗಿರಿ ಅರಸು ಮನೆತನಗಳು,** (ಸಂ.) ಎಂ.ಎಂ. ಕಲಬುರ್ಗಿ. ಬೆಂಗಳೂರು. ಪು.೭೨-೭೮; ಎಂ. ಕೊಟ್ರೇಶ್, ೧೯೯೮, 'ಗಿರಿದುರ್ಗ ಉಚ್ಚಂಗಿ ಪ್ರದೇಶ-ಒಂದು ಪರಿಶೀಲನೆ' **ಇತಿಹಾಸ ದರ್ಶನ**, ಸಂಪುಟ ೧೩, ಪು.೮೨-೮೪; ಯೋಗೀಶ್ವರಪ್ಪ ಡಿ.ಎನ್. ೧೯೯೯, 'ಮದ್ದಗಿರಿ ಮಹಾನಾಡ ಪ್ರಭುಗಳ ರಕ್ಷಣಾ ವ್ಯವಸ್ಥೆ' **ಇತಿಹಾಸ ದರ್ಶನ**, ಸಂಪುಟ-೬.

ಪು.೧೫೭–೧೬೨; ರು.ಮ. ಷಡಕ್ಷರಯ್ಯ, ೧೯೯೪, 'ಬಸವಕಲ್ಯಾಣದ ಕೋಟೆ' (ಸಂ.) ಎಚ್.ಎಸ್. ಗೋಪಾಲರಾವ್. **ನಾಗಾಭಿನಂದನ,** ಬೆಂಗಳೂರು. ಪು.೨೬೩–೨೮೬; ಸುಜಾತ ಮಲ್ಲನಗೌಡ, ೧೯೯೮, 'ರಾಯಚೂರು ಕೋಟೆಯಲ್ಲಿನ ಕೊತ್ತಳಗಳು' **ಇತಿಹಾಸ ದರ್ಶನ,** ಸಂಪುಟ–೧೩, ಪು.೭೫–೮೬ ಪ್ರಮುಖವಾದವುಗಳಾಗಿವೆ. ೨೦೦೦ನೇ ಇಸವಿಯ ನಂತರ ಕೋಟೆಗಳನ್ನು ಕುರಿತು ಅನೇಕ ಲೇಖನಗಳು ಪ್ರಕಟವಾಗಿವೆ.

೫. ಮೌಖಿಕ ಮತ್ತು ಜಾನಪದಗಳನ್ನು ಕುರಿತು ಇತಿಹಾಸಕಾರರು ಚರಿತ್ರೆಯ ನೆಲೆಗಟ್ಟಿನಲ್ಲಿ ಬರೆದ ಲೇಖನಗಳಲ್ಲಿ ಮುಖ್ಯವಾಗಿ ಬಿ. ಶಿವರಾಮ ಶೆಟ್ಟಿ ಅವರು ಬರೆದಿರುವ 'ಮೌಖಿಕ ಚರಿತ್ರೆ: ಜನಪದರ ಚರಿತ್ರೆಯ ಆಯಾಮಗಳು' ಮತ್ತು ವಸು ಅವರ 'ಮೌಖಿಕ ಇತಿಹಾಸ: ತಾತ್ವಿಕತೆ ಮತ್ತು ಬರವಣಿಗೆ ಕ್ರಮ' ಈ ಎರಡು ಲೇಖನಗಳು ವಿಜಯ್ ಪೂಣಚ್ಚ ತಂಬಂಡ ಅವರ ಪ್ರಧಾನ ಸಂಪಾದಕತ್ವದಲ್ಲಿ ಬಂದಿರುವ **ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ–೧ : ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ** (೨೦೧೦) ಕೃತಿಯಲ್ಲಿವೆ. ಬಿ. ಸುರೇಂದ್ರ ರಾವ್ ಅವರ 'ಕರಾವಳಿ ಜಾನಪದವು ಅನಾವರಣಗೊಳಿಸುವ ಸಮಾಜ ಮತ್ತು ಆರ್ಥಿಕತೆ' ಲೇಖನವು ಎಸ್. ಚಂದ್ರಶೇಖರ್ ಮತ್ತು ಬಿ. ಸುರೇಂದ್ರ ರಾವ್ ಅವರು ಸಂಪಾದಿಸಿದ **ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು ಸಂಪುಟ–೬** (೨೦೧೬) ರಲ್ಲಿದೆ. ಇವರಲ್ಲದೆ ಮಂಜುನಾಥ ಬೇವಿನಕಟ್ಟಿ, ಮೊಗಳ್ಳಿ ಗಣೇಶ್, ಸಂಧ್ಯಾರೆಡ್ಡಿ, ಡಿ. ಲಿಂಗಯ್ಯ ಮೊದಲಾದ ಜಾನಪದ ವಿದ್ವಾಂಸರ ಬರಹಗಳಲ್ಲಿ ಕೂಡ ಈ ಬಗೆಯ ಅಭಿಪ್ರಾಯಗಳನ್ನು ನೋಡಬಹುದು.

೬. ಇತ್ತೀಚಿಗೆ ಬಿ. ನಂಜುಂಡಸ್ವಾಮಿ ಅವರು **ಹೈದರ್‌ನಾಮದ** ಕರ್ತೃ ನಲ್ಲಪ್ಪ ಅಲ್ಲ; ಅವನ ತಂದೆ ಕಚೇರಿ ಕೃಷ್ಣಪ್ಪ ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

# ಅಧ್ಯಾಯ ೨

# ಟಿಪ್ಪು ಪೂರ್ವದ ಕೋಟೆಗಳ ಅಧ್ಯಯನ: ಚಾರಿತ್ರಿಕ ಹಿನ್ನೋಟ

ಪ್ರಸ್ತುತ ಅಧ್ಯಾಯದಲ್ಲಿ ಟಿಪ್ಪು ಸುಲ್ತಾನನಿಗೂ ಪೂರ್ವದ ಕೋಟೆಗಳ ರಚನೆ, ವಿನ್ಯಾಸ ಮತ್ತು ತಂತ್ರಜ್ಞಾನವನ್ನು ಅರ್ಥ ಮಾಡಿಕೊಳ್ಳುವ ಮೂಲಕ ಕೋಟೆಗಳ ವಿಕಾಸದ ಚರಿತ್ರೆಯನ್ನು ಮತ್ತು ಅವುಗಳನ್ನು ರೂಪಿಸಿದ ನಾಗರಿಕತೆಯನ್ನು ಗ್ರಹಿಸಲು ಪ್ರಯತ್ನಿಸಲಾಗಿದೆ.[೧] ಟಿಪ್ಪು ಕಾಲಘಟ್ಟದ ಕೋಟೆಗಳನ್ನು ಅರ್ಥ ಮಾಡಿಕೊಳ್ಳಲು ಈ ಅಧ್ಯಾಯ ಸಹಕಾರಿಯಾಗಬಲ್ಲದು. ಇದರ ಮೂಲಕ ಟಿಪ್ಪು ಕಾಲದವರೆಗಿನ ಕೋಟೆಗಳ ಬೆಳವಣಿಯಲ್ಲಿ ಆಗಿರುವ ಬದಲಾಣೆಗಳ ಪ್ರಕ್ರಿಯೆಯನ್ನು ಗುರುತಿಸಿಕೊಳ್ಳಲು ಯತ್ನಿಸಲಾಗಿದೆ.

ಪ್ರಸ್ತುತ ಅಧ್ಯಾಯದಲ್ಲಿ ಹರಪ್ಪ ನಾಗರಿಕತೆಯಲ್ಲಿ ಕಂಡುಬರುವ ಕೋಟೆಗಳಲ್ಲಿನ ಲಕ್ಷಣಗಳು ಮತ್ತು ನಿರ್ಮಾಣದ ವಿಶೇಷತೆಗಳನ್ನು ಪುರಾತತ್ತ್ವ ಅವಶೇಷಗಳ ಮೂಲಕ ಗಮನಿಸುವ ಪ್ರಯತ್ನ ಮಾಡಲಾಗಿದೆ. ನಂತರ ವೈದಿಕ ಸಾಹಿತ್ಯದಲ್ಲಿ ವ್ಯಕ್ತವಾಗಿರುವ ಕೋಟೆಗಳ ಪ್ರಸ್ತಾಪಗಳನ್ನು ಸಂಗ್ರಹಿಸಿ ಚರ್ಚಿಸಲಾಗಿದೆ. ಮೌರ್ಯರ ಕಾಲದ ಸಾಹಿತ್ಯ ಮತ್ತು ಪುರಾತತ್ತ್ವ ಅವಶೇಷಗಳು ಕಟ್ಟಿಕೊಡುವ ಕೋಟೆಗಳ ಬಗೆಗಿನ ವಿವರಗಳನ್ನು ಅವಲೋಕಿಸಲಾಗಿದೆ. ಪ್ರಾಚೀನ ಭಾರತೀಯ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖವಾಗಿರುವ ಕೋಟೆಗಳ ವೈವಿಧ್ಯತೆಗಳನ್ನು ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ. ನಂತರದಲ್ಲಿ ಕರ್ನಾಟಕದ ಚರಿತ್ರೆಯೊಳಗೆ ಕೋಟೆಗಳ ವಿಕಾಸದ ಗತಿಯನ್ನು ಪರಿಶೀಲಿಸುವ ಪ್ರಯತ್ನವನ್ನು ನಡೆಸಲಾಗಿದೆ. ಮೊದಲಿಗೆ ಕನ್ನಡದ ಸಾಹಿತ್ಯ ಕೃತಿಗಳಲ್ಲಿ ಕಂಡುಬರುವ ಕೋಟೆಗಳ

ಬಗೆಗಿನ ವರ್ಣನೆಗಳನ್ನು ಅವಲೋಕಿಸಲಾಗಿದೆ. ನಂತರ ಪುರಾತತ್ತ್ವಶಾಸ್ತ್ರದ ಹಿನ್ನೆಲೆಯಲ್ಲಿ ಸನ್ನತಿ ಮತ್ತು ಬನವಾಸಿಗಳಲ್ಲಿ ದೊರೆತಿರುವ ಆರಂಭ ಕಾಲದ ಕೋಟೆಗಳ ನೆಲೆಗಳು ಮತ್ತು ನಿರ್ಮಾಣಗಳಲ್ಲಿ ಇರುವ ಸಾಮ್ಯತೆಗಳನ್ನು ಗುರುತಿಸಲಾಗಿದೆ. ನೆಲದುರ್ಗ ಮತ್ತು ಗಿರಿದುರ್ಗಗಳು ನಿರ್ಮಾಣಗೊಳ್ಳುವುದನ್ನು ಈ ಸಂದರ್ಭದಲ್ಲಿಯೇ ಗಮನಿಸಲಾಗಿದೆ. ಮೈದಾನದಲ್ಲಿ ಕೋಟೆಯುಕ್ತ ನಗರಗಳು (ಬಿಜಾಪುರ, ಬೀದರ್, ಗುಲ್ಬರ್ಗ, ಹಂಪಿ, ಬೆಂಗಳೂರು ಮೊದಲಾದ ಕಡೆಗಳಲ್ಲಿ) ಪ್ರವರ್ಧಮಾನದಲ್ಲಿರುವುದು ಮಧ್ಯಕಾಲೀನ ಸಂದರ್ಭದ ವಿಶೇಷವಾಗಿದೆ. ವಿಜಯನಗರೋತ್ತರ ಕಾಲಘಟ್ಟದಲ್ಲಿ ಗಿರಿದುರ್ಗಗಳು ಕೋಟೆಗಳ ರಚನೆಯಲ್ಲಿ ವಿಶೇಷ ಪ್ರಾಧಾನ್ಯತೆ ಪಡೆದಿರುವುದನ್ನು ಗಮನಿಸಬಹುದು. ಈ ಎಲ್ಲಾ ಕಾಲಘಟ್ಟಗಳ ಕೋಟೆಗಳ ನಿರ್ಮಾಣದ ನೆಲೆ ಮತ್ತು ವಿಧಾನಗಳಲ್ಲಿ ಉಂಟಾಗಿರುವ ಬದಲಾವಣೆಗಳನ್ನು ಗುರುತಿಸಲು ಈ ಸಂದರ್ಭದಲ್ಲಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಟಿಪ್ಪು ಪೂರ್ವದ ಕೋಟೆಗಳ ರಚನಾ ವಿನ್ಯಾಸದಲ್ಲಿ ಗಮನಿಸಬಹುದಾದ ಕೆಲವುಮುಖ್ಯ ಅಂಶಗಳಿವೆ. ಅವುಗಳೆಂದರೆ, ಮಣ್ಣು, ಇಟ್ಟಿಗೆ ಮತ್ತು ಕೆಲವೊಮ್ಮೆ ಕಲ್ಲುಗಳಿಂದ ಟಿಪ್ಪುವಿನ ಕೋಟೆಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಚೌಕಾಕಾರದ ಕೊತ್ತಳಗಳು, ನೆಲದಿಂದ ಕೋಟೆಯ ಮೇಲ್ಭಾಗಕ್ಕೆ ಸಾಗಲು ಮೆಟ್ಟಿಲುಗಳು, ಕಿರಿದಾದ ಪಹರೆ ಕಟ್ಟೆ, ಕಿರಿದಾದ ಕೈಪಿಡಿಗಳನ್ನು ಇಲ್ಲಿ ಕಾಣಬಹುದು. ಸಾಮಾನ್ಯವಾಗಿ ಪಾಳೆಗಾರರ ಕಾಲದ ಕೋಟೆಯ ದ್ವಾರಗಳು ಕೂಡ ಕಿರಿದಾಗಿದ್ದ ಅಂಶಗಳನ್ನು ಗಮನಿಸಬಹುದು. ಈ ಎಲ್ಲ ಅಂಶಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಟಿಪ್ಪು ಪೂರ್ವ ಕಾಲದ ಕೋಟೆಗಳ ಸ್ವರೂಪವನ್ನು ಅಭ್ಯಸಿಸಲು ಯತ್ನಿಸಲಾಗಿದೆ. ಆ ಮೂಲಕ ಟಿಪ್ಪುವಿನ ಕಾಲಘಟ್ಟದ ಕೋಟೆಗಳ ರಚನಾ ವಿನ್ಯಾಸವನ್ನು ಅರ್ಥ ಮಾಡಿಕೊಳ್ಳುವ ಉದ್ದೇಶವನ್ನು ಪ್ರಸ್ತುತ ಮಹಾಪ್ರಬಂಧದವು ಹೊಂದಿದೆ.

## ೨.೧ ಅಧ್ಯಯನಗಳ ಅವಲೋಕನ

ಕರ್ನಾಟಕದ ಕೋಟೆಗಳನ್ನು ಕುರಿತು ಹಲವು ವಿದ್ವಾಂಸರು ಅಧ್ಯಯನಗಳನ್ನು ನಡೆಸಿದ್ದಾರೆ. ಈ ಅಧ್ಯಯನಗಳಲ್ಲಿ ಕೆಲವು ನಿರ್ದಿಷ್ಟ ಪ್ರದೇಶಗಳಿಗೆ ಸೀಮಿತವಾಗಿದ್ದರೆ, ಮತ್ತೆ ಕೆಲವು ನಿರ್ದಿಷ್ಟ ಕಾಲಘಟ್ಟಕ್ಕೆ ನಿರ್ಬಂಧಿತವಾಗಿವೆ. ಅವುಗಳಲ್ಲಿ ಪ್ರಮುಖವಾದ ಕೆಲವು ಅಧ್ಯಯನಗಳನ್ನು ಇಲ್ಲಿ ಅವಲೋಕಿಸಿದೆ. ಕೋಟೆಗಳ ಮೇಲೆ ಮೊದಲು ಬರವಣಿಗೆ ನಡೆಸಿದವರು ಬೆಟಗೇರಿ ಕೃಷ್ಣಶರ್ಮ. ಅವರ **ಕರ್ನಾಟಕ ಜನಜೀವನ**

(೧೯೮೩(೧೯೩೯)) ಕೃತಿ ಪ್ರಮುಖವಾದುದು. ಈ ಕೃತಿಯ ಮೊದಲ ಭಾಗ ಕನ್ನಡಿಗರ ಕೋಟೆಗಾಳಗವು ೬೩ ಪುಟಗಳಷ್ಟು ವಿಸ್ತಾರವಾಗಿದೆ. ಇಲ್ಲಿ ಕೋಟೆಗಳ ಸ್ವರೂಪ, ಸಾಹಿತ್ಯಗಳಲ್ಲಿ ಕೋಟೆ ಮತ್ತು ಕೋಟೆ ಕಾಳಗದ ಸಂಗತಿಗಳನ್ನು ಕುರಿತು ಬಂದಿರುವ ಪ್ರಾತಿನಿಧಿಕ ಬರವಣಿಗೆ ಇದಾಗಿದೆ. ಎಂ. ಚಿದಾನಂದಮೂರ್ತಿ ಅವರು ತಮ್ಮ **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ** (೨೦೦೨(೧೯೬೬)) ಕೃತಿಯಲ್ಲಿ ಪ್ರಾಚೀನ ಶಾಸನ ಮತ್ತು ಸಾಹಿತ್ಯಗಳಲ್ಲಿ ಉಲ್ಲೇಖಗೊಂಡಿರುವ ಕೋಟೆ ಕಾಳಗಕ್ಕೆ ಸಂಬಂಧಿಸಿದ ವಿವರಗಳನ್ನು ಕಟ್ಟಿಕೊಟ್ಟಿದ್ದಾರೆ (ಪು.೩೧೭-೩೨೨). ಚನ್ನಬಸಪ್ಪ ಎಸ್. ಪಾಟೀಲರ **ಕರ್ನಾಟಕದ ಕೋಟೆಗಳು** (೧೯೯೯) ಮತ್ತೊಂದು ಪ್ರಮುಖ ಕೃತಿ. ಈ ಕೃತಿಯಲ್ಲಿ ಕನ್ನಡ ನಾಡಿನ ಐವತ್ತು ಪ್ರಸಿದ್ಧ ಕೋಟೆಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. ಜೀನ್ ಡಿಲೋಷ್ ಅವರ **ಸ್ಟಡೀಸ್ ಆನ್ ಫೋರ್ಟಿಫಿಕೇಷನ್ ಇನ್ ಇಂಡಿಯಾ** (೨೦೦೭) ಒಂದು ಮಹತ್ವದ ಕೃತಿ. ಈ ಕೃತಿಯಲ್ಲಿ ದಕ್ಷಿಣ ಭಾರತದ ಕೋಟೆಗಳನ್ನು ಕುರಿತು ಅಧ್ಯಯನ ನಡೆಸಲಾಗಿದ್ದರೂ ಕರ್ನಾಟಕದ ಕೋಟೆಗಳ ಮೇಲೆ ಅಧ್ಯಯನವು ಕೇಂದ್ರಿಕೃತವಾಗಿದೆ. ಅಲ್ಲದೆ, ಇಲ್ಲಿನ ಆರು ಅಧ್ಯಾಯಗಳಲ್ಲಿ ಐದನೆಯ ಅಧ್ಯಾಯವು ಮೈಸೂರು ಸಂಸ್ಥಾನದ ಗಿರಿದುರ್ಗಗಳನ್ನು ಕುರಿತಾದುದಾಗಿದೆ. ಡಿಲೋಷ್ ಅವರು ಟಿಪ್ಪು ಕಾಲದ ಕೋಟೆಗಳನ್ನು ಕುರಿತು ವಿಶೇಷವಾದ ಅಧ್ಯಯನ ನಡೆಸಿದ್ದಾರೆ. ಆದ್ದರಿಂದ ಈ ಕೃತಿಯು ಇಲ್ಲಿನ ಅಧ್ಯಯನಕ್ಕೆ ಹೆಚ್ಚು ಉಪಯುಕ್ತವಾಗಬಲ್ಲದು. ಎಸ್.ಕೆ. ಜೋಶಿ ಅವರ **ಡಿಫೆನ್ಸ್ ಆರ್ಕಿಟೆಕ್ಚರ್ ಇನ್ ಅರ್ಲಿ ಕರ್ನಾಟಕ** (೧೯೮೫) ಕೃತಿಯು ಕರ್ನಾಟಕದ ಕೋಟೆಗಳ ವಿಕಸನದ ಪರಂಪರೆಯನ್ನು ಕಟ್ಟಿಕೊಡುವ ಒಂದು ಉತ್ತಮ ಕೃತಿಯಾಗಿದೆ. ಆದರೆ ಈ ಕೃತಿಯು ಮಧ್ಯಕಾಲಕ್ಕೆ ಸೀಮಿತಗೊಂಡಿರುವುದು ಒಂದು ಮಿತಿಯೇ ಆಗಿದೆ.

ಕೋಟೆಗಳನ್ನು ಕುರಿತು ಸಂಶೋಧನೆ ನಡೆಸುವುದು ಇಂದು ಆದ್ಯತೆಯ ವಿಷಯವಾಗಿದೆ. ಹಲವು ವಿಶ್ವವಿದ್ಯಾಲಯಗಳಲ್ಲಿ ಕೋಟೆಗಳ ಮೇಲೆ ಅಧ್ಯಯನ ನಡೆಸಿದ್ದಾರೆ. ಅವುಗಳಲ್ಲಿ ಪ್ರಮುಖ ಕೃತಿಗಳೆಂದರೆ: ಎಂ. ಕೊಟ್ರೇಶ್ ಅವರ **ಬಳ್ಳಾರಿ ಜಿಲ್ಲೆಯ ಕೋಟೆಗಳು** (೨೦೧೧) ಕೃತಿ, ಸುಜಾತ ಮಲ್ಲನಗೌಡ ಅವರು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿ.ಎಚ್‌ಡಿಗಾಗಿ ಸಲ್ಲಿಸಿದ **ರಾಯಚೂರು ಮತ್ತು ಕೊಪ್ಪಳ ಕೋಟೆಗಳು – ಒಂದು ಅಧ್ಯಯನ** (೨೦೦೦) ಹಾಗೂ ಮುನಿರಾಜ ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ **ತುಮಕೂರು ಜಿಲ್ಲೆಯ ಗಿರಿದುರ್ಗಗಳ ಐತಿಹಾಸಿಕ ಅಧ್ಯಯನ** (೨೦೧೨) ಎಂಬ ಪಿಎಚ್.ಡಿ ಸಂಪ್ರಬಂಧ ಕೂಡ ಒಂದು ಸೀಮಿತ ವ್ಯಾಪ್ತಿಯ ಭೌಗೋಳಿಕ ಪರಿಸರದಲ್ಲಿನ ಕೋಟೆಗಳನ್ನು ಕುರಿತು ನಡೆಸಿರುವ ಅಧ್ಯಯನಗಳಾಗಿವೆ.

ಇದೇ ಸಾಲಿಗೆ ಸೇರುವ ಮತ್ತೊಂದು ಕೃತಿ ಮುದ್ದುವೀರಪ್ಪ ಅವರ **ತುಮಕೂರು ಜಿಲ್ಲೆಯ ಕೋಟೆಗಳ ಸಾಂಸ್ಕೃತಿಕ ಒಳನೋಟಗಳು** (೨೦೧೧). ಈ ಕೃತಿಯು ತುಮಕೂರು ಜಿಲ್ಲೆಯ ೧೨ ಕೋಟೆಗಳನ್ನು ಕುರಿತು ಅನೇಕ ವಿವರಗಳನ್ನು ದಾಖಲಿಸಿದೆ. ಜನಪದರು ಕೋಟೆಗಳ ಬಗೆಗೆ ಹೇಳುವ ಮಾಹಿತಿಯನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಶ್ರೀಧರ್ ಎಚ್.ಜಿ. ಅವರ ಸಂಶೋಧನಾ ಕೃತಿ **ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ (ಕ್ರಿ.ಶ. ೪೫೦ ರಿಂದ ೧೩೫೦)** (೨೦೦೨) ಒಂದು ಮುಖ್ಯವಾದ ಕೃತಿ. ಈ ಕೃತಿಯ ಮೂರನೇ ಅಧ್ಯಾಯ ಸಂಪೂರ್ಣವಾಗಿ ಕೋಟೆಗಳಿಗೆ ಸಂಬಂಧಿಸಿದ್ದಾಗಿದೆ. ತಮ್ಮ ಅಧ್ಯಯನದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಸಾಹಿತ್ಯ ಮತ್ತು ಶಾಸನಗಳನ್ನು ದುಡಿಸಿಕೊಂಡಿದ್ದಾರೆ. ಇದೊಂದು ಅಧ್ಯಯನಶೀಲ ಕೃತಿಯಾಗಿದೆ. ಯುವ ಸಂಶೋಧಕ ಸುಂಕಂ ಗೋವರ್ಧನ ಅವರ **ಕನ್ನಡ ನಾಡಿನ ಪ್ರಮುಖ ಕೋಟೆಗಳು** (೨೦೧೨) ಒಂದು ಪರಿಚಯಾತ್ಮಕ ಕೃತಿಯಾಗಿದೆ. ಎಸ್.ಕೆ. ಅರುಣಿ ಅವರು **ಕನ್ನಡ ವಿಷಯ ವಿಶ್ವಕೋಶ – ಇತಿಹಾಸ ಮತ್ತು ಪುರಾತತ್ತ್ವಕ್ಕೆ (೨೦೦೯)** ಬರೆದ **'ಕೋಟೆಗಳು'** ಎಂಬ ಕಿರು ಲೇಖನವು ಗುಣಮಟ್ಟದ ದೃಷ್ಟಿಯಿಂದ ಪ್ರಮುಖವಾದುದಾಗಿದೆ. ಈ ಲೇಖನದಲ್ಲಿ ಕೋಟೆಯ ಆರಂಭಕಾಲದಿಂದ ಹಿಡಿದು ಆಧುನಿಕ ಕಾಲಘಟ್ಟದವರೆಗೂ ಕಾಲಕಾಲಕ್ಕೆ ಆಗಿರುವ ಮಾರ್ಪಾಡುಗಳನ್ನು ಮತ್ತು ತಾಂತ್ರಿಕ ಬದಲಾವಣೆಗಳನ್ನು ಸೂಕ್ಷ್ಮವಾಗಿ ಗುರುತಿಸಿದ್ದಾರೆ. ಈ ಬರವಣಿಗೆಗಳೇ ಅಲ್ಲದೆ ಅನೇಕ ಲೇಖನಗಳು, ಸಂಪ್ರಬಂಧಗಳು ಅಲ್ಲಲ್ಲಿ ಪ್ರಕಟವಾಗಿವೆ.

ಮಾನವರು ಅನಾದಿ ಕಾಲದಿಂದಲೂ ತಮ್ಮ ರಕ್ಷಣೆಗಾಗಿ ಅನವರತ ಪ್ರಯತ್ನಿಸುತ್ತಲೇ ಬರುತ್ತಿದ್ದಾರೆ. ಈ ಪ್ರಯತ್ನದ ಒಂದು ಭಾಗವಾಗಿ ಇತಿಹಾಸದ ಉದ್ದಕ್ಕೂ ಕೋಟೆಗೆ ಒಂದು ವಿಶೇಷ ಸ್ಥಾನವಿದೆ. ಕಾಲದಿಂದ ಕಾಲಕ್ಕೆ ಯುದ್ಧ ಮತ್ತು ಆಕ್ರಮಣಗಳಲ್ಲಿ ಬದಲಾದ ತಂತ್ರ ಮತ್ತು ಬಳಸುತ್ತಾ ಬಂದಿರುವ ಆಯುಧಗಳಿಗೆ ಅನುಗುಣವಾಗಿ ಕೋಟೆಯ ನಿರ್ಮಾಣ, ರಚನೆ ಮತ್ತು ವಿನ್ಯಾಸ ಹಾಗೂ ತಂತ್ರಜ್ಞಾನಗಳಲ್ಲಿಯೂ ಬದಲಾವಣೆಗಳಾಗುತ್ತಾ ಬಂದಿರುವುದನ್ನು ಗುರುತಿಸಬಹುದು. ಭಾರತದಲ್ಲಿ ತಾಮ್ರಯುಗ / ಕಂಚಿನ ಯುಗದಲ್ಲಿ ಕೋಟೆಗಳ ನಿರ್ಮಾಣ ಆರಂಭವಾಯಿತು. ಅಂದರೆ ಹರಪ್ಪ ಪೂರ್ವಕಾಲವಾದ ಕ್ರಿ.ಪೂ. ೩ನೆಯ ಸಹಸ್ರಮಾನದ ಮಧ್ಯಕಾಲದಲ್ಲಿ ಆರಂಭವಾದ ಕೋಟೆಗಳ ನಿರ್ಮಾಣವು (ಘೋಷ್ ೧೯೮೯: ೨೯೭) ಕ್ರಿ.ಶ. ೧೯ನೆಯ ಶತಮಾನದ ನಡುಗಾಲದವರೆಗೆ ತನ್ನ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು. ಬ್ರಿಟಿಷರು ೧೮೫೭ರ ದಂಗೆಯ ನಂತರ ಭಾರತದಲ್ಲಿನ ಕೋಟೆಗಳನ್ನು ಅಸ್ಥಿರಗೊಳಿಸಿದಂತೆ ತೋರುತ್ತದೆ. ಏಕೆಂದರೆ, ಆ ವೇಳೆಗೆ ಜಾಗತಿಕ ಮಟ್ಟದಲ್ಲಿ ಯುದ್ಧವಿಧಾನದಲ್ಲಿ ಆದ ಬದಲಾವಣೆಗಳು ಮತ್ತು ತಾಂತ್ರಿಕ ಪ್ರಗತಿ ಕಾರಣವಾಗಿತ್ತು. ೧೯ನೇ ಶತಮಾನದಲ್ಲಿ ಬಳಕೆಗೆ ಬಂದಿದ್ದ

ಪರಿವೀಕ್ಷಣಾ ಬಲೂನ್ (ಅಬ್ಸರ್ವೇಷನ್ ಬಲೂನ್), ಪ್ಯಾರಚೂಟ್ ಮಾದರಿಗಳು ಮೊದಲಾದ ವೈಮಾನಿಕ ಆಕ್ರಮಣ ಸಾಧನಗಳ ಆಗಮನದಿಂದ ಕೋಟೆಗಳು ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಳ್ಳಲಾರಂಭಿಸಿದವು. ಜೊತೆಗೆ ಬ್ರಿಟಿಷರು ಸಹಾಯಕ ಸೈನ್ಯಪದ್ಧತಿಯಂತಹ ನೀತಿಗಳ ಮೂಲಕ ಭಾರತವನ್ನು ತಮ್ಮ ಸಾರ್ವಭೌಮತ್ವಕ್ಕೆ ಒಳಪಡಿಸಿಕೊಂಡರು. ಮುಂದೆ ಕೋಟೆಗಳನ್ನು ನಿರ್ಮಿಸುವ ಸಂಪ್ರದಾಯ ಕ್ಷೀಣಿಸಿತು (ಅರುಣಿ ೨೦೦೯: ೨೮೫).

### ೨.೨ ಪ್ರಾಚೀನ ಭಾರತದಲ್ಲಿ ಕೋಟೆಗಳು

ಭಾರತದಲ್ಲಿ ಕೋಟೆಗಳ ರಚನೆಗೆ ಸುಮಾರು ೫೦೦೦ ವರ್ಷಗಳಿಗೂ ಪೂರ್ವದ ಇತಿಹಾಸವಿದೆ. ಅಂದರೆ ಆರಂಭಿಕ ಹರಪ್ಪ ನಾಗರಿಕತೆಯ ಕಾಲಘಟ್ಟಕ್ಕೆ ಸೇರಿದ ತಾಮ್ರ ಮತ್ತು ಕಂಚಿನ ಯುಗಗಳ ನೆಲೆಗಳಿಂದ ಕೋಟೆಯ ಅವಶೇಷಗಳನ್ನು ಗುರುತಿಸಬಹುದಾಗಿದೆ.

### ೨.೨.೧ ಹರಪ್ಪ ನಾಗರಿಕತೆಯ ಕೋಟೆಗಳು

ಹರಪ್ಪ ನಾಗರಿಕತೆಯ ಆರಂಭಿಕ ನೆಲೆಗಳಾದ ಅಮ್ರಿ ಮತ್ತು ಕೋಟ್‌ದಿಜಿಗಳು ಮಣ್ಣಿನ ಇಟ್ಟಿಗೆ ಮತ್ತು ಸುಣ್ಣದ ಕಲ್ಲಿನ ಗುಂಡುಗಳನ್ನು ಬಳಸಿ ಬೃಹತ್ತಾದ ಕೋಟೆಯ ಗೋಡೆಗಳನ್ನು ನಿರ್ಮಿಸಿರುವುದು ಕಂಡು ಬಂದಿದೆ. ಇವೆರಡು ಸಿಂಧೂ ನದಿಯ ದಂಡೆಯ ಮೇಲಿರುವ ನೆಲೆಗಳಾಗಿವೆ. ಕೋಟ್‌ದಿಜಿಯ ಆರಂಭಿಕ ಕಾಲವನ್ನು ಕ್ರಿ.ಪೂ.ಸು. ೩೩೦೦ ಎಂದು ಗುರುತಿಸಲಾಗಿದೆ.೨ ಕೋಟ್‌ದಿಜಿ ನೆಲೆಯು ಕೋಟೆಯ ಸಂಕೀರ್ಣ ಮತ್ತು ಕೆಳಹಂತದ ವಾಸದ ಪ್ರದೇಶಗಳನ್ನು ಒಳಗೊಂಡಿದೆ (ಉಪಿಂದರ್ ಸಿಂಗ್ ೨೦೧೨(೨೦೦೯): ೧೪೧-೧೪೨). ಕೋಟೆಯ ಗೋಡೆಗಳು ಕೊತ್ತಳಗಳಿಂದ ಕೂಡಿದ್ದು ಬಲಿಷ್ಠವಾಗಿವೆ. ಗೋಡೆಗಳು ಕೆಲವೆಡೆ ಸುಮಾರು ೫ ಮೀ. ದಪ್ಪವಿದೆ. ಬಹುಶಃ ಪ್ರವಾಹದಿಂದ ರಕ್ಷಣೆ ಪಡೆಯಲು ಅಥವಾ ಪ್ರಾಣಿ ಇಲ್ಲವೆ ಮನುಷ್ಯರ ಸಂಭಾವ್ಯ ಧಾಳಿಯನ್ನು ತಡೆಯಲು ಈ ಕೋಟೆಯನ್ನು ನಿರ್ಮಿಸಿರಬಹುದು (ಆಲ್ಚಿನ್ ೨೦೧೧(೧೯೯೬): ೧೪೪-೧೪೫). ಹರಪ್ಪ ಪೂರ್ವಕಾಲಕ್ಕೆ ಸೇರಿದ ಕಾಲಿಬಂಗನ್ ನೆಲೆಯ ೨ನೇ ಹಂತದಲ್ಲಿ ಹಸಿ ಇಟ್ಟಿಗೆ ಮತ್ತು ಮಣ್ಣಿನ ವೇದಿಕೆಗಳ ಮೇಲೆ ಕಟ್ಟಿದ ಮನೆಗಳ ಭಾಗವನ್ನು ಸುತ್ತುವರಿಯುವಂತೆ ಹೊರ ಮೈಯಲ್ಲಿ ೩೪೦ ಓರೆಯಿರುವ ರಕ್ಷಣಾ ಗೋಡೆಯನ್ನು ಕಟ್ಟಿದ್ದು, ಇದು ಕೋಟೆ ಪ್ರದೇಶದ ಸಂಕೀರ್ಣವೆನಿಸಿದೆ. ಕೋಟೆ ಗೋಡೆಗಳು ೩-೭ಮೀ. ಅಗಲವಿವೆ. ನಂತರದ ಕಾಲದಲ್ಲಿ ಸುಟ್ಟ ಇಟ್ಟಿಗೆಗಳನ್ನು

ಬಳಸಿರುವುದನ್ನು ಗಮನಿಸಬಹುದಾಗಿದೆ (ರಾವ್ ೧೯೯೪: ೩೭–೩೮). ಕಾಲಿಬಂಗನ್ ಕೋಟೆಯ ಸಂಕೀರ್ಣವನ್ನು ಬಹುತೇಕ ಸಮಾನ ಅಳತೆಯ ಕಟ್ಟಡಗಳಾಗಿ ವಿಭಜಿಸಿದ್ದು, ೨ ಪ್ರತ್ಯೇಕ ದ್ವಾರಗಳನ್ನು ಹೊಂದಿದೆ. ಕಂದಕಗಳಿಲ್ಲದ ಹರಪ್ಪಾ ನಾಗರಿಕತೆಯ ಕೋಟೆಗಳು ಪ್ರಾಥಮಿಕವಾಗಿ ಸಮಾಜೋ–ರಾಜಕೀಯ ಮತ್ತು ಆರ್ಥಿಕ ಅಗತ್ಯತೆಯನ್ನು ಹೊಂದಿದ್ದವು. ಸೈನಿಕ ಪ್ರಾಮುಖ್ಯತೆಯು ನಂತರದ್ದಾಗಿತ್ತು (ಘೋಷ್ ೧೯೮೯: ೨೯೭–೨೯೮).



**ಧೋಲವೀರ ನೆಲೆಯ ಕೋಟೆ ಗೋಡೆ**

ಹರಪ್ಪ ನಾಗರಿಕತೆಯ ನಿವೇಶನಗಳಲ್ಲಿ ಸಾಮಾನ್ಯವಾಗಿ ಪುರದುರ್ಗ (ಸಿಟೆಡಲ್) ಮತ್ತು ಕೆಳಪಟ್ಟಣಗಳನ್ನು ಕಾಣಬಹುದು. ಇವೆರಡೂ ಕೂಡ ಎತ್ತರವಾದ ಕೋಟೆಗೋಡೆಗಳಿಂದ ಸುತ್ತುವರೆದಿವೆ. ದ್ವಾರ ಮತ್ತು ಕಂದಕಗಳು ಸಾಮಾನ್ಯವಾಗಿ ಸಮನಾಂತರ ಚತುರ್ಭುಜ ಮಾದರಿಯಲ್ಲಿ ವಿನ್ಯಾಸಗೊಂಡಿವೆ. ಮೊಹೆಂಜೋದಾರೋವಿನ ಪಶ್ಚಿಮ ದಿಣ್ಣೆಯು ೬ ಮೀ. ದಪ್ಪವಾದ ತಡೆಗೋಡೆಯಿಂದ ಆವೃತ್ತವಾಗಿದೆ. ಪುರದುರ್ಗವು ಕಂದಕದಿಂದ ಸುತ್ತುವರಿದಿದೆ. ಸೂರ್‌ಕೊಟ್ಡ ಸಹ ಕಲ್ಲುದಿಂಡಿನ ಗೋಡೆ ಮತ್ತು ಮೂಲೆಗಳು ಕೊತ್ತಳಗಳಿಂದ ಕೂಡಿದ್ದು ಚೌಕಾಕಾರದಲ್ಲಿವೆ. ಇವು ಆಯತಾಕಾರವಾಗಿದ್ದು, ೨ ಭಾಗಗಳಾಗಿ ವಿಭಜನೆಗೊಂಡಿದೆ. ಪಶ್ಚಿಮ ಭಾಗವನ್ನು ಪುರದುರ್ಗವಾಗಿ ಬಳಸಲಾಗಿದೆ ಮತ್ತು ಪೂರ್ವ ಭಾಗದ್ದು ಕೆಳಪಟ್ಟಣವಾಗಿವೆ. ಹರಪ್ಪಾದ ಮತ್ತೊಂದು ನೆಲೆಯಾದ 'ಕುಂತಸಿ'ಯು ಎರಡು ಸುತ್ತಿನ ಕೋಟೆಯಿಂದ ಆವೃತ್ತವಾಗಿದೆ ಮತ್ತು ನದಿಯ

ಮುಂಭಾಗದಲ್ಲಿ ಚೌಕಾಕಾರದ ವೀಕ್ಷಣಾ ಗೋಪುರವನ್ನು ಹೊಂದಿದೆ. ದ್ವಾರವು ಆಯತಾಕಾರದ ಕೊತ್ತಳವನ್ನು ಬಳಸಿ ಸಾಗುತ್ತದೆ. ಅಲ್ಲಾಹದಿನೋ ನೆಲೆಯು ಯಾವುದೇ ಕೋಟೆ ಗೋಡೆಯನ್ನು ಹೊಂದಿರುವುದಿಲ್ಲ. ಧೋಲವೀರವು ಅತ್ಯಂತ ವಿಸ್ತಾರವಾದ ಕೋಟೆಯನ್ನು ಸುತ್ತುವರಿದಿದೆ. ಕೋಟೆ ಗೋಡೆಯು ಮಣ್ಣಿನ ಇಟ್ಟಿಗೆ ಮತ್ತು ಕಲ್ಲಿನಿಂದ ಮಾಡಲ್ಪಟ್ಟಿದೆ. ಇದು ೭೭೧ ಮೀ. ಉದ್ದ ಮತ್ತು ೬೨ ಮೀ. ಅಗಲವಿದೆ. ಇದು ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿ ಎರಡು ಹೆಬ್ಬಾಗಿಲುಗಳನ್ನು ಹೊಂದಿದೆ. ರಕ್ಷಣಾ ಗೋಡೆಗಳು ಕೊತ್ತಳ, ಮೂಲೆಗೋಪುರ ಮತ್ತು ದ್ವಾರಗಳನ್ನು ಹೊಂದಿರುತ್ತವೆ (ಸಂಜೀಬ್ ಕುಮಾರ್ ಇತರರು ೨೦೧೬: ೭೬–೭೮).



**ಧೋಲವೀರ ನೆಲೆಯ ಕೋಟೆ ದ್ವಾರ**

ಹರಪ್ಪ ನೆಲೆಯ ಕೋಟೆಯ ವಿಶೇಷವೇನೆಂದರೆ, ಅಲ್ಲಲ್ಲಿ ಆಯತಾಕಾರವಾಗಿ ನಿರ್ಮಿಸಿರುವ ಹೊರಚಾಚಿರುವ ಭಾಗಗಳು. ಕೋಟೆಯ ಮುಖ್ಯದ್ವಾರ ಉತ್ತರಕ್ಕಿದೆ. ಪಶ್ಚಿಮದಲ್ಲಿ ಬುರುಜಿನಿಂದ ನಿಯಂತ್ರಿತವಾದ ಕೋಟೆಯೊಳಗಿನ ಬಾಗಿರುವ ಮತ್ತು ಚಾಚಿರುವ ಭಾಗವು ಕೋಟೆಯ ಹೊರಗಿನ ಇಳಿವೋರೆ ಮತ್ತು ಜಗತಿಗಳಿಗೆ ಸೇರಿಕೊಂಡಿದೆ. ಅಲ್ಲದೆ, ಇಲ್ಲಿ ಪ್ರವೇಶ ದ್ವಾರಗಳಿದ್ದು, ಅವುಗಳ ಮೇಲಿರುವ ಪಹರೆ ಕೋಣೆಗಳಿಂದ ವೀಕ್ಷಿಸಲು ಸಾಧ್ಯವಾಗುತ್ತಿತ್ತು. ಪ್ರವಾಹದ ಬಯಲಿನಿಂದ ಕೋಟೆ ಪ್ರದೇಶವನ್ನು ತಲುಪಲು ಮೆಟ್ಟಿಲು ವ್ಯವಸ್ಥೆಯಿತ್ತೆಂದು ಕಾಣುತ್ತದೆ. ಹರಪ್ಪಾದ ಕೋಟೆ ಪ್ರದೇಶವು ಉತ್ತರ–ದಕ್ಷಿಣ ೪೧೫ ಮೀ. ಮತ್ತು ಪೂರ್ವ–ಪಶ್ಚಿಮ ೧೯೫ ಮೀ.ಗಳಷ್ಟಿತ್ತು (ರಾವ್ ೧೯೯೪:೧೪–೧೫).

ಹರಪ್ಪ ನಾಗರಿಕತೆಯ ಮತ್ತೊಂದು ಪ್ರಮುಖ ನಿವೇಶನ ಲೋಥಲ್ ಇದನ್ನು ಎಸ್.ಆರ್. ರಾವ್ ಅವರು ೧೯೫೪ ರಲ್ಲಿ ಶೋಧಿಸಿದರು. ಇದೊಂದು ಹಡಗುಕಟ್ಟೆಯಾಗಿದ್ದು, ಹರಪ್ಪ ನಾಗರಿಕತೆಯಲ್ಲಿ ವಿಶೇಷ ಮಹತ್ವನ್ನು ಪಡೆದಿದೆ. ಇದನ್ನು ಕೋಟೆ ಪ್ರದೇಶ ಮತ್ತು ಕೆಳಪಟ್ಟಣವೆಂದು ವಿಭಜಿಸಿದ್ದಾರೆ. ರಾವ್ ಅವರು ಕೋಟೆ ಪ್ರದೇಶವನ್ನು 'ಬಿ' 'ಸಿ' ಮತ್ತು 'ಡಿ' ಬ್ಲಾಕುಗಳಾಗಿ ವಿಂಗಡಿಸಿದ್ದಾರೆ. ಕೋಟೆ ಪ್ರದೇಶವು ವಿಷಮ ಸಮಾಂತರ ಚತುರ್ಭುಜಾಕಾರದ ನಕ್ಷೆಯಲ್ಲಿದೆ. ಪೂರ್ವ-ಪಶ್ಚಿಮ ೧೧೭ ಮೀ. ಉತ್ತರ ೧೩೬ ಮೀ. ಮತ್ತು ದಕ್ಷಿಣ ೧೧೧ ಮೀ. ಅಳತೆಯುಳ್ಳದ್ದಾಗಿದೆ. ಲೋಥಲ್ ಕೋಟೆ ಪ್ರದೇಶವನ್ನು ಹರಪ್ಪ ಕೋಟೆ ಪ್ರದೇಶದಂತೆಯೇ ಪೆಟ್ಟಿಗೆಯಾಕಾರದಲ್ಲಿ ಕಟ್ಟಿದ್ದು, ಮಧ್ಯಭಾಗದಲ್ಲಿ ಮಣ್ಣಿನಿಂದ ತುಂಬಲಾಗಿದೆ. ಕೋಟೆ ಪ್ರದೇಶವು ಅರಸನ ವಾಸಸ್ಥಳ, ದಾಸ್ತಾನು ಮಳಿಗೆಗಳು ಇದ್ದುದಾಗಿ ರಾವ್ ಅವರು ಅಭಿಪ್ರಾಯಪಡುತ್ತಾರೆ (ರಾವ್ ೧೯೮೪: ೬೪-೬೬).



ಲೋಥಲ್ ಕೋಟೆ (ಕಲಾವಿದನ ಕಲ್ಪನೆಯಲ್ಲಿ) (ನ್ಯಾಷನಲ್ ಮ್ಯೂಸಿಯಂ, ನವದೆಹಲಿ)




ಲೋಥಲ್ ಕೋಟೆಯ ತಳ ನಕ್ಷೆ (ಕೃಪೆ: ಡಿಲೋಪ್)

ಹರಪ್ಪ ನೆಲೆಗಳ ಸುತ್ತಲಿನ ಗೋಡೆಯು ಚರ್ಚಾಸ್ಪದ ವಿಷಯವಾಗಿದೆ. ಪುರದುರ್ಗವು ರಕ್ಷಣಾತ್ಮಕ ಕೋಟೆ ಎಂಬುದು ಖಚಿತವಲ್ಲ. ನಮಗೆ ಯುದ್ಧ ಅಥವಾ ಶಸ್ತ್ರಾಸ್ತ್ರ ಹೋರಾಟ ಹಾಗೂ ಸೈನ್ಯದ ಉಪಸ್ಥಿತಿಯ ನಿದರ್ಶನಗಳಿಲ್ಲ. ಬಹುಶಃ ಪ್ರವಾಹವನ್ನು ತಡೆಯಲು ನಿರ್ಮಿಸಿದ್ದಿರಬಹುದು. ಹರಪ್ಪದ ನಗರಗಳು ಪದೇ ಪದೇ ಪ್ರವಾಹಕ್ಕೆ ತುತ್ತಾಗಿರುವುದು ಮತ್ತು ಕೋಟೆಯ ಒಳಗಿ ಮಣ್ಣಿನ ಇಟ್ಟಿಗೆಯ ವೇದಿಕೆಯನ್ನು ಎತ್ತರಿಸಿರುವುದನ್ನು ಮೊಹೆಂಜೋದಾರೋ ಮತ್ತು ಹರಪ್ಪಗಳಲ್ಲಿ ಕಾಣಬಹುದು. ಆದರು. ರಕ್ಷಣಾ ಸ್ವರೂಪದ ಕೋಟೆಗೋಡೆಗಳೆಂಬುದನ್ನು ನಿರಾಕರಿಸಲಾಗದು (ಸಂಜೀಬ್ ಕುಮಾರ್ ಇತರರು ೨೦೧೬: ೭೮).

### ೨.೨.೨ ವೈದಿಕ ಸಾಹಿತ್ಯದಲ್ಲಿ ಕೋಟೆ

ಆರ್ಯರು ಇಂದ್ರನ ನೇತೃತ್ವದಲ್ಲಿ ಶತೃಗಳ ಮೇಲೆ ಆಕ್ರಮಣ ನಡೆಸುತ್ತಿದ್ದರು. ಇಂದ್ರನು ತನ್ನ ವಜ್ರಾಯುಧದಿಂದ ಶತೃಗಳ ಅಣೆಕಟ್ಟುಗಳನ್ನು ಒಡೆದು ಹಾಕಿದನು. ಅಲ್ಲದೆ ಶತೃಗಳ ನಗರ(ಪುರ)ಗಳನ್ನು ಹಾಳುಗೆಡುವಿದನು. ಆದ್ದರಿಂದ ಅವನಿಗೆ 'ಪುರಂದರ' ಎಂಬ ಬಿರುದಿತ್ತು (ಕೊಸಾಂಬಿ ೨೦೦೮(೧೯೫೬): ೯೩-೯೪). ಋಗ್ವೇದವನ್ನು ಆಳವಾಗಿ ಅಧ್ಯಯನ ನಡೆಸಿರುವ ಜಿ. ರಾಮಕೃಷ್ಣ ಅವರ **ಋಗ್ವೇದ ಪ್ರವೇಶಿಕೆ ಐತಿಹ್ಯ ಮತ್ತು ವಾಸ್ತವ** ಎನ್ನುವ ಇತ್ತೀಚಿನ ಕೃತಿಯಲ್ಲಿ ಈ ಬಗೆಗೆ ಸಾಕಷ್ಟು ವಿವರಗಳು ದೊರಕುತ್ತವೆ. ಅವುಗಳು ಈ ರೀತಿ ಇವೆ:

> *ದಾಸ ಮತ್ತು ದಸ್ಯುಗಳಿಬ್ಬರಿಗೂ ಕೋಟೆಕೊತ್ತಳಗಳಿದ್ದವು. ಇಂದ್ರನು ಆರ್ಯರಿಗಾಗಿ ಅವನ್ನು ಭಗ್ನಗೊಳಿಸುತ್ತಿದ್ದ. ಕೋಟೆಗಳನ್ನು ಕಟ್ಟಿಕೊಂಡಿದ್ದ ಹರಪ್ಪ ಸಂಸ್ಕೃತಿಯ ಜನರು ದಾಸ ಮತ್ತು ದಸ್ಯುಗಳಾಗಿ ಋಗ್ವೇದದ ಕವಿಗಳಿಗೆ ಕಂಡರೋ ಏನೋ...*
>
> *ತನ್ನ ಆಯುಧದಲ್ಲಿ ವಿಶ್ವಾಸವಿಟ್ಟು ಇಂದ್ರನು ಅದರಿಂದ ದಾಸರ ಪುರವನ್ನು ವಿನಾಶ ಗೈಯುತ್ತಾ ನಡೆದ...*
>
> *ಶುಷ್ಣನು ಶೇಖರಿಸಿಟ್ಟುಕೊಂಡಿದ್ದ ಸಂಪತ್ತನ್ನು ಸೆಳೆದುಕೊಂಡ ಎಲೈ ಇಂದ್ರನೆ, ಅವನ ಕೋಟೆಯನ್ನು ಭಗ್ನಗೊಳಿಸಿದ ಕೀರ್ತಿ ನಿನ್ನದು...*
>
> *ಪದೇ ಪದೇ ಸೋಲಿಸಲ್ಪಡುತ್ತಿದ್ದ ಆರ್ಯೇತರರು ಅಗ್ನಿಗು ಆಹುತಿಯಾಗಿದ್ದುದಿದೆ. ಅವರು ಕರಿಯ ಬಣ್ಣದವರು, ಛಿದ್ರಗೊಂಡ ಗುಂಪಿನವರು. ಅಗ್ನಿಗೆ ಹೆದರಿ ದಿಕ್ಕಾಪಾಲಾಗಿ ಓಡಿಹೋಗುವವರು, ತಮ್ಮ ಕೋಟೆಗಳನ್ನು ಸುಡಿಸಿಕೊಂಡವರು...*

*ಕಪ್ಪು ಚರ್ಮದವರನ್ನು ಇಂದ್ರನು ದ್ವೇಷಿಸುತ್ತಾನೆ... ಐವತ್ತು ಸಾವಿರ ಕಪ್ಪು ಬಣ್ಣದವರನ್ನು ಅವನು ಕೊಂದ; ಅವರ ಪುರಗಳನ್ನು ಧ್ವಂಸ ಮಾಡಿದ; ಚಿಂದಿ ಬಟ್ಟೆಯಂತೆ ಅವು ನಾಶವಾಗಿ ಹೋದವು. (ರಾಮಕೃಷ್ಣ ೨೦೧೬: ೧೩೧, ೧೩೫).*

ಇಂದ್ರನಂತೆಯೇ ಅಗ್ನಿಯೂ ಕೂಡ ಕೋಟೆಗಳನ್ನು ಹಾಳು ಮಾಡಿದ್ದಾನೆ. ದಾಸರ ಅನೇಕ ಕೋಟೆಗಳನ್ನು ಕೇವಲ ತೊಂಬತ್ತಕ್ಕೆ ಇಳಿಸಲು ಇಂದ್ರನಿಗೆ ಅಗ್ನಿಯು ನೆರವಾದನು. ಋಗ್ವೇದದಲ್ಲಿ ಬರುವ 'ಮಹಾಪುರ' ಪ್ರಯೋಗವು ಕೋಟೆಗೆ ಸಂಬಂಧಿಸಿದ್ದಾಗಿದೆ. ಇದು ಮುಂದೆ **ಯಜುರ್ವೇದ ಮತ್ತು ಬ್ರಾಹ್ಮಣಗಳಲ್ಲಿಯೂ** ಪ್ರಯೋಗವಾಗಿದೆ. ಋಗ್ವೇದದಲ್ಲಿ ಕೋಟೆಯ ನಾಯಕನನ್ನುಜ 'ಪುರಪತಿ' ಎಂದು ಕರೆದಿದೆ (ಶ್ರೀಧರ್ ೨೦೦೨: ೩೧–೩೨). ಬಹುಶಃ ಪುರಪತಿಯು ಕಿಲ್ಲೇದಾರನಂತೆ ಕೋಟೆಯ ರಕ್ಷಣಾ ಕಾರ್ಯಭಾರವನ್ನು ನೋಡಿಕೊಳ್ಳುತ್ತಿದ್ದಂತೆ ತೋರುತ್ತದೆ.

ಒಟ್ಟಾರೆ, ಇಲ್ಲಿನ ವಿವರಗಳನ್ನು ಗಮನಿಸಿದಾಗ ಹೀಗೆ ತಿಳಿಯಬಹುದು. ದಸ್ಯು, ದಾಸಗಳೆಂದು ಕರೆಯಲ್ಪಡುತ್ತಿದ್ದ ಕಪ್ಪುವರ್ಣದ ಸ್ಥಳೀಯ ಮೂಲ ನಿವಾಸಿಗಳು ನಗರ ಸಂಸ್ಕೃತಿಯನ್ನು ಹೊಂದಿದ್ದವರಾಗಿದ್ದರು. ಇವರ ನಗರ (ಪುರ)ಗಳು ಕೋಟೆಗಳನ್ನು ಒಳಗೊಂಡಿದ್ದವು. ಈ ಕೋಟೆಗಳನ್ನು ಇಂದ್ರನು ನಾಶ ಪಡಿಸಿ ದಸ್ಯುಗಳನ್ನು ಕೊಂದನು. ಈ ನಗರಗಳೇ ಹರಪ್ಪಾ ನಾಗರಿಕತೆಯ ನಗರಗಳು ಮತ್ತು ಇಂದ್ರನು ಕೊಂದ ಜನರೇ ಹರಪ್ಪಾ ನಾಗರಿಕತೆಯ ಜನರೆಂದು ತೀರ್ಮಾನಿಸಲು ಅವಕಾಶಗಳಿವೆ. ಗ್ರಾಮೀಣ ಸಂಸ್ಕೃತಿಯ ಆರ್ಯರ ಆಕ್ರಮಣದ ಪರಿಣಾಮವಾಗಿ ಮುಂದೆ ಸುಮಾರು ಒಂದರಿಂದ ಒಂದೂವರೆ ಸಹಸ್ರಮಾನಗಳ ಕಾಲ ಯಾವ ನಗರಗಳು ಏಳಿಗೆಗೆ ಬಾರದಿರುವುದನ್ನು ಗಮನಿಸಬಹುದು. ಪುನಃ ನಗರಗಳು ಅಸ್ತಿತ್ವ ಕಂಡು ಬರುವುದು ಕಬ್ಬಿಣ ಶಿಲಾಯುಗದ ಉಚ್ಛ್ರಾಯ ಹಂತದಲ್ಲಿ. ಅಂದರೆ, ಕ್ರಿ.ಪೂ. ಮೊದಲ ಸಹಸ್ರಮಾನದ ಮಧ್ಯಂತರ ಕಾಲದಲ್ಲಿ ಹೊಸ ಹೊಸ ನಗರಗಳು ಪ್ರವರ್ಧಮಾನಕ್ಕೆ ಬರುವ ಮೂಲಕ ಎರಡನೇ ನಗರೀಕರಣ ಪ್ರಕ್ರಿಯೆ ಆರಂಭವಾಗುತ್ತದೆ (ಥಾಪರ್ ೨೦೦೨: ೧೩೭–೧೪೬).

### ೨.೨.೩ ಕಬ್ಬಿಣ ಯುಗದ ಕೋಟೆಗಳು

ಎರಡನೆಯ ಮತ್ತು ಮಹತ್ವದ ಹಂತದ ಕೋಟೆಗಳ ನಿರ್ಮಾಣವು ಕಬ್ಬಿಣ ಯುಗದೊಂದಿಗೆ ಆರಂಭವಾಯಿತು. ಇದು ಕ್ರಿ.ಪೂ. ಮೊದಲ ಸಹಸ್ರಮಾನದ ಮಧ್ಯಂತರದಲ್ಲಿ ಗಂಗಾಕಣಿವೆಯಲ್ಲಿ ಪ್ರಾರಂಭವಾಯಿತು. ಕಂದಕಗಳನ್ನು ಒಳಗೊಂಡ ರಕ್ಷಣಾಗೋಡೆಗಳು ಕೌಸಾಂಬಿ, ರಾಜಗೃಹ, ಚಂಪಾ, ಶ್ರಾವಸ್ತಿ, ರಾಜಘಾಟ್, ವೈಶಾಲಿ, ಪಾಟಲಿಪುತ್ರ, ಮಥುರ, ಅಹಿಚ್ಛತ್ರ, ಉಜ್ಜೈನಿ, ಬೆಸ್ನಾಗರ್ ಮುಂತಾದ ಕಡೆಗಳಲ್ಲಿದ್ದವು.

ಈ ಕೋಟೆಗಳು ವಿವಿಧ ಕಾಲಘಟ್ಟಕ್ಕೆ ಸೇರಿದವಾಗಿವೆ. ಕೌಸಾಂಬಿ, ರಾಜಘಟ್, ಚಂಪಾ, ಉಜ್ಜೈನಿಗಳು ಮೌರ್ಯ ಪೂರ್ವಕಾಲಕ್ಕೆ ಸೇರಿದರೆ, ಉಳಿದವು ಮೌರ್ಯ ಮತ್ತು ಮೌರ್ಯೋತ್ತರ ಕಾಲಘಟ್ಟಕ್ಕೆ ಸೇರಿವೆ. ರಾಜಗೃಹದ ಸುತ್ತಲ ಗೋಡೆಯು ನಿರ್ಮಾಣವು ಬಿಂಬಿಸಾರನ ಕಾಲಕ್ಕೆ ಸಲ್ಲುತ್ತದೆ ಎಂದು ಹೇಳಲಾಗುವ ಸಾಂಪ್ರದಾಯಿಕ ಅಭಿಪ್ರಾಯವನ್ನು ಇತಿಹಾಸಕಾರರು ನಿರಾಕರಿಸುತ್ತಾರೆ. ಒಡಿಸ್ಸಾದ ಶಿಶುಪಾಲಗರ್ ಮತ್ತು ಧರಣಿಕೋಟೆಯ ಕೋಟೆಗಳು ಮೌರ್ಯೋತ್ತರ ಕಾಲಕ್ಕೆ ಸೇರುತ್ತವೆ (ಘೋಷ್ ೧೯೮೯: ೨೯೭–೨೯೮).

ಗಂಗಾ ಬಯಲಿನಲ್ಲಿ ಏಳಿಗೆಗೆ ಬಂದ ಹೊಸನಗರಗಳಲ್ಲಿ ಹಸ್ತಿನಾಪುರ ಗಮನಾರ್ಹವಾದುದು ಆಗಿದ್ದು, ಕೋಟೆಯ ವ್ಯವಸ್ಥೆಯನ್ನು ಹೊಂದಿತ್ತು. ಇದಕ್ಕೂ ಮೊದಲಿನ ನಗರಗಳು ಕೋಟೆಯನ್ನು ಹೊಂದಿರಲಿಲ್ಲ. ಹೊಸ ನಗರಗಳು ರಕ್ಷಣಾಗೋಡೆ ಮತ್ತು ಕೊತ್ತಳಗಳನ್ನು ಹೊಂದಿದ್ದವು. ಕೊಸಾಂಬಿಯು ಮಹತ್ವಪೂರ್ಣವಾದ ಕೋಟೆಯನ್ನು ಹೊಂದಿತ್ತು. ಈ ನಗರದ ಗೋಡೆಗಳು ೪ ಮೈಲು ಉದ್ದ ಮತ್ತು ಕೆಲವು ಸ್ಥಳಗಳಲ್ಲಿ ೩೦ ಅಡಿಗಳಿಗೂ ಎತ್ತರವಾಗಿದ್ದಿತು. ಈ ಗೋಡೆಯು ಹರಪ್ಪಾ ನಗರಗಳ ಕೋಟೆಯೊಂದಿಗೆ ಹೋಲಿಕೆಯನ್ನು ಹೊಂದಿದೆ. ಸಭಾಂಗಣ ರೀತಿಯ ಸಾರ್ವಜನಿಕ ಕಟ್ಟಡಗಳನ್ನು ಆರಂಭಿಕ ಗಂಗಾಬಯಲಿನ ನಗರಗಳಲ್ಲಿ ಗುರುತಿಸಬಹುದು (ಕುಲ್ಕೆ ಮತ್ತಿತರರು ೨೦೦೪(೧೯೮೬): ೫೩–೫೪).

ಮೌರ್ಯರ ರಾಜಧಾನಿ ಪಾಟಲಿಪುತ್ರವನ್ನು ಕುರಿತು ಗ್ರೀಕ್‌ನ ರಾಯಭಾರಿ ಮೆಗಸ್ತಾನೀಸನ ಗ್ರಂಥ ಇಂಡಿಕಾದಲ್ಲಿನ ಕೆಲವು ವಿವರಗಳನ್ನು ನಂತರದ ಬರಹಗಾರರು ತಮ್ಮ ಕೃತಿಗಳಲ್ಲಿ ಉದ್ಧೃತಗೊಳಿಸಿದ್ದಾರೆ. ಅದರ ವಿವರ ಹೀಗಿದೆ:

> *ಇದು (ಪಾಟಲಿಪುತ್ರ) ಚತುರಸ್ರಾಕಾರದಲ್ಲಿತ್ತು. ಇದರ ಉದ್ದ ೮೦ ಸ್ಟೇಟ್ (೯ ೧/೫ ಮೈಲಿ) ಗಳಷ್ಟು ಮತ್ತು ಅಗಲ ೧೫ ಸ್ಟೇಡ್ (೧ಮೈಲಿ ೧.೨೨೦ ಗಜ) ಗಳಷ್ಟಿತ್ತು. ಇದರ ಸುತ್ತಲೂ ೬೦ ಅಡಿಗಳಷ್ಟು ಆಳದ ಮತ್ತು ೨೦೦ ಗಜಗಳಷ್ಟು ಅಗಲದ ಕಂದಕವಿತ್ತು. ಇದರಲ್ಲಿ ಸೋನ್ ನದಿಯ ನೀರು ತುಂಬಿತ್ತು. ಅಲ್ಲದೆ, ನಗರದ ಚರಂಡಿ ನೀರು ಸಹ ಅಲ್ಲಿಗೆ ಹರಿದು ಬರುತ್ತಿತ್ತು. ಈ ಕಂದಕದ ಸುತ್ತಲೂ ಬಲವಾದ ದಿಮ್ಮಿಗಳ ಬೇಲಿ ಇದ್ದುದರಿಂದ ನಗರಕ್ಕೆ ಮತ್ತಷ್ಟು ರಕ್ಷಣೆ ಲಭಿಸಿತ್ತು.[೬] ಈ ಬೇಲಿಯಲ್ಲಿ ಅಲ್ಲಲ್ಲಿ ಉದ್ದ ಕಂಡಿಗಳಿದ್ದವು. ಅವುಗಳ ಮೂಲಕ ಈ ನಗರ ಗೋಡೆಯಲ್ಲಿ ೬೪ ದ್ವಾರಗಳಿದ್ದವು. ಮತ್ತು ಅವಕ್ಕೆ ಅಲಂಕಾರ ಪ್ರಾಯವಾಗಿ ೫೭೦ ಗೋಪುರಗಳಿದ್ದವು (ಮಜುಂದಾರ್ ೧೯೯೬: ೯೩–೯೪).*

ಕಬ್ಬಿಣಯುಗ ಅಥವಾ 'ದ್ವಿತೀಯ ನಗರೀಕರಣ ಕ್ರಾಂತಿ'ಗೆ ಸೇರಿದ ೨೨ ಮಹತ್ವದ ನಿವೇಶನಗಳನ್ನು ಆಯ್ದುಕೊಂಡು ಜೇನ್ ಡೆಲೋಷ್ ಅವರು ವಿಶ್ಲೇಷಿಸಿದ್ದಾರೆ. ಈ ನಿವೇಶನಗಳಲ್ಲಿ ಆರಂಭದಲ್ಲಿ ಪಟ್ಟ ಮಾಡಿದ ನಗರಗಳೂ ಸೇರಿವೆ. ವೈಜ್ಞಾನಿಕವಾಗಿ ಅಧ್ಯಯನ ನಡೆಸಿರುವ ಅವರು ರಕ್ಷಣಾ ವ್ಯವಸ್ಥೆಯ ಮೂರು ಮುಖ್ಯ ಲಕ್ಷಣಗಳಾದ ಕೋಟೆ ಮತ್ತು ಕಂದಕ, ಆವೃತ್ತ ಗೋಪುರ ಮತ್ತು ದ್ವಾರಗಳನ್ನು ಪ್ರಾಚೀನ ತಾಂತ್ರಿಕ ಅಂಶಗಳಾಗಿ ಗುರುತಿಸುತ್ತಾರೆ. ಒಟ್ಟಾರೆ, ಅವರು ನಿರ್ಣಯಿಸುವಂತೆ ಅಂದಿನ ಎಲ್ಲಾ ಕೋಟೆಗಳು ಘನವಾದ ತೆರೆಗೋಡೆಯನ್ನು ಹೊಂದಿದ್ದವು. ಅವುಗಳ ಒಳಭಾಗವನ್ನು ಭರ್ತಿ ತುಂಬಲಾಗಿತ್ತು. ಭಾರತದಲ್ಲಿ ಉತ್ಖನನಗೊಂಡಿರುವ ಈಶಾನ್ಯ ಭಾರತ ಮತ್ತು ಪಾಟಲಿಪುತ್ರದ ಕೋಟೆಗಳನ್ನು ಹೊರತು ಪಡಿಸಿದರೆ ಉಳಿದೆಲ್ಲ ನೆಲೆಗಳು ಭಾರಿಗಾತ್ರದ ಗೋಡೆ ಮತ್ತು ಘನ ಚತುರ್ಭುಜಾಕೃತಿಯ ಗೋಪುರಗಳು ದೊರೆತಿವೆ (ಡಿಲೋಷ್ ೨೦೦೭: ೧೦–೩೦).

### ೨.೨.೪ ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಕೋಟೆಗಳು

ಭಾರತೀಯ ಪ್ರಾಚೀನ ಕೃತಿಗಳಾದ ಕೌಟಿಲ್ಯನ **ಅರ್ಥಶಾಸ್ತ್ರ, ಮನುಸ್ಮೃತಿ, ಶುಕ್ರನೀತಿಸಾರ, ಮಾನಸಾರ, ಮಯಾಮತ, ನೀತಿವಾಕ್ಯಾಮೃತ,** ಮೊದಲಾದ ಕೃತಿಗಳಲ್ಲಿ ಕೋಟೆಗಳನ್ನು ಕುರಿತಾದ ವಿವಿಧ ವಿವರಗಳಿವೆ. ಕೌಟಿಲ್ಯನ **ಅರ್ಥಶಾಸ್ತ್ರ**ದಲ್ಲಿ ಜನಪದ(ದೇಶ)ದ ಗಡಿಯಲ್ಲಿ ನಾಲ್ಕು ಕಡೆಗೂ ವ್ಯಾಪಿಸಿರುವ ಯುದ್ಧಕ್ಕೆ ಯೋಗ್ಯವಾದ, ಸ್ವಾಭಾವಿಕವಾಗಿ ವಿಷಮವಾಗಿರುವ ಸ್ಥಳವನ್ನು ದುರ್ಗವಾಗಿ ಆಶ್ರಯಿಸಬೇಕು (ಕೃಷ್ಣಭಟ್ಟ ೨೦೧೬(೧೯೬೨): ೯೩). ನಾಲ್ಕು ಪ್ರಕಾರದ ಕೋಟೆಗಳ ವಿವರವನ್ನು ಅರ್ಥಶಾಸ್ತ್ರ ಹೀಗೆ ನೀಡುತ್ತದೆ.

೧. ಔದಕ : ಆಳವಾದ ನದಿ ಅಥವಾ ನೀರಿನಿಂದ ಆವೃತ್ತವಾದ ಭೂ ಪ್ರದೇಶ.

೨. ಪಾರ್ವತ: ಕಲ್ಲುಬಂಡೆ ಅಥವಾ ದೊಡ್ಡ ಗುಹೆಯಾಗಿರುವುದು.

೩. ಧಾನ್ವನ: ಹುಲ್ಲು ನೀರುಗಳಿಲ್ಲದ / ಮರುಭೂಮಿಯಾದ ಪ್ರದೇಶ.

೪. ವನದುರ್ಗ: ಕುರುಚಲುಗಿಡಗಳಿಂದ ತುಂಬಿರುವ, ಪ್ರವೇಶಿಸಲಾಗದ ದುರ್ಗ (ಶಂಕರ ಭಾರತೀ ೨೦೧೧(೧೯೬೩): ೯೦–೯೧).

ದೇಶದ ಮಧ್ಯದಲ್ಲಿ ಕೋಶವನ್ನು ರಕ್ಷಿಸುವುದಕ್ಕಾಗಿ ನಿರ್ಮಿಸಬೇಕಾದ ಸ್ಥಾನೀಯ ಎಂಬ ಕೋಟೆಯ ಆಕಾರ ಮತ್ತು ಪರಿಸರವನ್ನು ಕುರಿತು ತಿಳಿಸಿದೆ. ಅಲ್ಲದೆ, ಕೋಟೆಗೆ ಇರಬೇಕಾದ ಕಂದಕ, ವಪ್ರ (ದಿಣ್ಣೆ), ಪ್ರಾಕಾರ (ಕೋಟೆ ಗೋಡೆ), ಕೊತ್ತಳಗಳ ನಿರ್ಮಾಣದ ಬಗೆಗೆ ವಿವರಗಳನ್ನು ನೀಡುತ್ತದೆ. ಕೋಟೆಯ ಗೋಡೆಯನ್ನು ಎಂದಿಗೂ ಮರಗಳಿಂದ ಮಾತ್ರ ನಿರ್ಮಿಸಬಾರದು ಎಂದು **ಅರ್ಥಶಾಸ್ತ್ರ** ಹೇಳುತ್ತದೆ (ಶಂಕರ

ಭಾರತೀ ೨೦೧೦(೧೯೬೩): ೯೧-೯೨). ಆದರೆ ಇದಕ್ಕೆ ವ್ಯತಿರಿಕ್ತವಾದ ವಿವರವನ್ನು ಮೆಗಸ್ತನೀಸ್ ನೀಡಿದ್ದು, ಈ ಕುರಿತಾದ ಚರ್ಚೆಯನ್ನು ಅಡಿ ಟಿಪ್ಪಣಿ (೨) ರಲ್ಲಿ ನಡೆಸಲಾಗಿದೆ.

**ಮನುಸ್ಮೃತಿ**ಯಲ್ಲಿ ಕೋಟೆಯನ್ನು ಕಟ್ಟುವ ಸ್ಥಳ, ಕಟ್ಟಲು ಬಳಸುವ ಸಾಮಗ್ರಿ ಮತ್ತು ಸಂರಕ್ಷಣಾ ವಿಧಾನಗಳ ಆಧಾರದ ಮೇಲೆ ಕೋಟೆಗಳನ್ನು ಆರು ಪ್ರಕಾರಗಳಲ್ಲಿ ವಿಂಗಡಿಸಲಾಗಿದೆ. ಅವು ಹೀಗಿವೆ:

*ಧನ್ವದುರ್ಗಂ ಮಹೀದುರ್ಗಮಬ್ದುರ್ಗಂ ವಾರ್ಕ್ಷಮೇವ ವಾ ।*

*ನೃದುರ್ಗಂ ಗಿರಿದುರ್ಗಂ ವಾ ಸಮಾಶ್ರಿತ್ಯ ವಸೇತ್ಪುರಂ ॥*

(**ಮನುಸ್ಮೃತಿ** *೭-೭೦)*

ಅಂದರೆ ಮರುಭೂಮಿಯಲ್ಲಿ ಕಲ್ಲು ಬಂಡೆಗಳಿಂದ ಮಾಡಿದ ಎತ್ತರದ ಪ್ರದೇಶದಲ್ಲಿ ಸುತ್ತಲೂ ನೀರಿನಿಂದ ಆವೃತ್ತವಾದ ಪ್ರದೇಶದಲ್ಲಿ, ದಟ್ಟವಾದ ಕಾಡಿನಲ್ಲಿ ಚತುರಂಗ ಸೇನಾಪರಿವೃತವಾದ ಪ್ರದೇಶದಲ್ಲಿ ಹಾಗೂ ಬೆಟ್ಟದಲ್ಲಿ ಕೋಟೆಗಳನ್ನು ಕಟ್ಟಿಕೊಂಡು ರಾಜನು ತನ್ನ ನಗರಗಳನ್ನು ನಿರ್ಮಿಸಬೇಕು. ಮನುಸ್ಮೃತಿಕಾರನು ಹೇಳಿರುವ ಕೋಟೆಗಳನ್ನು ಚನ್ನಬಸಪ್ಪ ಪಾಟೀಲರು ಈ ರೀತಿ ವಿಂಗಡಿಸಿದ್ದಾರೆ.

೧. ಧನ್ವದುರ್ಗ: ಮರುಭೂಮಿಯಿಂದ ಆವೃತ್ತವಾಗಿರುವ ಕೋಟೆ.

೨. ಮಹೀದುರ್ಗ: ಕಲ್ಲು ಮತ್ತು ಇಟ್ಟಿಗೆಯಿಂದ ನಿರ್ಮಿಸಿರುವ ಕೋಟೆ.

೩. ಜಲದುರ್ಗ: ಆಳವಾದ ನೀರಿನಿಂದ ಸುತ್ತುವರಿಯಲ್ಪಟ್ಟಿರುವ ಕೋಟೆ.

೪. ವೃಕ್ಷದುರ್ಗ: ದಟ್ಟವಾದ ಕಾಡಿನಿಂದ ಆವೃತ್ತವಾದ ಕೋಟೆ.

೫. ನರದುರ್ಗ: ಚತುರ್ಬಲಗಳಿಂದ ರಕ್ಷಿಸಲ್ಪಟ್ಟ ಕೋಟೆ.

೬. ಗಿರಿದುರ್ಗ: ಕಡಿದಾದ ಬೆಟ್ಟದ ಮೇಲೆ ನಿರ್ಮಿಸಿರುವ ಕೋಟೆ (ಪಾಟೀಲ ೧೯೯೯: ೨).

ಇವುಗಳಲ್ಲಿ ರಾಜನು ಗಿರಿದುರ್ಗದಲ್ಲಿ ಆಶ್ರಯಪಡೆಯಬೇಕು. ಬೆಟ್ಟದ ಮೇಲೆ ಕೋಟೆ ಕಟ್ಟಿಕೊಂಡರೆ ಶತ್ರುಗಳಿಗೆ ಸುಲಭವಾಗಿ ಗೆಲ್ಲಲಾಗದು. ಆದ್ದರಿಂದ ಗಿರಿದುರ್ಗವೇ ಉತ್ತಮವಾದುದು ಎಂದು ಮನುಸ್ಮೃತಿಕಾರ ಹೇಳಿದ್ದಾನೆ (**ಮನುಸ್ಮೃತಿ** ೭-೭೧). ಮನುಸ್ಮೃತಿಕಾರನ ಪ್ರಕಾರ ಕೋಟೆಯ ಗೋಡೆಯ ಮೇಲೆ ನಿಂತು ಯುದ್ಧ ಮಾಡುವ ಒಬ್ಬ ಬಿಲ್ಲಾಳು ಹೊರಗಿನ ನೂರು ಜನ ಶತ್ರುಸೈನಿಕರನ್ನು ಕೊಲ್ಲಬಲ್ಲನು. ಅದೇ ರೀತಿ ನೂರು ಮಂದಿ ಬಿಲ್ಲಾಳುಗಳು ಹೊರಗಿನ ಹತ್ತುಸಾವಿರ ಸೈನಿಕರನ್ನು ಸೋಲಿಸಬಲ್ಲರು.

ಆದ್ದರಿಂದ ರಾಜನು ಭದ್ರವಾದ ಕೋಟೆಯನ್ನು ನಿರ್ಮಿಸತಕ್ಕದ್ದು (**ಮನುಸ್ಮೃತಿ** ೭-೭೪).

**ಶುಕ್ರನೀತಿಸಾರವು** ಒಂಬತ್ತು ಬಗೆಯ ಕೋಟೆಗಳ ವಿವರಗಳನ್ನು ನೀಡುತ್ತವೆ. ಅವುಗಳೆಂದರೆ:

೧. ಐರಿಣ: ಹಳ್ಳ, ಮುಳ್ಳು, ಕಲ್ಲುಗಳಿಂದ ಆವೃತ್ತವಾಗಿರುವುದು.

೨. ಪರಿಖ: ಆಳವಾದ ಕಂದಕಗಳಿಂದ ಸುತ್ತುವರಿಯಲ್ಪಟ್ಟಿರುವುದು.

೩. ಪರಿಘ: ಕಲ್ಲು, ಇಟ್ಟಿಗೆ / ಮಣ್ಣಿನ ಎತ್ತರವಾದ ಗೋಡೆಗಳಿಂದ ಆವೃತ್ತವಾಗಿರುವುದು.

೪. ವನ: ದಟ್ಟವಾದ ಅರಣ್ಯದಲ್ಲಿ ಮುಳ್ಳುಮರಗಳಿಂದ ಕೂಡಿರುವುದು.

೫. ಧನ್ವ: ನೀರಿಲ್ಲದ ಒಣ ಭೂಮಿಯಲ್ಲಿರುವುದು.

೬. ಜಲ: ನೀರಿನಿಂದ ಸುತ್ತುವರಿಯಲ್ಪಟ್ಟಿರುವುದು.

೭. ಗಿರಿ: ಬೆಟ್ಟದ ಮೇಲಿರುವುದು.

೮. ಸೈನ್ಯ: ಶಸ್ತ್ರಸಜ್ಜಿತ ಸದೃಢ ಸೈನಿಕರಿಂದ ಸಂರಕ್ಷಿಸಲ್ಪಟ್ಟಿರುವುದು.

೯. ಸಹಾಯ: ಬಂಧುಗಳು ಮತ್ತು ಸ್ನೇಹಿತರ ಮನೆಗಳಿಂದ ಆವೃತ್ತವಾಗಿರುವುದು (ಪಾಟೀಲ ೧೯೯೯: ೨).

ಅದೇ ರೀತಿಯಲ್ಲಿ **ಮಾನಸಾರದಲ್ಲಿ** ಕೋಟೆಯಿರುವ ಊರುಗಳನ್ನವರಿಸಿ ಅವುಗಳನ್ನು ಎಂಟು ವಿಧಗಳಲ್ಲಿಯೂ ಮತ್ತು ಸೈನಿಕ ವಾಸ್ತುದೃಷ್ಟಿಯಿಂದ ಕೋಟೆಗಳನ್ನು ಏಳು ವಿಧಗಳಲ್ಲಿಯೂ ವಿಂಗಡಿಸಿರುವುದನ್ನು ಕಾಣಬಹುದು (ಜೋಶಿ ೧೯೮೫: ೧೪೧-೧೪೫).

ಭಾರತದ ಚರಿತ್ರೆಯಲ್ಲಿ ಕೋಟೆಗಳು ಇತಿಹಾಸ ಪೂರ್ವಕಾಲದಲ್ಲಿ ಆರಂಭಗೊಂಡು ಹಂತಹಂತವಾಗಿ ವಿಕಾಸ ಹೊಂದುತ್ತಾ ಬಂದಿರುವುದನ್ನು ಕಾಣಬಹುದು. ಇತಿಹಾಸ ಕಾಲಘಟ್ಟಕ್ಕೆ ಬರುವ ವೇಳೆಗೆ ಕೋಟೆಗಳ ಸ್ವರೂಪಗಳಲ್ಲಿಯೂ ವೈವಿಧ್ಯಮಯ ಬದಲಾವಣೆಗಳನ್ನು ಕಾಣಬಹುದು. ಕೌಟಿಲ್ಯನ ಕಾಲಘಟ್ಟದಲ್ಲಿ ನಾಲ್ಕು ಮಾದರಿಯ ಕೋಟೆಗಳನ್ನು ವಿವರಿಸಿದರೆ, ಮನು ಆರು ಪ್ರಕಾರದ ಕೋಟೆಗಳನ್ನು ಪರಿಚಯಿಸಿದ್ದಾನೆ. ಅನಂತರ ಕಾಲದ **ಶುಕ್ರನೀತಿಸಾರದಲ್ಲಿ** ೯ ವಿಧಗಳ ಕೋಟೆಗಳನ್ನು ವರ್ಣಿಸಿದರೆ, ಮಾನಸಾರ ೧೫ ಬಗೆಯ ಕೋಟೆಗಳನ್ನು ವರ್ಣಿಸಿದೆ. ಹಾಗೆಯೇ ಪುರಾಣಗಳಾದ **ಮತ್ಸ್ಯ ಪುರಾಣ, ವಾಯು ಪುರಾಣ, ಮಾರ್ಕಂಡೇಯ ಪುರಾಣ, ವಿಷ್ಣು ಪುರಾಣ** ಮೊದಲಾದವುಗಳು ಕೂಡ ಕೋಟೆಗಳ ಬಗೆಗೆ ಮಾಹಿತಿ ನೀಡುತ್ತವೆ. ಮೇಲೆ ತಿಳಿಸಿರುವ ವಿವಿಧ ಕಾಲಘಟ್ಟದ ಸಾಹಿತ್ಯಗಳಲ್ಲಿ ಅನೇಕ ಪ್ರಕಾರದ ಕೋಟೆಗಳ ಬಗೆಗೆ ವಿವರಗಳಿವೆ

(ಜೋಷಿ ೧೯೮೫: ೧೩೯). ಇವುಗಳನ್ನು ಗಮನಿಸಿದರೆ ಭಾರತದ ಚರಿತ್ರೆಯಲ್ಲಿ ಕಾಲ ಕಾಲಕ್ಕೆ ಕೋಟೆಗಳನ್ನು ನಿರ್ಮಿಸುವ ವಿಧಾನ ಮತ್ತು ಸ್ವರೂಪದಲ್ಲಾಗಿರುವ ವಿಕಾಸವನ್ನು ಅರಿಯಬಹುದು.

### ೨.೨.೫ ಕನ್ನಡ ಸಾಹಿತ್ಯದಲ್ಲಿ ಕೋಟೆಗಳು

ಪ್ರಾಚೀನ ಭಾರತೀಯ ಸಾಹಿತ್ಯ ಅಥವಾ ಸಂಸ್ಕೃತ ಸಾಹಿತ್ಯದಲ್ಲಿ ಕೋಟೆಗಳ ಬಗೆಗೆ ವಿವರಗಳು ಇರುವಂತೆ ಕನ್ನಡ ಸಾಹಿತ್ಯದಲ್ಲಿಯೂ ಕೋಟೆಗಳ ಬಗೆಗೆ ಮಾಹಿತಿಗಳಿವೆ. ಕೇವಲ ಸಾಹಿತ್ಯ ಕೃತಿಗಳಲ್ಲಿ ಮಾತ್ರವಲ್ಲ; ಕನ್ನಡ ಶಾಸನಗಳಲ್ಲಿಯೂ ಕೋಟೆಗಳ ಬಗೆಗೆ ಕೆಲವು ಮಾಹಿತಿ ಮತ್ತು ಶಿಲ್ಪಗಳಿರುವುದನ್ನು ಕಾಣಬಹುದು.

ಕೋಟೆ ಮತ್ತು ಅದರ ರಚನೆಗಳ ವಿವಿಧ ಅಂಗಗಳ ಬಗ್ಗೆ ನಮಗೆ ಸಾಹಿತ್ಯಿಕವಾಗಿ ವಿಶಿಷ್ಟ ಮಾಹಿತಿಗಳು ದೊರೆಯುತ್ತವೆ. ಪ್ರಧಾನ ಸಾಹಿತ್ಯ ಕೃತಿಗಳನ್ನು ಅನುಲಕ್ಷಿಸಿ ಹೇಳುವುದಾದರೆ ಗುಣವರ್ಮನ **ಪುಷ್ಪದಂತ ಪುರಾಣ,** ಜನ್ನನ **ಅನಂತನಾಥ ಪುರಾಣ, ಗಿರಿಜಾಕಲ್ಯಾಣ,** ನಂಜುಂಡ ಕವಿಯ **ರಾಮನಾಥ ಚರಿತೆ,** ಕನಕದಾಸನ **ಮೋಹನ ತರಂಗಿಣಿ,** ಗೋವಿಂದ ವೈದ್ಯನ **ಕಂಠೀರವ ನರಸರಾಜ ವಿಜಯ,** ಮುಂತಾದ ಕಾವ್ಯಗಳಲ್ಲಿ ಕೋಟೆಗಳ ಬಗೆಗೆ ವಿಪುಲವಾದ ಮಾಹಿತಿಯಿದೆ.

**ಪುಷ್ಪದಂತ ಪುರಾಣ**ದಲ್ಲಿ ವೈರಿಯ ಬರುವಿಕೆಯನ್ನು ಅರಿತು ಗಟ್ಟಿಮುಟ್ಟಾದ ಜಾಳಂಗಳಿಂ ಮೇಳೆಯಮಂ ಓಳಿಗೊಳಿಸಿ ವಿಷಲತಾ ಗುಲ್ಮ ಕಂಟಕಗಳಂ ವ್ಯವಸ್ಥಿತವಾಗಿ ಅಳವಡಿಸಿ, ವೈರಿಸೈನಿಕರ ಮೊಣಕಾಲು ಒಡೆದು ಛಿನ್ನ ವಿಚ್ಛಿನ್ನವಾಗಿ ಹೋಗುವಂತೆ ದಸಿಗಳಂ ಕೆತ್ತಿ ನೆಡಿಸಿ, ಅಡಿಗಳನ್ನು ಮುಂದಿರಿಸಿ ನಡೆಯಲಾಗದಂತೆ ವಜ್ರಸೂಜಿಗಳನ್ನು ಮೇಲ್ಮುಖವಾಗಿ ನಿಲ್ಲಿಸಿ, ಆನೆಗಳಿಗೆ ತೊಂದರೆಗೀಡು ಮಾಡುವ ಶೃಂಗಾಟಕಗಳನ್ನು (ಮುಳ್ಳುಗಳನ್ನು) ದಾರಿಗಳಲ್ಲಿ ಹರಡಿ ಕೋಟೆಯ ಹತ್ತಿರ ಬರುವುದಕ್ಕೆ ಆತಂಕಗಳನ್ನೊಡ್ಡುತ್ತಿದ್ದರು ಎಂದು ಉಲ್ಲೇಖಿಸಿದೆ. ಇದೇ ರೀತಿ ಶತ್ರುಗಳು ದಂಡೆತ್ತಿ ಬರುವಾಗ ಕೋಟೆಯನ್ನು ಎಚ್ಚರಿಕೆಯಿಂದ ಭದ್ರಪಡಿಸುತ್ತಿದ್ದರು. ಅಗಳು, ಆಳ್ವೇರಿ, ಕೊತ್ತಳ, ಅಟ್ಟಳೆ, ಹೆಬ್ಬಾಗಿಲುಗಳನ್ನು ಭದ್ರಪಡಿಸಿ, 'ಅಂಬುಗಂಡಿ'ಯನ್ನು ಸರಿಪಡಿಸಿ ಕೊಳ್ಳುತ್ತಿದ್ದರು. ಕಾಸಿದಂಬಲಿ, ಬಾಸಣಿಸಿದ ಹಾವು, ಪೂಣಿಸಿದ ಗಾಣ, ಪೂಣಿಸಿದ ಕೊಂತ, ಸುಡುವ ಎಣ್ಣೆ, ಮೇಲೆ ಕೆಡಗುವ ತೊಲೆ, ಹತ್ತಿದವರನ್ನು ಹೊಯ್ಯುವ ಬಲ್ಲುಗಿದಿಗೆ, ತಿವಿವ ಪಂದಿಪೊಟ್ಟೆಟ್ಟ ಗಡೆ, ಕವಣೆ ಕೈ, ಕಲ್ಲೆತ್ತು, ಗುಂಡಾರ್ದಿಡುವ ಪೆಟಲು ಯಂತ್ರ, ಬಿಡಿ, ಜಿಗಿಉರುಳು, ಜಿಲ್ಲಂಬು, ಕತ್ತರಿ, ಎಣ್ಣೆಗೊಡ, ಹರವಿ ಸುಡುವ ಸುಣ್ಣಕಲ್ಲು, ಉರಿವ ಪುಲ್ಲಗಳ ದೊಂದೆ, ಸುರಿವ ಕೆಂಡದ ತರಿ

ಮೊದಲಾದವುಗಳನ್ನು ಸಿದ್ಧಪಡಿಸಿಟ್ಟುಕೊಳ್ಳುತ್ತಿದ್ದ ಬಗ್ಗೆ **ರಾಮನಾಥ ಚರಿತೆ** ತಿಳಿಸುತ್ತದೆ. ಕೋಟೆಯ ಬಾಗಿಲು ಅಸಾಮಾನ್ಯವಾದುದು. ಆದ್ದರಿಂದ ಆನೆಗಳಿಂದ ನೂಕಿಸಿ ಮುಚ್ಚಲಾಗುತ್ತಿತ್ತು. ಕೋಟೆಯ ಹೆಬ್ಬಾಗಿಲುಗಳು ಕಾವಲು ಗೃಹಗಳಾಗಿಯೂ ಕೆಲಸ ಮಾಡುತ್ತಿದ್ದವು ಎಂದು **ಮೋಹನ ತರಂಗಿಣಿ** ಹೇಳುತ್ತದೆ. ಕನ್ನಡ ಸಾಹಿತ್ಯಗಳಲ್ಲಿ ಉಲ್ಲೇಖಿಸಿರುವ ಕೋಟೆಗಳ ವಿವರ ಹಾಗೂ ಆಕ್ರಮಣದ ಸನ್ನಿವೇಶಗಳನ್ನು ಬೆಟಗೇರಿ ಕೃಷ್ಣಶರ್ಮ ಅವರು **ಕರ್ನಾಟಕ ಜನಜೀವನ** (೧೯೮೩: ೧-೬೩) ಕೃತಿಯಲ್ಲಿ ಮತ್ತು ಶ್ರೀಧರ್ ಎಚ್.ಜಿ. ಅವರು **ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ** (೨೦೦೨: ೧೪೦-೧೬೬) ಕೃತಿಯಲ್ಲಿ ವಿವರವಾಗಿ ಸಂಗ್ರಹಿಸಿದ್ದಾರೆ.

ಕನ್ನಡದ ಪ್ರಾಚೀನ ಕೃತಿಗಳಾದ ಪಂಪನ **ಪಂಪ ಭಾರತ,** ನಾಗಚಂದ್ರನ **ಪಂಪ ರಾಮಾಯಣ,** ಮಲ್ಲಿಕಾರ್ಜುನ ಕವಿಯ **ಸೂಕ್ತಿಸುಧಾರ್ಣವ,** ಹರಿಹರನ **ಗಿರಿಜಾಕಲ್ಯಾಣ** ಮೊದಲಾದ ಕೃತಿಗಳಲ್ಲಿ ಕೋಟೆಗಳ ಬಗೆಗೆ ಉಲ್ಲೇಖಗಳಿವೆ. ಹಳಗನ್ನಡ ಕಾವ್ಯಗಳಲ್ಲಿ ನಗರದ ವರ್ಣನೆಯ ಸಂದರ್ಭದಲ್ಲಿ ಕೋಟೆಗಳ ವರ್ಣನೆಯನ್ನು ಸಾಮಾನ್ಯವಾಗಿ ಕಾಣಬಹುದು. ಈ ಎಲ್ಲಾ ಕಡೆಗಳಲ್ಲಿ ವನದುರ್ಗದ ವಿವರಗಳಿವೆ. ಪಂಪನು ಪಂಪ ಭಾರತದಲ್ಲಿ ಹೀಗೆ ವರ್ಣಿಸಿದ್ದಾನೆ:

*ಈಂಟು ಜಳಧಿಯೆನಿಪಗಟ ನೀಳ್ಪಿನಿಂ*

*ನೆಗೆದು ಸೊಗಯಿಸುವ ಕೋಂಟೆಯೊಳ್ಪಿನಿಂ*

***(ಪಂಪ ಭಾರತ** ೩.೨೨)*

ಅಂದರೆ, ಸಮುದ್ರವನ್ನೆ ಲೇವಡಿ ಮಾಡುವಂತಿರುವ ಕಂದಕಗಳನ್ನು ಮತ್ತು ಮೇಲೆದ್ದ ಕೋಟೆಗಳನ್ನು ಕುರಿತು ವರ್ಣಿಸಿದ್ದಾನೆ.

ಕನ್ನಡದ ಮತ್ತೊಬ್ಬ ಕವಿ ನಾಗಚಂದ್ರನು ತನ್ನ ಕೃತಿಯಲ್ಲಿ ಕೋಟೆಗಳನ್ನು ಕುರಿತು ಹೀಗೆ ಬಣ್ಣಿಸಿದ್ದಾನೆ:

*..... ನೀರ್ಗಾದಿಗೆ*

*ಪಡೆಯುತ್ತುಂ ಪೊನ್ನ ಕೋಂಟೆಯಂ ಬಳಸಿರ್ಕುಂ*

*ಚೆಂಬೊನ್ನ ಕೋಂಟೆ ಪರಿವೇ*

*ಷಂಬೆತ್ತಳನೇಸಱಿಂತೆ ನೀರ್ಗಾದಿಗೆಯಂ*

*ಮುಗಿಲಟ್ಟಳೆಗಳ ಕೆಲದಂ*

*ಬುಗಂಡಿಯಿಂ ನುಸುಳ್ದು ನಡೆವ ದಿನಕರನ ಹಯಂ*

***(ಪಂಪ ರಾಮಾಯಣ** ೧.೧೧೩-೧೧೬).*

ಈ ಸಾಲುಗಳಲ್ಲಿ ನಾಗಚಂದ್ರನು ಬಾನೆತ್ತರದ ಅಟ್ಟಳೆ, ಪಕ್ಕದಲ್ಲಿರುವ ಅಂಬುಗಂಡಿ, ಹಾರಾಡುವ ನಿಶಾನೆ ಮೊದಲಾದವನ್ನು ಕುರಿತು ವರ್ಣಿಸಿದ್ದಾನೆ.

ಹರಿಹರನು **ಗಿರಿಜಾಕಲ್ಯಾಣ**ದಲ್ಲಿ ಕೋಟೆಯನ್ನು ಹೀಗೆ ಚಿತ್ರಿಸಿದ್ದಾನೆ:

*ಪುಳುಕಿನ ಕೋಂಟೆ ಬಟ್ಟಿದೆನೆ ಬೇವಿನದಂಡೆ ನಭಕ್ಕೆಮೀಱುವ*

*ಟ್ಟಳೆ ನಿಮಿರ್ದೇಱೆ ಪಾಱುವ ಪತಾಕೆ ವಿರಾಜಿಪಗೋಂಟು ಗೋಂಟಿನೊಳ್*

*ಬಳಸಿದ ಕೊತ್ತಳ ಸೊಗಯಿಪಾಳ್ವೇರಿ ಡೆಂಕಣಿ ಸಾರಮಾರಿಯ*

*ಗ್ಗಳಿಸುವ ಗೋಪುರದಿಂ ಪುಲಿಮೊಗಂ ಮೆಱೆಗುಂ ಪುರದೊಳ್ ನಿರಂತರಂ*

(**ಗಿರಿಜಾಕಲ್ಯಾಣ** *೨.೨೯*).

ಅಂದರೆ, ಕೋಟೆಯ ತೆನೆಯು ಬೇವಿನದಂಡೆಯಂತೆ, ಆಕಾಶವನ್ನು ಮುಟ್ಟುವ ಅಟ್ಟಣೆ, ಸೆಟೆದು ಹಾರುವ ಪತಾಕೆ, ವೀರಾಜಿಸುವ ಬಲಿಷ್ಠ ಕೊತ್ತಳ, ಸುಂದರವಾದ ಆಳ್ವೇರಿ, ಡೆಂಕಣಿ ಸಾರಮಾರಿ, ಎತ್ತರವಾದ ಗೋಪುರದಿಂದ ಹುಲಿಮೊಗವು (ಹೆಬ್ಬಾಗಿಲು) ನಗರದಲ್ಲಿ ಸದಾ ಶೋಭಿಸುವುದು ಎಂದಿದ್ದಾನೆ.

ಕನಕದಾಸನು **ಮೋಹನತರಂಗಿಣಿ**ಯಲ್ಲಿ ಕೃಷ್ಣನ ದ್ವಾರಕೆಯನ್ನು ಮತ್ತು ಬಾಣನ ಶೋಣಿತಪುರವನ್ನು ಚಿತ್ರಿಸುವಾಗ ಕೋಟೆಗಳ ವಿವಿಧ ಭಾಗಗಳನ್ನು ವರ್ಣಿಸಿದ್ದಾನೆ.

*ಪಂತದಿಂದವನಿಯ ಹೊತ್ತ ದಿಗ್ಗಜದಂತೆ*

*ನಿಂತ ಕೊತ್ತಳಗಳೊಪ್ಪಿದುವು*

***

*ಬಲಿನಂದನ ಮುಖ್ಯ ಖಳರೆಂಬ ಮೃಗಕುಲ*

*ಚಲಿಸಿ ತನ್ನಿದಿರ್ ಬರೆ ಪಿಡಿದು,*

*ಉಲಿದು ಹೊಯ್ಯುವೆನೆಂಬಾ ರುದ್ರದಿಂ ಕೋಟೆಯ*

*ಹುಲಿಮೊಗ ಕಣ್ಗೆ ರಂಜಿಸಿತು*

***

*ಬೆಟ್ಟವ ಕಿತ್ತು ತಂದಿರಿಸಿದಂದದಿ ಮುಗಿ-*

*ಲಟ್ಟಣೆ ತೆನೆಗಳಗ್ರದಲಿ*

*ಬಟ್ಟರನ್ನಗಳ ಕೆತ್ತಿಸಿದ ಹೊಂಗಳಸಂ ಗ-*

*ಳಟ್ಟುರ್ದುವೇನ ಬಣ್ಣಿಸುವೆ*

***

*ನೆಗಳು, ನೀರಾನೆ, ಪಾಠೀನ, ಕಚ್ಛಪ, ಕರ-*

*ಯುಗಳ ಕರ್ಕಾಟ ನಿಚಯ,*

*ಜಗಳಕ್ಕೆ ಬಪ್ಪ ಶತ್ರುಗಳ ಕಂಡಿಪೆವೆಂದು*

*ಆಗಳೊಳು ಘುಳುಘುಳಿಸಿದುವು*

(ಕೃಷ್ಣಶರ್ಮ ೧೯೮೩: ೧೧-೧೨)

ಅಂದರೆ, ಪಂತದಿಂದ ಭೂಮಿಯನ್ನು ಹೊತ್ತ ದಿಗ್ಗಜ(ಪೌರಾಣಿಕ ಆನೆ)ದಂತೆ ಕೊತ್ತಳವು ನಿಂತಿದೆ. ಹುಲಿಯು ಜಿಂಕೆಯನ್ನು ಬರಸೆಳೆದು ಹೊಯ್ಯುವೆನೆಂಬಂತೆ ಕೋಟೆಯ ಹೆಬ್ಬಾಗಿಲು (ಹುಲಿಮೊಗ) ಕಣ್ಣಿಗೆ ರಾಚುತ್ತಿದೆ. ಬೆಟ್ಟವನ್ನೆ ಕಿತ್ತು ತಂದಿಟ್ಟಂತೆ ತೋರುವ ಮುಗಿಲಟ್ಟಣೆ, ಕಂದಕದಲ್ಲಿರುವ ಮೊಸಳೆ, ನೀರಾನೆ, ಮೀನು, ಆಮೆ, ಏಡಿ ಮೊದಲಾದವುಗಳು ಜಗಳಕ್ಕೆ ಬರುವ ಶತ್ರುಗಳನ್ನು ಕಂಡಿದ್ದೇವೆಂದು ಗುಳುಗುಳಿಸಿದವು.

ಗೋವಿಂದ ವೈದ್ಯನ **ಕಂಠೀರವ ನರಸರಾಜ ವಿಜಯ**ದಲ್ಲಿಯೂ ಕೋಟೆಯ ವರ್ಣನೆಯು ಇತರರ ವರ್ಣನೆಗಿಂತಲೂ ಮಿಗಿಲಾಗಿದೆ.

*ಅಷ್ಟದಿಗ್ವಳರು ತಮ್ಮಯ ಪಟ್ಟಣಗಳಿ*

*ಗಟ್ಟುಳಿಯಾಗೆ ರಕ್ಕಸರ*

*ನೆಟ್ಟನೆ ನಿಲುವ ತಾಣಗಳೆನೆ ಕೊತ್ತಳ*

*ಕಟ್ಟಿಸಕಮೊಳೊಪ್ಪಿದುವು*

(**ಕಂಠೀರವ ನರಸರಾಜ ವಿಜಯ** ೨-೬೧)

*ಸಗ್ಗದ ಸುರರೆಡೆಯಾಡಿದ ಶ್ರಮಗಳ*

*ತಗ್ಗಿಸಿಕೊಳ್ಳೆವೆಂದೆನುತ*

*ಹಿಗ್ಗಿ ಮಾಡಿದ ಪದವೆನೆ ಮುಗಿಲಟ್ಟಣೆ*

*ಯುಗ್ಗಡಿಸುವುವಂಬರವ*

(**ಕಂಠೀರವ ನರಸರಾಜ ವಿಜಯ** ೨-೬೨)

*ಮಲೆತೀ ಪುರಕ್ಕೆತಹ ರಿಪುನೃಪ ಪಶು*

*ಕುಲ ಸಮೂಹವನಗಿದುಗುಳ್ದ*

*ಸಲೆ ಶಾರ್ದೂಲವದನವೆನೆ ಹುಲಿಮುಖ*

*ಬಲು ಭಯಾಂಕುರವ ಬೀರುವುವು*

(ಕಂಠೀರವ ನರಸರಾಜ ವಿಜಯ *೨-೬೩*)

*ಮುಗಿಲ ಮುಟ್ಟುವ ಕೋಟೆಯ ತೆನೆಯೆಡೆಯೆಡೆ*

*ಹೊಗರೆದ್ದ ದಸಿ ಮೊನೆಶೂಲ*

*ಝುಗಝುಗಿಸುವ ಹೇರಿಟ್ಟಿ ಮರುಳುಗೈಗ*

*ಉಗುಳುತಿರ್ದುವು ಕೆಂಗಿಡಿಗಳ*

(ಕಂಠೀರವ ನರಸರಾಜ ವಿಜಯ *೧೧-೧೩೧*)

ಅಂದರೆ, ಎಂಟುದಿಕ್ಕುಗಳಲ್ಲಿ ತಮ್ಮ ನಗರವನ್ನು ಕೊತ್ತಳಗಳು ರಾಕ್ಷಸರಂತೆ ದೈತ್ಯವಾಗಿ ನಿಂತಿವೆ. ಸ್ವರ್ಗದಲ್ಲಿ ದೇವತೆಗಳು ದಣಿದಾಗ ಕುಳಿತು ದಣಿವಾರಿಸಿಕೊಳ್ಳವ ಆಸನದಂತೆ ಮುಗಿಲಟ್ಟಣೆಯು ಬಾನೆತ್ತರಕ್ಕೆ ನಿಂತಿದೆ. ಪುರದ ಮೇಲೇರಿಬರುವ ಶತ್ರುರಾಜರನ್ನು ಗುಹೆಯ ಒಳಬರುವ ಪ್ರಾಣಿಗಳನ್ನು ಬಾಗಿಲಿನಲ್ಲಿಯೇ ಕಬಳಿಸುವ ಶಾರ್ದೂಲದಂತೆ ಕೋಟೆಯ ಹೆಬ್ಬಾಗಿಲು ಬಹುಭಯಂಕರವಾಗಿದೆ. ಮುಗಿಲನ್ನು ಮುಟ್ಟುವಂತಿರುವ ಕೋಟೆಯ ತೆನೆಗಳು ಮೊನಚಾದ ಶೂಲದಂತೆ ಮೇಲೆದ್ದು, ಪಿಶಾಚಿಗಳಂತೆ ಕೆಂಡಗಳನ್ನುಗುಳುತ್ತಾ ಝುಗಮಗಿಸುತ್ತಿವೆ. ಇದರಿಂದ ಹದಿನೇಳನೆಯ ಶತಮಾನದ ಕೋಟೆಗಳು ಹೇಗಿದ್ದವೆಂಬುದನ್ನು ಅರ್ಥ ಮಾಡಿಕೊಳ್ಳಬಹುದು.

ಶಾಸನಗಳಲ್ಲಿಯೂ ಕೋಟೆಗಳ ವಿಚಾರಗಳು ಅಲ್ಲಲ್ಲಿ ಅಭಿವ್ಯಕ್ತವಾಗಿವೆ. ಅಲ್ಲದೆ ಕೆಲವು ಶಾಸನ ಶಿಲ್ಪಗಳಲ್ಲಿ ಕೂಡ ಕೋಟೆಯ ಆಕ್ರಮಣದ ದೃಶ್ಯಗಳು ಕಂಡುಬರುತ್ತವೆ. ಬಾದಾಮಿ ಚಾಲುಕ್ಯರ ಒಂದನೇ ಪುಲಿಕೇಶಿಯು ಬಾದಾಮಿಯ ಬೆಟ್ಟದ ಮೇಲೆ ಕ್ರಿ.ಶ. ೫೪೩ ರಲ್ಲಿ ಅಜೇಯವಾದ ಕೋಟೆಯನ್ನು ಕಟ್ಟಿಸಿದ ಬಗೆಗೆ ಅಲ್ಲಿನ ಶಾಸನವೊಂದು ತಿಳಿಸುತ್ತದೆ. ಹೊಯ್ಸಳ ವಿಷ್ಣುವರ್ಧನನು ಹಾನುಗಲ್ಲು ಕೋಟೆಯನ್ನು ವಶಪಡಿಸಿಕೊಳ್ಳಲು ಮಾಡಿದ ಯುದ್ಧವು ಹಲವು ಶಾಸನಗಳಲ್ಲಿ ವರ್ಣಿತವಾಗಿದೆ. ಅಲ್ಲಿ ನಡೆದ ಕೋಟೆಗಾಳೆಗವು ಬಹು ಭಯಂಕರವಾಗಿರಬೇಕು. ಆ ಯುದ್ಧದಲ್ಲಿ ರಕ್ಕಸಮೊನೆಯಾಳ್ವದೇವ ಎಂಬಾತನು ಆನೆ ಕುದುರೆಗಳ ಮಧ್ಯೆ ನುಗ್ಗಿ ಯುದ್ಧ ಮಾಡುತ್ತಾ, ಕೈಯಲ್ಲಿದ್ದ ಬಾಣಗಳು ತೀರಿಹೋಗಲು ದೇವಣ ಎಂಬುವವನನ್ನು ಕೇಳಿ ಅವನ ಬತ್ತಳಿಕೆಯನ್ನು ತೆಗೆದುಕೊಂಡು ಹೋರಾಡಿ ಮಡಿದ ವಿಷಯವನ್ನು ಚಿದಾನಂದಮೂರ್ತಿ ಅವರು **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ** (೨೦೦೨(೧೯೬೬): ೩೨೨) ಕೃತಿಯಲ್ಲಿ ಪ್ರಾಸ್ತಾಪಿಸಿದ್ದಾರೆ.

ಮತ್ತೊಂದು ಪ್ರಸಂಗದಲ್ಲಿ ಕಾಳಗವುಣ್ಣನ ತಮ್ಮ ಲೆಂಕರಾಯನು ಹಾನುಗಲ್ಲ ಕೋಟೆಯಲ್ಲಿ ಶತ್ರುಪಕ್ಷದವರ ಆನೆ, ಕುದುರೆಗಳನ್ನು ಸಂಹಾರ ಮಾಡುತ್ತಿರುವುದನ್ನು ಹೊಯ್ಸಳ ವಿಷ್ಣುವರ್ಧನ ಆನೆಯನ್ನೇರಿ ನೋಡುತ್ತಿದ್ದನು ಎಂದು ಶ್ರೀಧರ ಅವರು ದಾಖಲಿಸಿದ್ದಾರೆ (೨೦೦೨: ೧೬೨).

೧೨ನೆಯ ಶತಮಾನದಲ್ಲಿ ಉಚ್ಚಂಗಿದುರ್ಗವು ಪ್ರಸಿದ್ಧವಾಗಿದ್ದ ಕೋಟೆಯಾಗಿತ್ತು. ಈ ಕೋಟೆಯನ್ನು ಹೊಯ್ಸಳರ ಬಲ್ಲಾಳನು ವಶಪಡಿಸಿಕೊಂಡನೆಂದು ಶಾಸನಗಳು (ಎ.ಕ ೨, ಶ್ರವಣಬೆಳಗೊಳ-೪೪೪) ಹೇಳುತ್ತವೆ. ಆದ್ದರಿಂದ ಅವನಿಗೆ 'ಉಚ್ಚಂಗಿಕೊಂಡ' ಎಂಬ ಬಿರುದು ಬಂದಿತು. ಶಾಸನವೊಂದರಲ್ಲಿ ಕುರುಗೋಡಿನ ಕೋಟೆಯು ಚೋಳ, ಗೂರ್ಜರ, ಲಾಳ, ಪಾಂಡ್ಯ ಮತ್ತು ತೆಲುಂಗ ರಾಜರಿಗೆ ಅಸಾಧ್ಯವಾಗಿ ಅವರೆಲ್ಲರನ್ನೂ ನಾನಾ ಸಂಕಷ್ಟಗಳಿಗೆ ಸಿಲುಕಿಸಬಲ್ಲದ್ದಾಗಿತ್ತು. ಕುರುಗೋಡಿನ ಕೋಟೆಯು 'ಕಾಳಗವೆಂದರೆ ಪಿಳುಪಟ್ಟು ಹೆಚ್ಚುತ್ತಿದ್ದಿತು' ಎಂದು ಉತ್ಪ್ರೇಕ್ಷಿಸಲಾಗಿದೆ. ಅದು ಎತ್ತರವಾದ ಮೂರು ಸುತ್ತಿನ ಕೋಟೆಯೆಂದು ಇನ್ನೊಂದು ಶಾಸನ ಹೇಳುವುದಾಗಿ ಸಿ.ಯು. ಮಂಜುನಾಥ್ ಅವರು **ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ** ಕೃತಿಯಲ್ಲಿ ತೋರಿಸಿಕೊಟ್ಟಿದ್ದಾರೆ (೨೦೧೨: ೪೨೨).



ಚಿತ್ರದ ಬಲಭಾಗದಲ್ಲಿ ತೆನೆಗಳುಳ್ಳ ಕೋಟೆಯನ್ನು ಶತ್ರುಗಳು ಆಕ್ರಮಣ ನಡೆಸುತ್ತಿರುವ ವೀರಗಲ್ಲು ಶಿಲ್ಪ (ಲಕ್ಷ್ಮೀಶ್ವರ).

(ಚಿತ್ರಕೃಪೆ: ಹಂ.ಗು. ರಾಜೇಶ್)

ತಂಬೂರಿನ ವೀರಗಲ್ಲಿನಲ್ಲಿ ಕಳಚೂರಿಯ ಬಿಜ್ಜಳನು ಆನೆಯ ಮೇಲೆ ಕುಳಿತು ಸ್ವತಃ ಕೋಟೆಕಾಳಗ ಮಾಡುತ್ತಿರುವ ವಿವರವಿದೆ. ಇದೇ ಮನೆತನದ ತ್ರಿಭುವನಮಲ್ಲದೇವನ ಒಂದು ಶಾಸನದಲ್ಲಿ ಗಿಣ್ಣಲಗುಂಡಿಯ ಕೋಟೆಯನ್ನು ಬಮ್ಮರಸ ಮತ್ತು ವೀರರಸರು ಮುತ್ತಿ ಕಾದಿದ ವಿಷಯವಿದೆ. ಒಂದು ಶಾಸನದಲ್ಲಿ ನಿಡುಗಲ್ಲು ಕೋಟೆಯನ್ನು "ದುರ್ಘಟವೀ ಕರ್ನಾಟಕ ದುರ್ಗಗಳಿಗಧಿಕವೆನಿಪ ನಿಡುಗಲ್ಲೆಂಬೀದುರ್ಗ" ಎಂದು ವರ್ಣಿಸಿದೆ.

ಕೋಟೆಯ ಚಿತ್ರಣವನ್ನು ಶಾಸನ ಶಿಲ್ಪಗಳು ಚಿತ್ರಿಸಿರುವುದುಂಟು. ಶಿವಮೊಗ್ಗದ ಕೋಟೆ ಪೊಲೀಸ್ ಠಾಣೆಯ ಆವರಣದಲ್ಲಿರುವ ವೀರಗಲ್ಲು ಮತ್ತು ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆಯಲ್ಲಿನ ವೀರಗಲ್ಲೊಂದರಲ್ಲಿ ಕೂಡ ಕೋಟೆಯ ಚಿತ್ರಣವಿದೆ. ಇವಲ್ಲದೆ ಲಕ್ಷ್ಮೇಶ್ವರ, ಬಳ್ಳಿಗಾವಿ, ಅಬ್ಬಲೂರುಗಳ ವೀರಗಲ್ಲುಗಳಲ್ಲಿಯೂ ಕೋಟೆಗಳ ಚಿತ್ರಣವಿದೆ (ಪರಮಶಿವಮೂರ್ತಿ ೧೯೯೯: ೧೯೪-೨೦೦). ಹೀಗೆ ಕೋಟೆಗಳು ಶಾಸನ ಮತ್ತು ಸಾಹಿತ್ಯಗಳಲ್ಲಿ ಹಾಸುಹೊಕ್ಕಾಗಿರುವುದನ್ನು ಗಮನಿಸಿದರೆ ಕೋಟೆಗಳಿಗಿದ್ದ ಮಹತ್ವವು ಅರ್ಥವಾಗುತ್ತದೆ. ಕುರುಗೋಡಿನ ಕೋಟೆಯು ಕಾಳಗವೆಂದರೆ ಏಳುಪಟ್ಟು ಹೆಚ್ಚುತ್ತಿದ್ದಿತು ಎಂಬ ಮಾತು ಉತ್ಪ್ರೇಕ್ಷೆಯಾದರೂ ಜನರು ತಮ್ಮ ಕೋಟೆಯ ಮೇಲೆ ಎಂತಹ ಆಕ್ರಮಣಗಳು ನಡೆದರೂ ಕೋಟೆಯು ತಮ್ಮನ್ನು ರಕ್ಷಿಸುತ್ತದೆ ಎಂಬ ನಂಬಿಕೆಯನ್ನು ಅದು ತೋರ್ಪಡಿಸುತ್ತದೆ.

### ೨.೩. ಕರ್ನಾಟಕದಲ್ಲಿನ ಪ್ರಾಚೀನ ಕೋಟೆಗಳು

ಟಿಪ್ಪು ಸುಲ್ತಾನನಿಗೂ ಪೂರ್ವದ ಕೋಟೆಗಳಲ್ಲಿ ಆಗುತ್ತಾ ಬಂದಿರುವ ಬದಲಾವಣೆ, ವಿಕಾಸ ಮತ್ತು ಮಾರ್ಪಾಟುಗಳು ಟಿಪ್ಪುವಿನ ಕಾಲಘಟ್ಟದ ಕೋಟೆಗಳ ಮೇಲೆ ಪ್ರಭಾವಬೀರಿದೆ ಮತ್ತು ಪರಿವರ್ತನೆಗೆ ಹೇಗೆ ಕಾರಣವಾಗಿದೆ ಎಂಬುದನ್ನು ಗುರುತಿಸಬಹುದಾಗಿದೆ. ಕೋಟೆಗಳ ವಿಕಾಸ ಮತ್ತು ಪರಿವರ್ತನೆಗೆ ಹಲವು ಕಾರಣಗಳಿವೆ. ಭೌಗೋಳಿಕ ಸನ್ನಿವೇಶ, ವಿವಿಧ ಕಾಲಘಟ್ಟದಲ್ಲಿ ನಡೆದಿರುವ ಆಕ್ರಮಣ ಶೈಲಿಗಳು, ಕೋಟೆಗಳ ಆಕ್ರಮಣದ ಸಂದರ್ಭಗಳಲ್ಲಿ ಬಳಕೆಯಾಗಿರುವ ಶಸ್ತ್ರಾಸ್ತ್ರಗಳು, ಸೈನಿಕ ಶಕ್ತಿ ಇನ್ನೂ ಮೊದಲಾದ ಅಂಶಗಳು ಕೋಟೆಗಳ ರಚನೆ ಮತ್ತು ವಿನ್ಯಾಸದ ಮೇಲೆ ಪ್ರಭಾವ ಬೀರಿವೆ.

ಕರ್ನಾಟಕದಲ್ಲಿ ಗುರುತಿಸಲಾಗಿರುವ ಪ್ರಾಚೀನ ಪ್ರಾಕಾರದ ರಚನೆಯು ಗುಲಬರ್ಗ ಜಿಲ್ಲೆಯ ಬೂದಿಹಾಳದಲ್ಲಿ ಗುರುತಿಸಲಾಗಿದೆ. ೧೯೯೫ರ ಸಂದರ್ಭದಲ್ಲಿ ಇಲ್ಲಿ ಪೂನಾದ ಡೆಖನ್ ಕಾಲೇಜಿನ ಪ್ರಾಧ್ಯಾಪಕರಾದ ಕೆ. ಪದ್ದಯ್ಯ ಅವರು ಉತ್ಖನನವನ್ನು ನಡೆಸಿದರು.

ನವಶಿಲಾಯುಗಕ್ಕೆ ಸೇರಿದ ಈ ವಸತಿ ನೆಲೆಯಲ್ಲಿ ಕೊಟ್ಟಿಗೆಯ ಆವರಣವೊಂದು ಕಂಡು ಬಂದಿದೆ. ತೆರೆದ ಬಯಲಿನಲ್ಲಿ ಜಾನುವಾರುಗಳನ್ನು ಕೂಡಿಡಲಾಗುತ್ತಿದ್ದು, ಅವುಗಳ ರಕ್ಷಣೆಗೆಂದು ಆ ಸ್ಥಳದ ಸುತ್ತಲೂ ಮರಳುಗಲ್ಲಿನ ದಿಂಡುಗಳಿಂದ ಕಟ್ಟೆ ಕಟ್ಟಿ ಅದನ್ನು ದಪ್ಪ ಮುಳ್ಳಿನ ಗಿಡಗಳಿಂದ ಮುಚ್ಚಿದುದು ಅವಶೇಷಗಳಿಂದ ತಿಳಿದು ಬಂದಿದೆ. ಈ ಮರಳುಗಲ್ಲಿನ ಕಟ್ಟೆ ಅಥವಾ ಪ್ರಾಕಾರವು ೨ – ೨.೫ ಮೀ. ಅಗಲ ಮತ್ತು ೫೦ – ೬೫ ಸೆಂ.ಮೀ. ಎತ್ತರವಿದೆ (ಪದ್ದಯ್ಯ, ೨೦೦೨: ೯೪). ಈವರೆಗೆ ದೊರೆತಿರುವ ಪ್ರಾಚೀನ ರಕ್ಷಣಾ ಗೋಡೆ ಇದಾಗಿದೆ ಎಂದು ಎಸ್.ಕೆ. ಅರುಣಿ ಅವರು ಅಭಿಪ್ರಾಯಪಟ್ಟಿದ್ದಾರೆ (೨೦೦೯: ೨೮೫).

ಕರ್ನಾಟಕದಲ್ಲಿ ಕೋಟೆಯ ಪ್ರಪ್ರಥಮ ಲಿಖಿತ ಉಲ್ಲೇಖ ಅಶೋಕನ ಬ್ರಹ್ಮಗಿರಿ ಶಾಸನದಿಂದ ದೊರೆಯುತ್ತದೆ. ಈ ಶಾಸನದಲ್ಲಿ ಬರುವ 'ಇಸಿಲ' ಎಂಬ ಪದವು ಕೋಟೆಯಿಂದಾವೃತ್ತವಾದ ನಗರ ಎಂಬ ಅರ್ಥವನ್ನು ಹೊಂದಿದೆ. 'ಇಸಿಲ' ಒಂದು ಸ್ಥಳದ ಹೆಸರಾಗಿ ಉಲ್ಲೇಖವಾಗಿದ್ದು, ಇದು ಆಡಳಿತ ಕೇಂದ್ರವಾಗಿದ್ದರಿಂದ ಇದರ ಸುತ್ತ ರಕ್ಷಣಾ ಗೋಡೆ ಇದ್ದಿರಬೇಕು ಎಂದು ಡಿ.ಎಲ್. ನರಸಿಂಹಾಚಾರ್ ಹೇಳಿದ್ದಾರೆ.೪ ಪ್ಲಿನಿಯು ದಾಖಲಿಸಿರುವಂತೆ ಶಾತವಾಹನ ಮನೆತನದ ೧ನೆಯ ಶಾತಕರ್ಣಿಯ ಕಾಲದಲ್ಲಿ ೩೦ ನಗರಗಳು ಕೋಟೆಗಳಿಂದ ಆವೃತ್ತವಾಗಿದ್ದವೆಂದು ತಿಳಿದುಬರುತ್ತದೆ (ಕುಲ್ಕೆ, ೨೦೦೪(೧೯೮೬): ೧೦೨). ಪ್ಲಿನಿಯ ಅಭಿಪ್ರಾಯವನ್ನು ಪುಷ್ಟೀಕರಿಸುವಂತೆ ಇತಿಹಾಸ ಆರಂಭಕಾಲಕ್ಕೆ ಅಂದರೆ ಶಾತವಾಹನರ ಕಾಲಘಟ್ಟಕ್ಕೆ ಸೇರಿದ ಕೋಟೆಯ ಅವಶೇಷಗಳು ಗುಲಬರ್ಗ ಜಿಲ್ಲೆಯ ಸನ್ನತಿ ಮತ್ತು ಉತ್ತರ ಕನ್ನಡ ಜಿಲ್ಲೆಯ ಬನವಾಸಿಗಳಲ್ಲಿ ದೊರೆತಿವೆ.




ಭೀಮಾ ನದಿಯ ದಂಡೆಯಲ್ಲಿರುವ ಸನ್ನತಿ ಕೋಟೆಯ ನಕ್ಷೆ (ಮೂಲನಕ್ಷೆ: ಎಸ್.ಕೆ. ಜೋಶಿ ೧೯೮೫ ಚಿತ್ರ: ೧೬)

ಭೀಮಾ ನದಿಯ ದಂಡೆಯ ಮೇಲಿರುವ ಸನ್ನತಿಯಲ್ಲಿ ನದಿಗೆ ಹೊಂದಿಕೊಂಡಂತೆ ನಿರ್ಮಿಸಲಾದ ಎರಡು ಸುತ್ತಿನ ಕೋಟೆಯನ್ನು ಇಟ್ಟಿಗೆಯಿಂದ ನಿರ್ಮಿಸಲಾಗಿದೆ. ಈ ಕೋಟೆಯ ಒಳಾಂಗಣದಲ್ಲಿ ಜನವಸತಿ ಇತ್ತು. ಒಳಸುತ್ತಿನ ಕೋಟೆಯನ್ನು 'ರಣಮಂಡಲ' ಎನ್ನುತ್ತಾರೆ.[೨] ಸನ್ನತಿಯ ಕೋಟೆಯನ್ನು ಸುಟ್ಟ ಇಟ್ಟಿಗೆಗಳಿಂದ ನಿರ್ಮಿಸಲಾಗಿದೆ. ಗೋಡೆಯ ಎರಡೂ ಬದಿಗಳಲ್ಲಿ ಜೇಡಿಮಣ್ಣಿನ ಇಳಿಜಾರು ಹಾದಿಯನ್ನು ನಿರ್ಮಿಸಿದ್ದರು ಕ್ರಿ.ಶ ಎರಡನೇ ಶತಮಾನದಲ್ಲಿ ಗೌತಮಿಪುತ್ರ ಶಾತಕರ್ಣಿಯ ಮಗನಾದ ವಾಸಿಷ್ಠಿಪುತ್ರ ಪುಳುಮಾವಿಯು ಪ್ರತಿಷ್ಠಾನಪುರ(ಪೈಠಾಣ)ದಿಂದ ಆಳುತ್ತಿದ್ದನು. ಬಹುಶಃ ಶಾತವಾಹನರು ತಮ್ಮ ರಾಜಧಾನಿ ಮತ್ತು ಮುಖ್ಯ ನಗರಗಳ ಸುತ್ತ ಗೋಡೆಯನ್ನು ಕಟ್ಟಿದ್ದು ಮೊದಲ ಪ್ರಯತ್ನವೆಂದು ಎಸ್.ಕೆ. ಜೋಶಿ ಅವರು ಅಭಿಪ್ರಾಯ ಪಟ್ಟಿದ್ದಾರೆ.

ಕದಂಬರ ರಾಜಧಾನಿಯಾದ ಬನವಾಸಿಯಲ್ಲಿಯೂ ಪುರಾತನ ಕೋಟೆಯ ಅವಶೇಷಗಳನ್ನು ಶೋಧಿಸಲಾಗಿದೆ. ವರದಾ ನದಿಯ ದಂಡೆಯ ಮೇಲೆ ನಿರ್ಮಿಸಿದ ಬನವಾಸಿ ಕೋಟೆಯನ್ನು ಇಟ್ಟಿಗೆ ಹಾಗೂ ಜಂಬಿಟ್ಟಿಗೆಗಳಿಂದ ನಿರ್ಮಿಸಲಾಗಿದೆ. ವಿಶಾಲವಾದ ಊರಿನ ಸುತ್ತ ಕೋಟೆಯನ್ನು ನಿರ್ಮಿಸಲಾಗಿತ್ತು. ಈ ಕೋಟೆಗೆ ಎರಡು ಮುಖ್ಯ ದ್ವಾರಗಳು ಮತ್ತು ಒಂದು ದಿಡ್ಡಿ (ಕಿರಿದಾದ) ಬಾಗಿಲು ಇತ್ತು. ಬನವಾಸಿಯ ಕೋಟೆಯು ಕಂದಕವನ್ನು ಕೂಡ ಒಳಗೊಂಡಿತ್ತು (ಜೋಶಿ ೧೯೮೫: ೨೨, ೪೧–೪೯; ಸುಂದರ, ೨೦೦೯: ೨೮೫).




ಬನವಾಸಿ ಕೋಟೆಯ ತಳ ನಕ್ಷೆ (ಮೂಲನಕ್ಷೆ: ಎಸ್.ಕೆ. ಜೋಶಿ ೧೯೮೫ ಚಿತ್ರ–೭)

ಬಾಗಲಕೋಟೆ ಜಿಲ್ಲೆಯ ಬಾದಾಮಿ ಕೋಟೆಯು ಕರ್ನಾಟಕದ ಮೊದಲ ಶಾಸನೋಕ್ತ ಕೋಟೆಯಾಗಿದೆ. ಈ ಶಾಸನದಲ್ಲಿ (ಪಾಡಿಗಾರ್, ೨೦೧೦: ೧):

*ಸ್ವಸ್ತಿ ಶಕ ವರ್ಷೇತು ಚತುಃ ಶತೇಷು*

*ಪಂಚಶಷ್ಠಿಯುತೇಷು*

*ಅಶ್ವಮೇದಾಧಿ ಯಜ್ಞಾನಾಂ ಯಜ್ಞರ್ಶ್ರತ*

*ವಿಧಾನತಃ*

*ಹಿರಣ್ಯ ಗರ್ಭ ಸಂಭೂಶ್ವಾಲಿಕೋ*

*ವಲ್ಲಭೇಶ್ವರಾಃ*

*ಧರಾಧರೇಂದ್ರ ವಾತಾಪಿಮಜೇಯಂ ಭೂತಯೇ*

*ಭುವಃ*

*ಅಧಸ್ವಾತು ಪರಿಸ್ತಾಚ್ಚ ದುರ್ಗಮೇತದ*

*ಚೀಕರತ್*

ಬಾದಾಮಿಯ ಉತ್ತರ ಕೋಟೆಯ ತಟ್ಟಿನ ಮೇಲಿರುವ ಕ್ರಿ.ಶ. ೫೪೩ರ ಈ ಶಾಸನವು ಹೇಳುವಂತೆ ಒಂದನೆಯ ಪುಲಿಕೇಶಿಯು ವಾತಾಪಿಯ ಬೆಟ್ಟದ ಮೇಲೆ ಧಾಳಿಮಾಡಿ ಜಯಿಸಲಸಾಧ್ಯವಾದ ಕೋಟೆಯನ್ನು ಭೂಮಿಯ ಮೇಲೆ ನಿರ್ಮಿಸಿದನು. ಬಾದಾಮಿಯ ಕೋಟೆಯು ಬೆಟ್ಟದ ಮೇಲ್ಭೈನ ವಿಶಾಲ ಸಮತಟ್ಟಾದ ಪ್ರದೇಶದಲ್ಲಿ ನಿರ್ಮಿಸಲ್ಪಟ್ಟಿದೆ. ಕೋಟೆಯು ನಗರದಿಂದ ಪ್ರತ್ಯೇಕವಾಗಿ ಇರುವುದನ್ನು ಗುರುತಿಸಬಹುದು. ಮುಂದೆ ರಾಷ್ಟ್ರಕೂಟ, ವಿಜಯನಗರದರಸರು ಮತ್ತು ಹೈದರಾಲಿ – ಟಿಪ್ಪು ಸುಲ್ತಾನರ ಕಾಲಗಳಲ್ಲಿ ಈ ಕೋಟೆಯು ಹಲವು ಹೊಸ ಮಾರ್ಪಾಡುಗಳನ್ನು ಹೊಂದಿದೆ. ಐಹೊಳೆಯಲ್ಲಿ ಅರ್ಧವೃತ್ತಾಕಾರದ ಕೋಟೆ ಇದ್ದ ಬಗ್ಗೆ ಅಳಿದುಳಿದ ಅವಶೇಷಗಳು ಮಾಹಿತಿ ನೀಡುತ್ತವೆ ಮತ್ತು ಆಯತಾಕಾರದ ಕೊತ್ತಳಗಳು ಇದ್ದ ಬಗೆಗೆ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ೬ನೆಯ ಶತಮಾನದ ಯುದ್ಧಗಳಲ್ಲಿ ತೀಕ್ಷ್ಣವಾದ ಆಯುಧಗಳ ಬಳಕೆ ಪ್ರಾರಂಭವಾಯಿತು. ವಿನಾಶಕಾರಿ ಆಯುಧಗಳ ಬಳಕೆ ಹಾಗೂ ಪ್ರತಿ ತಂತ್ರಗಾರಿಕೆಗೆ ಅನುಕೂಲವಾಗುವುದಕ್ಕೆ ಕೋಟೆಗಳ ನಿರ್ಮಾಣದಲ್ಲಿ ಕೊತ್ತಳಗಳ ಅಳವಡಿಕೆ ಪ್ರಾರಂಭವಾಯಿತು. ೬ನೇ ಶತಮಾನದಿಂದ ರಚಿತವಾದ ಕೋಟೆಗಳಲ್ಲಿ ಚೌಕಾಕಾರದ ಕೊತ್ತಳ ಹಾಗೂ ಭದ್ರವಾದ ದ್ವಾರಗಳ ನಿರ್ಮಾಣ ಸಾಮಾನ್ಯವಾಗಿದೆ. ಆದರೆ ಕೈಪಿಡಿ ಗೋಡೆಗಳು ಇಲ್ಲದಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ (ಜೋಶಿ ೧೯೮೫: ೨೪, ೫೩–೬೬; ಡಿಲೋಪ್ ೨೦೧೭: ೫೧–೫೯).




ನಾಲ್ಕು ಹಂತಗಳಲ್ಲಿ ನಿರ್ಮಾಣಗೊಂಡ ಬಾದಾಮಿ ಕೋಟೆಯ ನಕ್ಷೆ
(ಮೂಲನಕ್ಷೆ: ಡಿಲೋಷ್ ೨೦೦೭: ೫೪)

ಚಾಲುಕ್ಯರ ನಂತರ ಪ್ರವರ್ಧಮಾನಕ್ಕೆ ಬಂದವರು ರಾಷ್ಟ್ರಕೂಟರು. ಉತ್ತರ ಭಾರತದ ದಂಡಯಾತ್ರೆ ಕೈಕೊಂಡು ಬೃಹತ್ ಸಾಮ್ರಾಜ್ಯ ಸ್ಥಾಪಿಸಿದ್ದ ರಾಷ್ಟ್ರಕೂಟರು ತಮ್ಮ ರಾಜ್ಯದಲ್ಲಿ ಹಲವು ಕೋಟೆಗಳನ್ನು ಕಟ್ಟಿದ್ದರು. ರಾಷ್ಟ್ರಕೂಟರ ರಾಜಧಾನಿಯಾಗಿದ್ದ ಕಲಬುರ್ಗಿ ಜಿಲ್ಲೆಯ ಮಳಖೇಡದಲ್ಲಿ ಕಾಗಿಣಾ ನದಿ ದಂಡೆಯ ಮೇಲೆ ಕೋಟೆಯನ್ನು ನಿರ್ಮಿಸಲಾಗಿದೆ. ಕೋಟೆಯ ಇನ್ನೊಂದು ಭಾಗದಲ್ಲಿ ಒಂದು ಚಿಕ್ಕ ಹಳ್ಳ ಹರಿಯುವುದು. ಈ ನೈಸರ್ಗಿಕ ರಕ್ಷಣೆಯಲ್ಲಿ ನಿರ್ಮಿಸಲಾದ ಮಳಖೇಡದ ಕೋಟೆಯು ವರ್ತುಲಾಕಾರದಲ್ಲಿದೆ. ರಾಜಧಾನಿಯ ಕೋಟೆಯನ್ನು ವಿಸ್ತರಿಸಿ, ಸುಂದರಗೊಳಿಸಿ ಆಧುನೀಕರಿಸಿದ ಕೀರ್ತಿ ಅಮೋಘವರ್ಷ ನೃಪತುಂಗನಿಗೆ ಸಲ್ಲುತ್ತದೆ. ಕೋಟೆಯಲ್ಲಿರುವ ಎತ್ತರವಾದ ಬತೇರಿ 'ಉಪ್ಲಿ-ಬುರ್ಜ್'. ಮಳಖೇಡ ಕೋಟೆಯಲ್ಲಿ ಚೌಕಾಕಾರದ ಕೊತ್ತಳಗಳು ಮತ್ತು ವೃತ್ತಾಕಾರದ ಕೊತ್ತಳಗಳು ಇವೆ. ಚೌಕಾಕಾರದ ಕೊತ್ತಳಗಳು ಪ್ರಾಚೀನವಾದವುಗಳಾದರೆ, ವೃತ್ತಾಕಾರದ ಕೊತ್ತಳಗಳು ಬಹಮನಿ-ಆದಿಲ್‌ಶಾಹಿಗಳ ಕಾಲದಲ್ಲಿ

ಪುನರ್ನಿರ್ಮಿಸಿರುವುದಾಗಿ ವಿದ್ವಾಂಸರು ಗುರುತಿಸುತ್ತಾರೆ (ಜೋಶಿ ೧೯೮೫: ೨೪. ೬೯-೭೫; ಅರುಣಿ ೨೦೦೯: ೨೮೫).

ದಕ್ಷಿಣ ಕರ್ನಾಟಕದಲ್ಲಿ ಸುಮಾರು ಆರುವರೇ ಶತಮಾನಗಳ ಕಾಲ ಆಳಿದ ಗಂಗರು ತಮ್ಮ ರಾಜ್ಯದ ರಕ್ಷಣೆಗಾಗಿ ಆಯಕಟ್ಟಿನ ಸ್ಥಳಗಳಲ್ಲಿ ಕೋಟೆಗಳನ್ನು ನಿರ್ಮಿಸಿದ್ದರು. ಬೆಂಗಳೂರು ಸಮೀಪದ ಬೇಗೂರು ಮತ್ತು ತಲಕಾಡುಗಳಲ್ಲಿ ಕೋಟೆಯ ಅವಶೇಷಗಳು ದೊರೆತಿವೆ. ಗಂಗರ ಕಾಲದ್ದೆಂದು ಗುರುತಿಸಲ್ಪಡುವ ಬೇಗೂರಿನ ಕೋಟೆಯು ವೃತ್ತಾಕಾರದಲ್ಲಿದೆ. ಇದನ್ನು ಮಣ್ಣಿನಿಂದ ನಿರ್ಮಿಸಲಾಗಿರುವ ಈ ಕೋಟೆಯು ನೆಲದುರ್ಗಕ್ಕೆ ಉತ್ತಮ ಉದಾಹರಣೆಯಾಗಿದೆ. ಕೋಟೆಯು ಒಟ್ಟು ಹತ್ತು ಕೊತ್ತಳಗಳನ್ನು ಒಳಗೊಂಡಿದೆ.

ವರದಾ ನದಿಯ ಒಂದು ಉಪನದಿಯ ದಂಡೆಯ ಮೇಲೆ ಹಾನಗಲ್ಲು ಕೋಟೆ ಇದೆ. ಇದು ಎರಡು ಸುತ್ತಿನಿಂದ ರಚಿಸಲ್ಪಟ್ಟಿದೆ. ಪುರಾತನ ಊರಿನ ಸುತ್ತಲೂ ರಚಿಸಿದ ಕೋಟೆಯ ಮಧ್ಯಭಾಗದಲ್ಲಿ ಎತ್ತರದ ಗೋಡೆಗಳಿಂದ ಕಟ್ಟಿದ್ದ ಅರಮನೆ ಅವಶೇಷಗಳಿವೆ. ಇಂದಿನ ಬಸವಕಲ್ಯಾಣದ ಕೋಟೆಯು ಅತ್ಯಂತ ಪ್ರಮುಖವಾದದು. ವರ್ತುಲಾಕಾರದಲ್ಲಿ ನಿರ್ಮಿಸಲಾದ ಬಸವಕಲ್ಯಾಣದ ಕೋಟೆಯು ಮಾನಸೋಲ್ಲಾಸದಲ್ಲಿ ತಿಳಿಸಿರುವ ಕೋಟೆಯ ಲಕ್ಷಣಗಳ ಪ್ರಕಾರ[೬] ಪಾಷಾಣ ದುರ್ಗ ಅಂದರೆ ಕಲ್ಲಿನಕೋಟೆ. ಈ ಕೋಟೆಯನ್ನು ರಕ್ಷಣೆ ಮಾಡಿದ ಎರೆಯಮರಸ ಎಂಬ ಅಧಿಕಾರಿಯ ಬಗೆಗೆ ಕ್ರಿ.ಶ ೧೦೮೦ರ ಶಾಸನವೊಂದು ಮಾಹಿತಿ ನೀಡುತ್ತದೆ. ಮುಂದೆ ಈ ಕೋಟೆಯು ಕಳಚೂರಿಗಳು, ಬಹಮನಿ ಸುಲ್ತಾನರು, ಆದಿಲ್‌ಶಾಹಿಗಳು ಮತ್ತು ಮೊಗಲರ ಆಳ್ವಿಕೆಗೆ ಒಳಪಟ್ಟಿತು. ಈ ಕೋಟೆಯು ಮೂರು ಸುತ್ತುಗಳನ್ನು ಒಳಗೊಂಡಿದೆ. ಮಧ್ಯದ ಕೋಟೆಯು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದರೆ, ಒಳಭಾಗದ ಕೋಟೆಯು ಬಹುಶಃ ಮೊಘಲರ ಕಾಲಕ್ಕೆ ಸೇರುತ್ತದೆ. ಹೊರಗಿನ ಕೋಟೆಯು ಮೊಘಲರ ನಂತರದ ಕಾಲದ್ದಾಗಿದೆ ಎಂದು ತಜ್ಞರು ಅಭಿಪ್ರಾಯಪಡುತ್ತಾರೆ. ಕೋಟೆಯ ಮೂರು ಸುತ್ತಿನ ಗೋಡೆಗಳಲ್ಲಿ ಹಲವು ಕೊತ್ತಳಗಳನ್ನೂ ಅಳವಡಿಸಲಾಗಿದೆ. ಅಲ್ಲದೆ ಕೋಟೆಯ ಸುತ್ತಲೂ ಆಳವಾದ ಕಂದಕವನ್ನೂ ನಿರ್ಮಿಸಲಾಗಿದೆ. ಕೋಟೆಯ ಒಳಗಡೆ ಫಿರಂಗಿ-ತೋಪುಗಳು, ರಾಜ ಮಹಲ್, ನೃತ್ಯ ಮಹಲ್, ಹೈದರ ಮಹಲ್, ಮಸೀದಿ, ಮದ್ದಿನ ಮನೆಗಳು ಇವೆ. ಅಲ್ಲಿಯ ಮಸೀದಿಯ ಮೇಲಿನ ಶಾಸನದಿಂದ ೧೭ನೇ ಶತಮಾನದಲ್ಲಿ ಕೋಟೆಯ ಮೂಲ ಸ್ವರೂಪದಲ್ಲಿ ಸಮಗ್ರ ಬದಲಾವಣೆಯಾಗಿರುವ ಸಾಧ್ಯತೆಗಳಿವೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ (ಜೋಶಿ ೧೯೮೫: ೭೯-೮೫; ಷಡಕ್ಷರಯ್ಯ ೧೯೯೪: ೨೭೩-೮೬).



**ಕೋಟೆಯ ಬತೇರಿ ಮತ್ತು ಕಂದಕ, ಬಸವಕಲ್ಯಾಣ**



**ತೆನೆಗಳು ಮತ್ತು ಫಿರಂಗಿ ಕಿಂಡಿಗಳು, ಬಸವಕಲ್ಯಾಣ (ಚಿತ್ರಗಳು: ಹಂ.ಗು. ರಾಜೇಶ್)**

ದೋರಸಮುದ್ರ ಅಥವಾ ಹಳೇಬೀಡು ಹೊಯ್ಸಳರ ರಾಜಧಾನಿಯಾಗಿತ್ತು. ಈ ನಗರದ ಸುತ್ತ ಭದ್ರವಾದ ಕೋಟೆಯನ್ನು ನಿರ್ಮಿಸಲಾಗಿತ್ತು. ಆದರೆ ಕೋಟೆ ಈಗ ಸುಸ್ಥಿರವಾಗಿಲ್ಲ. ಅದರ ಅಳಿದುಳಿದ ಕೋಟೆಗೋಡೆ ಹಾಗೂ ದ್ವಾರಗಳ ಅವಶೇಷಗಳು ಅಲ್ಲಲ್ಲಿ ಕಂಡುಬರುತ್ತವೆ. ಬಹುಶಃ ಕ್ರಿ.ಶ ೧೩೧೦ರಲ್ಲಿ ದಕ್ಷಿಣ ಭಾರತದ ಮೇಲೆ ದಂಡಯಾತ್ರೆ ನಡೆಸಿದ ಮಲ್ಲಿಕಾಫರನ ಧಾಳಿಯ ಸಂದರ್ಭದಲ್ಲಿ ಕೋಟೆಯು ಭಾರಿ

ನಷ್ಟಕ್ಕೀಡಾಗಿರುವಂತೆ ತೋರುತ್ತದೆ. ಈ ಘಟನೆ ನಡೆದ ಕೆಲವೇ ವರ್ಷಗಳಲ್ಲಿ ಹೊಯ್ಸಳ ಮನೆತನ ಕೂಡ ಕಣ್ಮರೆಯಾಯಿತು. ದೋರಸಮುದ್ರ ತನ್ನ ವೈಭವವನ್ನು ಕಳೆದುಕೊಂಡು ಹಳೆಯಬೀಡಾಗಿರುವುದಕ್ಕೆ ಕೋಟೆಯ ಅವಶೇಷಗಳೇ ಸಾಕ್ಷಿ ಎನ್ನಬಹುದು.




ಹಳೆಬೀಡಿನ ಕೋಟೆಯ ತಳನಕ್ಷೆ (ಕೃಪೆ: ಎಂ.ಎ.ಆರ್. ೧೯೩೦, ಪ್ಲೇಟ್–೮)

ರಾಯಚೂರಿನ ಕೋಟೆ ಒಂದು ಗಿರಿದುರ್ಗ, ಬೆಟ್ಟ ಹಾಗೂ ನೆಲಭಾಗವನ್ನು ಬಳಸಿಕೊಂಡು ನಿರ್ಮಿಸಲಾಗಿದೆ. ದೊಡ್ಡ ಗಾತ್ರದ ಕಲ್ಲುಗಳನ್ನು ಬಳಸಿಕೊಂಡು ನಿರ್ಮಿಸಿದ ಈ ಕೋಟೆ ಮೂಲತಃ ವಾರಂಗಲ್ಲಿನ ಕಾಕತೀಯರಿಂದ ನಿರ್ಮಾಣವಾಯಿತು. ಅನಂತರ ಇದನ್ನು ಬಹಮನಿ ಸುಲ್ತಾನರು, ವಿಜಯನಗರದ ಅರಸರು, ಆದಿಲ್‌ಶಾಹಿಗಳು ಮತ್ತು ಹೈದರಾಬಾದಿನ ನಿಜಾಮರು ವಿಸ್ತರಿಸಿದರು. ಬಹಮನಿ, ಆದಿಲ್‌ಶಾಹಿಗಳು ಮತ್ತು ವಿಜಯನಗರದ ಅರಸರು ರಾಯಚೂರು ಕೋಟೆಯನ್ನು ರಚಿಸಿದ ಬಗ್ಗೆ ಶಾಸನಗಳು ದೊರಕಿವೆ. ಕೋಟೆಯ ಪೂರ್ವದ ಕಾಟಿದರ್ವಾಜ ಎನ್ನುವ ದ್ವಾರವನ್ನು ಬಹಮನಿ ಸುಲ್ತಾನರು, ಅದೇ ರೀತಿ ಎತ್ತರವಾದ ದ್ವಾರವುಳ್ಳ ನವರಂಗ ದರ್ವಾಜವನ್ನು

ವಿಜಯನಗರದ ಅರಸರು ನಿರ್ಮಿಸಿರುವುದಾಗಿ ವಿದ್ವಾಂಸರು ಗುರುತಿಸುತ್ತಾರೆ (ಅರುಣಿ ೨೦೦೯: ೨೮೫-೮೬).




ರಾಯಚೂರು ಕೋಟೆಯ ತಳನಕ್ಷೆ (ಕೃಪೆ: ಡಿಲೋಪ್ ೧೯೯೭: ೬೫)

ತುಂಗಭದ್ರಾ ನದಿ ದಂಡೆಯ ಮೇಲಿರುವ ಕಮ್ಮಟದುರ್ಗ ಮತ್ತು ಹೊಸಮಲೆದುರ್ಗ ಕೋಟೆಗಳನ್ನು ೧೪ನೆಯ ಶತಮಾನದ ಆದಿಭಾಗದಲ್ಲಿ ನಿರ್ಮಿಸಲಾಗಿದೆ. ಸುತ್ತಲಿನ ಕಿರಿಯ ಮತ್ತು ಹಿರಿಯ ಬೆಟ್ಟಗಳನ್ನು ಆವರಿಸಿ ನಿರ್ಮಿಸಲಾದ ಈ ಎರಡು ಕೋಟೆಗಳಲ್ಲಿ ಚೌಕಾಕಾರದ ಕೊತ್ತಳಗಳು ಇಕ್ಕಟ್ಟಾದ ದ್ವಾರಗಳು ನಿರ್ಮಿತವಾಗಿವೆ. ವೈರಿಗಳು ಸುಲಭವಾಗಿ ಕೋಟೆಯೊಳಗೆ ಪ್ರವೇಶಿಸದಂತೆ ದ್ವಾರಗಳ ಮುಂದೆ ಅಡ್ಡಲಾಗಿ 'ಐ' ಆಕಾರದಲ್ಲಿ ಗೋಡೆಯನ್ನು ಕಟ್ಟಲಾಗಿದೆ. ಪ್ರವೇಶಿಸುವ ವೈರಿಗಳ ಮೇಲೆ ಕೋಟೆಯ ಮೇಲ್ಭಾಗದಿಂದ ಸೈನಿಕರು ಆಕ್ರಮಣ ನಡೆಸಲು ಈ ರೀತಿ ನಿರ್ಮಿಸಲಾಗಿದೆ. ೧೪ನೆಯ ಶತಮಾನದ ಮೊದಲ ದಶಕದಲ್ಲಿ ಕಂಪಿಲರಾಯ ನಿರ್ಮಿಸಿದ ಕಮ್ಮಟದುರ್ಗ ಕೋಟೆಯ ಮುಂಭಾಗದ ಬಯಲಿನಲ್ಲಿ ಮಧ್ಯಮಗಾತ್ರದ ಗುಂಡುಕಲ್ಲುಗಳನ್ನು ಸಾಲಾಗಿ ಜೋಡಿಸಲಾಗಿದೆ. ಇವುಗಳನ್ನು ಕುದುರೆ ಕಲ್ಲುಗಳೆನ್ನುವರು. ಸಾವಿರಾರು ಸಂಖ್ಯೆಯಲ್ಲಿರುವ ಇವುಗಳು

ವೇಗವಾಗಿ ಬರುವ ವೈರಿಗಳ ಕುದುರೆಗಳಿಗೆ ತೊಂದರೆಯಾಗಲು ಮಾಡಿರುವ ತಂತ್ರವಿದಾಗಿದೆ ಎಂಬುದು ತಜ್ಞರ ಅಭಿಮತ (ಅರುಣಿ ೨೦೦೯: ೨೮೬).

ಕಮ್ಮಟದುರ್ಗದ ಮಾದರಿಯಲ್ಲಿರುವ ವಿಜಯನಗರ ಅಥವಾ ಹಂಪಿಯ ಕೋಟೆ ಮಧ್ಯಯುಗೀನ ಚರಿತ್ರೆಯಲ್ಲಿ ಮಹತ್ವ ಪಡೆದಿದೆ. ಕ್ರಿ.ಶ. ೧೩೩೬ರಲ್ಲಿ ಸ್ಥಾಪಿತವಾದ ವಿಜಯನಗರ ಬಹು ವಿಸ್ತಾರವುಳ್ಳ ಸುಭದ್ರ ಕೋಟೆಯಾಗಿತ್ತು. ನೈಸರ್ಗಿಕವಾದ ಆಯಕಟ್ಟಿನ ಸ್ಥಳವಾದ ತುಂಗಭದ್ರಾನದಿಯ ದಂಡೆಯ ಬೆಟ್ಟಗಳಲ್ಲಿ ನಿರ್ಮಿಸಲಾದ ವಿಜಯನಗರ ಕೋಟೆಯಲ್ಲಿ ಪ್ರಾಚೀನ ಸಾಂಪ್ರದಾಯಿಕ ಕೋಟೆ ನಿರ್ಮಾಣದ ತಂತ್ರಗಾರಿಕೆ ಕಾಣುತ್ತದೆ. ವಿಜಯನಗರದ ಕೋಟೆಯ ಬಗೆಗೆ ವಿದೇಶಿ ಪ್ರವಾಸಿಗರು ಸಾಕಷ್ಟು ವಿವರಗಳನ್ನು ಬಿಟ್ಟುಹೋಗಿದ್ದಾರೆ.

ಪರ್ಷಿಯಾದ ಪ್ರವಾಸಿ ಅಬ್ದುಲ್ ರಜಾಕನು ವಿಜಯನಗರವನ್ನು ಕುರಿತು ಹೀಗೆ ದಾಖಲಿಸಿದ್ದಾನೆ:

> *ಈ ನಗರವನ್ನು ಹೇಗೆ ನಿರ್ಮಿಸಿದ್ದಾರೆಂದರೆ ಏಳು ದುರ್ಗಗಳೂ ಏಳು ಕೋಟೆಗಳೂ ಒಂದನ್ನೊಂದು ಆವರಿಸಿಕೊಂಡಿವೆ. ಒಂದನೆಯ ದುರ್ಗದ ಸುತ್ತ ಮನುಷ್ಯನ ಎತ್ತರದ ಕಲ್ಲು ಕಂಭಗಳನ್ನು ಭೂಮಿಯಲ್ಲಿ ಅರ್ಧ ಹೂತು ಇನ್ನರ್ಧ ಮೇಲೆ ಕಾಣುವಂತೆ ನೆಟ್ಟಿದ್ದಾರೆ. ಇವುಗಳನ್ನು ಒಂದರ ಪಕ್ಕದಲ್ಲಿ ಒಂದನ್ನು ಹೇಗೆ ಹೂತಿದ್ದಾರೆಂದರೆ, ರಾವುತನಾಗಲೀ ಪದಾತಿಯಾಗಲೀ ಧೈರ್ಯವಾಗಿ ಅಥವಾ ಸುಲಭವಾಗಿ ದುರ್ಗದಕಡೆ ಹೋಗುವಂತಿಲ್ಲ. ಈ ಕೋಟೆ ಚಕ್ರಾಕಾರವಾಗಿದೆ. ಇದನ್ನು ಬೆಟ್ಟದ ತುದಿಯ ಮೇಲೆ ಕಲ್ಲು ಮತ್ತು ಗಾರೆಯಿಂದ ಕಟ್ಟಿದ್ದಾರೆ. ಇದರ ಹೆಬ್ಬಾಗಿಲುಗಳು ಬಹು ಬಲವಾಗಿವೆ....*
>
> *ಎರಡನೆಯ ಕೋಟೆ ವಿಶಾಲವಾದ ಜಾಗವನ್ನು ಆಕ್ರಮಿಸಿದೆ. ಇದರಂತೆ ನಾಲ್ಕು, ಐದು ಮತ್ತು ಆರನೆಯ ಕೋಟೆಗಳಿವೆ...*
>
> *ಎಲ್ಲಾ ಕೋಟೆಗಳ ಮಧ್ಯದಲ್ಲಿರುವ ಏಳನೆಯ ಕೋಟೆ ಆಕ್ರಮಿಸಿಕೊಂಡಿರುವ ಜಾಗ ಹೆರಾತ್ ನಗರದ ಮಾರ್ಕೆಟ್ ಜಾಗದ ಹತ್ತರಷ್ಟು ವಿಶಾಲವಾಗಿದೆ. ಇಲ್ಲಿ ರಾಜನು ವಾಸ ಮಾಡುವ ಅರಮನೆಯಿದೆ. ಉತ್ತರದಿಕ್ಕಿನಲ್ಲಿ ಮೊದಲನೆಯ ಕೋಟೆಯ ಹೆಬ್ಬಾಗಿಲಿನಿಂದ ಹಿಡಿದು ದಕ್ಷಿಣದಲ್ಲಿರುವ ಹೆಬ್ಬಾಗಿಲಿಗೆ ಎರಡು ಪರಸಾಂಗುಗಳಷ್ಟು ದೂರವಿದೆ. ಪೂರ್ವ ಪಶ್ಚಿಮಕ್ಕೂ ಅಷ್ಟೇ ದೂರ...*
>
> *ಮೊದಲನೆಯ ಕೋಟೆಗೂ, ಎರಡನೆಯ ಕೋಟೆಗೂ ಮಧ್ಯೆ ಇರುವ ಜಾಗದಲ್ಲಿ ಅಂದರೆ ಮೂರನೆಯ ಕೋಟೆಯವರೆಗೆ ಅಸಂಖ್ಯಾತ ಜನಗಳನ್ನು ಅನೇಕ ಅಂಗಡಿಗಳನ್ನೂ, ಅಂಗಡಿ*

*ಬೀದಿಯನ್ನೂ ನೋಡಬಹುದು. ರಾಜನ ಅರಮನೆಯ ಹೆಬ್ಬಾಗಿಲಿನಲ್ಲಿ ಎದುರುಬದಿರಾಗಿ ನಾಲ್ಕು ಅಂಗಡಿ ಬೀದಿಗಳಿವೆ. ಉತ್ತರದಲ್ಲಿ ರಾಯ್‌ನ ಅರಮನೆಯ ಮಹಾದ್ವಾರವಿದೆ... (ವಿವೇಕ ರೈ ೨೦೦೫: ೧೨-೧೩).*

ಈ ಕೋಟೆಯನ್ನು ತ್ರಿಕೋನಾಕಾರದ ದಪ್ಪ ಕಲ್ಲುಗಳಿಂದ ಕಟ್ಟಲಾಗಿದೆ. ಕೋಟೆಯ ಹೊರಮೈ ಕಲ್ಲನ್ನು ನಯಗೊಳಿಸಿ ಕಲ್ಲುಕಲ್ಲುಗಳ ನಡುವೆ ಎಡೆ ಇಲ್ಲದಂತೆ ಕೂರಿಸಲಾಗಿದೆ. ಅದೇ ರೀತಿ ಒಳಮೈ ಕೋಟೆಯನ್ನು ಕೂಡ ನಿರ್ಮಿಸಲಾಗಿದೆ. ಕೋಟೆಯ ಹೊರಮೈ ಮತ್ತು ಒಳಮೈ ಗೋಡೆಗಳ ಕಲ್ಲುಗಳನ್ನು ಜೋಡಿಸಿಟ್ಟು ನಡುವಿನ ಸಂದುಗಳಿಗೆ ಮಣ್ಣು ಮತ್ತು ಸಣ್ಣಪುಟ್ಟ ಕಲ್ಲುಗಳನ್ನು ಸುರಿದು ನೀರನ್ನು ಹಾಯಿಸಿ ಭದ್ರಪಡಿಸಲಾಗಿದೆ. ಸಾಮಾನ್ಯವಾಗಿ ಕೋಟೆಯ ಒಳಭಾಗವು ಹೊರಭಾಗಕ್ಕಿಂತ ಮೇಲ್ಮಟ್ಟದಲ್ಲಿದ್ದು, ಮಣ್ಣಿನಿಂದ ಆವೃತ್ತವಾಗಿರುತ್ತದೆ. ಆದ್ದರಿಂದ ಹೊರಭಾಗದಿಂದ ಕೋಟೆಯನ್ನು ಸುಲಭವಾಗಿ ಭೇದಿಸಲಾಗದು. ಈ ರೀತಿಯ ಕೋಟೆಯನ್ನು ಕಮಲಾಪುರ ಮಾರ್ಗವಾಗಿ ರಾಣಿಯರ ಸ್ನಾನದಗೃಹಕ್ಕೆ ಹೋಗುವ ಮೊದಲು ಎಡಕ್ಕೆ ಸಿಗುವ ಕೋಟೆ ಗೋಡೆಯನ್ನು ಅವಲೋಕಿಸಬಹುದು.

ವಿಜಯನಗರದ ಕೋಟೆಯು ವಿವಿಧ ದಿಕ್ಕುಗಳಲ್ಲಿ ಮಹಾದ್ವಾರಗಳು ಹಾಗೂ ಹಲವಾರು ದಿಡ್ಡಿ ಬಾಗಿಲುಗಳನ್ನು ಹೊಂದಿದೆ. ಅನೇಕ ಬೆಟ್ಟಗಳನ್ನು ಆವರಿಸಿದ ಈ ಕೋಟೆಯ ನೈಋತ್ಯ ಭಾಗದಲ್ಲಿ ಭವ್ಯವಾದ ಅರಮನೆಗಳು, ಮಹಾನವಮಿ ದಿಬ್ಬದಂತಹ ಹಲವಾರು ಕಟ್ಟಡಗಳನ್ನು ನಿರ್ಮಿಸಲಾಗಿದೆ. ಅರಸರ ಅಥವಾ ಮಂತ್ರಿವರ್ಯರ ಅರಮನೆಗಳು ವಿಶೇಷ ರಕ್ಷಣಾತ್ಮಕ ಕಿರುಗೋಡೆಗಳಿಂದ ಕೂಡಿವೆ. ಕಾವಲಿಗಾಗಿ ನಿರ್ಮಿಸಿದ ಇಲ್ಲಿಯ ಕೆಲವು ಕೊತ್ತಳಗಳಿಗೆ ಬಂಡೆಗಲ್ಲಿನಲ್ಲಿ ಅವುಗಳ ಹೆಸರಿರುವುದು ವಿಶೇಷವಾಗಿದೆ. ದ್ವಾರಗಳ ಪಕ್ಕದಲ್ಲಿ ಆಂಜನೇಯ ಶಿಲ್ಪಗಳು ಅಥವಾ ಆಂಜನೇಯ ಗುಡಿಗಳ ನಿರ್ಮಾಣ ವಿಜಯನಗರದ ಕೋಟೆಯಲ್ಲಿ ಕಾಣುತ್ತೇವೆ (ಅರುಣಿ ೨೦೦೯: ೨೮೬).

ವಿಜಯನಗರದ ಸಮಕಾಲೀನರಾದ ಬಹಮನಿ ಸುಲ್ತಾನರು ಕೂಡ ಪ್ರಾರಂಭದಲ್ಲಿ ಸ್ಥಳೀಯ ಸಾಂಪ್ರದಾಯಿಕ ಕೋಟೆ ವಾಸ್ತುಶಿಲ್ಪದ ಮಾದರಿಯಲ್ಲಿ ತಮ್ಮ ರಾಜಧಾನಿಗಳನ್ನು ಆಯಕಟ್ಟಿನ ಸ್ಥಳಗಳಲ್ಲಿ ನಿರ್ಮಿಸಿದರು. ಬಹಮನಿ ರಾಜಧಾನಿಯಾದ ಕಲಬುರ್ಗಿ ನಗರಕ್ಕೆ ಹೊಂದಿಕೊಂಡಂತೆ ಕೋಟೆ ಇದೆ. ಮೂಲತಃ ಚೌಕಾಕಾರದ ಕೊತ್ತಳಗಳಿದ್ದು ಈ ಕೋಟೆಯನ್ನು ವೃತ್ತಾಯತ ಆಕಾರದಲ್ಲಿ ನಿರ್ಮಿಸಿ ವೃತ್ತಕಾರದ ಕೊತ್ತಳಗಳನ್ನು ಅಳವಡಿಸಿದರು. ಗುಲ್ಬರ್ಗದ ಕೋಟೆ ಎರಡು ಸಮನಾಂತರ ಗೋಡೆಗಳಿಂದ ನಿರ್ಮಿಸಲಾಗಿದ್ದು, ಅನೇಕ ಕೊತ್ತಳಗಳಿಂದ ಕೂಡಿದೆ. ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿ ಎರಡು ಹೆಬ್ಬಾಗಿಲುಗಳಿವೆ. ಕೋಟೆಯ ಒಳಾಂಗಣದಲ್ಲಿ ೧೩೬೭ರಲ್ಲಿ

ನಿರ್ಮಿಸಿದ ದೊಡ್ಡ ಜುಮ್ಮಾ ಮಸೀದಿ ಇದೆ. 'ಬಾಳಹಿಸಾರ' ಎಂದು ಕರೆಯುವ ದೊಡ್ಡ ಬತೇರಿ ಮತ್ತು ಅನೇಕ ಮಳಿಗೆಗಳಿರುವ ಬಜಾರ ಹಾಗೂ ಅರಮನೆ ಅವಶೇಷಗಳಿವೆ. ಕೋಟೆಯ ಪಶ್ಚಿಮದ್ವಾರ ಇನ್ನೂ ಸುಸ್ಥಿತಿಯಲ್ಲಿದ್ದು ಇಲ್ಲಿಯ ಮರದ ಬಾಗಿಲ ಮೇಲೆ ಉದ್ದವಾದ ಶೂಲದಂತಹ ಮೊಳೆಗಳಿವೆ. ವೈರಿಗಳು ಆನೆಗಳ ಮೂಲಕ ಬಾಗಿಲನ್ನು ತಳ್ಳಲು ಪ್ರಯತ್ನಿಸದಂತೆ ಮಾಡಲಾದ ಈ ತಂತ್ರಗಾರಿಕೆ ಗಮನ ಸೆಳೆಯುತ್ತದೆ. ಇದೇ ಮಾದರಿಯ ಬಾಗಿಲನ್ನು ಬೆಂಗಳೂರು ಕೋಟೆಯಲ್ಲಿಯೂ ಕಾಣಬಹುದು. ಈ ರೀತಿಯ ಬಾಗಿಲುಗಳನ್ನು ಭೇದಿಸಲು ಶತ್ರುಗಳು ಪ್ರತಿತಂತ್ರವನ್ನು ರೂಪಿಸುತ್ತಿದ್ದು, ಶೂಲಗಳಿಗೆ ಸತ್ತ ಕುದುರೆಗಳನ್ನು ಸಿಕ್ಕಿಸಿ ಆನೆಗಳಿಂದ ತಳ್ಳುವ ಮೂಲಕ ಬಾಗಿಲನ್ನು ಮುರಿಯಲಾಗುತ್ತಿತ್ತೆಂದು ಹೇಳಲಾಗುತ್ತದೆ.

ಬಹಮನಿ ಸುಲ್ತಾನ ಫಿರೋಜ್ ಷಾನಿಂದ ನಿರ್ಮಿಸಲಾದ ಭೀಮಾನದಿ ದಂಡೆಯ ಮೇಲಿರುವ ಫಿರೋಜಾಬಾದ್ ಕೋಟೆ ಮಧ್ಯಕಾಲೀನ ಕೋಟೆ ರಚನೆಯಲ್ಲಿ ಮಹತ್ವದ ಹಂತವನ್ನು ಸೂಚಿಸುತ್ತದೆ. ಸಾಂಪ್ರದಾಯಿಕ ಚೌಕಾಕಾರದ ಕೊತ್ತಳಗಳಿಗೆ ಬದಲಾಗಿ ಅಷ್ಟಕೋನಾಕಾರದ ಕೊತ್ತಳಗಳ ನಿರ್ಮಾಣವನ್ನು ಇಲ್ಲಿ ಕಾಣಬಹುದು. ನಂತರದ ಕಾಲಘಟ್ಟಕ್ಕೆ ಸೇರಿದ ಬೆಂಗಳೂರಿನ ಕೋಟೆಯ ಪಶ್ಚಿಮ ದಿಕ್ಕಿನಲ್ಲಿಯೂ ಕೂಡ ಅಷ್ಟಕೋನಾಕಾರದ ಕೊತ್ತಳವೊಂದಿರುವುದನ್ನು ಸ್ಮರಿಸಬಹುದು. ಫಿರೋಜಾಬಾದ್ ಕೋಟೆ ಒಳಾಂಗಣದಲ್ಲಿ ಅರಮನೆಗಳ ಕಟ್ಟಡಗಳು, ಹಮಾಮ್, ಜುಮ್ಮಾ ಮಸೀದಿ, ಮಳಿಗೆಗಳಿರುವ ಬಜಾರ ಇತ್ಯಾದಿಗಳಿವೆ.

ಬಹಮನಿ ಸುಲ್ತಾನರ ಎರಡನೆಯ ರಾಜಧಾನಿಯಾದ ಬೀದರ್ ಕೋಟೆಯು ಭಾರತೀಯ ಕೋಟೆಗಳಲ್ಲಿಯೇ ವಿಶಿಷ್ಟವಾದ ಕೋಟೆಯಾಗಿದೆ. ಇದು ಭಾರತದಲ್ಲಿಯೇ ಮೂರು ಕಂದಕಗಳಿಂದ ಕೂಡಿದ ಏಕೈಕ ಕೋಟೆಯಾಗಿದೆ. ಜಗತ್ತಿನಲ್ಲಿ ರೋಮ್ ನಗರವನ್ನು ಹೊರತು ಪಡಿಸಿದರೆ ಮೂರು ಕಂದಕಗಳು ಇರುವ ಮತ್ತೊಂದು ಕೋಟೆ ಬೀದರ್ ಕೋಟೆಯಾಗಿದೆ. ಲ್ಯಾಟ್ರೇಟ್ ನೆಲವನ್ನು ಅಗೆದು, ಕಡಿದು ನಿರ್ಮಿಸಿದ ಈ ಕಂದಕಗಳಿಗೆ ಪರ್ಷಿಯಾದ ತಂತ್ರಜ್ಞಾನವೇ ಪ್ರೇರಣೆ ಎಂದು ದೇವು ಪತ್ತಾರ ಅವರು ಅಭಿಪ್ರಾಯಪಟ್ಟರೆ, ಪರ್ಷಿಯದ ಕೋಟೆಗಳ ರಚನೆಯ ಮಾದರಿಯಲ್ಲಿ ಇವುಗಳನ್ನು ರಚಿಸಲಾಗಿದೆ ಎಂದು ಅರುಣಿ ಅವರು ಅಭಿಪ್ರಾಯಪಟ್ಟಿದ್ದಾರೆ. ೧೪೨೪ ರಿಂದ ೧೪೩೨ ರ ಅವಧಿಯಲ್ಲಿ ನಿರ್ಮಿಸಿದ ಬೀದರ್ ಕೋಟೆ ನೆಲದುರ್ಗಕ್ಕೆ ಒಂದು ಉತ್ತಮ ಉದಾಹರಣೆಯಾಗಿದೆ. ಎತ್ತರವಾದ ಗೋಡೆಗಳಿಂದ ಕೂಡಿದ ಬೀದರ್ ಕೋಟೆಯಲ್ಲಿ ಸುಲ್ತಾನರಿಗೆ ಹಾಗೂ ನಾಗರಿಕರಿಗೆ ಪ್ರತ್ಯೇಕ ವಿಭಾಗಗಳು ಇರುವುದು ವಿಶೇಷ. ಸುಲ್ತಾನರು ವಾಸಿಸುವ ಅರಮನೆ ಆವರಣ ಮೂರು ಕಂದಕಗಳಿಂದ

ಕೂಡಿದ್ದು, ವಿಶೇಷ ರಕ್ಷಣೆ ಹೊಂದಿದೆ. ಇಲ್ಲಿಯ ವಿವಿಧ ಬಗೆಯ ಅರಮನೆಗಳು, ದರ್ಬಾರುಗಳು ಮತ್ತು ಉದ್ಯಾನಗಳು ಅಂದಿನ ವೈಭವವನ್ನು ತಿಳಿಸುತ್ತವೆ. ನಾಗರಿಕರು ವಾಸಿಸುವ ಪ್ರದೇಶವನ್ನು ಎತ್ತರದ ಗೋಡೆಗಳಿಂದ ರಕ್ಷಿಸಲಾಗಿದೆ. ಈ ವಿಶಾಲ ನಗರದಲ್ಲಿ ಮಹಮೂದ್ ಗವಾನ್ ಕಟ್ಟಿಸಿದ ಮದರಸ ಮತ್ತು ಬಹು ದೊಡ್ಡದಾದ ಜುಮ್ಮಾ ಮಸೀದಿಗಳಿವೆ. ಬೀದರ್ ಕೋಟೆ ಒಟ್ಟು ೩೭ ಕೊತ್ತಳಗಳು ಮತ್ತು ೮ ದ್ವಾರಗಳಿಂದ ಸು. ೪ ಕಿ.ಮೀ. ಸುತ್ತಳತೆಯಿಂದ ಕೂಡಿದೆ. ಅಷ್ಟಕೋನಾಕಾರ ಹಾಗೂ ವರ್ತುಲಾಕಾರದ ಕೊತ್ತಳಗಳು ಹಾಗೂ ಕೋಟೆಯ ಗೋಡೆಯಲ್ಲಿ ಕಮಾನಿನಾಕಾರದ ನೀಟುಗಳು ಮತ್ತು ಕೋಟೆಯ ಪಹರೆಗಾಗಿ ಕೈಪಿಡಿಗೋಡೆಗೆ ಹೊಂದಿಕೊಂಡಂತೆ ಪಹರೆ ಗೋಡೆಯನ್ನು ರಚಿಸಲಾಗಿದೆ. ಕೊತ್ತಳಗಳು ಮೇಲೆ ಉದ್ದನೆಯ ತೋಪುಗಳನ್ನು ಬಹಮನಿ ಸುಲ್ತಾನರ ಅನಂತರ ಆಳಿದ ಬರೀದ್‌ಗಳು ಮತ್ತು ಆದಿಲ್‌ಶಾಹಿಗಳು ಇರಿಸಿದ್ದಾರೆ ಎಂದು ಶಾಸನಗಳಿಂದ ತಿಳಿಯುತ್ತದೆ. ೧೪೯೦ ರಿಂದ ೧೬೮೬ ರವರೆಗೆ ಆಳಿದ ಬಿಜಾಪುರದ ಆದಿಲ್‌ಶಾಹಿಗಳು ಕರ್ನಾಟಕದ ಕೋಟೆ ನಿರ್ಮಾಣದಲ್ಲಿ ಬಹುಮುಖ್ಯ ಕೊಡುಗೆಗಳನ್ನು ನೀಡಿದ್ದಾರೆ. ಬದಲಾದ ಯುದ್ಧ ತಂತ್ರ ಹಾಗೂ ಮದ್ದುಗುಂಡುಗಳ ಬಳಕೆಗಳಿಗೆ ಅನುಗುಣವಾಗಿ ಅಸ್ತಿತ್ವದಲ್ಲಿದ್ದ ಕೋಟೆಗಳನ್ನು ಪುನರ್ ರಚಿಸುವ ಹಾಗೂ ಆಯಕಟ್ಟಿನ ಸ್ಥಳಗಳಲ್ಲಿ ಕೋಟೆಗಳನ್ನು ರಚಿಸುವ ಪ್ರಕ್ರಿಯೆಯನ್ನು ಈ ಅವಧಿಯಲ್ಲಿ ಕಾಣುತ್ತೇವೆ. ವಿಜಯನಗರದ ಪತನದ ಅನಂತರ ಮಹಾರಾಷ್ಟ್ರವಲ್ಲದೆ ಕರ್ನಾಟಕದ ಬಹುಭಾಗದಲ್ಲಿ ವಿಸ್ತರಿಸಿದ ಆದಿಲ್‌ಶಾಹಿ ರಾಜ್ಯ ಪೋರ್ಚುಗೀಸ್ ಹಾಗೂ ಮಧ್ಯ ಏಷ್ಯದ ಅನೇಕ ತಂತ್ರಜ್ಞರ ನೆರವಿನೊಂದಿಗೆ ಭದ್ರವಾದ ತೋಪುಗಳನ್ನು ಹಾಗೂ ಮದ್ದು ಗುಂಡುಗಳನ್ನು ತನ್ನ ಯುದ್ಧ ಪಡೆಗಳಲ್ಲಿ ಬಳಕೆಗೆ ತಂದಿತು. ಈ ಕಾರಣದಿಂದಾಗಿ ಆದಿಲ್‌ಶಾಹಿ ರಾಜ್ಯದ ಬಹುತೇಕ ಕೋಟೆಗಳಲ್ಲಿ ವರ್ತುಲಾಕಾರದ ಕೊತ್ತಳಗಳಿದ್ದು ಅವುಗಳ ಮೇಲೆ ಉದ್ದನೆಯ ತೋಪುಗಳು ಇರಿಸಿರುವುದನ್ನು ಕಾಣುತ್ತೇವೆ. ಕೋಟೆಯ ಪ್ರವೇಶ ದ್ವಾರಗಳ ಇಕ್ಕೆಲಗಳಲ್ಲಿ ಅರ್ಧವೃತ್ತಾಕಾರದ ಬುರುಜುಗಳನ್ನು ರಚಿಸಿ ದ್ವಾರಗಳು ವೈರಿಗಳಿಗೆ ನೇರವಾಗಿ ಗೋಚರಿಸದಂತೆ ಮರೆಮಾಚುವ ಅಡ್ಡಗೋಡೆಗಳನ್ನು ನಿರ್ಮಿಸುವ ಸಂಪ್ರದಾಯವನ್ನು ಕಾಣುತ್ತೇವೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ (ಅರುಣಿ ೨೦೦೯: ೨೮೬–೮೭; ದೇವು ಪತ್ತಾರ ೨೦೧೫: ೧೩೭).

ಆದಿಲ್‌ಶಾಹಿಗಳ ರಾಜಧಾನಿಯಾಗಿದ್ದ ವಿಜಯಪುರ ನಗರವು ಕೋಟೆಯಿಂದ ಆವೃತ್ತವಾಗಿದೆ. ವರ್ತುಲಾಕಾರದಲ್ಲಿರುವ ಈ ಕೋಟೆಯು ಉತ್ತರ–ದಕ್ಷಿಣ ೪ ಕಿ.ಮೀ ಉದ್ದ ಮತ್ತು ಪೂರ್ವ–ಪಶ್ಚಿಮ ೩.೨೫ ಕಿ.ಮೀ. ಅಗಲವಿದೆ. ಈ ಕೋಟೆ ಒಟ್ಟು ೯೬ ಕೊತ್ತಳಗಳು, ಐದು ಹೆಬ್ಬಾಗಿಲು ಮತ್ತು ಹಲವು ದಿಡ್ಡಿ ಬಾಗಿಲುಗಳಿಂದ ಕೂಡಿದೆ.

ಅತ್ಯಂತ ವಿಸ್ತಾರವಾದ ಬಿಜಾಪುರದ ಕೋಟೆ ತನ್ನ ರಚನೆಯಲ್ಲಿ ಸಾಂಪ್ರದಾಯಿಕವಾದ ವಾಸ್ತುಶಾಸ್ತ್ರ ಪ್ರಕಾರದಲ್ಲಿದೆ. ವರ್ತುಲಾಕಾರದ ನಗರ ಮಧ್ಯದಲ್ಲಿ ಒಳಕೋಟೆಯಿದೆ. ಇದರಲ್ಲಿ ಸುಲ್ತಾನರಿಗೆ ಪ್ರತ್ಯೇಕವಾಗಿ ನಿರ್ಮಿಸಲಾದ ಅರಮನೆಗಳು, ಮಸೀದಿಗಳು ಹಾಗೂ ದರ್ಬಾರುಗಳಿವೆ. ಒಳಕೋಟೆ ಹಾಗೂ ಹೊರಕೋಟೆಗಳ ಸುತ್ತಲೂ ಕಂದಕಗಳಿವೆ. ಸುಲ್ತಾನರ ಗೋರಿಗಳು ನಗರದ ವಿವಿಧ ಭಾಗಗಳಲ್ಲಿವೆ. ಹಲವು ಮಸೀದಿಗಳು, ಅಲಂಕೃತ ಮೆಟ್ಟಿಲುಗಳ ಬಾವಿ ಮುಂತಾದವುಗಳು ಈ ಕೋಟೆಯೊಳಗಿನ ಪ್ರಮುಖ ಕಟ್ಟಡಗಳು. ಕಾಲವನ್ನು ನಿಖರವಾಗಿ ಗುರುತಿಸಬಹುದಾದ ಉತ್ತರ ಕರ್ನಾಟಕದ ಏಕೈಕ ಮುಸ್ಲಿಂ ಕೋಟೆ ಎಂದರೆ ಬಿಜಾಪುರದ ಕೋಟೆ ಮಾತ್ರ. ವಿವಿಧ ಹಂತಗಳಲ್ಲಿ ಆಗಿರುವ ನಿರ್ಮಾಣವನ್ನು ಗುರುತಿಸಬಹುದಾಗಿದೆ (ಜೋಶಿ ೧೯೮೫: ೧೧೧-೧೧೩).

ಆದಿಲ್‌ಶಾಹಿಗಳು ಕರ್ನಾಟಕದ ಬೆಳಗಾವಿ, ಶಹಾಪುರ, ಯಾದಗೀರ್, ಜಲದುರ್ಗ, ಮುದಗಲ್ಲು, ಕೊಪ್ಪಳ, ಬಸವಕಲ್ಯಾಣ, ಗುಲ್ಬರ್ಗ, ರಾಯಚೂರು ಇತ್ಯಾದಿ ಕೋಟೆಗಳನ್ನು ಅಂದಿನ ಯುದ್ಧ ತಂತ್ರಗಾರಿಕೆಗೆ ತಕ್ಕಂತೆ ನವೀಕರಿಸಿದರು. ಮುದಗಲ್ಲು ಕೋಟೆ ಅತ್ಯಂತ ಸುಭದ್ರ ಕೋಟೆಗಳಲ್ಲಿ ಒಂದೆನಿಸಿದೆ. ಎರಡು ಸುತ್ತಿನಿಂದ ಕೂಡಿದ ಈ ಕೋಟೆ ವಿಜಯನಗರ ಅರಸರಿಂದ ಹಾಗೂ ಆದಿಲ್‌ಶಾಹಿ ಸುಲ್ತಾನರಿಂದ ನಿರ್ಮಿಸಲ್ಪಟ್ಟಿದೆ. ಆಳವಾದ ಕಂದಕದಿಂದ ಕೂಡಿದ ಮುದಗಲ್ಲು ಕೋಟೆ ನೆಲ ಹಾಗೂ ಬೆಟ್ಟವನ್ನು ಆವರಿಸಿದೆ. ಕಾಂದರವಾಜ, ಫತೇದರವಾಜ ಮುಂತಾದ ದ್ವಾರಗಳು ಹಾಗೂ ಅನೇಕ ಕೊತ್ತಳಗಳಿಂದ ಈ ಕೋಟೆಯನ್ನು ಆದಿಲ್‌ಶಾಹಿಗಳು ನಿರ್ಮಿಸಿದ್ದಾರೆ. ದ್ವಾರಗಳ ಜೊತೆಗೆ ಅವಶ್ಯವಾಗಿ ರಕ್ಷಣಾ ಸಾಧನಗಳಾಗಿ ಕೋಟೆಯ ನಡುಭಾಗದಲ್ಲಿ ಮೂರು ಬತೇರಿಗಳಿವೆ. ಅವುಗಳೆಂದರೆ:

ಅ. ಮಲಿಕ್-ಇ-ಮೈದಾನ್ ಫಿರಂಗಿ ಬತೇರಿ

ಆ. ಅಲಿ ಬುರ್ಜ್

ಇ. ಲಾಂಡ ಖ್ವಾಸಾಬ್ ಫಿರಂಗಿ ಬತೇರಿ.

ಈ ಬತೇರಿಗಳು ೨೦ ಮೀ.ಗಳಿಂದ ೩೦ ಮೀ. ಅಗಲವಿದ್ದು, ಬೃಹತ್ ಶಿಲೆಗಳಿಂದ ನಿರ್ಮಿಸಲ್ಪಟ್ಟಿವೆ.

ಒಟ್ಟಾರೆ, ಆದಿಲ್‌ಷಾಹಿಗಳು ವರ್ತುಲಾಕಾರದ ಬತೇರಿ ಮತ್ತು ಕೊತ್ತಳಗಳನ್ನು ನಿರ್ಮಿಸಿ, ವಿವಿಧ ಬಗೆಯ ತೋಪುಗಳನ್ನಿರಿಸಿ ನವೀಕರಿಸಿದರು. ವೀಕ್ಷಣಾ ಗೋಪುರವು ಕೋಟೆಗೋಡೆಗಳು ಬತೇರಿಯಲ್ಲಿ ಸಂಧಿಸುವಂತೆ ನಿರ್ಮಿಸಿದರು.




**ವಿಜಯನಗರದ ನಂತರ ಅಸ್ತಿತ್ವಕ್ಕೆ ಬಂದ ಸಾಮಂತ ರಾಜ್ಯಗಳು**

ವಿಜಯನಗರದ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಅನೇಕ ಸಾಮಂತರು ಅಥವಾ ಪಾಳೆಯಗಾರರು ತಮ್ಮ ಅಧೀನ ಪ್ರದೇಶಗಳಲ್ಲಿ ರಕ್ಷಣೆಗೋಸ್ಕರ ಕೋಟೆಗಳನ್ನು ನಿರ್ಮಿಸಿದ್ದರು. ಈ ಪಾಳೆಯಗಾರರ ಅಥವಾ ನಾಡಪ್ರಭುಗಳ ಕೋಟೆಗಳು ವಿಜಯನಗರದಂತೆ ಸಾಂಪ್ರದಾಯಿಕ ಶೈಲಿಯಲ್ಲಿಯೇ ನಿರ್ಮಾಣವಾಗುತ್ತಿದ್ದವು. ಚೌಕಾಕಾರದ ಕೊತ್ತಳಗಳು, ಬೋದಿಗೆ ಮತ್ತು ಅರೆಕಂಬದಿಂದ ಕೂಡಿದ ದ್ವಾರಗಳು ಇತ್ಯಾದಿ ಸಾಂಪ್ರದಾಯಿಕ ರಚನೆಯ ಕೋಟೆಗಳು ಸಾಮಾನ್ಯವಾಗಿದ್ದವು. ಮಧುಗಿರಿ, ಮಿಡಿಗೇಶಿ, ಚಿತ್ರದುರ್ಗ, ದೇವರಾಯನದುರ್ಗ, ಗುಡಿಬಂಡೆ, ಹುತ್ರಿದುರ್ಗ, ಹುಲಿಯೂರುದುರ್ಗ ಮುಂತಾದ ಕೋಟೆಗಳಲ್ಲಿ ಸಾಂಪ್ರದಾಯಿಕ ರಚನೆ ಕಂಡುಬರುತ್ತವೆ. ವಿಜಯನಗರ ಅನಂತರದ ಪಾಳೆಯಗಾರರು ಮದ್ದುಗುಂಡುಗಳ ಬಳಕೆಗೆ ತಕ್ಕಂತೆ ಆದಿಲ್‌ಶಾಹಿಗಳ ಮಾದರಿಯಲ್ಲಿ ವೃತ್ತಾಕಾರದ ಕೊತ್ತಳಗಳನ್ನು ಚೌಕಾಕಾರದ ಕೊತ್ತಳಗಳೊಂದಿಗೆ ನಿರ್ಮಿಸಿದರು.



ಹಲವು ಹಂತದ ಕೋಟೆಗಳು, ಚಿತ್ರದುರ್ಗ (ಚಿತ್ರ: ಲೇಖಕರದು)

೧೬ ರಿಂದ ೧೮ನೆಯ ಶತಮಾನದವರೆಗೆ ಆಳಿದ ಚಿತ್ರದುರ್ಗದ ಪಾಳೆಯಗಾರರ ಕೋಟೆಯು ಕರ್ನಾಟಕದ ಕೋಟೆಗಳಲ್ಲಿ ಮಹತ್ವದ ಕೋಟೆಯೆಂದು ಹೆಸರಾಗಿದೆ. ಆಯಕಟ್ಟಿನ ಸ್ಥಳದಲ್ಲಿ ನಿರ್ಮಿಸಲಾದ ಈ ಕೋಟೆಯನ್ನು ಬೆಟ್ಟಗಳು ಹಾಗೂ ಬೆಟ್ಟದ ಕೆಳಗಿನ ವಿಶಾಲವಾದ ಪ್ರದೇಶದಲ್ಲಿ ೧೯ ಬಾಗಿಲುಗಳು, ೩೫ ದಿಡ್ಡಿಬಾಗಿಲು ಹಾಗೂ ಅನೇಕ ಕೊತ್ತಳಗಳಿಂದ ನಿರ್ಮಿಸಲ್ಪಟ್ಟಿದೆ. ಕೋಟೆಯ ಒಳಗಡೆ ಅರಮನೆ, ಕಣಜಗಳು, ಮದ್ದಿನ ಮನೆಗಳು, ಕೆರೆ, ಬಾವಿಗಳು, ದೊಣೆಗಳು ಮತ್ತು ದೇವಾಲಯಗಳಿವೆ. ವಿಜಯನಗರದ ಪಾಳೆಯಗಾರರು ಮತ್ತು ಹೈದರ್‌ಅಲಿ, ಟಿಪ್ಪುಸುಲ್ತಾನರ ಕಾಲದಲ್ಲಿ ಈ ಕೋಟೆ ಅಭಿವೃದ್ಧಿಗೊಂಡಿದೆ. ಹಲವು ಬತೇರಿಗಳು, ತೋಪುಗಳು ಹಾಗೂ ಮದ್ದು ತಯಾರಿಸುವ ಬೀಸುಕಲ್ಲುಗಳಿವೆ. ಈ ಆಯಕಟ್ಟಿನ ಸ್ಥಳಗಳಲ್ಲಿ ಪಾಳೆಯಗಾರರ ಕೋಟೆಗಳಲ್ಲಿ ಎಣ್ಣೆ ಕೊಳ ಅಥವಾ ತುಪ್ಪದ ಕೊಳ ಎನ್ನುವ ಮಡಕೆಯಾಕಾರದ ಇಟ್ಟಿಗೆ ಮತ್ತು ಗಾರೆಯಿಂದ ಮಾಡಿದ ಚಿಕ್ಕ ಉಗ್ರಾಣಗಳು ಕಂಡುಬರುತ್ತವೆ. ಆ ಕಾಲದ ಯುದ್ಧದಲ್ಲಿ ಗಾಯಗೊಂಡ ಸೈನಿಕರಿಗೆ ತುಪ್ಪದ ಲೇಪನ ಮಾಡಲು ಇವುಗಳಲ್ಲಿ ತುಪ್ಪವನ್ನು ಶೇಖರಿಸಲಾಗುತ್ತಿತ್ತು. ಶತ್ರು ಸೈನಿಕರು ಕೋಟೆಯನ್ನು ಏರಿಬರುವ ಸಂದರ್ಭದಲ್ಲಿ ಕಾಯಿಸಿದ ಎಣ್ಣೆಯನ್ನು ಅವರ ಮೇಲೆ ಸುರಿಯುತ್ತಿದ್ದರು. ಅದಕ್ಕಾಗಿ ಎಣ್ಣೆಯನ್ನು ಪ್ರತಿ ಕೋಟೆಗಳಲ್ಲಿಯೂ ಸಂಗ್ರಹಿಸಿಟ್ಟುಕೊಳ್ಳುತ್ತಿದ್ದರು.

ದಕ್ಷಿಣ ಕರ್ನಾಟಕದ ಯಲಹಂಕ ನಾಡಪ್ರಭುಗಳು, ಮಧುಗಿರಿ ಮಲೆನಾಡ ಪ್ರಭುಗಳು, ಚನ್ನಪಟ್ಟಣದ ಪಾಳೇಗಾರರು, ಚಿಕ್ಕಬಳ್ಳಾಪುರ, ದೇವನಹಳ್ಳಿ ಪಾಳೇಗಾರರು ತಮ್ಮ ಅಧೀನ ಪ್ರದೇಶಗಳಲ್ಲಿ ಕೋಟೆಗಳ ನಿರ್ಮಾಣ ಮಾಡಿದ್ದಾರೆ. ತುಮಕೂರು ಜಿಲ್ಲೆಯ ಮಧುಗಿರಿ ಕೋಟೆ ಒಂದು ಅಭೇದ್ಯ ಕೋಟೆ ಎನಿಸಿದೆ. ಏಷ್ಯಾ ಖಂಡದಲ್ಲಿಯೇ ಅತ್ಯಂತ ಎತ್ತರವಾದ ಏಕಶಿಲೆಯ ಈ ಬೆಟ್ಟದ[1] ಬುಡದಲ್ಲಿ ಪ್ರಾರಂಭವಾದ ಕೋಟೆ ಗೋಡೆಗಳು ಬೆಟ್ಟದ ಮೇಲಿನವರೆಗೂ ೧೫ ಸುತ್ತುಗಳಲ್ಲಿ ನಿರ್ಮಿಸಲ್ಪಟ್ಟಿವೆ. ಕೋಟೆಯ ಒಳಗೆ ನೀರಿನ ಶೇಖರಣೆಗಾಗಿ ದೊಡ್ಡ ಬಾವಿ, ಧಾನ್ಯಗಳ ಶೇಖರಣೆಗಾಗಿ ಉಗ್ರಾಣಗಳು ಮತ್ತು ತುಪ್ಪದ ಕೊಳಗಳು ಇವೆ. ಮಧುಗಿರಿಯ ಸಮೀಪದ ಚನ್ನರಾಯನದುರ್ಗ, ಮಿಡಿಗೇಶಿ, ಪಾವಗಡ, ನಿಡುಗಲ್ಲು ಕೋಟೆಗಳು ತುಮಕೂರು ಜಿಲ್ಲೆಯ ಇತರ ಪ್ರಮುಖ ಕೋಟೆಗಳು. ಪಾವಗಡ ಮತ್ತು ನಿಡುಗಲ್ಲು ಕೋಟೆಗಳು ಹಳೆಯ ಕೋಟೆಗಳಾಗಿದ್ದು ಇವುಗಳನ್ನು ಆಮೇಲೆ ನವೀಕರಿಸಲಾಗಿದೆ. ತುಮಕೂರು ಜಿಲ್ಲೆಯು ರಾಜ್ಯದಲ್ಲಿಯೇ ಅತಿಹೆಚ್ಚು ಗಿರಿದುರ್ಗಗಳನ್ನು ಒಳಗೊಂಡಿದೆ. ಇದೇ ಜಿಲ್ಲೆಯ ದಕ್ಷಿಣದಲ್ಲಿ ಬರುವ ಹುತ್ರಿದುರ್ಗ ಮತ್ತು ಹುಲಿಯೂರುದುರ್ಗಗಳು ಯಲಹಂಕ ನಾಡಪ್ರಭುಗಳ ಕಾಲದಲ್ಲಿ ನಿರ್ಮಿಸಲ್ಪಟ್ಟ ಕೋಟೆಗಳನ್ನು ಒಳಗೊಂಡಿವೆ. ಈ ಎಲ್ಲಾ ಕೋಟೆಗಳು ಮುಂದೆ

ಮೈಸೂರು ಅರಸರು ಮತ್ತು ಹೈದರಾಲಿ - ಟಿಪ್ಪು ಸುಲ್ತಾನರ ಆಳ್ವಿಕೆಗೂ ಒಳಪಟ್ಟಿದ್ದು, ಅವರಿಂದ ಪುನರ್ರಚಿಸಲ್ಪಟ್ಟಿವೆ.



**ಉತ್ತರದ ದಿಕ್ಕಿನಿಂದ ಮಧುಗಿರಿಯ ಕೋಟೆ**



**ಬೆಂಗಳೂರಿನ ಕೋಟೆ ಮತ್ತು ಕಂದಕದ ಒಂದು ನೋಟ (ಚಿತ್ರಕೃಪೆ: ಎಸ್.ಕೆ. ಅರುಣಿ)**

ಬೆಂಗಳೂರು ಪರಿಸರದಲ್ಲಿ ಏಳಿಗೆಗೆ ಬಂದ ನಾಡಪ್ರಭುಗಳಲ್ಲಿ ಯಲಹಂಕ ಮನೆತನದವರು ಪ್ರಮುಖರು. ಇವರ ರಾಜಧಾನಿಯಾದ ಬೆಂಗಳೂರಿನಲ್ಲಿ ಕ್ರಿ.ಶ. ೧೫೩೭ರ ಸುಮಾರಿನಲ್ಲಿ ನಿರ್ಮಿಸಲಾದ ಕೋಟೆಯು ಮೂಲತಃ ಮಣ್ಣಿನ ಕೋಟೆಯಾಗಿತ್ತು. ನಂತರ ಮೈಸೂರು ಒಡೆಯರ್ ಮತ್ತು ಹೈದರಾಲಿ–ಟಿಪ್ಪು ಸುಲ್ತಾನರಿಂದ ಕಲ್ಲಿನ ಕೋಟೆಯಾಗಿ ಪುನರ್ರಚಿಸಲ್ಪಟ್ಟಿತು. ಮೂಲತಃ ಅಂಡಾಕಾರದಲ್ಲಿದ್ದ ಬೆಂಗಳೂರಿನ

ಕೋಟೆಯು ಈಗ ನಾಶವಾಗಿದೆ. ಆದರೆ ೧೭೯೧ರಲ್ಲಿ ಬ್ರಿಟಿಷರು ರಚಿಸಿದ ನಕ್ಷೆಯನ್ನು ಆಧರಿಸಿ ಬೆಂಗಳೂರಿನ ಕೋಟೆಯ ವಿಸ್ತೀರ್ಣ ಹಾಗೂ ಅದರ ರಚನೆಯನ್ನು ತಿಳಿಯಬಹುದು. ರಚನೆಯ ವಿಧಾನದಿಂದ ಬೆಂಗಳೂರಿನ ಕೋಟೆಯಲ್ಲಿ ದಖನ್ ಸುಲ್ತಾನರ ಕಾಲದ ಅನುಕರಣೆಯನ್ನು ಕಾಣಬಹುದು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಬಹುಶಃ ರಣದುಲ್ಲಾಖಾನನು ಕ್ರಿ.ಶ. ೧೬೩೮ರಲ್ಲಿ ಆಕ್ರಮಿಸಿಕೊಂಡ ನಂತರ ಮಣ್ಣಿನ ಕೋಟೆಯಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿರುವ ಸಾಧ್ಯತೆಗಳಿವೆ.

ಯಲಹಂಕ ನಾಡಪ್ರಭುಗಳಿಂದ ನಿರ್ಮಿಸಲ್ಪಟ್ಟ ರಾಮನಗರ ಜಿಲ್ಲೆಯ ಮಾಗಡಿ ತಾಲ್ಲೂಕಿನ ಸಾವನದುರ್ಗದ ಕೋಟೆ ನಾಡಿನ ಪ್ರಮುಖ ಕೋಟೆಗಳಲ್ಲಿ ಒಂದಾಗಿದೆ. ಇಲ್ಲಿನ ಬಿಳಿಗುಡ್ಡ ಮತ್ತು ಕರಿಗುಡ್ಡಗಳಿಂದ ಕೂಡಿದ ಈ ಬೆಟ್ಟವು ಏಷ್ಯಾದಲ್ಲಿಯೇ ಸಮುದ್ರಮಟ್ಟದಿಂದ ಎತ್ತರವಿರುವ ಏಕಶಿಲಾಬೆಟ್ಟ ಎಂಬ ಕೀರ್ತಿಗೆ ಪಾತ್ರವಾಗಿದೆ. ಇಲ್ಲಿನ ಕೋಟೆಯು ೨.೫ ಕಿ.ಮೀ. ಸುತ್ತಳತೆಯಿಂದ ಕೂಡಿದೆ. ಕಣಜಗಳು, ನೀರಿನ ದೊಣೆಗಳು, ದೇವಾಲಯಗಳು ಹಾಗೂ ಪಾಳುಬಿದ್ದ ಅರಮನೆಯ ಅವಶೇಷಗಳನ್ನು ಈ ಕೋಟೆಯಲ್ಲಿ ಕಾಣುತ್ತೇವೆ. ಇಲ್ಲಿ ನಾಡಪ್ರಭುಗಳ ಕಾಲದಲ್ಲಿ ನಿರ್ಮಿಸಿದ್ದ ನೆಲಪಟ್ಟಣದ ಅವಶೇಷಗಳನ್ನು ಕೂಡ ಕಾಣಬಹುದು. (ಅರುಣಿ ೨೦೦೯: ೨೮೭–೮೮).

ಕೆಳದಿ ಅರಸರ ಕಾಲದ ಕೋಟೆಗಳನ್ನು ಇಕ್ಕೇರಿ, ಬಿದನೂರು, ಕೆಳದಿ ಮತ್ತು ಚನ್ನಗಿರಿ ಮುಂತಾದೆಡೆಗಳಲ್ಲಿವೆ. ಮಲೆನಾಡು ಪರಿಸರದ ಈ ಕೋಟೆಗಳನ್ನು ಅಲ್ಲಿಯ ಭೌಗೋಳಿಕ ಲಕ್ಷಣಕ್ಕೆ ಹೊಂದಿಕೊಂಡಂತೆ ನಿರ್ಮಿಸಲಾಗಿದೆ. ಅರ್ಧವರ್ತುಲಾಕಾರದ ಕೊತ್ತಳಗಳು ಸರಳವಾದ ದ್ವಾರಗಳು ಕೋಟೆಯ ಗೋಡೆಗಳಲ್ಲಿವೆ. ಬಹುತೇಕ ಮಲೆನಾಡಿನ ಕೋಟೆಗಳು ವ್ಯಾಪಾರದ ದೃಷ್ಟಿಕೋನದಿಂದ ನಿರ್ಮಿಸಲಾಗಿದ್ದು ಪಶ್ಚಿಮ ಕರಾವಳಿಯಲ್ಲಿ ವಿಜಯನಗರದ ಕಾಲದಲ್ಲಿ ನಡೆಯುತ್ತಿದ್ದ ಅವ್ಯಾಹತ ಕುದುರೆ ಮತ್ತು ಭಾರತೀಯ ಮಸಾಲೆ ಪದಾರ್ಥಗಳ ಸಾಗಾಣಿಕೆಗೆ ಸ್ಥಳೀಯ ನಾಯಕರು ಈ ಕೋಟೆಗಳನ್ನು ನಿರ್ಮಿಸಿ ವ್ಯಾಪಾರಕ್ಕೆ ಅನುಕೂಲ ಮಾಡಿಕೊಟ್ಟಿದ್ದರು. ಮಲೆನಾಡು ಕರಾವಳಿಯ ಕೋಟೆಗಳು ಮಧ್ಯಯುಗೀನ ಕಾಲದಲ್ಲಿ ಹೆಚ್ಚು ಪ್ರಾಮುಖ್ಯ ಪಡೆದಿದ್ದವು. ಸಮುದ್ರ ವ್ಯಾಪಾರ ಕಡಿಮೆಯಾದಂತೆ ಈ ಕೋಟೆಗಳು ಮಹತ್ವ ಕಳೆದುಕೊಂಡವು. ಇದರಿಂದ ಕರಾವಳಿ ಮತ್ತು ಮಲೆನಾಡಿನ ಕೆಲವು ಕೋಟೆಗಳು ಪಾಳುಬಿದ್ದಂತೆ ಕಾಣುತ್ತವೆ. ಆದಿಲ್‌ಶಾಹಿಗಳ ಜಹಗೀರನ್ನು ಪಡೆದು ಆಳ್ವಿಕೆ ನಡೆಸಿದ ಸುರಪುರ ಅರಸರು ಕೆಲವು ಹೊಸ ಕೋಟೆಗಳನ್ನು ನಿರ್ಮಿಸಿದ್ದಾರೆ. ಬೆಟ್ಟಗಳ ಮಧ್ಯದಲ್ಲಿ ಊರನ್ನು ನಿರ್ಮಿಸಿ ಸುತ್ತಲೂ ಕೋಟೆಯನ್ನು ಹೊಂದಿರುವ ಸುರಪುರ ಈ ಸಂಸ್ಥಾನದ ರಾಜಧಾನಿಯಾಗಿತ್ತು.

ನಗರದ ಮಧ್ಯದಲ್ಲಿ ಅರಮನೆ, ಪ್ರಧಾನ ದೇವಾಲಯ ಮತ್ತು ದರ್ಬಾರುಗಳನ್ನು ಹೊಂದಿರುವ ಸುರಪುರದ ಕೋಟೆಯು ವಾಸ್ತುಶಾಸ್ತ್ರದ ಆಧಾರದ ಮೇಲೆ ನಿರ್ಮಿಸಲ್ಪಟ್ಟಿದೆ.

ದಕ್ಷಿಣ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಮತ್ತೊಂದು ಪ್ರಮುಖ ಅರಸು ಮನೆತನ ಎಂದರೆ ಮೈಸೂರು ಒಡೆಯರು. ಹೈದರ್ ಮತ್ತು ಟಿಪ್ಪು ಸುಲ್ತಾನರು ಮೈಸೂರು ಒಡೆಯರ ಅಧಿಕಾರವನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡು ಸುಮಾರು ೪೦ ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ಟಿಪ್ಪುವಿನ ಕಾಲಕ್ಕೆ ಪೂರ್ವದಲ್ಲಿ ಬಹುತೇಕ ಕೋಟೆಗಳನ್ನು ಮೈಸೂರು ಒಡೆಯರ್ ಮನೆತನದವರು ನಿರ್ಮಾಣ ಮತ್ತು ಪುನರುಜ್ಜೀವನಗೊಳಿಸಿದ್ದರು. ಆದ್ದರಿಂದ ಅವರ ಕಾಲದ ಕೋಟೆಗಳ ವಿವರಗಳನ್ನು ನೋಡುವುದು ಅವಶ್ಯವಿದೆ. ಈ ಬಗೆಗೆ ಗೋವಿಂದ ವೈದ್ಯನ ಕಂಠೀರವ ನರಸರಾಜ ವಿಜಯದಲ್ಲಿ ಸಾಕಷ್ಟು ವಿವರಗಳು ದೊರಕುತ್ತವೆ. ವಿಶೇಷವಾಗಿ ಶ್ರೀರಂಗಪಟ್ಟಣ ಕೋಟೆಗೆ ಸಂಬಂಧಿಸಿದ ವಿವರಗಳನ್ನು ಇಲ್ಲಿ ನೋಡಬಹುದು.



೧೬೧೭ ರಿಂದ ೧೭೯೯ ರವರೆಗಿನ ವಿವಿಧ ಕಾಲಘಟ್ಟಗಳಲ್ಲಿ ಮೈಸೂರು ಸಂಸ್ಥಾನದ ವ್ಯಾಪ್ತಿ

ಮೈಸೂರು ಒಡೆಯರ್ ಕಾಲದ ಕೋಟೆಗಳಲ್ಲಿ ಸಾಮಾನ್ಯವಾಗಿ ಕಾಣುವ ಅಂಶವೆಂದರೆ, ಗ್ರಾನೈಟ್ ಶಿಲೆಗಳನ್ನು ಬಳಸಿ ಮಧ್ಯಮ ಗಾತ್ರದ ಸಮನಾಂತರ ಕೋಟೆಗಳನ್ನು ನಿರ್ಮಿಸಿದ್ದಾರೆ. ಕೆಲವು ಕಡೆಗಳಲ್ಲಿ ಗಾರೆಗಳನ್ನು ಬಳಸಿ ಕೋಟೆಯ ಮೇಲ್ಭಾಗವನ್ನು ನಿರ್ಮಿಸಿದ್ದಾರೆ. ಹೆಬ್ಬಾಗಿಲನ್ನು 'ಹುಲಿಮುಖ' ಬಾಗಿಲು ಎಂಬ ಹೆಸರಿನಿಂದ ಸಾಮಾನ್ಯವಾಗಿ ಕರೆಯಲಾಗುತ್ತಿತ್ತು. ಹಲವು ಉಪ ಪ್ರವೇಶ ಬಾಗಿಲುಗಳಿದ್ದವು. ಅವುಗಳನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುವ ಪರಿಪಾಠವಿತ್ತು. ಒಡೆಯರ ಕಾಲದ ಕೋಟೆಗಳಲ್ಲಿ ಚೌಕಾಕಾರ ಇಲ್ಲವೆ; ಆಯತಾಕಾರ ಹಾಗೂ ವೃತ್ತಾಕಾರದ ಕೊತ್ತಳಗಳನ್ನು ನಿರ್ಮಿಸುತ್ತಿದ್ದರು. ಇದರಿಂದ ಕೋಟೆ ಗೋಡೆಗೆ ಆಗುವ ಅಪಾಯ ತಪ್ಪುತ್ತಿತ್ತು. ಈ ರೀತಿ ಕೊತ್ತಳಗಳ ನಿರ್ಮಾಣದಿಂದ ಕೋಟೆ ಗೋಡೆಯ ಭಾರ ಸಮನಾಂತರವಾಗಿ ಭೂಮಿಯ ಮೇಲೆ ಬೀಳಲು ಮತ್ತು ಕೋಟೆಗೋಡೆ ದೀರ್ಘಕಾಲ ಬಾಳಿಕೆ ಬರಲು ಸಹಾಯವಾಗುತ್ತಿತ್ತು. ಅಲ್ಲದೆ ಅವುಗಳ ಮೇಲೆ ಕಾವಲು ಗೋಪುರಗಳನ್ನು ನಿರ್ಮಿಸಿ ಕಾವಲುಗಾರರು ಪಹರೆ ನಡೆಸಲು ಇಲ್ಲವೆ ಕೆಲವೊಮ್ಮೆ ಆಯುಧಗಳನ್ನು ಸಂಗ್ರಹಿಸಿಡಲು ಬಳಸುತ್ತಿದ್ದರು. ಕೋಟೆಗಳ ಮೇಲೆ ನಿರ್ಮಿಸುತ್ತಿದ್ದ ಆಳ್ವೇರಿ ಮತ್ತು ತೆನೆಗಳು ಸಹಾ ಕೋಟೆಗಳಿಗೆ ಸಾಕಷ್ಟು ಭದ್ರತೆಗಳನ್ನು ಒದಗಿಸುತ್ತಿದ್ದವು (ರಂಗಪ್ಪ, ೨೦೦೬: ೯೦-೯೨). ಅಂದು ಸಾಮಾನ್ಯವಾಗಿ ದಸಿನೆಟ್ಟ ತೊರೆ, ಇಡಗಲ್ಲು, ಹಾವಿನ ಬುಟ್ಟಿ, ಶೂಲ, ಕವಾಣೆ, ಚೇಳುಬಾಣ, ರಾಟಳ, ವಿಷದ ಜೀರು ಕೊಳವೆ, ಸಾಲಸಬಳ, ಮರಳರಾಶಿ, ಬಿಸಿಯಂಬಲಿ, ಸಾಸಿವೆ ಕದಡು ಮೊದಲಾದವುಗಳನ್ನು ಅಂದು ಸಂಗ್ರಹಿಸಿಡುತ್ತಿದ್ದರು. ಇವುಗಳಲ್ಲದೆ ಫಿರಂಗಿಗಳು ಮತ್ತು ಕೋವಿಗಳನ್ನೂ ಸಂಗ್ರಹಿಸಿಡಲಾಗುತ್ತಿತ್ತೆಂದು ಗೋವಿಂದ ವೈದ್ಯ ತಾನು ಕಂಡದ್ದನ್ನು ದಾಖಲಿಸಿದ್ದಾನೆ (**ಕಂಠೀರವ ನರಸರಾಜ ವಿಜಯ,** ೬- ೧೮, ೧೯, ೨೧).

ಮೈಸೂರು ಒಡೆಯರ ಕಾಲದ ಕೋಟೆಗಳಲ್ಲಿ ಕೆಲವು ವ್ಯವಸ್ಥೆಗಳನ್ನು ಮುಖ್ಯವಾಗಿ ಗುರುತಿಸಬಹುದು. ನೀರಿನ ವ್ಯವಸ್ಥೆಗಾಗಿ ಮಳೆ ಕೊಯ್ಲು ವ್ಯವಸ್ಥೆ, ಸಂಸ್ಥಾನದ ಗಡಿಗಳಲ್ಲಿ ಬಲಿಷ್ಠ ಗಡಿದುರ್ಗಗಳ ರಚನೆ, ತುರ್ತು ಸಂದರ್ಭಕ್ಕಾಗಿ ಕೋಟೆಯೊಳಗಿನ ಜನರಿಗೆ ಅಗತ್ಯ ವಸ್ತುಗಳ ದಾಸ್ತಾನು ಸಂಗ್ರಹ ಮೊದಲಾದ ವ್ಯವಸ್ಥೆಗಳನ್ನು ಗುರುತಿಸಬಹುದು. ಅಂದಿನ ಯುದ್ಧ ತಂತ್ರಗಳಲ್ಲಿ ಮುಖ್ಯವಾದವುಗಳೆಂದರೆ – ರಾಜನ ವಾಸಸ್ಥಾನದ ಮೇಲೆ ಆಕ್ರಮಣ ಮಾಡುವುದು. ಅದನ್ನು ಹೀಗೆ ಗೋವಿಂದ ವೈದ್ಯ ಹೇಳಿದ್ದಾನೆ: "ದೊರೆಯಿದ್ದ ಪಟ್ಟಣವನ್ನು ಮುತ್ತಿಗೆಯಿಕ್ಕಿ ಭರದಿಂದ ಸೆಳೆದೊಡೆ ಬಳಿಕ ಅರಸ ಕಟ್ಟಿದಿರಾಟ ಮುಗಿದಂತೆ ಮಿಕ್ಕನ ಪುರವೆಮ್ಮ ಕೈವಶವಹುದು" (ಗೋವಿಂದ ವೈದ್ಯ, ೧೧-೬೮). ಸಂಸ್ಥಾನದ ಗಡಿದುರ್ಗಗಳನ್ನು ಹೆಚ್ಚು ಭದ್ರಪಡಿಸಿಕೊಳ್ಳುವ ಸಲುವಾಗಿ

ಹೋಬಳಿದಾರನ ನಾಯಕತ್ವದಲ್ಲಿ ದಫೇದಾರ, ಓಲೆಕಾರ. ಸೈನ್ಯ ಸಮೇತ ಶತ್ರುಗಳನ್ನು ಎದುರಿಸಲು ಮದ್ದುಗುಂಡು ಮುಂತಾದ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಳ್ಳುತ್ತಿದ್ದ ಬಗ್ಗೆ **ಶ್ರೀಮನ್ಮಹಾರಾಜರವರ ವಂಶಾವಳಿ, ಭಾಗ–೧** ತಿಳಿಸುತ್ತದೆ (೧೯೧೬: ೧೧೭). ಆಕ್ರಮಣಕ್ಕೆ ಬರುತ್ತಿರುವ ಶತ್ರುಗಳನ್ನು ಮಾರ್ಗಮಧ್ಯದಲ್ಲಿಯೇ ತಡೆದು ಹಿಮ್ಮೆಟ್ಟಿಸುವ ತಂತ್ರವನ್ನು ಅನುಸರಿಸಲಾಗುತ್ತಿತ್ತು. ಮತ್ತೊಂದು ತಂತ್ರವನ್ನು ಗೋವಿಂದ ವೈದ್ಯ ಹೇಳುತ್ತಾನೆ. ಅದೇನೆಂದರೆ, ಶತ್ರುಸೈನ್ಯದ ಸಹಾಯಕ್ಕೆ ಬೇರೆಯವರ ಸೈನ್ಯವು ಬಾರದಂತೆ ತಡೆಗಟ್ಟುವ ತಂತ್ರವನ್ನು ಅನುಸರಿಸುವುದು (ಗೋವಿಂದ ವೈದ್ಯ, ೧೩– ೫೬, ೫೮.) ಈ ತಂತ್ರವನ್ನು ಮುಂದೆ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಅತ್ಯಂತ ಸಮರ್ಪಕವಾಗಿ ಅನುಸರಿದರು.

***

ಭಾರತದ ಚರಿತ್ರೆಯಲ್ಲಿ ಮತ್ತು ಕರ್ನಾಟಕದ ಚರಿತ್ರೆಯಲ್ಲಿ ಕೋಟೆಗಳು ನಿರ್ವಹಿಸಿರುವ ಪಾತ್ರ ಅಸಾಧಾರಣವಾದುದು ಎಂಬುದನ್ನು ಈವರೆಗಿನ ಅಧ್ಯಯನದಲ್ಲಿ ವ್ಯಕ್ತವಾಗಿರುವುದನ್ನು ಗ್ರಹಿಸಬಹುದು. ಪ್ರಾಚೀನ ಕಾಲದ ಕೋಟೆಗಳಿಂದ ಆರಂಭಿಸಿದ ೧೮ ನೆಯ ಶತಮಾನದವರೆಗಿನ ಕೋಟೆಗಳ ರಚನೆ, ವಿನ್ಯಾಸ ಮತ್ತು ತಾಂತ್ರಿಕತೆಯಲ್ಲಿ ಉಂಟಾದ ಬದಲಾವಣೆಗಳನ್ನು ಅವಲೋಕಿಸಿದ್ದು, ಈ ಅಧ್ಯಯನದಿಂದ ಹಲವು ಅಂಶಗಳು ನಮಗೆ ಸ್ಪಷ್ಟವಾಗುತ್ತವೆ. ಮುಖ್ಯವಾಗಿ ಸ್ಥಳಗಳ ಆಯ್ಕೆಯಲ್ಲಿ ಆಗಿರುವ ಬದಲಾವಣೆಗಳು. ಆರಂಭ ಕಾಲದ ಕೋಟೆಗಳನ್ನು ಸಾಮಾನ್ಯವಾಗಿ ನದಿ ತಟಗಳಲ್ಲಿ, ಗುಡ್ಡಗಳ ಮೇಲೆ ನಿರ್ಮಿಸುತ್ತಿದ್ದರು. ಇದನ್ನು ಶಾತವಾಹನ ಕಾಲದಿಂದ ರಾಷ್ಟ್ರಕೂಟರ ಕಾಲದವರೆಗೆ ಗಮನಿಸಬಹುದು. ಆನಂತರದ ಕಾಲಘಟ್ಟದಲ್ಲಿ ಸ್ಥಳಗಳ ಆಯ್ಕೆಯಲ್ಲಿ ಬದಲಾವಣೆಗಳನ್ನು ಗುರುತಿಸಬಹುದು. ಮಧ್ಯಕಾಲದಲ್ಲಿ ಅಂದರೆ ಹೊಯ್ಸಳ, ವಿಜಯನಗರ ಮತ್ತು ಬಹಮನಿ ಹಾಗೂ ಆದಿಲ್ ಷಾಹಿಗಳ ಕಾಲದಲ್ಲಿ ನೆಲದುರ್ಗದಲ್ಲಿ ಕೇಂದ್ರೀಕೃತವಾಗುತ್ತಿದ್ದ ಕೋಟೆಗಳು ವಿಜಯನಗರೋತ್ತರ ಕಾಲಘಟ್ಟದಲ್ಲಿ ಗಿರಿದುರ್ಗಗಳಲ್ಲಿ ಕೇಂದ್ರೀಕೃತವಾಗಿರುವುದನ್ನು ಕಾಣಬಹುದು. ಮತ್ತೊಂದು ಅಂಶವೆಂದರೆ ನಿರ್ಮಾಣ ಸಾಧನಗಳಲ್ಲಿ ಉಂಟಾಗಿರುವ ಬದಲಾವಣೆಗಳು. ಆರಂಭ ಕಾಲದ ಕೋಟೆಗಳನ್ನು ಮಣ್ಣು ಮತ್ತು ಇಟ್ಟಿಗೆಗಳಿಂದ ನಿರ್ಮಿಸುತ್ತಿದ್ದರು. ಮಧ್ಯಕಾಲದಲ್ಲಿ ಕಲ್ಲುಗಳನ್ನು ವಿಶೇಷವಾಗಿ ಬಳಸಿ ಕೋಟೆ ಗೋಡೆಗಳನ್ನು ನಿರ್ಮಿಸಲಾರಂಭಿಸಿದರು. ಮಧ್ಯಕಾಲದ ಉತ್ತರಾರ್ಧದಲ್ಲಿ ಕಲ್ಲುಗಳ ನಡುವೆ ಗಾರೆಗಚ್ಚನ್ನು ಬಳಸಿ ಕೋಟೆಗಳನ್ನು ಬಲಿಷ್ಠವಾಗಿ ನಿರ್ಮಿಸುವ ರೂಢಿ ಆರಂಭವಾಯಿತು. ಇನ್ನೊಂದು ಅಂಶವೆಂದರೆ ತಾಂತ್ರಿಕ ಬದಲಾವಣೆಗಳು. ಈ ದೃಷ್ಟಿಯಿಂದಲೂ ಕೂಡ ಕೋಟೆಗಳ ರಚನೆ, ವಿನ್ಯಾಸದಲ್ಲಿ ಬದಲಾವಣೆಗಳನ್ನು

ಗುರುತಿಸಬಹುದಾಗಿದೆ. ಕೋಟೆಗಳಲ್ಲಿ ಕೊತ್ತಳಗಳನ್ನು ನಿರ್ಮಿಸುವ ಪರಿಪಾಠವು ಆರಂಭವಾಗುವುದು ಆರನೆಯ ಶತಮಾನದ ನಂತರ. ಆ ಕಾಲಘಟ್ಟದಲ್ಲಿ ಕೋಟೆಗೋಡೆಗಳ ಮೇಲೆ ಕೈಪಿಡಿಗಳಾಗಲಿ, ತೆನೆಗಳಾಗಲಿ ಇರುತ್ತಿರಲಿಲ್ಲ. ಮಧ್ಯಕಾಲದಲ್ಲಿ ಕಿರು ಕೈಪಿಡಿಗಳನ್ನು ಮತ್ತು ತೆನೆಗಳನ್ನು ನಿರ್ಮಿಸಲಾರಂಭಿಸಿದರು. ಹೈದರಾಲಿ ಮತ್ತು ಟಿಪ್ಪು ಕಾಲದ ಹೊತ್ತಿಗೆ ಆಳೆತ್ತರದ ಕೈಪಿಡಿಗಳನ್ನು ನಿರ್ಮಿಸುವ ಪರಿಪಾಠ ರೂಢಿಗೆ ಬಂದಿತು. ಅದೇ ರೀತಿಯಲ್ಲಿ ಪಹರೆ ಕಟ್ಟೆಗಳು ಆರಂಭ ಕಾಲದಲ್ಲಿ ಇರಲಿಲ್ಲ. ತೆನೆ ಮತ್ತು ಕಿರು ಕೈಪಿಡಿಗಳನ್ನು ನಿರ್ಮಿಸಲಾರಂಭಿಸಿದ ನಂತರ ಸೈನಿಕರು ನಿಲ್ಲಲು ಮತ್ತು ಅವರ ಚಲನ–ವಲನಕ್ಕೆ ಸಾಕಾಗುವಷ್ಟು ಕಿರಿದಾದ ಪಹರೆಕಟ್ಟೆಗಳನ್ನು ರಚಿಸಲಾಗುತ್ತಿತ್ತು. ಮುಂದೆ ಅವುಗಳನ್ನು ಕೆಲವು ಅಡಿಗಳವರೆಗೆ ವಿಸ್ತರಿಸಿದರು. ಇವಲ್ಲದೆ ಕೊತ್ತಳಗಳಲ್ಲಿನ ಮಾರ್ಪಾಡು ಕೂಡ ಮುಖ್ಯವಾದ ಅಂಶವಾಗಿದೆ. ಕೊತ್ತಳಗಳು ಕೋಟೆ ಗೋಡೆಗೆ ಹೊಂದಿಕೊಂಡಂತೆ ಚೌಕಾಕಾರದಲ್ಲಿ ಇರುತ್ತಿದ್ದವು. ಎತ್ತರವಾದ ಕೊತ್ತಳಗಳನ್ನು ನಿರ್ಮಿಸಿ ಮುಗಿಲಟ್ಟಣೆ ಎಂದು ಕರೆಯುತ್ತಿದ್ದರು. ಇವುಗಳು ವೀಕ್ಷಣಾ ಗೋಪುರಗಳಾಗಿದ್ದವು. ಮುಗಿಲಟ್ಟಣೆಯ ಸ್ಥಾನದಲ್ಲಿ ಮಧ್ಯಕಾಲದಲ್ಲಿ ಬತೇರಿ ಅಥವಾ ಬುರ್ಜುಗಳು ಬಂದವು. ಇವು ವೀಕ್ಷಣಾ ಗೋಪುರಗಳಾಗಿ ಮತ್ತು ಫಿರಂಗಿಗಳನ್ನು ಸ್ಥಾಪಿಸುವ ತಾಣಗಳಾದವು. ಚೌಕಾಕಾರದ ಕೊತ್ತಳಗಳು ೧೭–೧೮ನೆಯ ಶತಮಾನದ ಹೊತ್ತಿಗೆ ವೃತ್ತಾಕಾರದ ಸ್ವರೂಪವನ್ನು ಪಡೆದುಕೊಂಡವು. ಕಂದಕಗಳು ಕೂಡ ಬದಲಾವಣೆಯನ್ನು ಹೊಂದುತ್ತಾ ಬಂದಿವೆ. ಪ್ರಾಚೀನ ಕಾಲದಲ್ಲಿ ನದಿ, ತೊರೆಗಳನ್ನೇ ಸ್ವಾಭಾವಿಕವಾಗಿ ಬಳಸಿಕೊಂಡು ಕೋಟೆಗಳನ್ನು ನಿರ್ಮಿಸುತ್ತಿದ್ದರು. ಮಧ್ಯಕಾಲದಲ್ಲಿ ನೆಲದುರ್ಗಗಳಿಗಾಗಿ ಆಳವಾದ ಮತ್ತು ಅಗಲವಾದ ಅಗಳಿಗಳನ್ನು ತೋಡುತ್ತಿದ್ದರು. ಬೀದರ್‌ನ ಕೋಟೆಗೆ ನಿರ್ಮಿಸಿರುವ ಮೂರು ಸುತ್ತಿನ ಕಂದಕ ಭಾರತದಲ್ಲಿಯೇ ವಿಶಿಷ್ಟವಾದುದು. ಆಯುಧಗಳ ಬಳಕೆಯಲ್ಲಾಗಿರುವ ಬದಲಾವಣೆಗಳನ್ನು ಕೂಡ ಗುರುತಿಸಬಹುದು. ಭರ್ಜಿ, ಬಲ್ಲೆ, ಬಾಣ ಮೊದಲಾದ ಆಯುಧಗಳು ಪ್ರಾಚೀನ ಕಾಲದಲ್ಲಿ ಸಾಮಾನ್ಯವಾಗಿದ್ದವು. ಮಧ್ಯಕಾಲದ ಹೊತ್ತಿಗೆ ಮದ್ದಿನ ತೋಪುಗಳು, ಬಂದೂಕುಗಳು ಮೊದಲಾದ ಆಧುನಿಕ ಶಸ್ತ್ರಾಸ್ತ್ರಗಳು ಬಳಕೆಗೆ ಬಂದವು. ಇವಲ್ಲದೆ ಕೋಟೆಯ ಮೇಲೇರಿ ಬರುವ ಶತ್ರು ಸೈನಿಕರನ್ನು ಹಿಮ್ಮೆಟ್ಟಿಸಲು ಅಂಬಲಿ, ಹಾವು, ಕಾಯಿಸಿದ ಎಣ್ಣೆ, ಸುಡು ಮರಳು ಮುಂತಾದವುಗಳನ್ನು ಎಸೆಯುತ್ತಿದ್ದರು. ಕೋಟೆಯ ಪ್ರವೇಶ ದ್ವಾರಗಳನ್ನು ನೇರವಾಗಿ ಇಡುವ ಬದಲು ಇಂಗ್ಲಿಷ್ ವರ್ಣಮಾಲೆಯ 'ಎಲ್' ಮಾದರಿಯಲ್ಲಿ ನಿರ್ಮಿಸುವ ಪರಿಪಾಠ ರೂಢಿಸಿಕೊಂಡರು. ಕೋಟೆ ಬಾಗಿಲ ಪಕ್ಕದಲ್ಲಿಯೇ ದಿಡ್ಡಿ ಬಾಗಿಲು ಇಡುವ ಸಂಪ್ರದಾಯ ಆರಂಭವಾಯಿತು. ಹೀಗೆ ಹಲವಾರು ಬದಲಾವಣೆಗಳು ಕೋಟೆಯ ಯುದ್ಧ ತಂತ್ರಜ್ಞಾನದಲ್ಲಿ ಕಂಡುಬಂದವು.

ಹದಿನೆಂಟನೆಯ ಶತಮಾನದವರೆಗೆ ಕೋಟೆಗಳ ತಂತ್ರಜ್ಞಾನ, ಸ್ವರೂಪ ಮತ್ತು ನಿರ್ಮಾಣ ಕಲೆಗಳಲ್ಲಿ ಆಗಿರುವ ಬದಲಾವಣೆಗಳು ಮುಂದೆ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿ ಪಡೆದುಕೊಂಡ ಸ್ವರೂಪ, ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ತನ್ನ ಕಾಲದಲ್ಲಿ ಕೋಟೆಗಳ ರಚನೆ ಮತ್ತು ತಾಂತ್ರಿಕತೆಗಳಲ್ಲಿ ಮಾಡಿಕೊಂಡ ಬದಲಾವಣೆಗಳು ಮತ್ತು ಈ ಬದಲಾವಣೆಗೆ ಪ್ರೇರಣೆಯಾದ ಅಂಶಗಳನ್ನು ಕುರಿತು ಮುಂದಿನ ಅಧ್ಯಾಯದಲ್ಲಿ ವಿವರವಾದ ಚರ್ಚೆಯನ್ನು ನಡೆಸಲಾಗಿದೆ.

***

## ಟಿಪ್ಪಣಿಗಳು

೧. ಕೋಟೆಗೆ ಶಬ್ದಕೋಶಗಳಲ್ಲಿ 'ಗೋಡೆ', 'ಕಿಲ್ಲೆ', 'ಆವರಣ' ಇತ್ಯಾದಿ ಅರ್ಥಗಳಿವೆ. ಪ್ರಸಿದ್ಧ ನಿಘಂಟುಕಾರ ರೆ.ಕಿಟ್ಟೆಲ್ ಅವರು ಕೋಟೆ ಎಂಬುದಕ್ಕೆ ಗೋಡೆ, ಪ್ರಾಕಾರ ಎಂಬ ಅರ್ಥಗಳನ್ನು ತಮ್ಮ ಕನ್ನಡ–ಇಂಗ್ಲಿಷ್ ನಿಘಂಟಿನಲ್ಲಿ ತಿಳಿಸಿದ್ದಾರೆ (ಕಿಟ್ಟೆಲ್ ೧೯೮೨(೧೮೯೪): ೪೯೬). ಕೋಟೆಯನ್ನು ಸಂಸ್ಕೃತದಲ್ಲಿ 'ದುರ್ಗ' ಎಂದು ಕರೆಯಲಾಗುತ್ತದೆ. ವೈದಿಕ ಸಾಹಿತ್ಯದಲ್ಲಿ ಭದ್ರವಾದಂತಹ ಕೋಟೆಯುಳ್ಳ ಪಟ್ಟಣದ ಮಾದರಿಯ ಪ್ರದೇಶವನ್ನು 'ಪುರ' ಎಂದು ಕರೆಯಲಾಗಿದೆ. ಜನಪದರು ಕೋಟೆಯನ್ನು 'ಕ್ವಾಟೆ', 'ಕ್ವಾಟಿ', 'ಕೋಟೆ' ಎಂದೆಲ್ಲ ಕರೆಯುತ್ತಾರೆ. ಸಾಮಾನ್ಯವಾಗಿ ಕೋಟೆಯ ಜೊತೆಯಲ್ಲಿಯೇ ಜೋಡು ನಡಿಯಾಗಿ ಕೊತ್ತಳವನ್ನೂ ಬಳಸುತ್ತಾರೆ ('ಕೋಟೆ–ಕೊತ್ತಳ'). ಕೊತ್ತಳಕ್ಕೆ 'ಬುರುಜು' ಎಂಬ ಪರ್ಯಾಯನಾಮವೂ ಇದೆ. ಕೋಟೆಯ ಜೊತೆಗೆ ಕೂಡಿಸಿದಂತೆ ಈ ಕೊತ್ತಳಗಳನ್ನು ಕಟ್ಟಿರುತ್ತಾರೆ. ಕೊತ್ತಳಗಳಂತೆ ಕಂದಕವೂ ಕೋಟೆಯ ರಚನೆಯಲ್ಲಿ ಮುಖ್ಯವಾದ ಅಂಗ. ಕೋಟೆಯ ಸುತ್ತಲೂ ಆಳವಾದ ಅಗಲವಾದ ಕಮದಕ ತೆಗೆದಿರುತ್ತಿದ್ದರು. ಈ ಕಂದಕಗಳು ನೀರು, ವಿಷಜಂತುಗಳು, ಮೊನಚಾದ ದಸಿಗಳಿಂದ ಕೂಡಿರುತ್ತಿತ್ತು. ಶತ್ರುಗಳ ಆಕ್ರಮಣವನ್ನು ತಡೆಯುವಲ್ಲಿ ಈ ಕೊತ್ತಳಗಳ ಪಾತ್ರ ಹಿರಿದಾದುದಾಗಿದೆ. ಒಟ್ಟಾರೆ, ಪ್ರಾಗೈತಿಹಾಸ ಕಾಲದಿಂದ ಆಧುನಿಕ ಕಾಲಘಟ್ಟದ ಆರಂಭದವರೆಗೂ ಮಾನವನ ಇತಿಹಾಸದಲ್ಲಿ ಕೋಟೆಗಳ ಪಾತ್ರ ಮಹತ್ವಪೂರ್ಣವಾದುದಾಗಿದೆ. ಅಲ್ಲದೆ, ಮಾನವನ ನಾಗರಿಕತೆಯ ವಿಕಾಸದ ಹಾದಿಯಲ್ಲಿ ಮಹತ್ವದ ಪಾತ್ರವಹಿಸಿದೆ.

೨. ಕೋಟ್‌ದಿಜಿಯ ಕೆಳಹಂತದ ಕಾಲವನ್ನು ಕುರಿತು ಭಿನ್ನತೆಗಳಿವೆ. ಎಸ್.ಆರ್. ರಾವ್ ಅವರು ಕೋಟ್‌ದಿಜಿ–೧ರ ಪ್ರಾರಂಭಕಾಲೀನ ಸ್ತರಗಳ ಇಂಗಾಲ–೧೪ರ ಕಾಲ ಕ್ರಿ.ಪೂ. ೨೬೦೫ – ಕ್ರಿ.ಪೂ. ೨೨೫೫ ಎನ್ನುತ್ತಾರೆ (ರಾವ್, ೧೯೭೪: ೧೮೪). ಮತ್ತೊಂದು ಕೃತಿಯಲ್ಲಿ ಕ್ರಿ.ಪೂ.ಸು. ೩೫೦೦ – ೨೮೦೦ ಎಂದು ದಾಖಲಾಗಿದೆ (ಕುಂಕುಮ್ ರಾಯ್, ೨೦೦೯:೧೬೭). ಇದರ ಕಾಲಘಟ್ಟದ ಬಗೆಗೆ ಭಿನ್ನಾಭಿಪ್ರಾಯಗಳಿದ್ದರೂ ಈ ನೆಲೆಯು ಹರಪ್ಪ ಪೂರ್ವದ ನೆಲೆ ಎಂದು ಒಪ್ಪುತ್ತಾರೆ.

೩. ಕೌಟಿಲ್ಯನ **ಅರ್ಥಶಾಸ್ತ್ರವು** ಕೋಟೆಗಳನ್ನು ಎಂದಿಗೂ ಮರದಲ್ಲಿ ನಿರ್ಮಿಸ ಬಾರದು ಎಂದು ಹೇಳುತ್ತದೆ. ಏಕೆಂದರೆ ಅಗ್ನಿದೇವನು ನಿಯತವಾಗಿ ಇಲ್ಲಿ ವಾಸ ಮಾಡುವನು ಎನ್ನುತ್ತದೆ (ನೋಡಿ: ಶಂಕರ ಭಾರತೀ, ೨೦೧೦(೧೯೬೩): ೯೨). ಅಲ್ಲದೆ, ಮರಗಳು ಮಳೆ, ಗಾಳಿ, ಬಿಸಿಲಿಗೆ ತಮ್ಮ ಶಕ್ತಿಯನ್ನು ಕಳೆದುಕೊಂಡು ದುರ್ಬಲವಾಗುತ್ತವೆ. ಈ ದೃಷ್ಟಿಯಿಂದ ಮರದ ಕೋಟೆಯ ನಿರ್ಮಾಣವನ್ನು ಅರ್ಥಶಾಸ್ತ್ರ ವಿರೋಧಿಸುತ್ತದೆ. ಆದರೆ, ಮೆಗಾಸ್ತನೀಸನ ಅಭಿಪ್ರಾಯವನ್ನು ಪುಷ್ಟೀಕರಿಸುವಂತೆ ಆಧುನಿಕ ಪಾಟ್ನ ಬಳಿ ನಡೆಸಿದ ಉತ್ಖನನದಲ್ಲಿ ಮೌರ್ಯರ ಪಾಟಲಿಪುತ್ರದ ಬೃಹತ್ ದಿಮ್ಮಿಗಳ ಗೋಡೆಯ ಅವಶೇಷಗಳು ಪತ್ತೆಯಾಗಿವೆ. ಇದರಿಂದ ಅರ್ಥಶಾಸ್ತ್ರದ ಕರ್ತೃವಿಗೂ ಮೌರ್ಯ ಸಾಮ್ರಾಜ್ಯದ ಸ್ಥಾಪಕನಾದ ಚಂದ್ರಗುಪ್ತ ಮೌರ್ಯನಿಗೂ ನಿಜವಾಗಿಯೂ ಗುರು–ಶಿಷ್ಯ ಸಂಬಂಧವಿತ್ತೆ

ಎಂಬ ಪ್ರಶ್ನೆ ಉದ್ಭವಿಸುತ್ತದೆ. ಸಂಬಂಧವಿದ್ದಲ್ಲಿ ಪಾಟಲಿಪುತ್ರ ನಗರಕ್ಕೆ ಮರದ ಕೋಟೆಯನ್ನು ಕಟ್ಟದಿರಲು ಏಕೆ ಸೂಚಿಸಲಿಲ್ಲ ಎಂಬ ಮತ್ತೊಂದು ಪ್ರಶ್ನೆಯು ಸೃಷ್ಟಿಯಾಗುತ್ತದೆ.

೪. ಡಿ.ಎಲ್. ನರಸಿಂಹಾಚಾರ್ ಅವರು ಹೀಗೆ ದಾಖಲಿಸಿದ್ದಾರೆ:

*It can be shown that the place name Isila occurring in the first line of the Brahmagiri edict of Ashika where in his Mahamatas resided is a Prakritization of the Kannada word 'esil' whose Tamil cognate is eyil Meaning fort or fortified town: the name Eyilnadu (the land of forts and fortified towns) occurs in two Tamil inscription of Kolar district of the Mysore state (ಉದ್ಧೃತ: ಶ್ರೀಧರ್ ೨೦೦೨: ೧೪೧).*

೫. ರಣಮಂಡಲವು ಅರಸ ಅಥವಾ ಅಧಿಕಾರಿಗಳ ವಾಸದ ತಾಣವಾಗಿದೆ. ಸನ್ನತಿಯಲ್ಲಿ ದೊರೆತ ಶಾಸನಗಳಲ್ಲಿ ಅಮಾತ್ಯ, ರಾಜಾಮಾತ್ಯ ಎಂಬ ಅಧಿಕಾರಿಗಳ ಉಲ್ಲೇಖಗಳಿವೆ. ಆದ್ದರಿಂದ ರಣಮಂಡಲ ಎಂಬುದು ಅರಸ ಮತ್ತು ಅವನ ಪರಿವಾರದವರ ನೆಲೆಯಾಗಿದೆ.

೬. ಕಲ್ಯಾಣ ಚಾಲುಕ್ಯ ದೊರೆ ಮೂರನೇ ಸೋಮೇಶ್ವರನು ರಚಿಸಿದ **ಮಾನಸೋಲ್ಲಾಸ**ದಲ್ಲಿ ಒಂಬತ್ತು ಬಗೆಯ ಕೋಟೆಗಳನ್ನು ಕುರಿತ ವಿವರಗಳಿವೆ. ಅವುಗಳೆಂದರೆ: ಜಲದುರ್ಗ, ಗಿರಿದುರ್ಗ, ಪಾಷಾಣದುರ್ಗ, ಇಷ್ಟಿಕ ದುರ್ಗ, ಮೃತ್ತಿಕ ದುರ್ಗ, ಮರುದುರ್ಗ, ವನದುರ್ಗ, ದರದುರ್ಗ ಮತ್ತು ನರದುರ್ಗ.

೭ ಸಮುದ್ರದ ಮಟ್ಟದಿಂದ ಎತ್ತರವಾಗಿರುವ ಏಕಶಿಲಾ ಬೆಟ್ಟ ಸಾವನದುರ್ಗದ ಬೆಟ್ಟ. ಆದರೆ ಭೂಮಟ್ಟದಿಂದ ಅತ್ಯಂತ ಎತ್ತರವಿರುವ ಏಕಶಿಲಾ ಬೆಟ್ಟ ಮಧುಗಿರಿ ಬೆಟ್ಟ. ಸಾವನದುರ್ಗದ ಏಕಶಿಲಾ ಬೆಟ್ಟವು ಸಮುದ್ರಮಟ್ಟದಿಂದ ೪೦೨೪ ಅಡಿಗಳ ಎತ್ತರವಿದ್ದರೆ, ಮಧುಗಿರಿ ಬೆಟ್ಟವು ಸಮುದ್ರದ ಮಟ್ಟದಿಂದ ೩೯೩೦ ಅಡಿಗಳ ಎತ್ತರವಿದೆ.

***

## ಅಧ್ಯಾಯ – ೩

# ಟಿಪ್ಪು ಕೋಟೆಗಳ ರಚನೆ, ಸ್ವರೂಪ ಮತ್ತು ತಂತ್ರಜ್ಞಾನ ವ್ಯವಸ್ಥೆ

"ರಕ್ಷಣೆ ಎಂಬುದೊಂದು ಕಲೆ, ಆದರದು ಆಕ್ರಮಣವಲ್ಲ" (Defence is an art but not an attack). ಈ ಮಾತುಗಳು ಸ್ಪಷ್ಟವಾಗಿ ಕೋಟೆಗಳಿಗೆ ಅನ್ವಯವಾಗುತ್ತದೆ. ಕೋಟೆಗಳು ರಕ್ಷಣೆಯ ಸಾಧನವೇ ಹೊರತು ಆಕ್ರಮಣದ ಸಾಧನವಲ್ಲ. ಏಕೆಂದರೆ ಕೋಟೆ ಸ್ಥಿರವಾದುದು; ಸೈನ್ಯದಂತೆ ಚಲನಶೀಲವಾದುದಲ್ಲ. ಆದ್ದರಿಂದ "ಕೋಟೆಗಳು ರಕ್ಷಣೆಯ ಆಶ್ರಯ ತಾಣಗಳೇ ಹೊರತು; ಆಕ್ರಮಣದ ಅಸ್ತ್ರಗಳಲ್ಲ. ಜನ ಸಮುದಾಯದ ಗರ್ಭವೇ ಹೊರತು; ಗೋರಿಯಲ್ಲ". ಅದಕ್ಕೆ ಪ್ರತಿಯಾಗಿ ಆಶ್ರಿತ ಜನರು ಕೋಟೆಯನ್ನು ನಿರ್ವಹಣೆ ಮಾಡುತ್ತಿರಬೇಕು ಮತ್ತು ಕಾಲಕಾಲಕ್ಕೆ ಎದುರಾಗುವ ವಿನೂತನ ಮಾದರಿಯ ಆಕ್ರಮಣಗಳನ್ನು ಪ್ರತಿರೋಧಿಸುವಂತೆ ಕೋಟೆಗೆ ಸಂಬಂಧಿಸಿದ ತಾಂತ್ರಿಕತೆಗಳನ್ನು ಅಳವಡಿಸಿಕೊಳ್ಳುತ್ತಿರಬೇಕು. ಆ ಮೂಲಕ ಯುಗಧರ್ಮಕ್ಕೆ ಅನುಗುಣವಾಗಿ ಕೋಟೆಗಳನ್ನು ಉನ್ನತೀಕರಿಸುತ್ತಿರಬೇಕು. ಇಲ್ಲದೆ ಹೋದರೆ ಸವಕಲಾದ ನಾಣ್ಯದಂತೆ ಕೋಟೆಯು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತದೆ.

ಹಿಂದಿನ ಅಧ್ಯಾಯದಲ್ಲಿ ೧೮ನೆಯ ಶತಮಾನದವರೆಗೆ ಕೋಟೆಗಳ ರಚನೆ, ತಂತ್ರಜ್ಞಾನ ಮತ್ತು ವಿನ್ಯಾಸಗಳಲ್ಲಿ ಆಗಿರುವ ಬದಲಾವಣೆಗಳನ್ನು ಹಂತಹಂತವಾಗಿ ಅಭ್ಯಸಿಸುವ ಪ್ರಯತ್ನ ಮಾಡಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಿರುವ ವಿಷಯಗಳು ಟಿಪ್ಪು ಕಾಲದ ಕೋಟೆಗಳನ್ನು ಕೇಂದ್ರವಾಗಿಟ್ಟುಕೊಂಡಿದೆ. ಟಿಪ್ಪುವಿನ ಆಳ್ವಿಕೆಗೆ ಒಳಪಟ್ಟ

ಕೋಟೆಗಳನ್ನು ಅಧ್ಯಯನದ ದೃಷ್ಟಿಯಿಂದ ಪ್ರಧಾನ ಕೋಟೆಗಳು ಮತ್ತು ಸಣ್ಣ ಕೋಟೆಗಳು ಎಂದು ವರ್ಗೀಕರಣ ಮಾಡಿಕೊಳ್ಳಲಾಗಿದೆ. ಟಿಪ್ಪುವಿನ ಆಳ್ವಿಕೆಯ ಪ್ರದೇಶದಲ್ಲಿ ಸಾವಿರಾರು ಕೋಟೆಗಳು ಅಸ್ತಿತ್ವದಲ್ಲಿದ್ದವು. ಅವುಗಳಲ್ಲಿ ಪ್ರಮುಖವಾದ ಕೋಟೆಗಳನ್ನು ಪಟ್ಟಿ ಮಾಡಲಾಗಿದೆ. ಈ ಕೋಟೆಗಳಲ್ಲಿ ಆಯ್ದ ಕೆಲವು ಕೋಟೆಗಳನ್ನು ಪ್ರಾತಿನಿಧಿಕವಾಗಿ ತೆಗೆದುಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಟಿಪ್ಪು ಸುಲ್ತಾನ್ ಕಾಲದ ಕೋಟೆಗಳ ರಚನೆ ಅಥವಾ ಪುನರ್ರಚನೆ, ಅವುಗಳ ಸ್ವರೂಪದಲ್ಲಿ ಉಂಟಾಗಿರುವ ಬದಲಾವಣೆಗಳು ಹಾಗೂ ನಿರ್ಮಾಣದ ಹಿನ್ನೆಲೆಯಲ್ಲಿನ ತಾಂತ್ರಿಕ ಕೌಶಲ್ಯವನ್ನು ಕುರಿತು ಈ ಅಧ್ಯಾಯದಲ್ಲಿ ಅಭ್ಯಸಿಸಲಾಗಿದೆ. ಟಿಪ್ಪು ಸುಲ್ತಾನನು ತನ್ನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಅನೇಕ ಕೋಟೆಗಳನ್ನು ಅಂದಿನ ರಕ್ಷಣಾ ವಾಸ್ತುಶಿಲ್ಪದ ದೃಷ್ಟಿಯಿಂದ ಮಾರ್ಪಡಿಸುವ ಮೂಲಕ ಸಮಕಾಲೀನ ಯುದ್ಧತಂತ್ರಜ್ಞಾನಕ್ಕೆ ಅನುಗುಣವಾಗಿ ಪುನರ್ರಚಿಸಿದನು. ಟಿಪ್ಪುವು ತನ್ನ ಕಾಲದ ಕೋಟೆಗಳಲ್ಲಿ ಮಾಡಲಾದ ಬದಲಾವಣೆ, ಅಂದಿನ ರಕ್ಷಣಾ ವಾಸ್ತುಶಿಲ್ಪದಲ್ಲಿನ ವಿಶೇಷತೆ, ತಾಂತ್ರಿಕ ಕೌಶಲ್ಯಗಳು ಗಮನಾರ್ಹವಾದುದು. ಈ ಬದಲಾವಣೆಗಳು ಹಿಂದಿನ ಕೋಟೆಗಳಲ್ಲಿನ ವಾಸ್ತುಶಿಲ್ಪ ಮತ್ತು ತಾಂತ್ರಿಕ ಕೌಶಲ್ಯಗಳಿಗಿಂತಲೂ ಸುಧಾರಿತವಾಗಿರುವ ಮಾದರಿಗಳು. ಅವುಗಳಲ್ಲಿ ಹೊಸದಾಗಿ ಕೋಟೆಯ ಭಾಗಗಳಾಗಿ ಸೇರ್ಪಡೆಗೊಂಡ ವೃತ್ತಾಕಾರದ ಕೊತ್ತಳ, ರ್‍ಯಾಂಪ್, ವಿಶಿಷ್ಟ ನಮೂನೆಯ ಮದ್ದಿನಮನೆ, ರಾಕೆಟ್ ಉಡಾವಣ ಅಂಕಣ, ತಾರಾಮಂಡಲ ಇತ್ಯಾದಿಗಳನ್ನು ಕುರಿತು ಈ ಅಧ್ಯಾಯದಲ್ಲಿ ಕ್ಷೇತ್ರಕಾರ್ಯದ ಮೂಲಕ ಅಭ್ಯಸಿಸಲಾಗಿದೆ. ಟಿಪ್ಪು ಸುಲ್ತಾನನ ಸಂಸ್ಥಾನದೊಳಗೆ ನೂರಾರು ಕೋಟೆಗಳ ಪ್ರಸ್ತುತ ಅಧ್ಯಯನಕ್ಕೆ ಆಯ್ದ ಕೋಟೆಗಳನ್ನು ಪ್ರಾತಿನಿಧಿಕವಾಗಿ ತೆಗೆದುಕೊಂಡು ಅವುಗಳ ಸ್ವರೂಪಗಳನ್ನು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಪ್ರಸ್ತುತ ಅಧ್ಯಯನವು ಪ್ರಧಾನವಾಗಿ ಕ್ಷೇತ್ರಕಾರ್ಯವನ್ನು ಅವಲಂಬಿಸಿದೆ. ಆದರೂ, ಕೋಟೆಗಳನ್ನು ಕುರಿತು ಇಂದಿನ ಬರಹಗಾರರ ಬರವಣಿಗೆಗಳನ್ನು ಹಾಗೂ ಅಭಿಪ್ರಾಯಗಳನ್ನು ತುಲನಾತ್ಮಕವಾಗಿ ಪರಿಶೀಲಿಸಿ, ವಿಮರ್ಶಿಸಿ ಬಳಸಿಕೊಳ್ಳಲಾಗಿದೆ.

ಟಿಪ್ಪು ಕಾಲದ ಕೋಟೆಗಳಲ್ಲಿ ತಾಂತ್ರಿಕವಾಗಿ ಸಂಬಂಧಿಸಿದ ಅಂಶಗಳಲ್ಲಿ ಉಂಟಾಗಿರುವ ಬದಲಾವಣೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಟಿಪ್ಪು ಪೂರ್ವದ ಕೋಟೆಗಳಲ್ಲಿದ್ದ ಚೌಕಾಕಾರದ ಬತೇರಿ ಮತ್ತು ಕೊತ್ತಳಗಳನ್ನು ಟಿಪ್ಪು ಕಾಲದಲ್ಲಿ ವೃತ್ತಾಕಾರಕ್ಕೆ ತರಲಾಯಿತು. ಇದು ಫಿರಂಗಿಗಳ ಬಳಕೆಯ ದೃಷ್ಟಿಯಿಂದ ವೈಜ್ಞಾನಿಕ ವಿಧಾನವಾಗಿದ್ದು, ಇದನ್ನು ವಿವರವಾಗಿ ಚರ್ಚಿಸಲಾಗಿದೆ. ಅದೇ ರೀತಿ ಟಿಪ್ಪು ಪೂರ್ವ ಕೋಟೆಗಳಲ್ಲಿ ಪಹರೆಕಟ್ಟೆಯು ಕಿರಿದಾಗಿ ನಿರ್ಮಿಸಲ್ಪಟ್ಟಿದ್ದವು. ಟಿಪ್ಪು ಕಾಲದಲ್ಲಿ ಅವುಗಳನ್ನು ವಿಶಾಲವಾಗಿ ನಿರ್ಮಿಸಲಾಗಿದೆ. ಇದಕ್ಕೆ ಕಾರಣವಾದ ಅಂಶಗಳನ್ನು ವಿವರವಾಗಿ ಈ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ.

ಟಿಪ್ಪು ಕಾಲದವರೆಗೆ ಕಿರಿದಾಗಿದ್ದ ಕೈಪಿಡಿಗೋಡೆಗಳನ್ನು ಆನಂತರ ಬೃಹತ್ತಾಗಿಯೂ ಮತ್ತು ಆಳೆತ್ತರವಾಗಿಯೂ ನಿರ್ಮಿಸಿದ್ದರ ಉದ್ದೇಶವನ್ನು ಈ ಸಂದರ್ಭದಲ್ಲಿ ಅಭ್ಯಸಿಸಲಾಗಿದೆ. ನೆಲಮಟ್ಟದಿಂದ ಪಹರೆಕಟ್ಟೆಗೆ ಏರಲು ಮೆಟ್ಟಿಲುಗಳು ಹಿಂದಿನ ಕಾಲದಲ್ಲಿ ಇದ್ದವು. ಅವುಗಳ ಸ್ಥಾನದಲ್ಲಿ ರ್‍ಯಾಂಪ್‌ಗಳು ಬಳಕೆ ಬಂದ ಪ್ರಕ್ರಿಯೆಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಷ್ಟೇ ಅಲ್ಲದೆ, ರಾಕೆಟ್ ಮತ್ತು ಫಿರಂಗಿಗಳ ತಂತ್ರಜ್ಞಾನದ ಎರವಲು. ತಯಾರಿಕೆ ಮತ್ತು ಗುಣಮಟ್ಟವನ್ನು ಕುರಿತಾದ ವಿವರಗಳನ್ನು ಪರಿಶೀಲನೆ ನಡೆಸಲಾಗಿದೆ. ಕೋಟೆಗಳ ಒಳಗೆ ನಿರ್ಮಿಸಲಾಗಿರುವ ಅರಮನೆ, ಅವುಗಳಲ್ಲಿ ಕಂಡುಬರುವ ಶೌಚಾಲಯಗಳು, ಬಂದಿಖಾನೆಗಳು, ಗಾರೆಗಚ್ಚುಗಳ ತಯಾರಿ ಮತ್ತು ಬಳಕೆ, ಅವುಗಳ ಉದ್ದೇಶ ಮೊದಲಾದ ಅಂಶಗಳನ್ನು ಕ್ಷೇತ್ರಕಾರ್ಯ ಅಧ್ಯಯನದ ಹಿನ್ನೆಲೆಯಲ್ಲಿ ಅಭ್ಯಾಸ ಮಾಡುವ ಪ್ರಯತ್ನವನ್ನು ನಡೆಸಲಾಗಿದೆ. ಈ ಎಲ್ಲ ವಿವರಗಳನ್ನು ವಿವರವಾಗಿ ಚರ್ಚಿಸುವ ಉದ್ದೇಶವನ್ನು ಪ್ರಸ್ತುತ ಮಹಾಪ್ರಬಂಧದ ಈ ಅಧ್ಯಾಯವು ಇಟ್ಟುಕೊಂಡಿದೆ.

### ೩.೧ ಟಿಪ್ಪು ಸುಲ್ತಾನ್ ಕೋಟೆಗಳ ಅಧ್ಯಯನದ ಉದ್ದೇಶ

ಟಿಪ್ಪು ಸುಲ್ತಾನನ ಕೋಟೆಗಳನ್ನು ಪ್ರಸ್ತುತ ಅಧ್ಯಯನದ ಕೇಂದ್ರ ವಿಷಯವಾಗಿ ತೆಗೆದುಕೊಳ್ಳಲಾಗಿದೆ. ನಾಲ್ಕು ಅಂಶಗಳ ಮೂಲಕ ಟಿಪ್ಪುವಿನ ಕೋಟೆಗಳ ಪ್ರಾಮುಖ್ಯತೆಯನ್ನು ಅರಿಯಲು ಇಲ್ಲಿ ಪ್ರಯತ್ನಿಸಲಾಗಿದೆ. ಒಂದನೆಯದಾಗಿ, ಕರ್ನಾಟಕದ ಚರಿತ್ರೆಯಲ್ಲಿ ಟಿಪ್ಪು ಸುಲ್ತಾನನು ಕಟ್ಟಕಡೆಯ ಸಾರ್ವಭೌಮ ರಾಜ. ಆದ್ದರಿಂದ ಅವನ ಕಾಲಘಟ್ಟದ ಕೋಟೆಗಳನ್ನು ಕುರಿತು ಅರಿಯುವುದು ಕುತೂಹಲದ ಸಂಗತಿಯಾಗಿದೆ. ಎರಡನೆಯದಾಗಿ, ಕನ್ನಡ ರಾಷ್ಟ್ರೀಯತೆಯನ್ನು ವಿಸ್ತೃತವಾಗಿ ಒಗ್ಗೂಡಿಸಿದ ಕೀರ್ತಿ ಚಾಲುಕ್ಯ ಮತ್ತು ವಿಜಯನಗರ ಸಾಮ್ರಾಜ್ಯಗಳಿಗೆ ಸಲ್ಲುವುದಾದರೆ, ಕರ್ನಾಟಕವನ್ನು ಏಕೀಕರಿಸಿದ ಕೀರ್ತಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರಿಗೆ ಸಲ್ಲುತ್ತದೆ. ಬೆಳಗಾವಿ, ಬಿಜಾಪುರ, ಸಂಪೂರ್ಣವಾಗಿ ಬೀದರ್ ಮತ್ತು ಗುಲ್ಬರ್ಗ ಭಾಗಗಳನ್ನು ಹೊರತುಪಡಿಸಿದ ವಿಸ್ತೃತ ಕರ್ನಾಟಕ ಪ್ರದೇಶವು ಒಂದೇ ಆಳ್ವಿಕೆಯ ಅಡಿಯಲ್ಲಿ ಬಂದಿತು. ಅದಕ್ಕಾಗಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಊಳಿಗಮಾನ್ಯ ವ್ಯವಸ್ಥೆಯನ್ನು ಮುರಿದು ಮೈಸೂರಿನ ಆಳ್ವಿಕೆಯ ಅಡಿಯಲ್ಲಿ ಕರ್ನಾಟಕ ಏಕೀಕರಣವನ್ನು ಸಾಧಿಸಿದರು ಎಂದು ಸಾಕಿ ಅವರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಸಾಕಿಯವರ ಈ ಅಭಿಪ್ರಾಯವನ್ನು ವಿದ್ವಾಂಸರು ತೀವ್ರ ವಿಮರ್ಶೆಗೆ ಗುರಿಪಡಿಸಿದ್ದಾರೆ (ಸಾಕಿ ೧೯೯೮: ೩೭೨–೩೭೩; ಸುರೇಂದ್ರ ರಾವ್ ೨೦೦೪–೨೦೦೫: ೧೮೯–೧೯೭). ಮೂರನೆಯದಾಗಿ, ೧೮ ನೆಯ ಶತಮಾನದ ಉತ್ತರಾರ್ಧದ ಭಾರತದಲ್ಲಿ ರಾಜಕೀಯ ಪ್ರಭುತ್ವ ಸ್ಥಾಪಿಸಲೊರಟ ಕಂಪನಿ ಶಕ್ತಿಗೆ ಪ್ರಬಲ ಪ್ರತಿರೋಧವನ್ನು

ತೋರಿದ ಏಕೈಕ ಭಾರತೀಯ ರಾಜ ಟಿಪ್ಪು ಸುಲ್ತಾನ್. ಟಿಪ್ಪುವಿನ ಅಖಂಡ ಶಕ್ತಿಯ ಕೇಂದ್ರದಲ್ಲಿ ಅವನ ಕೋಟೆಗಳ ಪಾತ್ರ ಬಹಳ ಮುಖ್ಯವಾಗಿದೆ. ನಾಲ್ಕನೆಯದಾಗಿ, ಕರ್ನಾಟಕದ ಕೋಟೆಗಳ ಚರಿತ್ರೆಯಲ್ಲಿ ಟಿಪ್ಪುವಿನ ಕಾಲದ ಕೋಟೆಗಳು ರಕ್ಷಣಾ ತಂತ್ರಜ್ಞಾನದ ದೃಷ್ಟಿಯಿಂದ ಉಚ್ಛ್ರಾಯ ಸ್ಥಿತಿಯನ್ನು ಕಂಡಿದ್ದವು. ಅಷ್ಟು ಮಾತ್ರವಲ್ಲ, 'ಟಿಪ್ಪು ಸುಲ್ತಾನನ ಪತನವು ಕರ್ನಾಟಕದ ಚರಿತ್ರೆಯಲ್ಲಿ ಕೋಟೆಗಳ ಪತನವನ್ನೂ ಸಂಕೇತಿಸುತ್ತದೆ' ಎಂದರೆ ತಪ್ಪಾಗದು. ಅಂದರೆ ಟಿಪ್ಪು ಸುಲ್ತಾನನ ಅಂತ್ಯದೊಂದಿಗೆ ಕರ್ನಾಟಕದ ಕೋಟೆಗಳ ಚರಿತ್ರೆ ಕೂಡ ಅವನತಿಯ ಹಾದಿ ಹಿಡಿಯುತ್ತದೆ.

ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಟಿಪ್ಪು ಸುಲ್ತಾನನ ಕಾಲದ ಆಯ್ದ ಕೋಟೆಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸುವ ಪ್ರಯತ್ನವನ್ನು ನಡೆಸಲಾಗಿದೆ.

### ೩.೧.೧ ಅಧ್ಯಯನಗಳ ಅವಲೋಕನ

ಐತಿಹಾಸಿಕ ಮಹತ್ವವುಳ್ಳ ಟಿಪ್ಪು ಸುಲ್ತಾನ್ ಕಾಲದ ಕೋಟೆಗಳು ಮತ್ತು ಅವುಗಳಲ್ಲಿ ಬಳಸಲಾದ ತಂತ್ರಜ್ಞಾನ ಹಾಗೂ ಯುದ್ಧ ಬಳಕೆಯಲ್ಲಿನ ಶಸ್ತ್ರಾಯುಧಗಳನ್ನು ಕುರಿತು ಈಗಾಗಲೇ ಅಧ್ಯಯನಗಳು ನಡೆದಿವೆ. ಅವುಗಳಲ್ಲಿ ಪ್ರಮುಖ ಅಧ್ಯಯನಗಳನ್ನು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಿರುವುದರಿಂದ ತಾಂತ್ರಿಕ ವಿಚಾರಗಳನ್ನು ಕಟ್ಟಿಕೊಡುವ ಕೆಲವು ಕೃತಿಗಳನ್ನು ಮತ್ತು ಲೇಖನಗಳನ್ನು ಮಾತ್ರ ಇಲ್ಲಿ ಅವಲೋಕಿಸಲಾಗಿದೆ. ಭಾರತೀಯ ಕೋಟೆಗಳ ಚರಿತ್ರೆಯಲ್ಲಿ ಜೀನ್ ಡಿಲೋಷ್ ಅವರ **ಸ್ಟಡೀಸ್ ಆನ್ ಫೋರ್ಟಿಫಿಕೇಷನ್ ಇನ್ ಇಂಡಿಯಾ** (೨೦೦೭) ಕೃತಿ ಮುಖ್ಯವಾದುದಾಗಿದೆ. ಈ ಕೃತಿಯಲ್ಲಿನ ಐದನೆಯ ಅಧ್ಯಾಯದಲ್ಲಿ ಮೈಸೂರು ಸಂಸ್ಥಾನದ ಗಿರಿದುರ್ಗಗಳನ್ನು ಕುರಿತು ವಿಶೇಷವಾಗಿ ಅಧ್ಯಯನ ನಡೆಸಲಾಗಿದೆ. ಒಟ್ಟಾರೆ, ಡಿಲೋಷ್ ಅವರು ಟಿಪ್ಪು ಕಾಲದ ಕೋಟೆಗಳನ್ನು ಕುರಿತು ವೈಜ್ಞಾನಿಕವಾದ ಅಧ್ಯಯನ ನಡೆಸಿದ್ದಾರೆ. ಆದ್ದರಿಂದ ಈ ಕೃತಿಯು ಪ್ರಸ್ತುತ ಅಧ್ಯಯನಕ್ಕೆ ಹೆಚ್ಚು ಉಪಯುಕ್ತವಾಗಬಲ್ಲದು. ಕರ್ನಾಟಕದ ಚರಿತ್ರೆಯನ್ನು ಮಾರ್ಕ್ಸಿಸ್ಟ್ ದೃಷ್ಟಿಕೋನದ ಮೂಲಕ ವಿಶ್ಲೇಷಿಸಿದ ಇತಿಹಾಸಕಾರ 'ಸಾಕಿ'. ಅವರ **ಮೇಕಿಂಗ್ ಹಿಸ್ಟರಿ ಸಂಪುಟ** ೧ ಪ್ರಸ್ತುತ ಅಧ್ಯಯನಕ್ಕೆ ಹೆಚ್ಚು ಉಪಯುಕ್ತವಾಗಬಲ್ಲ ಕೃತಿ. ಈ ಕೃತಿಯಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲವನ್ನು 'ಜ್ಞಾನೋದಯದ ನಿರಂಕುಶಪ್ರಭುತ್ವ'ವೆಂತಲೂ, 'ಮೈಸೂರು ಸಂಸ್ಥಾನವನ್ನು ಆಧುನಿಕ ರಾಜ್ಯ'ವೆಂತಲೂ ಬಣ್ಣಿಸಿದ್ದಾರೆ. ಅಲ್ಲದೆ, ಕಂಪನಿ ವಸಾಹತು ಸತ್ತೆಯನ್ನು ಪ್ರತಿಭಟಿಸಿದ ಅವರ ಸೇನೆಯ ಅಭಿವೃದ್ಧಿಗೆ ಕಾರಣವಾದ ಅಂಶಗಳನ್ನು ಸುದೀರ್ಘವಾಗಿ ಚರ್ಚಿಸಿದ್ದಾರೆ. ಒಟ್ಟಾರೆ, ಹಲವು ಹೊಸ ಆಯಾಮಗಳಿಂದ ಈ ಕೃತಿಯು ಕೂಡಿದ್ದು ಅಧ್ಯಯನಕ್ಕೆ ಹೆಚ್ಚು ನೆರವಾಗಬಲ್ಲದು.

ಮಧ್ಯಕಾಲೀನ ಭಾರತದ ಸಂದರ್ಭದಲ್ಲಿ ಬಳಕೆಗೆ ಬಂದ ಮಹತ್ವದ ಶಸ್ತ್ರಾಸ್ತ್ರವೆಂದರೆ ಫಿರಂಗಿ. ಈ ಫಿರಂಗಿಗಳನ್ನು ಕುರಿತು ಆರ್. ಬಾಲಸುಬ್ರಮಣಿಯನ್ ಅವರು ವಿಶೇಷ ಅಧ್ಯಯನ ನಡೆಸಿದ್ದಾರೆ. ಅವರ **ದಿ ಸಾಗ ಆಫ್ ಇಂಡಿಯನ್ ಕೆನಾನ್ಸ್** (೨೦೦೮) ಕೃತಿಯು ಫಿರಂಗಿಗಳ ಉಗಮ ಮತ್ತು ಏಳಿಗೆಯ ವಿಕಾಸದ ಚರಿತ್ರೆಯು ವಿವಿಧ ಸಂಸ್ಥಾನ ಮತ್ತು ಸಾಮ್ರಾಜ್ಯಗಳಲ್ಲಿ ಹೇಗೆ ರೂಪುಗೊಂಡಿತು ಎಂಬುದನ್ನು ತಿಳಿಸಿಕೊಡುತ್ತದೆ. ಅಲ್ಲದೆ, ಫಿರಂಗಿ ಮತ್ತು ಕೋಟೆಗಳು, ಬಂದೂಕುಗಳು ಹಾಗೂ ರಾಕೆಟ್‌ಗಳ ಬಗೆಗೂ ವಿಶೇಷ ಅಧ್ಯಯನ ನಡೆಸಿದ್ದು, ಆ ಎಲ್ಲ ಫಲಿತಗಳನ್ನು ಮೇಲಿನ ಕೃತಿಯಲ್ಲಿ ಕಟ್ಟಿಕೊಟ್ಟಿದ್ದಾರೆ. ಈ ಕೃತಿಯಲ್ಲಿಯೂ ಮೈಸೂರು ಸಂಸ್ಥಾನಕ್ಕೆ ವಿಶೇಷ ಆದ್ಯತೆ ನೀಡಿರುವುದರಿಂದ ಪ್ರಸ್ತುತ ಅಧ್ಯಾಯಕ್ಕೆ ಹೆಚ್ಚು ಸಹಾಯಕವಾಗಬಲ್ಲದು. ಅದೇ ರೀತಿ ಎಸ್.ಕೆ. ದಾಸ್ ಅವರ **ರಾಕೆಟ್: ಇತಿಹಾಸ – ವಿಜ್ಞಾನ – ತಂತ್ರಜ್ಞಾನ** (೨೦೧೧) ಎಂಬ ಇಂಗ್ಲಿಷ್ ಮೂಲದ ಕೃತಿಯನ್ನು ಟಿ.ಆರ್. ಅನಂತರಾಮು ಅವರು ಕನ್ನಡಕ್ಕೆ ತಂದಿದ್ದಾರೆ. ಪ್ರಶ್ನೋತ್ತರ ರೂಪದಲ್ಲಿ ನಿರೂಪಿಸಲ್ಪಟ್ಟಿರುವ ಈ ಕೃತಿಯು ಸ್ವಲ್ಪ ಮಟ್ಟಿಗೆ ಪ್ರಸ್ತುತ ಅಧ್ಯಾಯಕ್ಕೆ ನೆರವಾಗಬಲ್ಲದು. ಆರಂಭಿಕ ಪ್ರಶ್ನೋತ್ತರಗಳಲ್ಲಿ ರಾಕೆಟ್ ತಂತ್ರಜ್ಞಾನ ಹೇಗೆ ಜಗತ್ತಿನಲ್ಲಿ ವಿಕಾಸ ಹೊಂದಿತು ಮತ್ತು ಭಾರತಕ್ಕೆ ಪರಿಚಯಗೊಂಡಿತು ಎಂಬುದನ್ನು ಸರಳವಾಗಿ ತಿಳಿಸಿಕೊಡುತ್ತದೆ. ಮುಖ್ಯವಾಗಿ, ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿ ರಾಕೆಟ್ ತಂತ್ರಜ್ಞಾನದಲ್ಲಾದ ಬದಲಾವಣೆಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿಕೊಡುತ್ತದೆ.

ಲೋರ್ದುಸಾಮಿ, ಕೆ. ಅವರು ಕಣ್ಣೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ ಅಪ್ರಕಟಿತ ಸಂಪ್ರಬಂಧವಾದ **ಸೇಂಟ್ ಎಂಜೊಲೋ ಅಂಡ್ ಬೇಕಲ್ ಫೋರ್ಟ್ರೆಸ್: ಎ ಕಂಪ್ಯಾರಿಟಿವ್ ಸ್ಟಡಿ** (೨೦೧೦) ಪುರಾತತ್ತ್ವ ಅಧ್ಯಯನಗಳ ಜೊತೆಗೆ ವೈಜ್ಞಾನಿಕವಾಗಿ ನಡೆಸಿರುವುದು ಈ ಅಧ್ಯಾಯಕ್ಕೆ ಉಪಯುಕ್ತವಾಗಬಲ್ಲದು.

ಇವುಗಳ ಜೊತೆಗೆ ಕೆಲವು ಲೇಖನಗಳು ಕೂಡ ಈ ಅಧ್ಯಾಯಕ್ಕೆ ಸಹಕಾರಿಯಾಗಿವೆ. ಅವುಗಳಲ್ಲಿ ರೊದ್ದಂ ನರಸಿಂಹ ಅವರು **ನೇಚರ್** ಪತ್ರಿಕೆಯಲ್ಲಿ ಬರೆದ **'ರಾಕೆಟ್ ಫ್ರಂ ದಿ ಗೆಲಾಕ್ಸಿ ಬಜ್ಹಾರ್'** (ಜುಲೈ ೧೯೯೯) ಮುಖ್ಯವಾದುದು. ಇದರಲ್ಲಿ ರಾಕೆಟ್ ತಂತ್ರಜ್ಞಾನವು ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿ ಹೇಗೆ ಅಭಿವೃದ್ಧಿ ಹೊಂದಿತು ಮತ್ತು ಆ ತಂತ್ರಜ್ಞಾನವನ್ನು ಟಿಪ್ಪು ಸತ್ತ ನಂತರ ಇಂಗ್ಲೆಂಡ್ ಹೇಗೆ ಬಳಸಿಕೊಂಡಿತು ಎಂಬ ವಿವರಗಳನ್ನು ನೀಡಿದ್ದಾರೆ. ಅಲ್ಲದೆ, ರಿಚರ್ಡ್ ಈಟನ್ ಅವರ 'ವಾರ್‌ಫೇರ್ ಆನ್ ದಿ ಡೆಖನ್ ಪ್ಲಾಟ್ಯು, ೧೪೫೦–೧೬೦೦: ಎ ಮಿಲಿಟರಿ ರೆವೊಲ್ಯೂಷನ್ ಇನ್ ಅರ್ಲಿ ಮಾಡರ್ನ್ ಇಂಡಿಯಾ?' (೨೦೧೪) ಒಂದು ಮುಖ್ಯವಾದ ಬರವಣಿಗೆ.

ಇದರಲ್ಲಿ ಡೆಖನ್ ಪ್ರದೇಶದಲ್ಲಿ ಸಿಡಿಮದ್ದಿನ ಪುಡಿಯು ಬಳಕೆಗೆ ಬಂದ ಬಗೆಯನ್ನು, ಫಿರಂಗಿಗಳ ಬಳಕೆ ಮತ್ತು ಅದರ ಆಗಮನದಿಂದ ಕೋಟೆಗಳ ರಚನೆಯಲ್ಲಾದ ಬದಲಾವಣೆಗಳನ್ನು ವಿವರವಾಗಿ ಕಟ್ಟಿಕೊಟ್ಟಿದ್ದಾರೆ. ಈ ಲೇಖನದ ಮುಂದಿನ ಕಾಲಘಟ್ಟವನ್ನು ಹೊಂದಿರುವ ಒಂದು ಲೇಖನ ಕೌಶಿಕ್‌ರಾಯ್ ಅವರ 'ಮಿಲಿಟರಿ ಸಿಂಥಸಿಸ್ ಇನ್ ಸೌಥ್ ಏಷ್ಯಾ: ಆರ್ಮಿಸ್, ವಾರ್‌ಫೇರ್ ಅಂಡ್ ಇಂಡಿಯನ್ ಸೊಸೈಟಿ, ಸಿ.೧೭೪೦–೧೮೪೯' (೨೦೦೫). ಯೂರೋಪಿಯನ್ನರು ದಕ್ಷಿಣ ಏಷ್ಯಾಕ್ಕೆ ಆಗಮಿಸಿ ರಾಜಕೀಯ ಪ್ರಭಾವ ಹೊಂದಿದ ನಂತರ ದೇಶಿಯ ರಕ್ಷಣಾ ವ್ಯವಸ್ಥೆಯ ಭಾಗಗಳಾದ ಸೇನೆ, ಯುದ್ಧ ಮಾದರಿಗಳಲ್ಲಾದ ಮಾರ್ಪಡುಗಳು ಮತ್ತು ಸೇರ್ಪಡೆಗಳನ್ನು ಕುರಿತು ತಿಳಿಸುತ್ತದೆ. ಈ ಲೇಖನವು ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲಘಟ್ಟವನ್ನೂ ಒಳಗೊಂಡಿರುವುದರಿಂದ ಇಲ್ಲಿನ ಅಧ್ಯಯನಕ್ಕೆ ಸಾಕಷ್ಟು ಪೂರಕವಾಗಿದೆ. ಮತ್ತೊಂದು ಪ್ರಮುಖ ಲೇಖನ ಸಿಮೋನ್ ವೆರ್ರೆಟ್ ಅವರ 'ಟೆಕ್ನಾಲಜಿ ಆನ್ ದಿ ಸ್ಪಾಟ್: ದಿ ಟ್ರೈಲರ್ಸ್ ಆಫ್ ದಿ ಕಾಗ್ರೇವ್ ರಾಕೆಟ್ ಇನ್ ಇಂಡಿಯ ಇನ್ ದಿ ಅರ್ಲಿ ನೈಂಟೀನ್ತ್ ಸೆಂಚುರಿ' (೨೦೧೨). ಈ ಲೇಖನದಲ್ಲಿ ರಾಕೆಟ್ ತಂತ್ರಜ್ಞಾನ ಭಾರತದಲ್ಲಿ ಬಳಕೆಗೆ ಬಂದ ಬಗೆಗೆ ಚರ್ಚಿಸಿದ್ದಾರೆ. ಅಂದರೆ ವಿಶೇಷವಾಗಿ ಮೈಸೂರಿನ ಸಂಗತಿಗಳೇ ಇಲ್ಲಿ ಚರ್ಚಿತವಾಗಿವೆ. ಇವಲ್ಲದೆ, ಎಸ್.ಕೆ. ಅರುಣಿ ಅವರ 'ಫೋರ್ಟ್ಸ್ ಆಫ್ ಟಿಪು ಸುಲ್ತಾನ್: ಅಂಡರ್‌ಸ್ಟ್ಯಾಂಡಿಂಗ್ ಆಫ್ ಡಿಫೆನ್ಸ್ ಆರ್ಕಿಟೆಕ್ಚರ್ ಅಂಡ್ ಟೆಕ್ನಾಲಜಿ' ಎಂಬ ಕಿರು ಲೇಖನವು ಗಮನಸೆಳೆಯುತ್ತದೆ. ಈ ಎಲ್ಲಾ ಲೇಖನಗಳು ಉತ್ಕೃಷ್ಟವಾದ ಅಧ್ಯಯನಗಳಿಂದ ಕೂಡಿದ್ದು, ಇಲ್ಲಿ ಅಭಿವ್ಯಕ್ತವಾಗಿರುವ ವಿಚಾರಗಳು ಆಸಕ್ತಿದಾಯಕವಾಗಿವೆ. ಈ ಎಲ್ಲ ಅಧ್ಯಯನಗಳ ಪ್ರಾಥಮಿಕ ಮಾಹಿತಿಯೊಡನೆ ನಡೆಸಿದ ಕ್ಷೇತ್ರಕಾರ್ಯದ ಅಧ್ಯಯನವು ಟಿಪ್ಪು ಕಾಲದ ಕೋಟೆಗಳಲ್ಲಿ ಅಳವಡಿಸಲಾಗಿರುವ ತಂತ್ರಜ್ಞಾನ ಮತ್ತು ರಚನೆಯ ಕೌಶಲ್ಯ ಹಾಗೂ ವಿನ್ಯಾಸವನ್ನು ಅರಿಯಲು ಸಾಧ್ಯವಾಗಿದೆ. ಅಲ್ಲದೆ, ಅವನ ಕಾಲದ ಕೋಟೆಗಳಲ್ಲಿ ಬಳಕೆಯಾಗಿರುವ ತಾಂತ್ರಿಕ ನಿರ್ಮಾಣದ ವಿವರಗಳನ್ನು ಗುರುತಿಸುವ ಮತ್ತು ವಿಶ್ಲೇಷಿಸುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ನಡೆಸಲಾಗಿದೆ.

### ೩.೨ ಟಿಪ್ಪು ಕಾಲದ ಕೋಟೆಗಳು

ದಕ್ಷಿಣ ಭಾರತದಲ್ಲಿ ವಿಜಯನಗರ ಸಾಮ್ರಾಜ್ಯದ ನಂತರ ಅನೇಕ ಸಣ್ಣಪುಟ್ಟ ಪಾಳೆಯ ಪಟ್ಟುಗಳು ತಲೆ ಎತ್ತಿದ್ದವು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಆಳಿದ ೩೮ ವರ್ಷಗಳ ಅವಧಿಯಲ್ಲಿ ೨೦೦ಕ್ಕೂ ಹೆಚ್ಚು[1] ಪಾಳೆಯಗಾರರನ್ನು ಕರ್ನಾಟಕ ಮತ್ತು ದಕ್ಷಿಣ ಭಾರತದಲ್ಲಿ ಪದಚ್ಯುತಗೊಳಿಸಿದರು. ಬ್ರಿಸ್ಟಾ ಅವರು ದಾಖಲಿಸುವಂತೆ ೧೭೬೧ರಲ್ಲಿ ಹೈದರಾಲಿಯು ಶ್ರೀರಂಗಪಟ್ಟಣದಲ್ಲಿ ೫೦ ಪಾಳೆಯಗಾರರನ್ನು ಖೈದಿಗಳನ್ನಾಗಿ

ಬಂಧಿಸಿದ್ದನು. ಕೇರಳ ಆಕ್ರಮಣದ ಸಂದರ್ಭದಲ್ಲಿ ಹೈದರಾಲಿಯು ಉತ್ತರ ಮಲಬಾರಿನ ಎಲ್ಲಾ ೪೨ ಪಾಳೆಯಗಾರರನ್ನು ತೆಗೆದುಹಾಕಿದನು. ಪಾಳೆಯಪಟ್ಟುಗಳನ್ನು ನಿರ್ನಾಮ ಮಾಡುವಲ್ಲಿ ಟಿಪ್ಪು ಕೂಡ ಹಿಂದೆ ಜೀಳಲಿಲ್ಲ. ಒಟ್ಟಿನಲ್ಲಿ ಪಾಳೆಯಗಾರರನ್ನು ಹೈದರಾಲಿ ಹತ್ತಿಕ್ಕಿದರೆ, ಟಿಪ್ಪು ಸುಲ್ತಾನ್ ಅವರನ್ನು ನಾಶಪಡಿಸಿದನು (ಸಾಕಿ ೧೯೯೮: ೩೭೦; ತೆಲಗಾಪಿ ೨೦೧೦: ೩೩). ಇಷ್ಟು ಪ್ರಮಾಣದಲ್ಲಿ ಸ್ಥಳೀಯ ಪಾಳೆಯಗಾರರನ್ನು ನಿರ್ಮೂಲನೆ ಮಾಡಬೇಕಾದರೆ ಬೃಹತ್ ಸೇನೆಯ ಅವಶ್ಯಕತೆ ಇತ್ತು. ಆದ್ದರಿಂದ ಟಿಪ್ಪುವಿನ ಬಳಿಯಲ್ಲಿದ್ದ ಸೇನೆಯ ಪ್ರಮಾಣ ಮತ್ತು ವಿಧಗಳನ್ನು ಅರಿಯುವುದು ಅವಶ್ಯಕವಾಗಿದೆ.

### ೩.೨.೧ ಸೇನೆ

ಟಿಪ್ಪುವಿನ ಪೂರ್ವಜರು ಯೋಧರಾಗಿ ವಿವಿಧ ಸಂಸ್ಥಾನಗಳಲ್ಲಿ ಮತ್ತು ಮನೆತನಗಳಲ್ಲಿ ಸೇವೆ ಸಲ್ಲಿಸಿದವರು. ತಂದೆ ಹೈದರಾಲಿಯು ಮೈಸೂರು ಸೇನೆಗೆ ಸೈನಿಕನಾಗಿ ಸೇರಿ ಸ್ವಪ್ರಯತ್ನದಿಂದ ಮೇಲೇರಿ ಮೈಸೂರಿನ ಅಧಿಪತ್ಯವನ್ನು ತನ್ನ ನಿಯಂತ್ರಣಕ್ಕೆ ತೆಗೆದುಕೊಂಡ ವೀರ ಮತ್ತು ಚತುರ ಸೇನಾನಿ. ಆದ್ದರಿಂದ ಸೇನೆಯ ಒಡನಾಟ ಟಿಪ್ಪುವಿಗೆ ಬಾಲ್ಯದಿಂದಲೇ ಇತ್ತು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಸೈನಿಕ ಕಾರ್ಯಾಚರಣೆಯ ಮೂಲಕ ಪುಟ್ಟ ಮೈಸೂರು ಸಂಸ್ಥಾನವನ್ನು ೮೦,೦೦೦ ಚದರ ಮೈಲಿಗಳಿಗೂ ಹೆಚ್ಚು ವಿಸ್ತಾರಗೊಳಿಸಿದರು. ಈ ಪ್ರದೇಶಗಳಿಂದ ವಾರ್ಷಿಕವಾಗಿ ಬರುತ್ತಿದ್ದ ಕಂದಾಯ ಪ್ರಮಾಣವು ಎಲ್ಲಾ ರೀತಿಯ ಖರ್ಚುವೆಚ್ಚಗಳ ನಂತರ ಮೂರು ದಶಲಕ್ಷ ಸ್ಟರ್ಲಿಂಗ್‌ಗಳಾಗಿದ್ದವು. ಇಷ್ಟು ವಿಶಾಲ ಪ್ರದೇಶದಲ್ಲಿ ವಾಸಿಸುತ್ತಿದ್ದ ಜನರ ಸಂಖ್ಯೆ ಆರು ದಶಲಕ್ಷ. ಇದರಲ್ಲಿ ೧,೪೪,೦೦೦ ಶಿಸ್ತಿನ ಪಡೆಗಳನ್ನು ಒಳಗೊಂಡ ೧,೮೦,೦೦೦ ಸಿದ್ಧ ಸೈನ್ಯವಿತ್ತು (ಮಹಮ್ಮದ್ ೧೮೫೫: ೩೧).

೧೭೮೬ರಲ್ಲಿ ಟಿಪ್ಪು ಸುಲ್ತಾನನು ಸೇನೆಗೆ ಸಂಬಂಧಿಸಿದ ಆಂತರಿಕ ನಿಯಮಾವಳಿಗಳನ್ನು ರೂಪಿಸುವ ಸಲುವಾಗಿ ತನ್ನೆಲ್ಲಾ ಕೋಟೆಗಳಿಗೆ ಭೇಟಿ ನೀಡಿ ಪರಿಶೀಲನೆ ನಡೆಸಿದನು ಮತ್ತು ದಾಸ್ತಾನು ಹಾಗೂ ಖಜಾನೆಯ ಮೊತ್ತಗಳನ್ನು ಮೌಲ್ಯಮಾಪನ ನಡೆಸಿದನು. ಕೆಲ ಸಮಯದ ನಂತರ ಶ್ರೀರಂಗಪಟ್ಟಣಕ್ಕೆ ಹಿಂತಿರುಗಿ ಎಲ್ಲಾ ಪ್ರಕಾರದ ಸ್ವತ್ತನ್ನು ದಾಸ್ತಾವೇಜಿನಲ್ಲಿ ದಾಖಲಿಸಲು ಆದೇಶಿಸಿದನು. ಅದರಂತೆ ಖಜಾನೆ, ಆಭರಣ ಮತ್ತಿತರ ಮೌಲ್ಯಯುತ ವಸ್ತುಗಳ ಅಂದಾಜು ಮೊತ್ತ ೮೦ ದಶಲಕ್ಷ ಸ್ಟರ್ಲಿಂಗ್‌ಗಳಾಗಿತ್ತು. ಟಿಪ್ಪುವಿನ ಸೇನೆಯಲ್ಲಿ ೭೦೦ ಆನೆಗಳು, ೬೦೦೦ ಒಂಟೆಗಳು, ೧೧,೦೦೦ ಕುದುರೆಗಳು, ೪,೦೦,೦೦೦ ಎತ್ತುಗಳು ಮತ್ತು ಹಸುಗಳು, ೧,೦೦,೦೦೦ ಎಮ್ಮೆಗಳು, ೬,೦೦,೦೦೦ ಕುರಿಗಳು, ೩,೦೦,೦೦೦ ತೋಪುಗಳು, ೨,೦೦,೦೦೦ ಕತ್ತಿಗಳು, ೨೨,೦೦೦ ವಿವಿಧ

ಸಾಮರ್ಥ್ಯದ ಫಿರಂಗಿಗಳು ಇದ್ದವು. ಅವನ ಸಿದ್ಧ ಸೇನೆಯಲ್ಲಿ ೧೯,೦೦೦ ಅಶ್ವಸೇನೆ, ೧೧,೦೦೦ ಫಿರಂಗಿ ದಳ, ೭೦,೦೦೦ ಪದಾತಿದಳ, ೫,೦೦೦ ರಾಕೆಟ್ ಉಡಾಯಿಸುವ ಯೋಧರು, ೪೦,೦೦೦ ಅನಿಯತ ಪದಾತಿ ಸೈನಿಕರು ಮತ್ತು ೧,೮೦,೦೦೦ ಜನ ಸೈನ್ಯವನ್ನು ಒಳಗೊಂಡಿತ್ತು. ಮೊದಲೇ ಹೇಳಿದಂತೆ ಈ ಕಾಲಘಟ್ಟದಲ್ಲಿ ಟಿಪ್ಪು ಸುಲ್ತಾನನು ನಿಯಮಾವಳಿಗಳ ಹೊಸ ಸಂಹಿತೆಯನ್ನೆ ರೂಪಿಸಿದನು. ಅವನು ಅಶ್ವದಳವನ್ನು ಕಡಿತಗೊಳಿಸಿ, ಪದಾತಿದಳವನ್ನು ಹೆಚ್ಚಿಸಿದನು. ಅಲ್ಲದೆ ಸೇನೆಗೆ ಸೂಚನೆ ನೀಡಲು ಪರ್ಷಿಯ ಮತ್ತು ಟಾರ್ಟರ್ ಪಾರಿಭಾಷಿಕ ಪದಗಳನ್ನು ಬಳಕೆಗೆ ತಂದನು. ಈ ಮೊದಲು ಅವನ್ನು ಫ್ರೆಂಚರು ಮತ್ತು ಇಂಗ್ಲಿಷರು ಬಳಸುತ್ತಿದ್ದರು. ಅಲ್ಲದೆ ಸೇನೆಯ ವಿವಿಧ ವಿಭಾಗಗಳಿಗೆ ಹೊಸ ಹೆಸರುಗಳನ್ನು ನೀಡಿದನು (ಮಹಮ್ಮದ್ ೧೮೫೫: ೩೨). ಹೀಗೆ ಟಿಪ್ಪುವಿನ ಸೇನೆ ಅಂದಿನ ಭಾರತದಲ್ಲಿಯೇ ಶಿಸ್ತು ಮತ್ತು ಸಾಮರ್ಥ್ಯಕ್ಕೆ ಹೆಸರಾಗಿತ್ತು. ಸೇನೆಗೆ ಆದ್ಯತೆ ನೀಡಿದಂತೆಯೇ ರಕ್ಷಣೆ ಕಲ್ಪಿಸುವ ಕೋಟೆಗಳಿಗೂ ಅಷ್ಟೇ ಪ್ರಾಮುಖ್ಯತೆಯನ್ನು ನೀಡಿದ್ದನು. ಸಂಸ್ಥಾನದ ಗಡಿಯಲ್ಲಿರುವ ಕೋಟೆಗಳಲ್ಲಿ ನಿಗದಿತ ಪ್ರಮಾಣದ ಸೈನ್ಯವನ್ನು ಜಮಾವಣೆ ಮಾಡುವ ಮೂಲಕ ಹೊರಗಿನಿಂದ ದಂಡೆತ್ತಿಬರುವ ಶತ್ರುಗಳನ್ನು ಗಡಿಯಲ್ಲಿಯೇ ತಡೆದು ಓಡಿಸುವ ಉದ್ದೇಶವನ್ನು ಹೊಂದಿದ್ದನು. ಅದಕ್ಕಾಗಿ ಸಂಸ್ಥಾನದ ಗಡಿ ಭಾಗಗಳಲ್ಲಿ ಮತ್ತು ಆಯಕಟ್ಟಿನ ಸ್ಥಳಗಳಲ್ಲಿ ಬಲಿಷ್ಠ ಕೋಟೆಗಳನ್ನು ನಿರ್ಮಾಣ ಮಾಡಿಸಿ ಇಲ್ಲವೇ ಹಳೆಯ ಕೋಟೆಯನ್ನು ಪುನರ್ರಚಿಸಿ ಮದ್ದುಗುಂಡು ಮೊದಲಾದ ಸಶಸ್ತ್ರಗಳ ಸಹಿತ ಸೂಕ್ತ ಪ್ರಮಾಣದ ಸೈನ್ಯವನ್ನು ಇಡುತ್ತಿದ್ದನು. ಈ ಕೋಟೆಗಳನ್ನು ಕಿಲ್ಲೇದಾರ ಮತ್ತು ಅಮಲ್ದಾರ ಎಂಬ ಅಧಿಕಾರಿಗಳ ನಿಯಂತ್ರಣಕ್ಕೆ ವಹಿಸುತ್ತಿದ್ದನು. ಟಿಪ್ಪುವು ಸೈನ್ಯದಷ್ಟೇ ಪ್ರಾಮುಖ್ಯತೆಯನ್ನು ಕೋಟೆಗಳಿಗೂ ನೀಡಿದನು. ಇದನ್ನು ಕುರಿತು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ.

### ೩.೨.೨ ಕೋಟೆಗಳ ವರ್ಗೀಕರಣ

ಬ್ರಿಟಿಷರು ಅಖಂಡ ಭಾರತವನ್ನು ವಶಪಡಿಸಿಕೊಳ್ಳುವವರೆಗೂ ಕೋಟೆಗಳು ರಕ್ಷಣೆಯ ಸಾಧನಗಳಾಗಿದ್ದವು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಸಂಸ್ಥಾನದಲ್ಲಿ ಸಾವಿರಾರು ಕೋಟೆಗಳು ಇದ್ದವು. ಅವುಗಳಲ್ಲಿ ಬಹುತೇಕ ಕೋಟೆಗಳು ಅವರು ಅಧಿಕಾರಕ್ಕೆ ಬರುವುದಕ್ಕೂ ಮೊದಲಿನಿಂದ ಇದ್ದವು. ಅವುಗಳಲ್ಲಿ ಹೆಚ್ಚಿನವು ಮಣ್ಣಿನ ಕೋಟೆಗಳಾಗಿದ್ದವು. ಮಣ್ಣಿನ ಕೋಟೆಗಳನ್ನು ಕಲ್ಲಿನ ಕೋಟೆಗಳಾಗಿ ಮಾರ್ಪಡಿಸುವ ಮೂಲಕ ದುರಸ್ತಿಗೊಳಿಸಿ ಭದ್ರಪಡಿಸಿದರು. ಅಲ್ಲದೆ ಕೆಲವು ಕೋಟೆಗಳನ್ನು ಆಯಕಟ್ಟಿನ ಸ್ಥಳಗಳಲ್ಲಿ ಹೊಸದಾಗಿಯೂ ನಿರ್ಮಿಸಿದರು. ಈ ಇಬ್ಬರು ಸುಲ್ತಾನರು ನಿರ್ಮಿಸಿದ ಕೋಟೆಗಳು ದಕ್ಷಿಣದಲ್ಲಿ ದಿಂಡಿಗಲ್, ಪಾಲ್ಘಾಟ್‌ಗಳಿಂದ, ಉತ್ತರದಲ್ಲಿ ಕೊಪ್ಪಳ, ರಾಯಚೂರುಗಳವರೆಗೆ ವ್ಯಾಪಿಸಿದ್ದವು.

ಪೂರ್ವದಲ್ಲಿ ವೆಲ್ಲೂರು, ಅಂಬೂರುಗಳಿಂದ, ಪಶ್ಚಿಮದಲ್ಲಿ ಮಂಗಳೂರಿನವರೆಗೆ ಹರಡಿವೆ. ಬೆಟ್ಟದ ತುದಿಯಲ್ಲಿ, ಮೈದಾನದಲ್ಲಿ ಮತ್ತು ಆಯಕಟ್ಟಿನ ನೆಲೆಗಳನ್ನು ಗುರುತಿಸಿ ಅವರು ಕೋಟೆಗಳನ್ನು ನಿರ್ಮಿಸಿದರು. ಈ ಕೋಟೆಗಳು ಮಾಹಿತಿ ಸಂಪರ್ಕದ ಸರಪಣಿಯಾಗಿಯೂ ಕಾರ್ಯ ನಿರ್ವಹಿಸುತ್ತಿದ್ದವು. ಟಿಪ್ಪು ಸುಲ್ತಾನ್ ನಿರ್ಮಿಸಿದ ಅತ್ಯಂತ ಎತ್ತರದ ಗಿರಿದುರ್ಗ ಎಂದರೆ ಬೆಳ್ತಂಗಡಿ ಸಮೀಪದ ಜಮಾಲಾಬಾದ್ ಕೋಟೆ. ಅಂತಹ ಕೋಟೆಯಲ್ಲಿಯೂ ನೀರಿನ ಸೌಲಭ್ಯವನ್ನು ಉತ್ತಮವಾಗಿ ನಿರ್ವಹಿಸಲಾಗಿದೆ. ಎತ್ತರವಾದ ಗೋಡೆಗಳು, ಕೊತ್ತಳ–ಬತ್ತೇರಿಗಳು, ಕಂದಕಗಳು, ರ್‍ಯಾಂಪ್‌ಗಳು, ಒಳಚರಂಡಿಗಳು, ಕೋಟೆ ತೆನೆಗಳು, ಕೈಪಿಡಿ ಗೋಡೆಗಳು, ರಹಸ್ಯವಾಗಿರುವ ದಾರಿಗಳು ಮತ್ತು ನೀರುಗುಂಡಿಗಳು ನಿರ್ಮಾಣವಾದವು. ಇಂದಿಗೂ ಪ್ರಭಾವಶಾಲಿಯಾಗಿ ನಿಂತಿರುವ ಮುಖ್ಯವಾದ ಕೋಟೆಗಳು ಶ್ರೀರಂಗಪಟ್ಟಣ, ಚಿತ್ರದುರ್ಗ, ನಂದಿದುರ್ಗ, ದೇವನಹಳ್ಳಿ, ದಿಂಡಿಗಲ್, ಕೃಷ್ಣಗಿರಿ, ಬಿದನೂರು, ಮಡಿಕೇರಿ, ಮಡಿಗೇಶಿ, ಮಧುಗಿರಿ, ಬೆಂಗಳೂರು, ಮಂಜರಾಬಾದ್ ಮೊದಲಾದ ಕಡೆಗಳಲ್ಲಿವೆ. ಇವುಗಳಲ್ಲಿ ಅತ್ಯಂತ ಮುಖ್ಯವಾದ ಕೋಟೆ ರಾಜಧಾನಿಯಾಗಿದ್ದ ಶ್ರೀರಂಗಪಟ್ಟಣದ್ದಾಗಿದೆ. ಇದು ಕಾವೇರಿ ನದಿಯಿಂದ ಸೃಷ್ಟಿಯಾದ ದ್ವೀಪವಾಗಿದ್ದು ಆಯಕಟ್ಟಿನ ದೃಷ್ಟಿಯಿಂದ ಬಹುಮುಖ್ಯವಾದ ಸ್ಥಳವಾಗಿತ್ತು. ಇಡೀ ಸಂಸ್ಥಾನದ ಕೇಂದ್ರಬಿಂದುವಾಗಿತ್ತು. ಟಿಪ್ಪು ಈ ಕೋಟೆಗೆ ಬಲವಾದ ಗೋಡೆಗಳನ್ನು, ಎತ್ತರವಾದ ದ್ವಾರಗಳನ್ನು, ಆಳವಾದ ಕಂದಕ, ಎತ್ತರದ ಬುರುಜುಗಳನ್ನು ನಿರ್ಮಿಸಿ ಶ್ರೀರಂಗಪಟ್ಟಣದ ಕೋಟೆಯನ್ನು ಬಲಪಡಿಸಿದನು.

ಹೈದರನು ಚಿತ್ರದುರ್ಗವನ್ನು ಮದಕರಿನಾಯಕನಿಂದ ೧೭೭೯ರಲ್ಲಿ ಗೆದ್ದುಕೊಂಡನು. ಇಂದಿಗೂ ಆ ಕೋಟೆಯು ಹಾಗೆಯೇ ಉಳಿದುಕೊಂಡಿದೆ. ಚಿಕ್ಕಬಳ್ಳಾಪುರ ಸಮೀಪದಲ್ಲಿರುವ ಪ್ರಸಿದ್ಧವಾದ ಗಿರಿದುರ್ಗವೇ ನಂದಿದುರ್ಗ. ಟಿಪ್ಪು ಈ ಕೋಟೆಯ ಸಮೀಪವೆ ಸುಂದರವಾದ ಸಣ್ಣ ಅರಮನೆಯೊಂದನ್ನು ಕಟ್ಟಿಸಿದ್ದನು. ದೇವನಹಳ್ಳಿಯ ಕೋಟೆ ೧೭೪೯ರಲ್ಲಿ ಹೈದರ್ ತನ್ನ ಪರಾಕ್ರಮವನ್ನು ಮೆರೆದ ಮೊದಲನೆಯ ಯುದ್ಧ ನಡೆದದ್ದೂ ಇಲ್ಲಿಯೇ. ಮೊದಲು ಅದು ಮಣ್ಣಿನ ಕೋಟೆಯಾಗಿತ್ತು. ನಂತರ ಬಲವಾದ ಕಲ್ಲಿನ ಕೋಟೆಯನ್ನು ಹೈದರ್ ಕಟ್ಟಿಸಿದನು. ಪಾಲಘಾಟ್ ಕೋಟೆಯನ್ನು ವಶಪಡಿಸಿಕೊಂಡು ಅದಕ್ಕೂ ಹೊಸ ರೂಪವನ್ನು ನೀಡಿದನು.

ಹೈದರಾಲಿಯು ಬಿದನೂರು ಕೋಟೆಯನ್ನು ವಶಪಡಿಸಿಕೊಂಡು ಅಲ್ಲೊಂದು ಟಂಕಶಾಲೆಯನ್ನು ಸ್ಥಾಪಿಸಿದನು. ಮುಂದೆ ಇದು ಶಸ್ತ್ರಾಸ್ತ್ರಗಳು ಮತ್ತು ಮದ್ದುಗುಂಡುಗಳ ತಯಾರಿಕೆಯ ಮುಖ್ಯ ಕೇಂದ್ರವಾಗಿಯೂ ಅದು ಬೆಳೆಯಿತು. ಕೋಟೆಯನ್ನು ಪುನರ್ ನಿರ್ಮಿಸಿ ಬಲಪಡಿಸಿದನು. ಕುಂದಾಪುರದ ಬಳಿ ಹೊಸಗಂಡಿ ಘಾಟ್, ಮಡಿಕೇರಿ,

ಕಬ್ಬಾಳುದುರ್ಗ, ೧೭೬೩ರಲ್ಲಿ ಮಂಗಳೂರನ್ನು ಗೆದ್ದು ಅಲ್ಲೊಂದು ಹಡಗುಕಟ್ಟೆಯನ್ನು, ಒಂದು ಶಸ್ತ್ರಾಸ್ತ್ರ ಕೋಠಿಯನ್ನು ನಿರ್ಮಿಸಿದನು. ಬೆಂಗಳೂರು, ಮಧುಗಿರಿ ಕೋಟೆಗಳನ್ನು ಪುನರ್‌ರಚಿಸಿದನು. ಟಿಪ್ಪುವು ಆಂಬೂರು ಕೋಟೆಯನ್ನು ೧೭೮೦ರಲ್ಲಿ ಗೆದ್ದನು. ಅದರ ಪುನರ್ನಿರ್ಮಾಣಕ್ಕೆ ಸುಮಾರು ಎರಡು ವರ್ಷ ತೆಗೆದುಕೊಂಡನು. ಮಲೆನಾಡಿನಲ್ಲಿ ಮಂಜರಾಬಾದ್ ಕೋಟೆ, ಮೈಸೂರಿನಲ್ಲಿ ಒಂದು ಹೊಸಕೋಟೆಯನ್ನು ಕಟ್ಟಿಸಿ ಅದನ್ನು ನಜರಾಬಾದ್ ಕೋಟೆ ಎಂದು ಕರೆದನು. ಹೀಗೆ ತಂದೆ ಮಕ್ಕಳಿಬ್ಬರೂ ಕೋಟೆಗಳ ನಿರ್ಮಾಣ ಮತ್ತು ಪುನರ‍್ರಚನೆಗೆ ವಿಶೇಷವಾದ ಒಲವು ತೋರಿದರು.

ಸುಸಜ್ಜಿತ ಸೇನೆಯ ಮೂಲಕ ಆಕ್ರಮಣಕ್ಕೆ ಹೆಸರಾಗಿದ್ದ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ರಕ್ಷಣೆಗೂ ಕೂಡ ಅಷ್ಟೇ ಮಹತ್ವ ನೀಡಿದ್ದರು. ಅದಕ್ಕಾಗಿ ಸಂಸ್ಥಾನದ ಆಯಕಟ್ಟಿನ ಸ್ಥಳಗಳಲ್ಲಿ ಕೋಟೆಗಳನ್ನು ಪುನರ್‌ನಿರ್ಮಿಸಿದರು. ಇವರ ಆಳ್ವಿಕೆಯ ಮೈಸೂರು ಸಂಸ್ಥಾನದಲ್ಲಿದ್ದ ಕೋಟೆಗಳನ್ನು ಎರಡು ಪ್ರಕಾರಗಳಾಗಿ ವಿಂಗಡಿಸಬಹುದು. ಅವುಗಳೆಂದರೆ:

೧. ಸಾಮಾನ್ಯ ಕೋಟೆಗಳು

೨. ಸೈನಿಕ ಕೋಟೆಗಳು.

ಸಾಮಾನ್ಯ ಕೋಟೆಗಳೆಂದರೆ ಜನಸಾಮಾನ್ಯರ ಬಳಕೆಗಾಗಿ ನಿರ್ಮಾಣಗೊಂಡಿರುವ ಕೋಟೆಗಳು. ಉದಾಹರಣೆಗೆ ಗ್ರಾಮವನ್ನು ಸುತ್ತುವರಿದ ಕೋಟೆಗಳು, ದೇವಾಲಯದ ಸುತ್ತಲು ನಿರ್ಮಿಸಿರುವ ಪ್ರಾಕಾರಗಳು ಇತ್ಯಾದಿ. ಈ ಕಾಲಘಟ್ಟವು ಹಿಂದಿನ ಅಧ್ಯಾಯದಲ್ಲಿ ತಿಳಿದಂತೆ ಸದಾ ಯುದ್ಧಗಳಿಂದ ಕೂಡಿತ್ತು. ಆದ್ದರಿಂದ ರಕ್ಷಣೆಗಾಗಿ ಜನರು ತಮ್ಮ ಗ್ರಾಮಗಳ ಸುತ್ತ ಕೋಟೆಗಳನ್ನು ಕಟ್ಟಿಕೊಳ್ಳುತ್ತಿದ್ದರು.[೨] ಇವುಗಳು ಜನರೇ ನಿರ್ಮಿಸಿಕೊಂಡ ಕೋಟೆಗಳಾದ್ದರಿಂದ ಅಷ್ಟೇನು ಬಲಿಷ್ಠವಾಗಿರುತ್ತಿರಲಿಲ್ಲ. ಇವುಗಳು ಸಾಮಾನ್ಯವಾಗಿ ಕಂದಕ, ಕೊತ್ತಳ, ಬತೇರಿಗಳನ್ನೇನು ಹೊಂದಿರುತ್ತಿರಲಿಲ್ಲ. ಈ ಹಳ್ಳಿ ಕೋಟೆಗಳನ್ನು ಕುರಿತು ಬ್ಯಾರಿ ಲೂಯಿಸ್ ಅವರು 'ವಿಲೇಜ್ ಡಿಫೆನ್ಸಸ್ ಆಫ್ ದಿ ಕರ್ನಾಟಕ ಮೈದಾನ್, ಎ.ಡಿ ೧೬೦೦-೧೮೦೦' ಎಂಬ ಲೇಖನದಲ್ಲಿ ವಿವರವಾಗಿ ಚರ್ಚಿಸಿದ್ದಾರೆ (೨೦೦೯).

ಆದರೆ ಸೈನಿಕ ಕೋಟೆಗಳಲ್ಲಿ ಅಧಿಕಾರಿ ವರ್ಗ, ರಾಜಪರಿವಾರ ಹಾಗೂ ಸಂಬಂಧಪಟ್ಟ ಸೈನಿಕರು ವಾಸಿಸುತ್ತಿದ್ದರು. ಅಲ್ಲದೆ ಖಜಾನೆ, ಅಮೂಲ್ಯ ಸಂಪತ್ತುಗಳ ಸಂಗ್ರಹ ಮತ್ತು ಧಾನ್ಯ ಸಂಗ್ರಹಗಳನ್ನು ಮಾಡಲಾಗುತ್ತಿತ್ತು. ಆದ್ದರಿಂದ ಸಂಸ್ಥಾನವನ್ನು ಗೆಲ್ಲುವುದು ಎಂದರೆ ಸೈನಿಕ ಕೋಟೆಗಳನ್ನು ಗೆಲ್ಲುವುದೇ ಏಸಃ ಗ್ರಾಮ ಗ್ರಾಮಗಳನ್ನು

ವಶಪಡಿಸಿಕೊಳ್ಳುವುದಾಗಿರಲಿಲ್ಲ. ಒಂದು ಸೈನಿಕ ಕೋಟೆಯನ್ನು ಗೆದ್ದರೆ ಅದರ ಅಧೀನದಲ್ಲಿರುವ ಎಲ್ಲ ಗ್ರಾಮ ಮತ್ತು ಪ್ರದೇಶಗಳು ತನಗೆತಾನೆ ಅಧೀನಕ್ಕೆ ಒಳಗಾಗುತ್ತಿದ್ದವು. ಆದ್ದರಿಂದ ಸೈನಿಕ ಕೋಟೆಗಳು ರಾಜಕೀಯವಾಗಿ, ಆರ್ಥಿಕವಾಗಿ ಮತ್ತು ಆಡಳಿತಾತ್ಮಕವಾಗಿ ಹೆಚ್ಚು ಮಹತ್ವವನ್ನು ಪಡೆದಿದ್ದವು.

ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿ ಅವರ ನಿಯಂತ್ರಣದಲ್ಲಿದ್ದ ಕೋಟೆಗಳನ್ನು ಕುರಿತು ಮುಜಾನಿದ್ ಖಾನ್ ಅವರು ತಮ್ಮ ಸಂಶೋಧನಾ ಮಹಾಪ್ರಬಂಧದಲ್ಲಿ ಹೀಗೆ ದಾಖಲಿಸಿದ್ದಾರೆ. ವಿವಿಧ ಬಗೆಯ ಕೋಟೆಗಳ ಒಟ್ಟು ಸಂಖ್ಯೆ ಸುಮಾರು ೨೦೮. ಇವುಗಳಲ್ಲಿ ೬೭ ಕೋಟೆಗಳನ್ನು ಟಿಪ್ಪುವು ಮೂರನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಕಳೆದುಕೊಂಡನು. ೧೭೯೮ರ ಸಂದರ್ಭದಲ್ಲಿ ಟಿಪ್ಪುವಿನ ನಿಯಂತ್ರಣದಲ್ಲಿದ್ದ ಕೋಟೆಗಳ ಸಂಖ್ಯೆ ೧೪೧. ಅವುಗಳಲ್ಲಿ ಪ್ರಧಾನ ಕೋಟೆಗಳು – ೨೭ ಮತ್ತು ಸಣ್ಣ ಕೋಟೆಗಳು – ೧೧೪. ೧೮೦೦ರಲ್ಲಿ ಕಂಪನಿ ಸರ್ಕಾರ ಮೈಸೂರಿನಲ್ಲಿ ಸರ್ವೇಕ್ಷಣೆಯನ್ನು ನಡೆಸಿದಾಗ ಮೈಸೂರು ೩೧ ಗಿರಿದುರ್ಗಗಳನ್ನು ಮತ್ತು ೯೨ ಸಾಮಾನ್ಯ ಕೋಟೆಗಳನ್ನು ಹಾಗೂ ಕೆಲವು ಜಲದುರ್ಗಗಳನ್ನೂ ಒಳಗೊಂಡಿತ್ತು. ಖಾನ್ ಅವರು ಟಿಪ್ಪು ಸುಲ್ತಾನನ ಆಳ್ವಿಕೆಗೆ ಒಳಪಟ್ಟಿದ್ದ ಕೋಟೆಗಳ ಪಟ್ಟಿಯನ್ನು ಹೀಗೆ ಮಾಡಿದ್ದಾರೆ (೨೦೦೭: ೨೦೦).

| | | |
|---|---|---|
| ಬೆಂಗಳೂರು | ೯ ಗಿರಿದುರ್ಗಗಳು | ೨೦ ಸಾಮಾನ್ಯ ದುರ್ಗಗಳು |
| ಮೆಹೊಗಿರಿ | ೮ ಗಿರಿದುರ್ಗಗಳು | ೧೨ ಸಾಮಾನ್ಯ ದುರ್ಗಗಳು |
| ಚಿತ್ರದುರ್ಗ | ೪ ಗಿರಿದುರ್ಗಗಳು | ೯ ಸಾಮಾನ್ಯ ದುರ್ಗಗಳು |
| ನಗರ (ಬಿದನೂರು) & ಶಿವಮೊಗ್ಗ | ೫ ಗಿರಿದುರ್ಗಗಳು | ೨೧ ಸಾಮಾನ್ಯ ದುರ್ಗಗಳು |
| ಅಷ್ಟಗ್ರಾಮ (ಶ್ರೀರಂಗಪಟ್ಟಣ) | ೨ ಗಿರಿದುರ್ಗಗಳು | ೨೧ ಸಾಮಾನ್ಯ ದುರ್ಗಗಳು |
| ಮಂಜರಾಬಾದ್ | ೩ ಗಿರಿದುರ್ಗಗಳು | ೯ ಸಾಮಾನ್ಯ ದುರ್ಗಗಳು |
| ಒಟ್ಟು | ೩೧ ಗಿರಿದುರ್ಗಗಳು | ೬೨ ಸಾಮಾನ್ಯ ದುರ್ಗಗಳು |

ಆದರೆ ಖಾನ್ ಅವರ ಈ ಅಂಕಿಅಂಶಗಳು ಸಾಕಷ್ಟು ಸಂಶಯಕ್ಕೆ ಎಡೆಮಾಡಿಕೊಡುತ್ತವೆ. ಏಕೆಂದರೆ, ಬುಕನಾನ್ ಹಾಗೂ ಮೆಕೆಂಜಿ ಅವರು ಮೈಸೂರು ಸಂಸ್ಥಾನವು ಭಾರಿ ಸಂಖ್ಯೆಯ ಸಣ್ಣ ಮತ್ತು ದೊಡ್ಡ ಕೋಟೆಗಳನ್ನು ಮತ್ತು ಕೋಟೆಯಿಂದ

ಆವೃತ್ತವಾದ ಪ್ರದೇಶಗಳನ್ನು ಒಳಗೊಂಡಿತ್ತು. ಅಲ್ಲದೆ, ಪ್ರತಿಯೊಂದು ಹಳ್ಳಿಗಳು ಕೂಡ ಕೋಟೆಗೋಡೆಗಳಿಂದ ರಕ್ಷಿಸಲ್ಪಟ್ಟಿತ್ತು ಮತ್ತು ಈ ಕೋಟೆಗಳು ಟಿಪ್ಪು ಸೇನೆಯ ನಿಯಂತ್ರಣದಲ್ಲಿದ್ದವು ಎಂದಿದ್ದಾರೆ. ಅಲ್ಲದೆ, ೧೮೬೧ರಲ್ಲಿ ಮೈಸೂರಿನ ಹಂಗಾಮಿ ಆಯುಕ್ತರಾದ ಚಾರ್ಲ್ಸ್ ಬಿ. ಸೌಂದರ್ಸ್ ಅವರು ಹೌಸ್ ಆಫ್ ಕಾಮನ್ಸ್‌ಗೆ ವರದಿ ನೀಡಿರುವಂತೆ ಮೈಸೂರು ಸಂಸ್ಥಾನದಲ್ಲಿ ೭,೪೧೭ ಗಿರಿದುರ್ಗಗಳು ಮತ್ತು ಗ್ರಾಮದುರ್ಗಗಳಿದ್ದವು. ಅವುಗಳಲ್ಲಿ ೧೫೯ ಗಿರಿದುರ್ಗಗಳಿದ್ದು, ೨೨ ಕೋಟೆಗಳು ಸುಸ್ಥಿತಿಯಲ್ಲಿದ್ದವು (ಬ್ಯಾರಿ ಲೂಯಿಸ್ ೨೦೧೨: ೧೬೭). ಟಿಪ್ಪು ಮರಣಹೊಂದಿದ ೬೦ ವರ್ಷಗಳ ನಂತರವೂ ಮೈಸೂರು ಸಂಸ್ಥಾನ ಒಂದರಲ್ಲಿಯೇ ಇಷ್ಟು ಸಂಖ್ಯೆಯ ಕೋಟೆಗಳಿವೆ ಎನ್ನುವುದಾದರೆ, ೧೭೯೯ಕ್ಕೆ ಮೊದಲು ಎಷ್ಟಿದ್ದಿರಬಹುದು ಎಂಬ ಪ್ರಶ್ನೆ ಕಾಡುತ್ತದೆ. ಟಿಪ್ಪು ಮರಣ ಹೊಂದಿದ ನಂತರ ಮೈಸೂರು ಸಂಸ್ಥಾನವನ್ನು ಹಂಚಿಕೆ ಮಾಡಿಕೊಂಡ ಮರಾಠರು, ನಿಜಾಮ, ಮೈಸೂರು ಒಡೆಯರ್ ಮನೆತನ ಮತ್ತು ಬ್ರಿಟಿಷರ ನೇರ ಆಳ್ವಿಕೆಗೆ ಒಳಪಟ್ಟ ಭೂಪ್ರದೇಶಗಳಲ್ಲಿ ಇದ್ದಿರಬಹುದಾದ ಕೋಟೆಗಳ ಸಂಖ್ಯೆ ಸರಿಸುಮಾರು ಇಪ್ಪತ್ತು ಸಾವಿರ ದಾಟಬಹುದು. ಸೌಂದರ್ಸ್ ಹೇಳುತ್ತಿರುವ ಸಂಖ್ಯೆಯು ಕೇವಲ ಮೈಸೂರು ಒಡೆಯರ ಆಳ್ವಿಕೆಯ ಭೂಪ್ರದೇಶದಲ್ಲಿರುವ ಕೋಟೆಗಳದ್ದಾಗಿದೆ. ಹೀಗಿರುವಾಗ ಖಾನ್ ಅವರು ಟಿಪ್ಪು ಕಾಲದ ಕೋಟೆಗಳನ್ನು ಕುರಿತು ನೀಡಿರುವ ಅಂಕಿಅಂಶಗಳು ಅಸಮರ್ಪಕವಾದುದೆಂದು ಹೇಳಬಹುದು.

ಟಿಪ್ಪುವಿನ ವಿಶಾಲ ಮೈಸೂರು ಸಂಸ್ಥಾನದಲ್ಲಿ ಗ್ರಾಮದುರ್ಗಗಳನ್ನು ಹೊರತುಪಡಿಸಿದರೂ ೫೦೦ಕ್ಕೂ ಅಧಿಕ ಸಂಖ್ಯೆಯ ಪ್ರಧಾನ ಕೋಟೆಗಳನ್ನು ಮತ್ತು ಸಣ್ಣಕೋಟೆಗಳನ್ನು ಗುರುತಿಸಲು ಸಾಧ್ಯವಿದೆ. ನಲ್ಲಪ್ಪ ತನ್ನ **ಹೈದರ್‌ನಾಮ**ದಲ್ಲಿ ಹೈದರಾಲಿಯು ಹೊಂದಿದ್ದ ೪೧೬ ಸೀಮೆಗಳನ್ನು ಹೆಸರಿಸಿದ್ದಾನೆ (ಶರ್ಮ ೧೯೯೯(೧೯೭೧): ೯೭–೧೦೪). ಒಂದೊಂದು ಸೀಮೆಯಲ್ಲಿಯೂ ಒಂದೊಂದು ಸೈನಿಕ ಕೋಟೆಗಳು ಇದ್ದಿರಲೇಬೇಕು ಎಂದರೂ ಸುಮಾರು ೪೦೦ಕ್ಕೂ ಹೆಚ್ಚು ಕೋಟೆಗಳಾಗುತ್ತವೆ. ಟಿಪ್ಪು ಕಾಲದಲ್ಲಿಯೂ ಸಂಸ್ಥಾನ ವಿಸ್ತರಣೆಯಾದ್ದರಿಂದ ಈ ಸಂಖ್ಯೆಯು ೫೦೦ರ ಆಸುಪಾಸಿಗೆ ನಿಲ್ಲುತ್ತದೆ. ಹೀಗಾಗಿ ಟಿಪ್ಪು ಆಳ್ವಿಕೆಯ ಕಾಲದ ಕೋಟೆಗಳ ಅಧ್ಯಯನ ಎಂಬುದು ಹಿಡಿತಕ್ಕೆ ಸಿಗದಷ್ಟು ವಿಸ್ತಾರವಾಗಿದೆ. ಆದ್ದರಿಂದ ಟಿಪ್ಪು ಕಾಲದ ಕೆಲವು ಕೋಟೆಗಳನ್ನು ಮಾತ್ರ ಪ್ರಾತಿನಿಧಿಕವಾಗಿ ತೆಗೆದುಕೊಂಡು ಅಧ್ಯಯನ ನಡೆಸಲಾಗಿದೆ.

ಟಿಪ್ಪು ಕೋಟೆಗಳನ್ನು ಕುರಿತು ಅಧ್ಯಯನ ಕೈಗೊಳ್ಳುವ ಮೊದಲು ಅವುಗಳನ್ನು ವರ್ಗೀಕರಣ ಮಾಡಿಕೊಳ್ಳುವುದು ಸೂಕ್ತವಾಗಿದೆ. ಟಿಪ್ಪು ಕೋಟೆಗಳನ್ನು ಅಧ್ಯಯನದ

ದೃಷ್ಟಿಯಿಂದ ಪ್ರಧಾನ ಕೋಟೆಗಳು ಮತ್ತು ಸಣ್ಣ ಕೋಟೆಗಳೆಂದು ಸರಳ ವರ್ಗೀಕರಣ ಮಾಡಿಕೊಳ್ಳಲಾಗಿದೆ. ಅವುಗಳು ಹೀಗಿವೆ:

**೧. ಪ್ರಧಾನ ಕೋಟೆಗಳು**

ರಾಜಧಾನಿ ಮತ್ತು ಪ್ರಾಂತೀಯ ಕೇಂದ್ರಗಳಲ್ಲಿರುವ ಹಾಗೂ ಆಯಕಟ್ಟಿನ ಸ್ಥಳಗಳಲ್ಲಿವ ಕೋಟೆಗಳನ್ನು ಪ್ರಧಾನ ಕೋಟೆಗಳೆಂದು ಗುರುತಿಸಲಾಗುವುದು. ಈ ಕೋಟೆಗಳು ಹೆಚ್ಚಿನ ಮೊತ್ತದ ಕಂದಾಯವನ್ನು ಸಂಗ್ರಹಿಸುವ ಭೂಭಾಗಗಳನ್ನು ನಿಯಂತ್ರಣದಲ್ಲಿಟ್ಟುಕೊಂಡಿರುತ್ತವೆ. ಅಲ್ಲದೆ, ದೊಡ್ಡಮಟ್ಟದ ಸೈನಿಕ ಠಾಣೆಗಳಾಗಿಯೂ ಕಾರ್ಯನಿರ್ವಹಿಸುತ್ತಿರುತ್ತವೆ. ಸಾಮಾನ್ಯವಾಗಿ ರಾಜಪರಿವಾರದವರು ಅಥವಾ ರಾಜನಿಗೆ ಆಪ್ತರಾದವರು ಈ ಕೋಟೆಗಳ ಮೇಲ್ವಿಚಾರಣೆ ನಡೆಸುತ್ತಿರುತ್ತಾರೆ. ಒಟ್ಟಾರೆಯಾಗಿ, ಪ್ರಧಾನ ಕೋಟೆಗಳು ತೆರಿಗೆ ಮತ್ತು ಕಂದಾಯ ಸಂಗ್ರಹ ಹಾಗೂ ರಕ್ಷಣಾ ಉದ್ದೇಶವನ್ನು ಹೊಂದಿದ್ದು, ಆರ್ಥಿಕ, ಆಡಳಿತಾತ್ಮಕ ಮತ್ತು ಸೈನಿಕ ದೃಷ್ಟಿಯಿಂದ ಮಹತ್ವದ್ದಾಗಿರುತ್ತವೆ.

**೨. ಸಣ್ಣ ಕೋಟೆಗಳು**

ಈ ಕೋಟೆಗಳು ಸಂಸ್ಥಾನದ ವಿವಿಧ ಭಾಗಗಳಲ್ಲಿ ಹರಡಿರುತ್ತವೆ. ಸಣ್ಣ ಕೋಟೆಗಳು ರಕ್ಷಣೆಯ ಉದ್ದೇಶವನ್ನು ಪ್ರಮುಖವಾಗಿ ಹೊಂದಿರುತ್ತೇವೆ. ಇವುಗಳಲ್ಲಿ ಕಂದಾಯ ಹುಟ್ಟುವಳಿಯ ಪ್ರಮಾಣ ಗಣನೀಯವಾಗಿರುವುದಿಲ್ಲ. ಅನೇಕ ವೇಳೆ ಈ ಕೋಟೆಗಳು ಖೈದಿಗಳನ್ನು ಬಂಧಿಸಿಡುವ ಮತ್ತು ಶಿಕ್ಷಿಸುವ ಉದ್ದೇಶಗಳ ಜೊತೆಗೆ ಸಂಸ್ಥಾನದ ಮೇಲೆ ದಂಡೆತ್ತಿಬರುವ ಶತ್ರುಪಡೆಗಳ ಸೂಚನೆಯನ್ನು ಅರಿತು ಸುಲ್ತಾನನಿಗೆ ಸಂದೇಶ ರವಾನಿಸುವ ಕಾರ್ಯ ಮಾಡುತ್ತವೆ. ರಾಜನು ತನಗೆ ನಿಷ್ಠರಾದ ವ್ಯಕ್ತಿಗಳನ್ನು ಈ ಕೋಟೆಗಳ ಮೇಲ್ವಿಚಾರಣೆ ನಡೆಸುವ ಕಿಲ್ಲೇದಾರರನ್ನಾಗಿ ನೇಮಿಸಿರುತ್ತಾನೆ.

ಟಿಪ್ಪು ಕಾಲದ ಕೋಟೆಗಳನ್ನು ಭೌಗೋಳಿಕ ಹಿನ್ನೆಲೆಯಲ್ಲಿ ಮುಜಾನಿದ್ ಖಾನ್ ಅವರು ಮೂರು ಪ್ರಕಾರಗಳಾಗಿ ವಿಂಗಡಿಸಿದ್ದಾರೆ (೨೦೦೭: ೧೯೯-೨೦೧).

೧. ಮೈದಾನ ಪ್ರದೇಶಗಳಲ್ಲಿ ನೆಲದ ಮೇಲಿರುವ ಕೋಟೆಗಳು.

೨. ಗಿರಿ ದುರ್ಗಗಳು.

೩. ನದಿ ಮಧ್ಯೆ ಅಥವಾ ಜಲದುರ್ಗದ ಕೋಟೆ.

ಖಾನ್ ಅವರ ವಿಂಗಡಣೆ ಸಾಂಪ್ರದಾಯಿಕವಾದುದಾಗಿದೆ. ಭೌಗೋಳಿಕ ನೆಲೆಗಟ್ಟಿನಲ್ಲಿಯೇ ಇನ್ನೂ ಭಿನ್ನವಾದ ರೀತಿಯಲ್ಲಿ ಟಿಪ್ಪು ಸುಲ್ತಾನನ ಕೋಟೆಗಳನ್ನು ಎಸ್.ಕೆ. ಅರುಣಿ ಅವರು ಅಪ್ರಕಟಿತ ಲೇಖನವೊಂದರಲ್ಲಿ ಹೀಗೆ ವಿಂಗಡಿಸಿದ್ದಾರೆ:

೧. ಕೇಂದ್ರದ ಕೋಟೆಗಳು : ಶ್ರೀರಂಗಪಟ್ಟಣ, ಬೆಂಗಳೂರು ಇತ್ಯಾದಿ

೨. ದಕ್ಷಿಣದ ಕೋಟೆಗಳು : ಕೃಷ್ಣಗಿರಿ, ರಾಯ್‌ಕೋಟ್ಟೈ ಇತ್ಯಾದಿ.

೩. ಉತ್ತರದ ಕೋಟೆಗಳು : ಚಿತ್ರದುರ್ಗ, ಬಾದಾಮಿ ಇತ್ಯಾದಿ.

೪. ಮಲೆನಾಡಿನ ಕೋಟೆಗಳು : ಮಡಿಕೇರಿ, ನಗರ ಇತ್ಯಾದಿ.

೫. ಕರಾವಳಿಯ ಕೋಟೆಗಳು : ಬೇಕಲ್, ಮಂಗಳೂರು ಇತ್ಯಾದಿ.

ನದಿಗಳು, ಗಿರಿಗಳು ಮತ್ತು ಮೈದಾನಗಳು ಬೇರೆ ಬೇರೆ ಭೌಗೋಳಿಕ ಪ್ರದೇಶಗಳಲ್ಲಿಯೂ ಕಂಡುಬರುತ್ತವೆ. ಆದರೆ ಭೌಗೋಳಿಕ ಹಿನ್ನೆಲೆಯಲ್ಲಿ ಕೋಟೆಗಳ ರಚನೆಯ ಸಾಧನ ಮತ್ತು ಸ್ವರೂಪದಲ್ಲಿಯೂ ಭಿನ್ನತೆಗಳಿರುತ್ತವೆ. ಉದಾಹರಣೆಗೆ ಬೇಕಲ್ ಕೋಟೆಯನ್ನು ಜಂಬಿಟ್ಟಿಗೆಯಲ್ಲಿ ನಿರ್ಮಿಸಲಾಗಿದೆ. ಶ್ರೀರಂಗಪಟ್ಟಣದ ಕೋಟೆಯನ್ನು ಕಲ್ಲಿನಿಂದ ನಿರ್ಮಿಸಲಾಗಿದೆ. ಆದರೆ ಎರಡೂ ಕೋಟೆಗಳನ್ನು ಜಲದುರ್ಗಗಳು ಎಂದು ಪರಿಗಣಿಸಬೇಕಾಗುತ್ತದೆ. ಹಾಗೆ ನೋಡಿದರೆ ಬೇಕಲ್ ಪೂರ್ಣ ಜಲದುರ್ಗವೂ ಅಲ್ಲ. ಏಕೆಂದರೆ ಒಂದು ಭಾಗ ಭೂಭಾಗದ ಜೊತೆಗೆ ಹೊಂದಿಕೊಂಡಿದೆ. ಅಂದರೆ ಪರ್ಯಾಯ ದ್ವೀಪದಂತೆ ಇದೆ. ಆಗಿದ್ದ ಮೇಲೆ ಇದನ್ನು ಯಾವ ಪ್ರಕಾರಕ್ಕೆ ಸೇರಿಸಬೇಕು ಎಂಬ ಗೊಂದಲಗಳು ಮೂಡುತ್ತವೆ. ಆದ್ದರಿಂದ ಖಾನ್ ಅವರು ಹೇಳುವಂತಹ ವಿಂಗಡಣಾ ವಿಧಾನವನ್ನು ಒಪ್ಪಲಾಗದು. ಇನ್ನು ಎಸ್.ಕೆ. ಅರುಣಿ ಅವರ ವಿಂಗಡಣೆಯು ವೈಜ್ಞಾನಿಕ ದೃಷ್ಟಿಯಿಂದ ಒಪ್ಪಬಹುದಾದರೂ ಇಲ್ಲಿ ಕೇಂದ್ರದ ಕೋಟೆಗಳು, ಉತ್ತರದ ಕೋಟೆಗಳು ಮತ್ತು ದಕ್ಷಿಣದ ಕೋಟೆಗಳೆಂದು ವಿಂಗಡಿಸುವ ಸಂದರ್ಭದಲ್ಲಿ ಪ್ರದೇಶಗಳನ್ನು ವಿಂಗಡಿಸಲು ನಿರ್ದಿಷ್ಟ ಮಾನದಂಡಗಳ ಅಗತ್ಯತೆ ಇದೆ. ಇಲ್ಲಿ ಮುಖ್ಯವಾದ ಪ್ರಶ್ನೆ ಏನೆಂದರೆ ಉತ್ತರದ ಕೋಟೆಗಳು, ಕೇಂದ್ರದಲ್ಲಿನ ಕೋಟೆಗಳು ಮತ್ತು ದಕ್ಷಿಣದ ಕೋಟೆಗಳ ನಡುವೆ ರಚನೆ ಮತ್ತು ವಿನ್ಯಾಸದಲ್ಲಿ ಏನಾದರೂ ಭಿನ್ನತೆಗಳಿವೆಯೇ? ಗಮನಾರ್ಹವಾದ ವ್ಯತ್ಯಾಸಗಳಿಲ್ಲದ ಮೇಲೆ ಈ ರೀತಿಯ ಪ್ರಾದೇಶಿಕ ವಿಂಗಡಣೆಯ ಅಗತ್ಯವಿದೆಯೇ ಎಂಬ ಪ್ರಶ್ನೆ ಉದ್ಭವಾಗುತ್ತದೆ. ಆದ್ದರಿಂದ ಅರುಣಿ ಅವರ ಮಾದರಿಗಳನ್ನೇ ಆಧರಿಸಿ ಇನ್ನೂ ಸಂಕ್ಷಿಪ್ತವಾಗಿ ಟಿಪ್ಪು ಕಾಲದ ಕೋಟೆಗಳನ್ನು ವಿಂಗಡಿಸಿಕೊಳ್ಳಲಾಗಿದೆ.

೧. ಒಳನಾಡಿನ ಕೋಟೆಗಳು: ಶ್ರೀರಂಗಪಟ್ಟಣ, ಬೆಂಗಳೂರು, ಚಿತ್ರದುರ್ಗ, ಬಾದಾಮಿ, ವೆಲ್ಲೂರು, ಪೆನುಗೊಂಡ ಇತ್ಯಾದಿ.

೨. ಮಲೆನಾಡಿನ ಕೋಟೆಗಳು: ಮಡಿಕೇರಿ, ಮಂಜರಾಬಾದ್, ನಗರ ಇತ್ಯಾದಿ.

೩. ಕರಾವಳಿಯ ಕೋಟೆಗಳು: ಬೇಕಲ್, ಮಂಗಳೂರು, ಭಟ್ಕಳ ಇತ್ಯಾದಿ.

### ೩.೨.೩ ಹೈದರಾಲಿ ಮತ್ತು ಟಿಪ್ಪು ಸುಲ್ತಾನನ ಆಳ್ವಿಕೆಗೆ ಒಳಪಟ್ಟ ಪ್ರಮುಖ ಕೋಟೆಗಳು

ಹೈದರಾಲಿ ಮತ್ತು ಟಿಪ್ಪು ಸುಲ್ತಾನನ ಆಳ್ವಿಕೆಗೆ ಒಳಪಟ್ಟ ದಕ್ಷಿಣ ಭಾರತದ ವಿಶಾಲವಾದ ಭೂಪ್ರದೇಶದಲ್ಲಿ ಸಾವಿರಾರು ಕೋಟೆಗಳಿದ್ದವು. **ಹೈದರ್‌ನಾಮ** ಮತ್ತು **ಶ್ರೀಮನ್ಮಹಾರಾಜರ ವಂಶಾವಳಿ ಭಾಗ–೧** ಕೃತಿಗಳಲ್ಲಿ ಹೈದರಾಲಿಯು ಪಾಳೆಯಗಾರರಿಂದ ಗೆದ್ದ ಸೀಮೆಗಳ ವಿವರಗಳನ್ನು ಪಟ್ಟಿ ಮಾಡಿದೆ. ಸಾಮಾನ್ಯವಾಗಿ ಪ್ರತಿ ಪಾಳೆಯಗಾರರು ಕೂಡ ತಮ್ಮ ತಮ್ಮ ಸೀಮೆಗಳನ್ನು ಕೋಟೆಗಳ ಮೂಲಕವೇ ಆಳುತ್ತಿದ್ದರು. ಏಕೆಂದರೆ, ೧೮ನೆಯ ಶತಮಾನದಲ್ಲಿ ರಾಜಕೀಯ ಅರಾಜಕತೆಯ ವಾತಾವರಣವಿದ್ದುದರಿಂದ ರಕ್ಷಣೆಯ ದೃಷ್ಟಿಯಿಂದ ಕೋಟೆ ಅತ್ಯಂತ ಮಹತ್ವವಾಗಿದ್ದವು ಎಂಬುದನ್ನು ಹಿಂದಿನ ಅಧ್ಯಾಯದಲ್ಲಿ ತಿಳಿಯಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರತಿಯೊಬ್ಬ ಪಾಳೆಯಗಾರನು ಕೂಡ ತನ್ನದೆಯಾದ ಕೆಲವು ಕೋಟೆಗಳನ್ನು ಕಟ್ಟಿಕೊಳ್ಳುತ್ತಿದ್ದರು. ಈ ದೃಷ್ಟಿಯಿಂದ ಹೈದರಾಲಿಯು ಗೆದ್ದ ಸೀಮೆಗಳಲ್ಲಿ ಕನಿಷ್ಠ ಒಂದಾದರೂ ದೊಡ್ಡ ಕೋಟೆ ಅಥವಾ ಸಣ್ಣಕೋಟೆ ಇದ್ದವು. ಅವುಗಳಲ್ಲಿ ನೆಲದುರ್ಗ, ಗಿರಿದುರ್ಗ ಮತ್ತು ಜಲದುರ್ಗಗಳೂ ಸೇರಿವೆ. ಒಟ್ಟಾರೆ, ಹೈದರಾಲಿ ಮತ್ತು ಟಿಪ್ಪು ಸುಲ್ತಾನನ ಆಳ್ವಿಕೆಯ ಕಾಲದಲ್ಲಿದ್ದ ಮೈಸೂರು ಸಂಸ್ಥಾನದ ಸೀಮೆಗಳನ್ನು ಈ ಮುಂದೆ ಪಟ್ಟಿ ಮಾಡಲಾಗಿದೆ.

೧)ಶ್ರೀರಂಗಪಟ್ಟಣ ೨)ಮೈಸೂರು ೩)ಮದ್ದೂರು ೪)ಮಳವಳ್ಳಿ ೫)ಚನ್ನಪಟ್ಟಣ ೬)ನಾಗಮಂಗಲ ೭)ರಾಮಗಿರಿ ೮)ಅರಕಲಗೂಡು ೯)ಬೆಟ್ಟದಪುರ ೧೦)ನರಸಿಂಹಪುರ ೧೧)ಪಿರಿಯಾಪಟ್ಣ ೧೨)ಸಾಲಿಗ್ರಾಮ ೧೩)ಕೊಣನೂರು ೧೪)ಹೊಸಹೊಳಲು ೧೫)ಶಿಂಧಗಟಾ ೧೬)ಹೆಬ್ಬೂರು ೧೭)ಮಾಕಳಿದುರ್ಗ ೧೮)ಚನ್ನರಾಯನದುರ್ಗ ೧೯)ಚಿಟಕಲದುರ್ಗ ೨೦)ಅನಂತಗಿರಿ ೨೧)ವೀರಭದ್ರನದುರ್ಗ ೨೨)ದಿಂಡುಗಲ್ಲು ೨೩)ಶಿರಿಯೂರು ೨೪)ಮೇಲುಕೋಟೆ ೨೫)ಚನ್ನರಾಯಪಟ್ಣ ೨೬)ಅತ್ತಿಗುಪ್ಪೆ ೨೭)ಮಂಮ್ಮತ್ತೂರು ೨೮)ತರಗಳ ಗರಗೂರು ೨೯)ಹೊಂಗನೂರು ೩೦)ಮಂಗಳಾ ೩೧)ಕೊಳಾಗಾಲಾ ೩೨)ಸತ್ಯಾಗಾಲಾ ೩೩)ತಲಕಾಡು ೩೪)ನಂಜನಗೂಡು ೩೫)ಉದ್ದುಬೂರು ೩೬)ಹುಲ್ಲಹಳ್ಳಿ ೩೭)ಮೂಗೂರು ೩೮)ಯಳವಂದೂರು ೩೯)ಕೊತ್ತಾಗಾಲಾ ೪೦)ಸೊಸಲೆ ೪೧)ತಾಯೂರು ೪೨)ಕಟೆ ಮರಳವಾಡಿ ೪೩)ಕಿಕ್ಕರೆ ೪೪)ಎಡತೊರೆ ತಿಪ್ಪೂರು ೪೫)ಸಕ್ಕರಾಯಪಟ್ಣ ೪೬)ಬಾಣಾವಾರ ೪೭)ತೆರದೊಡಾ ೪೮)ಕರೂರು ೪೯)ಜೇಲೂರು ೫೦)ಚಿಕ್ಕಮಗಳೂರು ೫೧)ಹಾಸನ ೫೨)ಹಾರನಹಳ್ಳಿ ೫೩)ಕಾನಕಾನಹಳ್ಳಿ ೫೪)ಹೊಸೂರು ೫೫)ಹಾರನಹಳ್ಳಿ ೫೬)ಭೈರವನದುರ್ಗ ೫೭)ಬೆಂಗಳೂರು ೫೮)ಕೆಂಗೇರಿ ೫೯)ನಿಜಗಿರಿ ಶೂರಗಿರಿ ೬೦)ಮಧುಗಿರಿ ೬೧)ದೇವರಾಯನದುರ್ಗ ೬೨)ಮಾಗಡಿ ೬೩)ಮಿಡಿಗೇಶಿ ೬೪)ಸೂಳಗಿರಿ ೬೫)ದೇವನಹಳ್ಳಿ

೬೬)ಅಂಕುಶಗಿರಿ ೬೭)ಡಣಾಯಕನಕೋಟೆ ೬೮)ಪೆರಂದೊರೆ ೬೯)ಕರೂರು ೭೦)ಪರಮತ್ತಿ ೭೧)ಶಾದಮಂಗಲ ೭೨)ಈರೋಡು ೭೩)ಚಕ್ರಗಿರಿ ೭೪)ಚಮೂರು ೭೫)ಉತ್ತಂಗುಡಿ ೭೬)ಸತ್ಯಮಂಗಲಾ ೭೭)ಕಾವೇರಿಪಟ್ಲ ೭೮)ತೆಂಗೆರಕೋಟೆ ೭೯)ಪಲ್ಲಡ ೮೦)ಕರಮೂರು ೮೧)ದೊಡ್ಡಬಳ್ಳಾಪುರ ೮೨)ಆನೇಕಲ್ಲು ೮೩)ನಂದಿದುರ್ಗ ೮೪)ಚಿಕ್ಕಬಳ್ಳಾಪುರ ೮೫)ಮುಳುಬಾಗಿಲು ೮೬)ಹೊಸಕೋಟೆ ೮೭)ಮಡಕಶಿರಾ ೮೮)ಪಾವಗಡ ೮೯)ಹೊಡೆದುರ್ಗ ೯೦)ಕೊರಟಗೆರೆ ೯೧)ಕಳಲೆ ೯೨)ಹರದನಹಳ್ಳಿ ೯೩)ನೆಲಮಂಗಲ ೯೪)ಹುತ್ರಿದುರ್ಗ ೯೫)ಗರುಡನಗಿರಿ ೯೬)ತುರುವೇಕೆರೆ ೯೭)ಹೊನ್ನವಳ್ಳಿ ೯೮)ಕಂದಿಕೆರೆ ೯೯)ಚಿಕ್ಕನಾಯಕನಹಳ್ಳಿ ೧೦೦)ತೆರಕಣಾಂಜಿ ೧೦೧)ಹೆಗ್ಗಡದೇವನಕೋಟೆ ೧೦೨)ಹುಲಿಯೂರುದುರ್ಗ ೧೦೩)ಕಡಬಾ ೧೦೪)ಕುಣಿಗಲ್ ೧೦೫)ಬೆಳ್ಳೂರು ೧೦೬)ವಸುದಾರೆ ೧೦೭)ಮಹಾರಾಜನದುರ್ಗ ೧೦೮)ಗ್ರಾಮಾ ೧೦೯)ನುಗ್ಗೆಹಳ್ಳಿ ೧೧೦)ಡೆಂಕಣಿಕೋಟೆ ೧೧೧)ರಾಪುಗಿರಿ ೧೧೨)ನೆಂಮ್ಮಲಕೋಟೆ ೧೧೩)ಪೆಂನಾಗರ ೧೧೪)ಕೊಯಮತ್ತೂರು ೧೧೫)ಕನ್ಯಾ ೧೧೬)ವಿಜಯಮಂಗಲಾ ೧೧೭)ಶಂಖಗಿರಿ ೧೧೮)ಶಾಲ್ಯಾ ೧೧೯)ಧಾರಾಪುರ ೧೨೦)ನಾಮಕಲ್ಲು ೧೨೧)ಚಂಚೆರಿ ೧೨೨)ಅಂಬೂರು ೧೨೩)ಕಾವೇರಿಪುರ ೧೨೪)ಧರ್ಮಪುರಿ ೧೨೫)ಕೋಲಾರ ೧೨೬)ಬಾಗಲೂರು ೧೨೭)ಕಲ್ಯಾವಿ ೧೨೮)ರತ್ನಗಿರಿ ೧೨೯)ಹಂಚವಟಿದುರ್ಗ ೧೩೦)ಹಾಗಲವಾಡಿ ೧೩೧)ಗುಬ್ಬಿಹೊಸಹಳ್ಳಿ ೧೩೩)ಯಲ್ಲಪದಾಯ್ಯನ ಹೊಸಕೋಟೆ ೧೩೪)ಜಂಗಮಕೋಟೆ ೧೩೫)ಜವಾದಿಪಾಳ್ಯ ೧೩೬)ಜಗದೇವು ೧೩೭) ಗಗನಗಢ ೧೩೮)ಕೃಷ್ಣಗಿರಿ ೧೩೯)ಶಿರಾ ೧೪೦)ಪೆನುಗೊಂಡೆ ೧೪೧)ಕರೂರುಗಢ ೧೪೨)ವಾನಂಬಾಡಿ ೧೪೩)ಮತ್ತೂರು ೧೪೪)ಪೆರಿಪಲ್ಲಿ ೧೪೫)ತಿರುಪತ್ತೂರು ೧೪೬)ಮಹಾರಾಜನದುರ್ಗ ೧೪೭)ಶಿಂಗರಪ್ಯಾಟೆ ೧೪೮)ಸುದರ್ಶನಗಢ ೧೪೮) ಕಲ್ಲಾವಿ ೧೪೯)ನಿಟೂರು ಭೋಗಸಂದ್ರ ೧೫೦)ಪವನಗಢ ೧೫೧)ರಾಯಕೋಟೆ ೧೫೨)ಪೆರಸಾಪುಲ ೧೫೩)ತಿಮ್ಮನಾಯ್ಕನ ಪ್ಯಾಟೆ ೧೫೪)ಹಾವೇರಿ ೧೫೫)ಯಡವಿ ೧೫೬)ಶಿಂಗಮಲ ೧೫೭)ತಾಡಮರಿ ೧೫೮)ವೇಮಲಪಾಡು ೧೫೯)ಮದ್ದಿಕೆರೆ ೧೬೦)ಮುನಿಮಡಗೂ ೧೬೧)ಹವೇರಿ ೧೬೨)ಗಡೆಹೊತ್ತೂರು ೧೬೩)ಗಾದಿಗನೂರು ೧೬೪)ಹಾವಳಿಗಿ ೧೬೫)ಕಡತಾನಿ ೧೬೬)ಹಂಪಿ ೧೬೭)ಯರದಿಂಮ ೧೬೮)ನಾಯನಿಚೆರು ೧೬೯)ಜನಗಾನಪಲ್ಲಿ ೧೭೦)ಮೆದೂರು ರಾಮೇಶ್ವ ೧೭೧)ಪಾಮಡಿ ೧೭೨)ದಂಮೂರು ೧೭೩)ಯಡಪನಕಲ್ಲು ೧೭೪)ಕುರುಗೋಡು ೧೭೫)ತೆಕ್ಕಲುಕೋಟೆ ೧೭೬)ನರಲುಗುಂದಾ ೧೭೭)ಕುಸುಗಲ್ಲು ೧೭೮)ಪ್ಯಾಪಲಿ ೧೭೯)ಚನ್ನಂಪಲ್ಲಿ ೧೮೦)ಕೊನಕೊಂಡ ೧೮೧)ಉಯ್ಯಾಲವಾಡಿ ಸಂಗಾರಟ್ಲ ೧೮೨)ಅನಂತಪುರ ೧೮೩)ಉರುವಕೊಂಡ ೧೮೪)ಹಳೆ ಹುಬಲಿ ೧೮೫)ಕಲ್ಲಿಘಟ್ಟ ೧೮೬)ಗದಗ ೧೮೭)ಲಕ್ಷ್ಮೇಶ್ವರ ೧೮೮)ಪಾಲಘಾಟಚೆರಿ ೧೮೯)ಸೊಂಡೂರು ೧೯೦)ಹಿರಿಯಾಳು

೧೯೧)ತಾಡಪರ್ತಿ ೧೯೨)ಯಲ್ಲಾನೂರು ೧೯೩)ನಡಮೆ ದೂಡಿ ೧೯೪)ವಜ್ರಕರೂರು ೧೯೫)ಶಿರಹಟ್ಟಿ ೧೯೬)ಕಲ್ಲಿಕೋಟೆ ೧೯೭)ಹರಿಹರ ೧೯೮)ಮುತ್ತೋಡು ೧೯೯)ತೊರಗ ೨೦೦)ಚೌಟರ ಬಂಗಾರ ೨೦೧)ಕಲ್ಯಾಣದುರ್ಗ ೨೦೨)ಕೊತ್ತಚರು ೨೦೩)ಬುಕ್ಕಾಪಟ್ಣ ೨೦೪)ಬಸವಾಪಟ್ಣ ೨೦೫)ಹಾವೇರಿ ಬಿದೂರು ೨೦೬)ಭದ್ರಾವತಿ ೨೦೭)ಕುಂಶಿ ೨೦೮)ಅಂಗ ೨೦೯)ಆನವಟ್ಟಿ ೨೧೦)ತರಿಕೆರೆ ೨೧೧)ಲಕವಳಿ ೨೧೨)ಚಂದ್ರಾಗುತ್ತಿ ೨೧೩)ಅನಂತಪುರ ೨೧೪)ಇಕ್ಕೇರಿ ಸಾಗರ ೨೧೫)ಚನ್ನಗಿರಿ ೨೦೬)ಮಾವಿನಹೊಳೆ ೨೦೭)ಕೆಂಪಾ ೨೦೮)ಯಡಹಳ್ಳಿ ೨೦೯)ಸಂತೆಬಿದನೂರು ೨೧೦)ಮಂಗಳೂರು ೨೧೧)ಕೊಡಿಯಾಲ ೨೧೨)ಸದಾಶಿವಗಢ ೨೧೩)ಕೊಲ್ಲೂರು ೨೧೪)ಉಡುಪಿ ೨೧೫)ಗೋಕರ್ಣ ೨೧೬)ಇಕ್ಕೇರಿ ೨೧೭)ಶಿವಮೊಗ್ಗ ೨೧೮)ಹೊಳೆಹೊನ್ನೂರು ೨೧೯)ಉಡುಗಣಿ ೨೨೦)ಕವಲೆದುರ್ಗ ೨೨೧)ಮಹಾದೇವಪುರ ಶಿಖಾರಿಪುರ ೨೨೨)ದರಿಯಾಬಹದರಿಗಡಾ ೨೨೩)ಕೋಟೀಶ್ವರ ೨೨೪)ಆಯನೂರು ೨೨೫)ಹೊನ್ನಾಳಿ ೨೨೬)ಅಜ್ಜಂಪುರ ೨೨೭)ಮಂಡಗದ್ದೆ ೨೨೮)ದಾನಿವಾಸಾ ೨೨೯)ಚಡಯಾ ೨೩೦)ಸೊರಬ ೨೩೧)ಬಲ್ಲಾಳರಾಯನದುರ್ಗ ೨೩೨)ಅಣಜಿ ೨೩೩)ಪಾಯನಘಾಟಿ ೨೩೪)ಬಾರಕೂರು ೨೩೫)ಕಾರ್ಕಳ ೨೩೬)ಚಿಕ್ಕಾಲ ೨೩೭)ಶೃಂಗೇರಿ ೨೩೮)ಕುಂದಾಪುರ ೨೩೯)ಹೊನ್ನಾವರ ೨೪೦)ಮೂಡಬಿದಿರೆ ೨೪೧)ಬಸವರಾಜದುರ್ಗ ೨೪೨)ಕೂಡ್ಲಿ ೨೪೩)ಕಂಗೊಂದಿ ೨೪೪)ಕಸಬೆ ೨೪೫)ಹೇರೂರು ೨೪೬)ನಡಮೀಪಟ್ಣ ೨೪೭)ಶಾಂತಪುರ ೨೪೮)ನಾಗನೂರು ೨೪೯)ಸೊದೆ ೨೫೦)ಹಳೆಹಾಳು ೨೫೧)ಬಾಳೂರು ೨೫೨)ಭರತನಹಳ್ಳಿ ೨೫೩)ಮಳಗಿ ೨೫೪)ನಂದಿಕಟ್ಟೆ ೨೫೫)ಮಂಜಗುಣಿ ೨೫೬)ಮುಡುಗೊಂಡೆ ೨೫೭)ಕುಳೆಗಾಡು ೨೫೮)ಶಿರಸಿ ೨೫೯)ಸಾಂಬ್ರಾಣಿ ೨೬೦)ಯಿಸಳಾರು ೨೬೧)ಶಿವಳ್ಳಿ ೨೬೨)ಬದನಗೋಡು ೨೬೩)ಯಲ್ಲಾಪುರ ೨೬೪)ತೋಟದ ಸೀಮೆ ೨೬೫)ಯಲ್ಲಾಪುರ ೨೬೬)ಚಿನ್ನಾಪುರ ೨೬೭)ಬನವಾಸಿ ೨೬೮)ಉಳಿವಿ ೨೬೯)ಹುತ್ತಬಂಡಾ ೨೭೦)ಮೆಣಸಿ ೨೭೧)ಕಡಪ ೨೭೨)ಕೊತ್ತಕೋಟ ೨೭೩)ಹವೇಲಿ ೨೭೪)ಗುರಂಕೊಂಡ ೨೭೫)ಮಿರ್ಜಾನ ೨೭೬)ಕಸಬೆ ೨೭೭)ಬಾಡಾ ೨೭೮)ಕುದುರೆ ೨೭೯)ಶಿವೇಶ್ವರ ೨೮೦)ಕಡಿವಾರ ೨೮೧)ಬದ್ದವೇಲಾ ೨೮೨)ಚಂಗೂರು ೨೮೩)ಆಐರಿ ಕಾಲವ ೨೮೪)ಖಂಬಂ ೨೮೫)ಮರೆಳ್ಳಾ ೨೮೬)ಗುಂಡ್ಲೂರು ರಾಚೋಟಿ ೨೮೭)ಮುಲಿವೆಂದಲಾ ೨೮೮)ತೊಟಾಲ ಎಡವಲ್ಲಿ ೨೮೯)ಪಿಟೇರಗೋಟಕಾಲವ ೨೯೦)ಮದನಪಲ್ಲಿ ೨೯೧)ಪೆದ್ದಪಾಳ್ಯಂ ೨೯೨)ದಾದಿನಾಯಕನ ಪಾಳ್ಯ ೨೯೩)ಚಿತ್ರದುರ್ಗ ೨೯೪)ಹೊಸದುರ್ಗಾ ೨೯೫)ನಾಯಕನಹಟ್ಟಿ ೨೯೬)ಮೊಳಕಾಲ್ಮೂರು ೨೯೭)ಹಿರಿಯೂರು ೨೯೮)ದಾವಣಗೆರೆ ೨೯೯)ಬಿಳಿಚೆಲುವ ೩೦೦)ದೊಡ್ಡೇರಿ ೩೦೧)ಐಮಂಗಲ ೩೦೨)ಸಣ್ಣಕ್ಕಿ

ಬಾಗೂರು ೩೦೩)ರಾಮಗಿರಿ ೩೦೪)ತಳಕು ೩೦೫)ವಹಾಯಕೊಂಡ ೩೦೬)ಕೋಯಿಲಕುಂಟ್ಲ ೩೦೭)ಶಿಂತಕುಂಟ ೩೦೮)ಕೂಟಾಕುಳಾ ೩೦೯)ಶಿದ್ದಾಪಲ್ಲಿ ೩೧೦)ವರಮುಮಿಳ್ಳ ೩೧೧)ಕಾಮಲಾಪುರ ೩೧೨)ದುವ್ವೂರು ೩೧೩)ದೂದಾರಂ ೩೧೪)ಡೊಂಕೆಪಾಡಾ ೩೧೫)ಯಿಡಮಕಲಾ ೩೧೬)ಜಮಲಮಡು ೩೧೭)ವೆಂಪಲ್ಲಿನಂದಿ ೩೧೮)ಮಲ್ಯಾಲ ೩೧೯)ಚಿದಂಬರಂ ೩೨೦)ಪದುಚೆರಿ ೩೨೧)ತಿರುಪತಿ ೩೨೨)ಆರ್ಕಾಟು ೩೨೩)ತಿಮರಿ ೩೨೪)ತಿರುವಣ್ಣಾಮಲೈ ೩೨೫)ಕಾವೇರಿಪಾತಾ ೩೨೬)ದೋಡೀಗಡಾ ೩೨೭)ಕೈಲಾಸಗಡಾ ೩೨೮)ಗುಡಿಯಾತು ೩೨೯)ಜೋತಪಟ್ಟಿ ೩೩೦)ಪೆರಮಕಲ್ಲು ೩೩೧)ನರಕಗಡಾ ೩೩೨)ಆರಣೆ ೩೩೩)ಚಂಗವಾವೂ ೩೩೪)ಚಂಬಾರಗಡಾ ೩೩೫)ಸಾತಗಡಾ ೩೩೬)ಚಂಚಾ ೩೩೭)ಚಂಗಲಪಟ್ಟು ೩೩೮)ತಿರುಪತ್ತೂರು ೩೩೯)ತಿರಿತಿಣೆ ೩೪೦)ಕರ್ನಾಟಗಡಾ ೩೪೧)ಮಧ್ಯಾರ್ಜುನಾ ೩೪೨)ಪೋಳೂರು ೩೪೩)ಮಧ್ಯಾರ್ಜುನಾ ೩೪೪)ಕುಂಭಕೋಣಂ ೩೪೫)ಕಂಚಿ ೩೪೬)ತೊರೆಯೂರು ೩೪೭)ಚಂಗಮಾವೂ ೩೪೮)ಮಹೀಮಂಡಲ ೩೪೯)ಚಂದ್ರಗಿರಿ ೩೫೦)ತಿರುವನೂರು ೩೫೧)ನರಗುಂದ ೩೫೨)ಗೂಳಪ್ಪನಾಯಕನಪಾಳ್ಯ ೩೫೩)ಫಳನಿ ೩೫೪)ಘಂಟಮನಾಯಕನಪಾಳ್ಯ ೩೫೫)ವಿರೂಪಾಕ್ಷ ೩೫೬)ಚಂನಪಟಣಾ ೩೫೭)ವೆಲ್ಲೂರು ೩೫೮)ಮಚ್ಚಲಿ ಬಂದರು ೩೫೯)ಜವಾಹಿರು ಬಂದರು ೩೬೦)ಚಂಗಲಪಟ್ಟು ೩೬೧)ತಂಜಾವೂರು ೩೬೨)ಕನ್ನಮೆಡಿ ೩೬೩)ಚರಕಲು ೩೬೪)ರಾಯದುಗಾ ೩೬೫)ತಲಚೇರಿ ೩೬೬)ಸರ್ಜಾಪುರ ೩೬೭)ಪಂದಿಕೊನಾ ೩೬೮)ಬಳಗಿ ೩೬೯)ಜರಮಟೆ ೩೭೦)ದೊಡ್ಡವಾಡ ೩೭೧)ಸುಣ್ಣಕಲ್ಲು ೩೭೨)ಹನುಮಂತಗುಂಡಾ ೩೭೩)ಹಬಶಿರ ೩೭೪)ಕೊಚ್ಚಿ ೩೭೫)ಮಂಗಳೂರು ೩೭೮)ದಂಬಳ ೩೭೯)ಗದ್ದವಾಳ ೩೮೦)ಚಟ್ಟಿವೆಲ ೩೮೧)ನಾರಣೀವನಾ ೩೮೨)ಕಾಳಹಸ್ತಿ ೩೮೩)ವೆಂಕಟನಾಯಕನ ಪಾಳ್ಯ ೩೮೪) ಅಮ್ಮೆನಾಯಕನ ಪಾಳ್ಯ ೩೮೫)ಬಲ್ಲಾ ಐಗೂರು ೩೮೬)ಕಂನೋಲು ೩೮೭)ಕಗಿಯನೂರು ೩೮೮)ಚಿಲುಕ ನೇರ್ಪು ೩೮೯)ಹುಲಕಲ್ಲು ೩೯೦)ಮೊಗರಾವು ೩೯೧)ನಿಡುಗಲ್ಲು ೩೯೨)ಕಿತ್ತೂರು ೩೯೩)ಸವಣೂರು ೩೯೦)ಹಾವನೂರು ೩೯೧)ಹರಪನಹಳ್ಳಿ ೩೯೨)ರಾವಂಕವೆಂಕಟಗಿರಿ ೩೯೩)ತಿಮ್ಮನಾಯಕನಪ್ಯಾಟೆ ೩೯೪)ಆದವಾನಿ ೩೯೫)ಕನಕಗಿರಿ ೩೯೬)ಗುಂಮನಾಯಕನಪಾಳ್ಯ ೩೯೭)ಕನಕಗಿರಿ ೩೯೮)ಗುಮ್ಮನಾಯಕನಪಾಳ್ಯ ೩೯೯)ಗೋಪಿನಾಯ್ಕನಪಾಳ್ಯ ೪೦೦)ಮಳೂರು ೪೦೧)ಪಾಳ್ಯ ಪರಂಗಿ ೪೦೨)ಆನೆಗೊಂದಿ ೪೦೩)ದೂದಿಗೊಂಡೆ. ೪೦೪)ಮಂಜರಾಬಾದ್ ೪೦೫)ಬೇಕಲ್ ೪೦೬)ಸಂಕನಗಿರಿ ೪೦೭)ಬಹದ್ದೂರ್ ಬಂಡಾ ೪೦೭)ಕೊಪ್ಪಳ ೪೦೮)ನವಲಗುಂದ ೪೦೮)ನರಗುಂದ ೪೦೯)ಸಾವನದುರ್ಗ ೪೧೦)ಭೈರವನದುರ್ಗ ೪೧೧)ಭಸ್ಮಾಂಗಿದುರ್ಗ ೪೧೨)ಅಂಬೂರು

೪೧೩)ಕಣ್ಣಾನೂರು ೪೧೪)ಮಡಿಕೇರಿ ೪೧೫)ಬೇಕಲ್ ೪೧೬)ಸಂಕರಿದುರ್ಗ ೪೧೭)ಬಿದನೂರು ೪೧೮)ಸವಣೂರು ೪೧೯)ಜಿಂಜಿರ ೪೨೦)ಬಂಕಾಪುರ ೪೨೧)ಲಕ್ಷ್ಮೇಶ್ವರ ೪೨೨)ಧಾರವಾಡ ೪೨೩)ಕಿತ್ತೂರು ೪೨೪)ಬೆಳಗಾವಿ ೪೨೫)ಹುಕ್ಕೇರಿ ೪೨೬)ರಾಯ್‌ಭಾಗ್ ೪೨೭)ಅಥಣಿ ೪೨೮)ರಾಮದುರ್ಗ ೪೨೯)ರಾಮತೀರ್ಥ ೪೩೦)ಐನಾಪುರ ೪೩೧)ಮುದಗಲ್ ೪೩೨)ಬಾದಾಮಿ ೪೩೩)ಬಾಗಲಕೋಟೆ ೪೩೪)ಅಣ್ಣಿಗೆರೆ ೪೩೫)ಜಲಾಲಬಾದ್ ೪೩೬)ಗಂಗೋಳಿ ೪೩೭)ಬೈಂದೂರು ೪೩೮)ಮಂಜೇಶ್ವರ ೪೩೯)ಕುಂಬಳ ೪೩೦)ಕಾಸರಗೂಡು ೪೩೧)ಕೊಟ್ಟಬೆ ೪೩೨)ಕಬ್ಬಾಳುದುರ್ಗ ೪೩೩)ಹೈದರ್‌ಗಢ ೪೩೪)ಧಾರಾಪು ೪೩೫)ಕರೂರು ೪೩೬)ಅರಕಲಗೂಡು ೪೩೭)ಹೈದರ್‌ಗಢ ೪೩೮)ಕವಲೇದುರ್ಗ ೪೩೯)ಕರೂರು ೪೪೦)ಬಳ್ಳಾರಿ ೪೪೧)ಪಾವಗಡ ೪೪೨) ಬಾಳನಾಡು ೪೪೩)ತೆಕ್ಕಲಕೋಟೆ ೪೪೪)ನಿಮಾಮಗಢ ೪೪೫)ಕಲವೆ ೪೪೬)ಚಿತ್ತೂರು ೪೪೭)ಮಂಸಾರಗುಡಿ ೪೪೮)ಘಟಿಕಾಚಲ ೪೪೯)ಗಂಜಿಕೋಟೆ ೪೫೦)ಚನ್ನರಾಯನದುರ್ಗ.

ಇವಲ್ಲದೆ ಇನ್ನೂ ಅನೇಕ ಕೋಟೆಗಳ ಉಲ್ಲೇಖಗಳನ್ನು ಬುಕನಾನ್ (೧೮೦೭) ಮತ್ತು ವಿಲ್ಕ್ಸ್ (೧೮೧೦, ೧೮೧೭) ಅವರ ಬರವಣಿಗೆಗಳಲ್ಲಿ ಕಾಣಬಹುದು. ಇವುಗಳಲ್ಲಿ ಆಯ್ದ ಕೋಟೆಗಳ ಚಾರಿತ್ರಿಕ ಹಿನ್ನೋಟವನ್ನು ಮುಂದಿನ ಭಾಗದಲ್ಲಿ ನಡೆಸಲಾಗಿದೆ.

### ೩.೩ ಹೈದರ್ ಆಕ್ರಮಣ ಪೂರ್ವದ ಆಯ್ದ ಕೋಟೆಗಳ ಚಾರಿತ್ರಿಕ ಅವಲೋಕನ

ಹೈದರ್ ಮತ್ತು ಟಿಪ್ಪು ಸುಲ್ತಾನರ ಆಳ್ವಿಕೆಗೆ ಒಳಪಟ್ಟ ಕೋಟೆಗಳು ಕರ್ನಾಟಕ ಮಾತ್ರವಲ್ಲ, ತಮಿಳುನಾಡು, ಆಂಧ್ರಪ್ರದೇಶ, ಕೇರಳಗಳಲ್ಲಿಯೂ ಇವೆ. ಈ ಕೋಟೆಗಳಲ್ಲಿ ಜಲದುರ್ಗ, ನೆಲೆದುರ್ಗ ಮತ್ತು ಗಿರಿದುರ್ಗ ಹಾಗೂ ವನದುರ್ಗಗಳೂ ಇವೆ. ಆದರೆ ಮೇಲೆ ವಿಂಗಡಿಸಿಕೊಂಡಿರುವಂತೆ (ಒಳನಾಡಿನ ಕೋಟೆಗಳು, ಮಲೆನಾಡಿನ ಕೋಟೆ ಮತ್ತು ಕರಾವಳಿಯ ಕೋಟೆಗಳು) ಆ ಎಲ್ಲ ವರ್ಗೀಕರಣಗಳನ್ನು ಒಳಗೊಳ್ಳುವಂತೆ ಆಯ್ದ ಕೆಲವು ಕೋಟೆಗಳ ಚಾರಿತ್ರಿಕ ಪರಿಚಯವನ್ನು ಸಂಕ್ಷಿಪ್ತವಾಗಿ ಕಟ್ಟಿಕೊಡಲಾಗಿದೆ. ಇದರಿಂದ ಹೈದರ್ ಮತ್ತು ಟಿಪ್ಪುವಿಗೂ ಪೂರ್ವದಲ್ಲಿದ್ದ ಈ ಕೋಟೆಗಳ ಸ್ವರೂಪ, ರಚನೆ ಮತ್ತು ತಂತ್ರಜ್ಞಾನದ ದೃಷ್ಟಿಯಿಂದ ಹೇಗಿದ್ದವು ಹಾಗೂ ಇವರ ನಿಯಂತ್ರಣಕ್ಕೆ ಒಳಪಟ್ಟ ನಂತರ ಇವುಗಳಲ್ಲಿ ಆಗಿರುವ ಬದಲಾವಣೆಗಳೇನು ಎಂಬುದನ್ನು ತುಲನಾತ್ಮಕವಾಗಿ ಪರಿಶೀಲಿಸಿದಾಗ ಕೋಟೆಗಳ ರಚನೆ ಮತ್ತು ತಂತ್ರಜ್ಞಾನದಲ್ಲಿ ಆಗಿರುವ ಬದಲಾವಣೆಗಳನ್ನು ಅರ್ಥ ಮಾಡಿಕೊಳ್ಳಬಹುದಾಗಿದೆ. ಆದ್ದರಿಂದ ಕೆಲವು ಕೋಟೆಗಳ ಚಾರಿತ್ರಿಕ ಅವಲೋಕನವನ್ನು ನಡೆಸಲಾಗಿದೆ.




(ಮೂಲ: ವಿಕಿಪಿಡಿಯಾ ಆಧಾರಿತ ನಕ್ಷೆಯ ಕನ್ನಡ ರೂಪಾಂತರ ಲೇಖಕರಿಂದ)

## ೧. ಶ್ರೀರಂಗಪಟ್ಟಣ

ಇದು ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿ ಮೈಸೂರು ಸಂಸ್ಥಾನದ ರಾಜಧಾನಿ ಕೇಂದ್ರವಾಗಿತ್ತು. ಇಂದು ಮಂಡ್ಯ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿರುವ ಶ್ರೀರಂಗಪಟ್ಟಣವು ಮೈಸೂರು ನಗರದಿಂದ ೧೫ ಕಿ.ಮೀ. ದೂರದಲ್ಲಿದೆ. ಇಲ್ಲಿ ಕಾವೇರಿ

ನದಿಯು ಇಬ್ಭಾಗವಾಗಿ ವಿಶಾಲ ದ್ವೀಪವನ್ನು ನಿರ್ಮಿಸಿದ್ದು, ಈ ದ್ವೀಪದಲ್ಲಿಯೇ ಶ್ರೀರಂಗಪಟ್ಟಣದ ಕೋಟೆ ಇದೆ. ಪೌರಾಣಿಕವಾಗಿ ಇದನ್ನು ಗೌತಮ ಮಹರ್ಷಿಯ ಕ್ಷೇತ್ರವೆಂದು ಕರೆಯಲಾಗುತ್ತದೆ. ಇಲ್ಲಿ ಹಂಗರಹಳ್ಳಿ, ಹೊಸಹಳ್ಳಿ ಎಂಬ ಪ್ರಾಚೀನ ಗ್ರಾಮಗಳಿದ್ದವೆಂದು ಹೇಳಲಾಗುತ್ತದೆ (ಸೋಮನಾಥಯ್ಯ ೧೯೧೧: ೧-೩).

ಗಂಗರ ಸಾಮಂತನಾದ ತಿರುಮಲ್ಲಯ್ಯ ಎಂಬಾತನು ಕ್ರಿ.ಶ. ೮೯೪ರಲ್ಲಿ ಶ್ರೀರಂಗನಾಥ ಸ್ವಾಮಿ ಮತ್ತು ಕುಲದೇವತೆ ತಿರುಮಲದೇವಿ ಎಂಬ ಎರಡು ದೇವಾಲಯಗಳನ್ನು ಸ್ಥಾಪಿಸಿ, ಈ ಸ್ಥಳಕ್ಕೆ ಶ್ರೀರಂಗಪುರ ಅಥವಾ ಶ್ರೀರಂಗಪಟ್ಟಣ ಎಂದು ನಾಮಕರಣ ಮಾಡಿದನು. ಹೊಯ್ಸಳ ದೊರೆ ವಿಷ್ಣುವರ್ಧನನ ಸೋದರ ಉದಯಾದಿತ್ಯನು ಕ್ರಿ.ಶ. ೧೧೨೦ರಲ್ಲಿ ಪಟ್ಟಣವನ್ನು ನಿರ್ಮಿಸಿದನೆಂದು ಹೇಳಲಾಗುತ್ತದೆ. ವಿಷ್ಣುವರ್ಧನನು ರಾಮಾನುಜಾಚಾರ್ಯರ ಅನುಯಾಯಿಗಳಿಗೆ ಶ್ರೀರಂಗಪಟ್ಟಣದ ಸುತ್ತಲ ಕಾವೇರಿ ನದಿಯ ದಂಡೆಯ ಮೇಲಿನ ಎಂಟು ಗ್ರಾಮಗಳನ್ನು ಸರ್ವಮಾನ್ಯವಾಗಿ ಕೊಟ್ಟನು. ಈ ಎಂಟು ಗ್ರಾಮಗಳ ಪ್ರಾಂತ್ಯವು ಅಷ್ಟಗ್ರಾಮವೆಂದು ಹೆಸರಾಯಿತು. ಹೊಯ್ಸಳ ದೊರೆ ೨ನೇ ಬಲ್ಲಾಳನ ಶಾಸನವೊಂದರಲ್ಲಿ ಶ್ರೀರಂಗಪಟ್ಟಣವನ್ನು 'ತಿರುವರಂಗನಾರಾಯಣ ಚತುರ್ವೇದಿ ಮಂಗಲ' ಎಂದು ಕರೆದಿದೆ. ವಿಜಯನಗರದ ದೇವರಾಯನಿಂದ ಅನುಮತಿ ಪಡೆದು ನಾಗಮಂಗಲದ ಪಾಳೇಗಾರನಾದ ತಿಮ್ಮಣ್ಣ ಹೆಬ್ಬಾರ್ ಎಂಬುವವನು ಶ್ರೀರಂಗಪಟ್ಟಣದಲ್ಲಿ ಕೋಟೆಯನ್ನು ನಿರ್ಮಿಸಿ 'ದಂಣ್ಣಾಯಕ' ಎಂಬ ಪದವಿಯನ್ನು ಹೊಂದಿದನು. ಮುಂದೆ ವಿಜಯನಗರದ ಸಾಳ್ವ ನರಸಿಂಹನು ಶ್ರೀರಂಗಪಟ್ಟಣದ ಕೋಟೆಯನ್ನು ಕೈವಶ ಮಾಡಿಕೊಂಡ ನಂತರ ವಿಜಯನಗರ ಸಾಮ್ರಾಜ್ಯದ ಅಡಿಯಲ್ಲಿ ೧೪೯೫ ರಿಂದ ಪ್ರಾಂತೀಯ ಕೇಂದ್ರವಾಗಿತ್ತು. ವಿಜಯನಗರದ ಪ್ರಾಂತ್ಯಾಧಿಕಾರಿಯಾಗಿ ಶ್ರೀರಂಗಪಟ್ಟಣವನ್ನು ಆಳುತ್ತಿದ್ದ ವೃದ್ಧ ತಿರುಮಲರಾಜನಿಂದ ಮೈಸೂರಿನ ಒಡೆಯರ್ ಮನೆತನದ ದೊರೆಯಾದ 'ರಾಜ ಒಡೆಯರ್' ೧೬೧೦ರಲ್ಲಿ ಆಕ್ರಮಿಸಿಕೊಂಡನು. ಅಲ್ಲಿಂದ ೧೮೭೯ರವರೆಗೆ ಮೈಸೂರು ಸಂಸ್ಥಾನದ ರಾಜಧಾನಿಯಾಗಿ ಶ್ರೀರಂಗಪಟ್ಟಣ ಮೆರೆಯಿತು. ವಿಶೇಷವಾಗಿ ಹೈದರಾಲಿಯು ಏಳಿಗೆಗೆ ಬಂದಾಗಿನಿಂದ ಆರಂಭಿಸಿ (೧೭೬೧) ಅವನ ಮಗ ಟಿಪ್ಪು ಸುಲ್ತಾನ್ ಮರಣದವರೆಗೆ (೧೭೯೯) ಶ್ರೀರಂಗಪಟ್ಟಣವು ದಕ್ಷಿಣ ಭಾರತದ ರಾಜಕೀಯ ಚಟುವಟಿಕೆಯ ಕೇಂದ್ರವಾಗಿತ್ತು (ಸ್ವಾಮಿ ೧೯೯೬: ೧೯-೨೦).

ಪೂರ್ವ - ಪಶ್ಚಿಮವಾಗಿ ಸುಮಾರು ೨ ಕಿ.ಮೀ. ಉದ್ದ ಮತ್ತು ಉತ್ತರ - ದಕ್ಷಿಣ ಸುಮಾರು ೧ ಕಿ.ಮೀ. ಅಗಲವಿರುವ ಶ್ರೀರಂಗಪಟ್ಟಣದ ಕೋಟೆಯು ಭಾರತದ ಪ್ರಸಿದ್ಧ ಮತ್ತು ಬಲಿಷ್ಠ ಜಲದುರ್ಗಗಳಲ್ಲಿ ಒಂದಾಗಿದೆ. ಬ್ರಿಟಿಷರ ಮೆಚ್ಚುಗೆಗೂ

ಪಾತ್ರವಾಗಿದ್ದ ಮೂರು ಸುತ್ತಿನ ಈ ಕೋಟೆಯನ್ನು ಬಂದೂಕುಗಳು ಬಳಕೆಗೆ ಬರುವ ಮೊದಲು ಮುತ್ತುವುದು ಅಸಾಧ್ಯವಾಗಿತ್ತು ಎಂಬುದು ಇದರ ಮಹತ್ವವನ್ನು ಸಾರುತ್ತದೆ.

ವಿಜಯನಗರದ ಸಾಮಂತನಾದ ನಾಗಮಂಗಲದ ಪಾಳೆಯಗಾರನಿಂದ ನಿರ್ಮಿಸಲ್ಪಟ್ಟ ಶ್ರೀರಂಗಪಟ್ಟಣದ ಕೋಟೆಗೆ ಆತನೇ ಮೊದಲ ಸುತ್ತಿನ ಕಂದಕವನ್ನು ನಿರ್ಮಿಸಿದನು. ಪೂರ್ವ ಭಾಗದ ಎರಡನೇ ಸುತ್ತಿನ ಕೋಟೆಯನ್ನು ರಾಜ ಒಡೆಯರ್ ೧೬೧೦ರಲ್ಲಿ ಮತ್ತು ಕಂಠೀರವ ನರಸರಾಜ ೧೬೫೪ರಲ್ಲಿ ನಿರ್ಮಿಸಿದರು. ಇದೇ ಕಾಲದಲ್ಲಿ ಕಂಠೀರವ ನರಸರಾಜನು ಕೋಟೆಯನ್ನು ಬಲಪಡಿಸಿ. ಅಲ್ಲಿನ ನಿವಾಸಿಗಳಿಗೆ ಅವಶ್ಯಕ ಸಾಮಗ್ರಿಗಳನ್ನು ದಾಸ್ತಾನು ಮಾಡಲು ಅವಕಾಶ ಕಲ್ಪಿಸಿದನು. ಇದರಿಂದ ಕೋಟೆಯೊಳಗಿನ ಸೈನಿಕರು ಯಾವುದೇ ತುರ್ತು ಸಂದರ್ಭಗಳನ್ನು ಎದುರಿಸಲು ಸಾಧ್ಯವಾಗುತ್ತಿತ್ತು. ಚಿಕ್ಕದೇವರಾಜ ಒಡೆಯರ್ ಒಳಕೋಟೆ, ಹೊರಕೋಟೆ ಹಾಗೂ ಜೀಬಿ ಬಾಗಿಲ ಕೊತ್ತಳಗಳಲ್ಲಿ ಫಿರಂಗಿಗಳನ್ನು ಇರಿಸಿದರೆಂದೂ ತಿಳಿದು ಬರುತ್ತದೆ. ಮೂರನೇ ಸುತ್ತಿನ ಕೋಟೆಗೆ ಟಿಪ್ಪು ಸುಲ್ತಾನನ ಕಾಲದಲ್ಲಿ (೧೭೯೩) ಹಲವಾರು ಹೊಸ ಸೇರ್ಪಡೆಗಳಾದವು. ಅವುಗಳೆಂದರೆ, ಖೈದಿಗಳನ್ನು ಬಂಧಿಸಿಡುವ ನೆಲಮಾಳಿಗೆ ಸೆರೆಮನೆಗಳನ್ನು (ಡಂಜನ್) ಕೋಟೆಯ ಗೋಡೆಗೆ ಹೊಂದಿಕೊಂಡಂತೆ ನಿರ್ಮಿಸಲಾಯಿತು. ಮೂರನೇ ಸುತ್ತಿನ ಕೋಟೆಯ ದಕ್ಷಿಣ ಭಾಗದಲ್ಲಿರುವ ಮೈಸೂರು ಬಾಗಿಲುಗಳು ಕಿರಿದಾಯಿತೆಂದು ೧೫ ಅಡಿ ಎತ್ತರದ ಆನೆ ಬಾಗಿಲನ್ನು ೧೭೯೧ರಲ್ಲಿ ನಿರ್ಮಿಸಲಾಯಿತು. ಸುಮಾರು ೫.೫ ಮೀ. ಎತ್ತರ ಮತ್ತು ೩.೭೫ ಮೀ. ಅಗಲವಿರುವ ಈ ದ್ವಾರ ಮರದ ಬಾಗಿಲನ್ನು ಹೊಂದಿದೆ. ಅವಶ್ಯವಿದ್ದಾಗ ಬಳಸಲೆಂದು ಮರದ ಸೇತುವೆಯನ್ನೂ ಹಿಂದೆ ಹೊಂದಿತ್ತು. ಅಲ್ಲದೆ, ಕೋಟೆಯ ನೈರುತ್ಯ ಮೂಲೆಯಲ್ಲಿ ಸೋಮಲಿಂಗನ ಕಟ್ಟೆ ಬಾಗಿಲು, ವಾಯವ್ಯ ಮೂಲೆಯಲ್ಲಿ ದೆಹಲಿ ಬಾಗಿಲು ಮತ್ತು ಜೀಬಿ ಬಾಗಿಲ ನಡುವೆ ಸುಲ್ತಾನ್ ಬತೇರಿ ಇದೆ. ಅಲ್ಲದೆ, ಪೂರ್ವಕ್ಕೆ ಕಂದಕದ ನಡುವೆ ಇರುವ ದೋಂಡಿಯಾ ವಾಘನನ್ನು ಬಂಧಿಸಿದ್ದ ಬಂದಿಖಾನೆ (ಥಾಮಸ್ ಇನ್ ಮೆನ್ ಪತ್ತೆ ಮಾಡಿದ ಡಂಜನ್), ಜೀಬಿ ಬಾಗಿಲ ಬಲಕ್ಕಿರುವ 'ಬೈಲಿ ಡಂಜನ್' ಕೂಡ ಟಿಪ್ಪು ಕಾಲದ ನಿರ್ಮಾಣವಾಗಿದೆ. ಇವಲ್ಲದೆ ಈ ಕೋಟೆಯು ಸ್ನಾನಘಟ್ಟ ಬಾಗಿಲು, ಕೃಷ್ಣದಿಡ್ಡಿ, ಕಳಲೆ ದಿಡ್ಡಿ, ಹಳೆದಿಡ್ಡಿ, ನೀರು ಬಾಗಿಲು ಮೊದಲಾದ ಕಿರುಬಾಗಿಲುಗಳನ್ನು ಹೊಂದಿದೆ (ಪಾರ್ಥಸಾರಥಿ ೨೦೦೩: ೯೬೮-೬೯).



ಶ್ರೀರಂಗಪಟ್ಟಣದ ಕೋಟೆಯ ನಕ್ಷೆ

೧೬೧೦ ರಿಂದ ೧೭೯೯ರವರೆಗೆ ಶ್ರೀರಂಗಪಟ್ಟಣವು ಹಲವರ ಆಕ್ರಮಣಕ್ಕೆ ಒಳಗಾಗಿತ್ತು. ವಿಶೇಷವಾಗಿ, ಮರಾಠರು, ಹೈದರಬಾದಿನ ನಿಜಾಮ, ಕೆಳದಿಯ ನಾಯಕರು, ಬಿಜಾಪುರದ ರಣದುಲ್ಲಾಖಾನ್ ಮತ್ತು ಬ್ರಿಟಿಷರ ಆಕ್ರಮಣಕ್ಕೆ ತುತ್ತಾಯಿತು. ೧೬೭೯ ಮತ್ತು ೧೭೩೨ರಲ್ಲಿ ಮರಾಠರು ಮತ್ತು ಆರ್ಕಾಟಿನ ನವಾಬ ಕ್ರಮವಾಗಿ ಕೋಟೆಯ ಮೇಲೆ ಧಾಳಿ ಮಾಡಿದರು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ೧೭೫೫ರಲ್ಲಿ ದಕ್ಷಿಣದ ಸುಭೇದಾರನು ಫ್ರೆಂಚರ ಬುಸ್ಸಿಯ ನೇತೃತ್ವದಲ್ಲಿ ಈ ಕೋಟೆಯನ್ನು ಮುತ್ತಿಗೆ ಹಾಕಿದನು. ಈ ವೇಳೆ ಮೈಸೂರಿನ ಸೇನೆ ತಿರುಚನಾಪಳ್ಳಿಯ ಯುದ್ಧದಲ್ಲಿ ತಲ್ಲೀನವಾಗಿತ್ತು. ಆಗ ಶ್ರೀರಂಗಪಟ್ಟಣದ ಆಡಳಿತಗಾರರು ಧಾಳಿಕೋರರಿಗೆ ೫೬ ಲಕ್ಷ ಮೊತ್ತವನ್ನು ನೀಡಿ ಶಾಂತಿ ಒಪ್ಪಂದ ಮಾಡಿಕೊಂಡರು. ೧೭೫೭ರಲ್ಲಿ ಮರಾಠರು ಬಾಲಾಜಿ ರಾವ್ ನೇತೃತ್ವದಲ್ಲಿ ಶ್ರೀರಂಗಪಟ್ಟಣವನ್ನು ಮುತ್ತಿದರು. ಈ ಬಾರಿಯೂ ಕೂಡ ಮೈಸೂರು ೩೨ ಲಕ್ಷ ಮೊತ್ತದ ಹಣ ನೀಡಿ ಶಾಂತಿಸಂಧಾನವನ್ನು ಏರ್ಪಡಿಸಿಕೊಂಡಿತು. ಮರಾಠರು ಪುನಃ ೧೭೫೯ರಲ್ಲಿ ಗೋಪಾಲ್ ಹರಿ ನೇತೃತ್ವದಲ್ಲಿ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದಾಗ ಹೈದರಾಲಿಯು ಶಸ್ತ್ರಾಸ್ತ್ರಗಳಿಂದ ಮರಾಠರನ್ನು ಎದುರಿಸಿ, ಹಿಮ್ಮೆಟ್ಟಿಸಿದನು. ಅಲ್ಲದೆ, ಹಿಂದಿನ ಕದನದ ಸಂದರ್ಭದಲ್ಲಿ ಮರಾಠರ ವಶವಾಗಿದ್ದ ಮೈಸೂರು ಸಂಸ್ಥಾನದ ಪ್ರದೇಶಗಳನ್ನು ಮರುಗಳಿಸುವಲ್ಲಿ ಹೈದರಾಲಿ ಯಶಸ್ವಿಯಾದನು. ಇದೇ ವೇಳೆ ಸಂಸ್ಥಾನದ ಆಡಳಿತವನ್ನು ದಳವಾಯಿ ನಂಜರಾಜನು ರಾಜನಿಂದ ಕಸಿದುಕೊಂಡು ಬಲಿಷ್ಠನಾಗಿದ್ದನು. ಆದರೆ ಸಂಸ್ಥಾನದ ರಕ್ಷಣೆಯ ದೃಷ್ಟಿಯಿಂದ ದಳವಾಯಿಯು ಹೈದರಾಲಿಯನ್ನು ಅವಲಂಬಿಸಿದ್ದನು. ಪರಿಸ್ಥಿತಿಗಳನ್ನು ನಿಭಾಯಿಸುವಲ್ಲಿ

ನಂಜರಾಜನು ಸೋತಾಗ ಅವನನ್ನು ನಿವೃತ್ತಗೊಳಿಸಿ, ಹೈದರಾಲಿಯು ದಳವಾಯಿಯ ಸ್ಥಾನಕ್ಕೆ ನೇಮಕಗೊಂಡನು ಮತ್ತು ಮೈಸೂರಿನ ಒಡೆಯರ ಕೈಯಿಂದ ಅಧಿಕಾರವನ್ನು ೧೭೬೧ರಲ್ಲಿ ಕಸಿದುಕೊಂಡನು. ೧೭೭೧ರಲ್ಲಿ ಮತ್ತೊಮ್ಮೆ ಮರಾಠರು ತ್ರಿಯಂಬಕ್ ರಾವ್ ನೇತೃತ್ವದಲ್ಲಿ ಶ್ರೀರಂಗಪಟ್ಟಣದ ಮೇಲೆ ಆಕ್ರಮಣ ನಡೆಸಿದರು. ಈ ವೇಳೆ ಚಿನಕುರುಳಿ ಬಳಿ ನಡೆದ ಕದನದಲ್ಲಿ ಮರಾಠರಿಂದ ಸೋತ ಹೈದರಾಲಿಯು ಸೋತನು. ಆದರೆ ಶ್ರೀರಂಗಪಟ್ಟಣವನ್ನು ಮುತ್ತಲು ಮರಾಠರು ೧೫ ತಿಂಗಳ ಕಾಲ ಸತತ ಪ್ರಯತ್ನ ನಡೆಸಿದರು. ಕೊನೆಗೆ ೩೦ ಲಕ್ಷ ಕೊಡಲು ಒಪ್ಪಿ ಹೈದರಾಲಿಯು ಮರಾಠರೊಂದಿಗೆ ಶಾಂತಿ ಒಪ್ಪಂದ ಮಾಡಿಕೊಂಡನು. ೧೫ ಲಕ್ಷ ರೂಪಾಯಿಗಳು ನಗದು ಮತ್ತು ಉಳಿದ ೧೫ ಲಕ್ಷಕ್ಕೆ ಬದಲಾಗಿ ಮೈಸೂರಿನ ವಾಯವ್ಯ ಭಾಗದ ೭ ತಾಲ್ಲೂಕುಗಳನ್ನು ನೀಡಿದನು (ಎಂ.ಎ.ಆರ್ ೧೯೩೫: ೫೩-೬೫; ಸ್ವಾಮಿ ೧೯೯೬: ೨೧; ಸೋಮನಾಥಯ್ಯ, ೧೯೧೧: ೧೩-೨೨). ಹೈದರಾಲಿಯು ೧೭೮೨ರಲ್ಲಿ ಮರಣಹೊಂದಿದ ನಂತರ ಮೈಸೂರು ಸಂಸ್ಥಾನವನ್ನು ಅವನ ಮಗ ಟಿಪ್ಪು ಸುಲ್ತಾನನು ಶ್ರೀರಂಗಪಟ್ಟಣದಿಂದ ಆಳಲಾರಂಭಿಸಿದನು. ಟಿಪ್ಪು ಮತ್ತು ಬ್ರಿಟಿಷರ ನಡುವೆ ನಡೆದ ಯುದ್ಧಗಳಿಗೆ ಶ್ರೀರಂಗಪಟ್ಟಣ ಸಾಕ್ಷಿಯಾಗಿತ್ತು. ಇಲ್ಲಿ ನಡೆದ ಐತಿಹಾಸಿಕ ಘಟನೆಗಳನ್ನು ಮುಂದಿನ ಅಧ್ಯಾಯದಲ್ಲಿ ಸವಿವರವಾಗಿ ಚರ್ಚಿಸಲಾಗುವುದು.

### ೨. ಬೆಂಗಳೂರು ಕೋಟೆ

ಪ್ರಸ್ತುತ ಕರ್ನಾಟಕದ ರಾಜಧಾನಿಯಾಗಿರುವ ಬೆಂಗಳೂರು ಇಂದು ರಾಜಕೀಯ ಶಕ್ತಿ ಕೇಂದ್ರವೂ, ವಾಣಿಜ್ಯ, ಕೈಗಾರಿಕಾ ಮತ್ತು ತಂತ್ರಜ್ಞಾನ ಕ್ಷೇತ್ರಗಳ ಮಹಾನಗರವೂ ಆಗಿದೆ. ಬೆಂಗಳೂರು ಈ ಕ್ಷೇತ್ರಗಳಲ್ಲಿ ಸಾಧಿಸಿರುವ ಸಾಧನೆಯು ಇಂದು ನೆನ್ನೆಯದಲ್ಲ! ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದಿಂದಲೂ ಮೇಲಿನ ಕ್ಷೇತ್ರಗಳಲ್ಲಿ ಬೆಂಗಳೂರು ನಗರವು ತನ್ನ ಹಿರಿಮೆಯನ್ನು ಕಾಯ್ದುಕೊಂಡು ಬಂದಿರುವುದು ಅಚ್ಚರಿಯ ಸಂಗತಿ!! ಭಾರತದ ಪ್ರಮುಖ ರಾಜಧಾನಿಗಳಲ್ಲಿ ಸಮುದ್ರಮಟ್ಟದಿಂದ ಅತ್ಯಂತ ಎತ್ತರದಲ್ಲಿ (ಸುಮಾರು ೯೧೩ ಮೀ.) ನೆಲೆಗೊಂಡಿರುವ ನಗರ ಬೆಂಗಳೂರು. ಆದ್ದರಿಂದ ಯಾವಾಗಲು ತಂಪಾದ ಹವಾಮಾನವನ್ನು ಹೊಂದಿರುತ್ತದೆ. ಭೌಗೋಳಿಕವಾಗಿ ಬೆಂಗಳೂರು ಡೆಖನ್ ಪ್ರಸ್ಥಭೂಮಿಯ ದಕ್ಷಿಣ ಅಂಚಿನಲ್ಲಿದೆ ಮತ್ತು ಅರಬ್ಬೀ ಸಮುದ್ರ ಹಾಗೂ ಬಂಗಾಳ ಕೊಲ್ಲಿಗಳಿಗೆ ಸಮನಾಂತರ ದೂರದಲ್ಲಿದೆ. ಅಲ್ಲದೆ, ದಕ್ಷಿಣ ಭಾರತದ ಭೂ ಮಧ್ಯ ಭಾಗದಲ್ಲಿ ನೆಲೆಸಿದ್ದು, ಆಯಕಟ್ಟಿನ ದೃಷ್ಟಿಯಿಂದ ಬಹು ಪ್ರಾಮುಖ್ಯತೆಯನ್ನು ಪಡೆದಿದೆ. ಸಾಮಾನ್ಯವಾಗಿ ಯಲಹಂಕ ನಾಡಪ್ರಭು ಮೊದಲನೇ ಕೆಂಪೇಗೌಡ ಕ್ರಿ.ಶ ೧೫೩೭ರ ಸುಮಾರಿಗೆ ವಿಜಯನಗರದ ಅರಸರ ಅನುಮತಿ ಪಡೆದು ಮಣ್ಣಿನ ಕೋಟೆಯೊಂದನ್ನು

ಕಟ್ಟಿಸಿದ. ನಂತರ ಬೆಂಗಳೂರು ಹೆಸರಿನ ಒಂದು ಹೊಸ ನಗರವನ್ನೇ ನಿರ್ಮಾಣ ಮಾಡಿ ತನ್ನ ರಾಜಧಾನಿಯನ್ನು ಯಲಹಂಕದಿಂದ ಬೆಂಗಳೂರಿಗೆ ಸ್ಥಳಾಂತರಿಸಿದನು.[೮] ಆದರೆ ಇದಕ್ಕೂ ಪೂರ್ವದ ಮೂರು ಶಾಸನಗಳಲ್ಲಿ ಬೆಂಗಳೂರಿನ ಪ್ರಾಚೀನ ಉಲ್ಲೇಖಗಳು ಇವೆ. ಬೆಂಗಳೂರನ್ನು ಉಲ್ಲೇಖಿಸುವ ಮೊದಲ ಶಾಸನವು ಕ್ರಿ.ಶ ೮೯೦ಕ್ಕೆ ಸೇರುತ್ತದೆ.[೯] ಇಲ್ಲಿಂದ ಕ್ರಿ.ಶ ೧೨೦೦ರ ವರೆಗೆ ಒಟ್ಟು ೨೯ ಶಾಸನಗಳಲ್ಲಿ ಮತ್ತು ಕನ್ನಡ, ತೆಲುಗು ಕಾವ್ಯಗಳಲ್ಲಿ ೧೨ ಕಡೆ ಬೆಂಗಳೂರಿನ ಉಲ್ಲೇಖಗಳಿವೆ (ಕಾರ್ತಿಕ್ ೨೦೧೬: ೧೨೨–೧೩೬). ಕೆಂಪೇಗೌಡ ತನ್ನ ತಾಯಿ ಮತ್ತು ಪತ್ನಿಯರ ತವರೂರಾಗಿದ್ದ ಹಳೇ ಬೆಂಗಳೂರಿನ ಹೆಸರಿನಲ್ಲಿ ನೂತನವಾಗಿ ನಗರವನ್ನು ಸ್ಥಾಪಿಸಿ ಈ ಬೆಂಗಳೂರನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡನು ಎಂದು ಗ್ಯಾಸೆಟಿಯರ್‌ಗಳಲ್ಲಿ ದಾಖಲಾಗಿದೆ (ರೈಸ್ ೧೮೯೭: ೪೩–೪೬; ಕಾಮತ್ ೧೯೮೬: ೫೫೩). ಮೊದಲನೇ ಕೆಂಪೇಗೌಡನು ಒಂದು ಕೋಟೆ ಮತ್ತು ಪಟ್ಟಣವನ್ನು ನಿರ್ಮಿಸಲು ವಿಜಯನಗರದ ದೊರೆ ಅಚ್ಯುತರಾಯನ ಅನುಮತಿ ಪಡೆದು, ೧೫೩೭ರ ಜನವರಿ ೧೪ರಂದು ಕಾಡನ್ನು ಕಡಿದು ಮಣ್ಣಿನ ಕೋಟೆಯ ತಳಪಾಯವನ್ನು ಶುಭಮುಹೂರ್ತದಲ್ಲಿ ಪ್ರಾರಂಭಿಸಿ, ೪ ಬತೇರಿಗಳುಳ್ಳ ಕೋಟೆಯ ನಿರ್ಮಾಣವನ್ನು ಪೂರ್ಣಗೊಳಿಸಿದನು. ಹೊಸ ಪಟ್ಟಣಕ್ಕೆ ಹಳೆಯ ಹೆಸರಾದ ಬೆಂಗಳೂರು ಎಂದೇ ನಾಮಕರಣ ಮಾಡಿ ಬಹುಸಂಖ್ಯೆಯ ಜನರು ಇಲ್ಲಿ ನೆಲೆಸಲು ಪ್ರೋತ್ಸಾಹಿಸಿ ಈ ಪಟ್ಟಣವನ್ನು ತನ್ನ ಸಂಸ್ಥಾನದ ರಾಜಧಾನಿಯಾಗಿಯೂ ವಾಸ ಸ್ಥಳವಾಗಿಯೂ ಮಾಡಿಕೊಂಡನು.

ಕೆಂಪೇಗೌಡ ಸ್ಥಾಪಿಸಿದ ಮೂಲ ಬೆಂಗಳೂರಿನ ನಗರದ ವಿಸ್ತಾರ ಕುರಿತು ಅರುಣಿ ಅವರು ಅಧ್ಯಯನ ನಡೆಸಿದ್ದಾರೆ. ಅವರು ಹೇಳುವಂತೆ:

> *ಇದು ಆ ಕಾಲದ ಉತ್ತಮ ಹಾಗೂ ಹೆಚ್ಚಿನ ರಕ್ಷಣಾ ವ್ಯವಸ್ಥೆಗಳಿಂದ ಕೂಡಿದ ಒಂದು ಭದ್ರ ಹಾಗೂ ಆಯಕಟ್ಟಿನ ನಗರವಾಗಿತ್ತು. ಪೇಟೆ ಆವರಣವು ಸುತ್ತಲೂ ಆಯತಾಕಾರದ ಕೋಟೆಯನ್ನು ಹೊಂದಿತ್ತು. ಪೇಟೆ ಆವರಣಕ್ಕೆ ಹೊಂದಿಕೊಂಡಂತೆ ದಕ್ಷಿಣಕ್ಕೆ ಅಂಡಾಕಾರದ ಕೋಟೆ ಆವರಣವಿತ್ತು. ಅರಮನೆಯನ್ನೊಳಗೊಂಡ ಕೋಟೆ ಆವರಣವು ವಿಕ್ಟೋರಿಯಾ ಆಸ್ಪತ್ರೆಯ ಮುಂಭಾಗದಿಂದ ಕಿಮ್ಸ್ ಆಸ್ಪತ್ರೆಯ ಮುಂಭಾಗದವರೆಗೂ. ಪೂರ್ವದಲ್ಲಿ ಕಲಾಸಿಪಾಳ್ಯದ ನವಾಬ ಹೈದರಾಲಿ ರಸ್ತೆ ಮತ್ತು ಪೊಲೀಸ್ ಠಾಣೆಯಿಂದ ಪಶ್ಚಿಮದಲ್ಲಿ ಮಿಂಟೋ ಆಸ್ಪತ್ರೆಯ ಮುಂಭಾಗದ ವೃತ್ತ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನವರೆಗೂ ವಿಸ್ತರಿಸಿತ್ತೆಂದು ನಕ್ಷೆಗಳು ಮತ್ತು ಅವಶೇಷಗಳ ಆಧಾರಗಳಿಂದ ಗುರುತಿಸಬಹುದು. (ಅರುಣಿ ೨೦೦೭: ೧೦೪–೧೦೫).*



**೧೮ನೆಯ ಶತಮಾನದ ಕೊನೆಯ ಭಾಗದ ಬೆಂಗಳೂರು ಕೋಟೆ ಮತ್ತು ಪೇಟೆಯ ನಕ್ಷೆ (೧೭೯೧)**
**(ಮೂಲ: ಬ್ರಿಟಿಷ್ ಲೈಬ್ರರಿ)**

ಗವಿಗಂಗಾಧರೇಶ್ವರ ಮತ್ತು ದೊಡ್ಡ ಬಸವಣ್ಣನ ಗುಡಿ ಸೇರಿದಂತೆ ಹಲವು ದೇವಾಲಯಗಳನ್ನು ಕೋಟೆಯ ಹೊರಗು ಚನ್ನಿಗರಾಯಸ್ವಾಮಿ ದೇವಾಲಯವನ್ನು ಕೋಟೆ ಒಳಗೂ ನಿರ್ಮಿಸಿದನು. ಮೊದಲನೇ ಕೆಂಪೇಗೌಡನ ನಂತರ ಬಂದ ಇಮ್ಮಡಿ ಕೆಂಪೇಗೌಡನು ಕಾರಂಜಿಯೊಂದರಿಂದ ಕೆರೆಯನ್ನು ಕಟ್ಟಿಸಿ 'ಕಾರಂಜಿ ಕೆರೆ' ಎಂದು ಹೆಸರಿಟ್ಟು, ಕೆರೆಯಿಂದ ಕೋಟೆಯ ಒಳಕ್ಕೆ ನೀರನ್ನು ಸರಬರಾಜಿನ ವ್ಯವಸ್ಥೆ ಮಾಡಿದನು. ೧೬೩೮ರಲ್ಲಿ ಬಿಜಾಪುರದ ದಂಡನಾಯಕನಾದ ರಣದುಲ್ಲಾಖಾನನು ಬೆಂಗಳೂರಿನ ಮೇಲೆ ಧಾಳಿ ಮಾಡಿ ವಶಪಡಿಸಿಕೊಂಡನು. ಇಮ್ಮಡಿ ಕೆಂಪೇಗೌಡನು ಮಾಗಡಿ ಮತ್ತು ಕುಣಿಗಲ್ ಪ್ರಾಂತ್ಯಗಳತ್ತ ಹೋದನು. ಮುಂದೆ ಬೆಂಗಳೂರನ್ನು ಮರಾಠರ ಶಿವಾಜಿಯ

ತಂದೆ ಷಹಾಜಿಗೆ ಆದಿಲ್ ಷಾಹಿ ಸುಲ್ತಾನರು ಜಾಗೀರನ್ನಾಗಿ ನೀಡಿದರು. ಷಹಾಜಿಯ ನಂತರ ಸಂಬಾಜಿ ಮತ್ತು ಏಕೋಜಿ ಕ್ರಮವಾಗಿ ಆಳಿದರು. ಏಕೋಜಿಯ ಕಾಲದಲ್ಲಿ ಕೋಟೆಯ ಒಳಗೆ ಇದ್ದ ಚನ್ನಿಗರಾಯ ದೇವಸ್ಥಾನವನ್ನು ಪಠಾಣನೊಬ್ಬ ನಾಶಮಾಡಿ ಆ ಸ್ಥಳದಲ್ಲಿ ಒಂದು ಮಸೀದಿಯನ್ನು ಕಟ್ಟಿಸಿ ಅದರ ನಿರ್ವಹಣೆಗೆ ಏಕೋಜಿಯಿಂದ ಹಳ್ಳಿಯೊಂದನ್ನು ಜಾಗೀರಾಗಿ ಪಡೆದನು. ಏಕೋಜಿಯು ಬೆಂಗಳೂರು ಪೇಟೆಯನ್ನು ವಿಸ್ತರಿಸಿ ವರ್ತಕರಿಗೆ ಮತ್ತು ಉದ್ದಿಮೆದಾರರಿಗೆ ರಕ್ಷಣೆ ನೀಡಿ ನೆಲೆಯೂರಲು ಪ್ರೋತ್ಸಾಹಿಸಿದನು. ೧೬೮೭ರಲ್ಲಿ ಮೊಘಲ್ ಸರದಾರರಾದ ಕಾಸಿಂಖಾನ್ ಮತ್ತು ಮೊರಾದ ಖಾನರು ಮೈಸೂರಿನ ಚಿಕ್ಕದೇವರಾಜ ಒಡೆಯರ ಸಹಾಯದೊಂದಿಗೆ ದಂಡೆತ್ತಿ ಬಂದು ಬೆಂಗಳೂರನ್ನು ಮುತ್ತಿದರು. ಎರಡು ತಿಂಗಳುಗಳ ಸತತ ಮುತ್ತಿಗೆಯ ನಂತರ ಬೆಂಗಳೂರು ಕೋಟೆಯು ಕಾಸಿಂಖಾನನ ವಶವಾಯಿತು. ನಂತರ ಅವನು ಬೆಂಗಳೂರು, ಹುಲಿಯೂರುದುರ್ಗ, ಹುತ್ರಿದುರ್ಗ, ಭೈರವನದುರ್ಗ ಸೇರಿದಂತೆ ೧೨ ಹೋಬಳಿಗಳನ್ನು ಕೋಟೆಗಳನ್ನು ಮೂರು ಲಕ್ಷ ಪಗೋಡಗಳಿಗೆ ಚಿಕ್ಕದೇವರಾಜ ಒಡೆಯರಿಗೆ ಮಾರಾಟ ಮಾಡಿ, ಮೊಘಲರ ಶಿರಾ ಸುಭಾವನ್ನು ಆಳಲಾರಂಭಿಸಿದನು. ನಂತರ ೧೬೮೭ ಜೂನ್ ೧೬ ರಿಂದ ಒಂದು ತಿಂಗಳಕಾಲ ದಳವಾಯಿ ದೊಡ್ಡಯ್ಯನ ಮೂಲಕ ಬೆಂಗಳೂರು ಕೋಟೆಯನ್ನು ದುರಸ್ತಿ ಮಾಡಿಸಿದನು (ಹಯವದನ ರಾವ್ ೧೯೪೩: ೧೧೯; ಫಜಲ್ ಹಸನ್ ೧೯೭೦: ೨೧-೬೮).

ಕೋಟೆಯ ಒಳಭಾಗದಲ್ಲಿದ್ದ ಬಸವಣ್ಣನ ಗುಡಿಯು ಶಿಥಿಲವಾಗಿದ್ದು ಬೀಳುವ ಸ್ಥಿತಿಯಲ್ಲಿದ್ದುದನ್ನು ದುರಸ್ತಿ ಮಾಡಿಸಿ ಆ ದೇವಾಲಯದಲ್ಲಿ ವೆಂಕಟರಮಣ ವಿಗ್ರಹವನ್ನು ಪ್ರತಿಷ್ಠಾಪಿಸಿದನು. ಮುಂದೆ ಲಿಂಗರಾಜಯ್ಯ ಎಂಬುವವನು ಈ ಪ್ರದೇಶಗಳನ್ನು ಆಳುತ್ತಿರುವಾಗ ಕೋಟೆಯ ದಕ್ಷಿಣದಲ್ಲಿ ಕೊಳವೊಂದನ್ನು ಕಟ್ಟಿಸಿ ಅದಕ್ಕೆ ತನ್ನ ಹೆಸರಿನಲ್ಲಿ ಲಿಂಗರಾಜ ಕೊಳವೆಂದು ಹೆಸರಿಟ್ಟನು. ಇಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದ ಹೈದರಾಲಿಗೆ ಬೆಂಗಳೂರನ್ನು ೧೭೫೯ರಲ್ಲಿ ಜಾಗೀರಾಗಿ ನೀಡಲಾಯಿತು. ಹೈದರಾಲಿಯು ತನಗೆ ನಿಷ್ಠರಾದ ಕಿಲ್ಲೇದಾರರು ಮತ್ತು ಅಮಲ್ದಾರರಿಗೆ ಬೆಂಗಳೂರನ್ನು ವಹಿಸಿ ಆಳತೊಡಗಿದರು. ಕಿಲ್ಲೇದಾರನಾಗಿದ್ದ ಇಬ್ರಾಹಿಂ ಸಾಹೇಬನು ಗಟ್ಟಿಯಾದ ಕಲ್ಲುಗಳಿಂದ ಮತ್ತು ಉತ್ತಮವಾದ ಗಾರೆ ಕೆಲಸದಿಂದ ಬೆಂಗಳೂರು ಕೋಟೆಯನ್ನು ಪಾಯದಿಂದಲೇ ಮತ್ತೆ ಕಟ್ಟಿಸಿದನು. ಅಂಡಾಕಾರದ ಕೋಟೆಯನ್ನು ನಿರ್ಮಿಸಿ ವೃತ್ತಾಕಾರದ ಕೊತ್ತಳಗಳನ್ನು ಮಾಡಿಸಿದನು. ಅಲ್ಲದೆ, ಕೆಂಪೇಗೌಡ ಮತ್ತು ಶಹಜಿ ಕಾಲದ ಹಳೆಯ ಫಿರಂಗಿಗಳನ್ನು ತೆಗೆದು ಅವುಗಳ ಜಾಗದಲ್ಲಿ ಪಂಚಲೋಹದ ತೋಪುಗಳನ್ನು ಬತೇರಿಗೆ ಎರಡರಂತೆ ಎಪ್ಪತ್ತೆರಡು ತೋಪುಗಳನ್ನು

ಇದರೊಂದಿಗೆ ಹಲವು ತೋಪುಗಳನ್ನು ಸನ್ನದ್ಧ ಸ್ಥಿತಿಯಲ್ಲಿರುವಂತೆ ಏರ್ಪಡಿಸಿದನು. ಕೋಟೆಯ ಸುತ್ತ ಉತ್ತಮ ಕಂದಕಗಳಿದ್ದವು.[೮] ಆದರೆ ಅವುಗಳಲ್ಲಿ ದಸಿಬೇಲಿಯನ್ನು ಹಾಕಿರಲಿಲ್ಲ. ಕೋಟೆಯಿಂದ ಇಳಿಜಾರಾಗಿ ಹೋಗುವ ಇಳುಕಲು ಅಲ್ಲಲ್ಲಿ ಪರಿಪೂರ್ಣವಾಗಿರಲಿಲ್ಲ. ಈ ಕೋಟೆಗೆ ಎರಡು ದ್ವಾರಗಳಿದ್ದು, ಉತ್ತರದ ದ್ವಾರವು ದೆಹಲಿ ದ್ವಾರವೆಂತಲೂ, ದಕ್ಷಿಣದ ದ್ವಾರವು ಮೈಸೂರು ದ್ವಾರವೆಂತಲೂ ಕರೆಯಲ್ಪಡುತ್ತಿತ್ತು. ಬೆಂಗಳೂರಿನಲ್ಲಿ ಒಂದು ತಿಂಗಳಿಗೆ ಎರಡು ತೋಪನ್ನು ಎರಕ ಹುಯ್ಯುವಂತಹ ತೋಪಿನ ಕಾರ್ಖಾನೆಯನ್ನು ಹಾಗೂ ತಿಂಗಳಿಗೆ ೩೫ ಬಂದೂಕುಗಳನ್ನು ತಯಾರಿಸುವ ಬಂದೂಕು ಕಾರ್ಖಾನೆಯನ್ನು ಸ್ಥಾಪಿಸಿದನು. ಇವೆರಡು ಕಾರ್ಖಾನೆಗಳು ೧೭೯೧ ರವರೆಗೆ ಮುಂದುವರಿದವು (ಹಯವದನ ರಾವ್ ೧೯೩೦: ೯೨–೧೦೦; ಮಂಜುನಾಥ್ ೨೦೦೬: ೩೮–೫೭).

ಹೈದರಾಲಿಯು ಮರಣ ಹೊಂದಿದ ಕಾಲದಲ್ಲಿ ದಾಸಪ್ಪ ಎಂಬುವನು ಬೆಂಗಳೂರಿನ ಅಮಲ್ದಾರನಾಗಿದ್ದನು. ಟಿಪ್ಪುವು ಅವನನ್ನು ತೆಗೆದು ಗುಲಾಂ ಹೈದರನನ್ನು ಅಮಲ್ದಾರನಾಗಿ ನೇಮಿಸುತ್ತಾನೆ. ಕೋಟೆಯೊಳಗಿನ ವೆಂಕಟೇಶ್ವರ ದೇವಸ್ಥಾನದ ಹಿಂಭಾಗದಲ್ಲಿ ಟಿಪ್ಪುವು ಮರದಲ್ಲಿ ಬೇಸಿಗೆ ಅರಮನೆಯನ್ನು ನಿರ್ಮಿಸಿದ್ದಾನೆ. ತನ್ನ ಜಾಗೀರಾದ ಬೆಂಗಳೂರಿನಲ್ಲಿ ೧೭೮೧ರಲ್ಲಿ ಹೈದರಾಲಿ ಆರಂಭಿಸಿದ ಈ ಅರಮನೆಯನ್ನು ಟಿಪ್ಪುವು ೧೭೯೧ರಲ್ಲಿ ಪೂರ್ಣಗೊಳಿಸಿದನು. ಇದನ್ನು ಸ್ವರ್ಗಕ್ಕೆ ಈರ್ಷ್ಯೆ ಹುಟ್ಟಿಸುವಂತಹ ಸಂತೋಷದ ತಾಣ ಎಂಬಂತೆ ಇಲ್ಲಿರುವ ಶಾಸನಗಳು ಬಣ್ಣಿಸಿವೆ. ಟಿಪ್ಪು ಕಾಲದಲ್ಲಿ ಶ್ರೀರಂಗಪಟ್ಟಣದ ನಂತರದ ಪ್ರಮುಖ ರಾಜಧಾನಿ ಕೇಂದ್ರ ಬೆಂಗಳೂರು ಆಗಿತ್ತು. ೧೭೯೧ರ ಮೂರನೇ ಆಂಗ್ಲೋ–ಮೈಸೂರು ಯುದ್ಧದ ಸಂದರ್ಭದಲ್ಲಿ ಬ್ರಿಟಿಷರು ಕಾರನ್‌ವಾಲಿಸನ ನೇತೃತ್ವದಲ್ಲಿ ಬೆಂಗಳೂರನ್ನು ವಶಪಡಿಸಿಕೊಂಡ ಬಗೆಗಿನ ಘಟನೆಗಳನ್ನು ಮುಂದಿನ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗುವುದು (ಮಂಜುನಾಥ ೨೦೦೬: ೩೮–೫೭).

## ೩. ಚಿತ್ರದುರ್ಗ ಕೋಟೆ

ಚಿತ್ರದುರ್ಗದ ಪರಿಸರವು ಇತಿಹಾಸ ಪೂರ್ವ ಕಾಲದಿಂದಲೂ ಐತಿಹಾಸಿಕ ಮಹತ್ವವನ್ನು ಹೊಂದಿದೆ. ಮಹಾಭಾರತದ ಭೀಮನು ಇಲ್ಲಿ ಹಿಡಿಂಬ ಎಂಬ ರಾಕ್ಷಸನನ್ನು ಕೊಂದು ಅವನ ತಂಗಿ ಹಿಡಿಂಬೆಯನ್ನು ವರಿಸಿದನೆಂಬುದು ಐತಿಹ್ಯ. ಚಿತ್ರದುರ್ಗದ ಕೋಟೆಯ ಒಳಗೆ ಹಿಡಿಂಬೇಶ್ವರ ದೇವಾಲಯವೂ ಇದೆ. ಚಿತ್ರದುರ್ಗದ ಕೋಟೆಯ ಪರಿಸರದಿಂದ ಅನತಿ ದೂರದಲ್ಲಿಯೇ ಇರುವ ಚಂದ್ರವಳ್ಳಿಯಲ್ಲಿ ಕದಂಬರ ಕಾಲದ ಶಾಸನವಿದೆ. ಅದರ ಪ್ರಕಾರ ಮಯೂರವರ್ಮನು ಅಲ್ಲಿನ ಕೆರೆಯನ್ನು ನಿರ್ಮಿಸಿದನೆಂದು ಹೇಳಲಾಗುತ್ತದೆ. ಅದರ ಪಕ್ಕದಲ್ಲಿಯೇ ಇರುವ ಅಂಕಲಗಿ ಮಠವು

೧೪ನೇ ಶತಮಾನದಿಂದಲೂ ಒಂದು ವಿದ್ಯಾಕೇಂದ್ರವಾಗಿತ್ತು. ಇಲ್ಲಿರುವ ಗುಹಾಲಯ ಬಹಳ ಮಹತ್ವದ್ದಾಗಿದೆ.

ಚಿತ್ರದುರ್ಗವನ್ನು ಐತಿಹಾಸಿಕ ಕಾಲಘಟ್ಟಗಳಲ್ಲಿ ಚಿನ್ಮೂಲಾದ್ರಿ, ಹಿಡಿಂಬಪಟ್ಟಣ, ಚಂದ್ರವಳ್ಳಿ, ಸೂಳ್ಗಲ್ಲು, ಚಿಮ್ಮತ್ತನಕಲ್ಲುಪಟ್ಟಣ, ಪೆರುಮಾಳೆಪುರ, ಬ್ರಹ್ಮಪುರಿ, ಫರ್ರಕಾಬಾದ್ ಎಂಬೆಲ್ಲಾ ಹೆಸರುಗಳಿಂದ ಕರೆಯಲ್ಪಟ್ಟಿದೆ (ತೆಲಗಾವಿ ಮತ್ತಿತರರು ೧೯೭೬: ೬-೭). ಚಿತ್ರದುರ್ಗ ಕೋಟೆಯು ಭಾರತದ ಭದ್ರ ಹಾಗೂ ಭವ್ಯ ಕೋಟೆಗಳಾದ ದೌಲತಾಬಾದ್ (ಮಹಾರಾಷ್ಟ್ರ), ಗೋಲ್‌ಕೊಂಡಾ (ಆಂಧ್ರ), ವೆಲ್ಲೂರು (ತಮಿಳುನಾಡು), ಗ್ವಾಲಿಯರ್ (ಮಧ್ಯಪ್ರದೇಶ), ರಾಯಗಡ (ಮಹಾರಾಷ್ಟ್ರ), ಚಿತ್ತೋಡಗಡ (ರಾಜಸ್ಥಾನ), ಫತೇಪುರ ಸಿಕ್ರಿ (ಉತ್ತರ ಪ್ರದೇಶ) ಇವುಗಳ ಸಾಲಿನಲ್ಲಿ ನಿಲ್ಲುತ್ತದೆ ಎಂದು ಎಸ್.ಕೆ. ಜೋಶಿ ಅವರು ಅಭಿಪ್ರಾಯಪಡುತ್ತಾರೆ (ಜೋಶಿ ೨೦೦೮: ೧೩೭).

ವಿಜಯನಗರದ ಆರಂಭಕಾಲದಲ್ಲಿಯೇ ಬೆಮ್ಮತ್ತನಕಲ್ಲು ಒಂದು ಆಡಳಿತ ಘಟಕವಾಗಿತ್ತು. ೧೩೪೪-೪೬ರಲ್ಲಿ ಮಲ್ಲಿನಾಥ ಒಡೆಯ ಎಂಬಾತನು ವಿಜಯನಗರದ ಪ್ರತಿನಿಧಿಯಾಗಿ ಇಲ್ಲಿ ಆಡಳಿತ ನಡೆಸುತ್ತಿದ್ದನು. ಇಲ್ಲಿನ ಸಂಪಿಗೆ ಸಿದ್ಧೇಶ್ವರ ದೇವಾಲಯದಲ್ಲಿರುವ ೧೩೪೪ ಮತ್ತು ೧೩೪೬ರ ಶಾಸನಗಳು ಮಲ್ಲಿನಾಥ ಒಡೆಯನು ಸಿದ್ಧನಾಥ ದೇವರಿಗೆ ಕಲ್ಲ ಉಪ್ಪರಿಗೆ, ಶಿಖರ ಮತ್ತು ಕಲ್ಲ ಉಯ್ಯಲೆಯನ್ನು ಮಾಡಿಸಿದನೆಂದು ತಿಳಿಸುತವೆ. ಇವೇ ಶಾಸನಗಳು ಇಲ್ಲಿನ ಕೋಟೆಗಳನ್ನು ಹೀಗೆ ವರ್ಣಿಸುತ್ತವೆ:

ಅಗಳುಗಳು, ಅಳವೇರಿಗಳು, ಡೆಂಕಣಿ ಅಟ್ಟಳೆಗಳು, ಕೊತ್ತಳಗಳು, ಒಡ್ಡುಗಲು, ಬಾವುಟದ ದಿಣ್ಣೆಗಳು ತುಂಬಿ ತುಳುಕುತ್ತಿದ್ದವು. ಅಂತಹ ಕೋಟೆಯನ್ನು ಏನೆಂದು ವರ್ಣಿಸಲಿ! ಸ್ವಸೇನೆಗೂ, ಶತ್ರು ಸೇನೆಗೂ ವಜ್ರಕೋಟೆಯಂತೆ ತೋರುವುದು (ಪಾಟೀಲ ೧೯೯೯: ೧೪೭).

ಅಂದರೆ ಚಿತ್ರದುರ್ಗದ ಕೋಟೆಯು ೧೪ನೇ ಶತಮಾನದಲ್ಲಿಯೇ ತನ್ನ ಬಲಾಢ್ಯತೆಯಿಂದ ಗಮನಸೆಳೆಯುತ್ತಿತ್ತೆಂದು ತಿಳಿಯಬಹುದು. ಬೇಡಕುಲ, ವಾಲ್ಮೀಕಿ ಗೋತ್ರ ಕಾಮಗೇತಿ ವಂಶಕ್ಕೆ ಸೇರಿದ ತಿಮ್ಮಣ್ಣ ನಾಯಕನ್ನು ಕ್ರಿ.ಶ ೧೫೬೮ರಲ್ಲಿ ಪೆನುಗೊಂಡೆಯಲ್ಲಿದ್ದ ವಿಜಯನಗರದರಸರು ಚಿತ್ರದುರ್ಗದ ಅಧಿಕಾರಿಯಾಗಿ ನೇಮಕ ಮಾಡಿದರು. ಈ ಹೊತ್ತಿಗೆ ಚಿತ್ರದುರ್ಗದ ಬೆಟ್ಟದ ಮೇಲೆ ಹಳೆಯ ಕೋಟೆ ಇತ್ತು. ಅದು ಮಣ್ಣು ಮತ್ತು ಹೆಂಟೆಗಳಿಂದಲೂ, ಕಾಡುಗಲ್ಲುಗಳಿಂದಲೂ ನಿರ್ಮಿತವಾದ ಹಳೆಯ ಶಿಥಿಲ ಕೋಟೆಯಾಗಿತ್ತು. ಆದ್ದರಿಂದ ತಿಮ್ಮಣ್ಣ ನಾಯಕನು ಹಳೆಯ ಕೋಟೆಯನ್ನು ಕೆಡವಿಸಿ, ಬಲಿಷ್ಠವಾದ ಕೋಟೆಯನ್ನು ನಿರ್ಮಿಸುವುದಕ್ಕಾಗಿ ಶಿಲ್ಪ

ಚತುರರಾದ ಬಳ್ಳಾರಿ ಪ್ರಾಂತದ ಉಪ್ಪಾರರನ್ನೂ, ಶಿಲ್ಪಶಾಸ್ತ್ರಜ್ಞರನ್ನೂ ಮತ್ತು ಕಲ್ಲುಕುಟಿಗರನ್ನೂ ಬರಮಾಡಿಕೊಂಡು ವಿಸ್ತಾರವಾದ ಕೋಟೆಯನ್ನು ಕಟ್ಟಲಾರಂಭಿಸಿದನು. ತಿಮ್ಮಣ್ಣ ನಾಯಕನ ನಂತರ ಬಂದ ನಾಯಕರೂ ಕೂಡ ಹಳೆಯ ಕೋಟೆಯನ್ನು ಕೆಡವಿಸಿ ಹೊಸಕೋಟೆಯನ್ನು ನಿರ್ಮಿಸುವ ಮೂಲಕ ಹೊಸಕೋಟೆಯ ಸುತ್ತಿನ ಆವರಣಗಳನ್ನು ಕಟ್ಟಿಸಿದರು. ಭರಮಪ್ಪನಾಯಕನು ಬೆಟ್ಟದ ಮೇಲೆ ಮಠವನ್ನು ಕಟ್ಟಿಸಿದನು. ಕೊನೆ ಕೊನೆಯ ಪಾಳೇಗಾರರು ಯುದ್ಧದಲ್ಲಿ ಸೆರೆಸಿಕ್ಕ ಫ್ರೆಂಚರು ಮತ್ತು ಇಂಗ್ಲಿಷರ ಉಸ್ತುವಾರಿಯಲ್ಲಿ ಕೊನೆಯ ಸುತ್ತಿನ ಕೆಲವು ಭಾಗಗಳು ನಿರ್ಮಿತವಾದವು ಎಂದು ಹುಲ್ಲೂರು ಶ್ರೀನಿವಾಸ ಜೋಯಿಸರು ದಾಖಲಿಸುತ್ತಾರೆ. ಹಯವದನ ರಾವ್ ಅವರು ಇಂದು ಕಾಣುವ ಬೃಹತ್ತಾದ ಕಲ್ಲಿನ ಕೋಟೆಗೋಡೆಗಳನ್ನು ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಮಾಡಿಸಿದರು ಎಂದಿದ್ದಾರೆ. (ತೆಲಗಾವಿ ಮತ್ತಿತರರು ೧೯೭೬: ೩೨; ಹಯವದನ ರಾವ್ ೧೯೩೦: ೧೪೨೬).



**ಉತ್ತರ ದಿಕ್ಕಿನಿಂದ ಚಿತ್ರದುರ್ಗ ಕೋಟೆಯ ನೋಟ**
**(ಮೂಲಚಿತ್ರ: ರೌಲಿ, ಎಂಜಿನಿಯರ್, ೧೮೦೩)**

ಕಿರಿಯ ಮದಕರಿ ನಾಯಕನ ಕಾಲದಲ್ಲಿ ಚಿತ್ರದುರ್ಗವು ಸರ್ವತೋಮುಖ ಪ್ರಗತಿಯನ್ನು ಕಂಡಿತು. ಇವನು ಹೈದರಾಲಿಗೆ ಹಲವು ಯುದ್ಧಗಳಲ್ಲಿ ಶಕ್ತಿ ತುಂಬಿದ್ದನು. ಆದರೆ ಅವನ ಏಳಿಗೆಯನ್ನು ಸಹಿಸದ ಹೈದರಾಲಿಯು ಚಿತ್ರದುರ್ಗದ ಮೇಲೆ ಧಾಳಿ ಮಾಡಿದನು. ಈ ಕೋಟೆಯನ್ನು ಭೇದಿಸಲಾಗದ ಹೈದರಾಲಿಯು "ಶ್ರೀರಂಗಪಟ್ಟಣದ ಕೋಟೆಗಿಂತಲೂ ಮಿಗಿಲಾದದ್ದು" ಎಂದು ಆಶ್ಚರ್ಯಪಟ್ಟನೆಂದು ಹೇಳಲಾಗುತ್ತದೆ. ಅಂತಿಮವಾಗಿ ಕಳ್ಳಗಂಡಿಯೊಂದನ್ನು ಗುರುತಿಸಿದ ಹೈದರಾಲಿಯ ಸೈನಿಕರು ಆ ಮಾರ್ಗದ

ಮೂಲಕ ಕೋಟೆಯನ್ನು ಪ್ರವೇಶಿಸುತ್ತಿದ್ದುದನ್ನು ಕಂಡ ಕಾವಲುಗಾರನ ಹೆಂಡತಿ ಓಬವ್ವ ಸೈನಿಕರನ್ನು ಕೊಂದದ್ದು ಜನಜನಿತವಾದ ಸಂಗತಿ. ಅಂತಿಮವಾಗಿ ೧೭೭೯ರಲ್ಲಿ ಹೈದರಾಲಿಯು ಮದಕರಿ ನಾಯಕನನ್ನು ಮತ್ತು ಅವನ ಬಂಧುವರ್ಗದವರನ್ನು ಬಂಧಿಸಿ ಶ್ರೀರಂಗಪಟ್ಟಣದಲ್ಲಿ ಸೆರೆಯಲ್ಲಿಟ್ಟನು. ಅಲ್ಲಿಗೆ ಚಿತ್ರದುರ್ಗದ ಪಾಳೆಯಗಾರರ ಆಳ್ವಿಕೆ ಅಂತ್ಯವಾಯಿತು. ಮುಂದೆ ಟಿಪ್ಪು ಸುಲ್ತಾನನು ಈ ಕೋಟೆಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಳ್ಳಬೇಕೆಂಬ ಅಭಿಪ್ರಾಯ ಹೊಂದಿದ್ದನು. ಆದ್ದರಿಂದ ಇಲ್ಲಿ ಒಂದು ಅರಮನೆ, ಫೌಜು ಕಛೇರಿ, ಒಂದು ಮಸೀದಿಯನ್ನು ಕಟ್ಟಿಸಿ, ಚಿತ್ರದುರ್ಗಕ್ಕೆ 'ಫರೂಕಾಬಾದ್' ಎಂದು ಹೆಸರಿಟ್ಟನು ಮತ್ತು ಒಂದು ಟಂಕಸಾಲೆಯನ್ನೂ ನಿರ್ಮಾಣ ಮಾಡಿಸಿದನು (ತೆಲಗಾವಿ ೧೯೭೬: ೩೩; ಪಾಟೀಲ ೧೯೯೯: ೧೫೭–೫೮; ರಾಜಶೇಖರಪ್ಪ ೨೦೦೧: ೧೦೦)

ಚಿತ್ರದುರ್ಗದ ಕೋಟೆಯು ಏಳು ಬೆಟ್ಟಗಳಿಂದ ಆವೃತ್ತವಾದ ಬೃಹತ್ ಏಳು ಸುತ್ತಿನ ಕೋಟೆಗಳಿಂದ ಕೂಡಿದೆ. ಕೋಟೆಯ ಸುತ್ತ ಆಳವಾದ ಮತ್ತು ಅಗಲವಾದ ಕಂದಕಗಳಿವೆ. ಏಳು ಸುತ್ತುಗಳಲ್ಲಿ ಮೂರು ಸುತ್ತು ಬೆಟ್ಟದ ಕೆಳಗೆ ಮತ್ತು ನಾಲ್ಕು ಸುತ್ತು ಬೆಟ್ಟದ ಮೇಲಿವೆ. ಸಾಮಾನ್ಯವಾಗಿ ೧೫ ಅಡಿಗಳ ಎತ್ತರವಿರುವ ಕೋಟೆಗೋಡೆಗಳು ಕೆಲವು ಕಡೆಗಳಲ್ಲಿ ೪೦ ಅಡಿಗಳ ಎತ್ತರ ಕೂಡ ಇವೆ. ಕಲ್ಲುಗಳನ್ನು ಬಹಳ ಶಿಸ್ತಾಗಿ ಎಡೆ ಇಲ್ಲದಂತೆ ಜೋಡಿಸಿರುವುದರಿಂದ ಕಲ್ಲುಗಳ ನಡುವೆ ಸಂದಿಗಳಿಗೆ ಗಾರೆಗಚ್ಚುಗಳನ್ನು ಬಳಸುವ ಅವಶ್ಯಕತೆ ಉದ್ಭವಿಸಿರುವುದಿಲ್ಲ. ಕೋಟೆಯ ಗೋಡೆಯ ಮೇಲೆ ೩೦–೪೦ ಗಜಗಳ ಅಂತರದಲ್ಲಿ ದುಂಡು, ಚೌಕ, ಆರು ಮೂಲೆ, ಅಷ್ಟಾಕೃತಿಗಳಲ್ಲಿ ಕೊತ್ತಳಗಳು ಕಂಡು ಬರುತ್ತವೆ. ಚಿತ್ರದುರ್ಗದ ಕೋಟೆಯಲ್ಲಿ ೧೯ ಹೆಬ್ಬಾಗಿಲುಗಳು, ೩೮ ದಿಡ್ಡಿ ಬಾಗಿಲುಗಳು, ೩೫ ಕಳ್ಳಕಂಡಿಗಳು ಮತ್ತು ೪ ಗುಪ್ತದ್ವಾರಗಳು ಇದ್ದವಂತೆ. ಈಗ ಇವುಗಳಲ್ಲಿ ಅನೇಕವು ಕಣ್ಮರೆಯಾಗಿವೆ. ಕೋಟೆಯಲ್ಲಿ ಝುಂಡಾ ಬತೇರಿ, ನೆಲ್ಲಿಕಾಯಿ ಸಿದ್ಧೇಶ್ವರನ ಬತೇರಿ, ಲಾಲ್ ಬತೇರಿ, ತುಪ್ಪದ ಕೊಳದ ಬತೇರಿ, ಹಿಡಿಂಬೇಶ್ವರನ ಬತೇರಿ, ಕಹಳೆ ಬತೇರಿ ಮತ್ತು ಬಸವನ ಬತೇರಿಗಳು ಕಂಡು ಬರುವ ಪ್ರಮುಖ ಬತೇರಿಗಳಾಗಿವೆ. ಅಲ್ಲದೆ ತುಪ್ಪ, ಎಣ್ಣೆ ಮತ್ತು ಆಹಾರ ಧಾನ್ಯಗಳನ್ನು, ಉಪ್ಪು ಹುಣಿಸೆ ಮೊದಲಾದ ನಿತ್ಯ ಆಹಾರ ಪದಾರ್ಥಗಳನ್ನೂ ಸಂಗ್ರಹಿಸಿಡಲು ಕಲ್ಲು ಕಣಜಗಳೂ ಇವೆ. ಇವು ಪಾಳೇಗಾರರ ಕಾಲಕ್ಕೆ ಸೇರಿದ್ದಾಗಿವೆ ಎಂದು ಶ್ರೀನಿವಾಸ ಜೋಯಿಸರು ಅಭಿಪ್ರಾಯಪಟ್ಟರೆ, ಹಯವದನ ರಾವ್ ಅವರು ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಕಾಲಕ್ಕೆ ಸೇರಿದ್ದಾಗಿವೆ ಎಂದಿದ್ದಾರೆ (ತೆಲಗಾವಿ ೧೯೭೬: ೩೫: ಪಾಟೀಲ ೧೯೯೯: ೧೫೮–೧೬೦; ಹಯವದನ ರಾವ್ ೧೯೩೦: ೧೪೨೬).

ಪಾಳೇಗಾರರ ಕಾಲದ ಕೋಟೆಗಳು ಸಾಮಾನ್ಯವಾಗಿ ಮಣ್ಣಿನ ಕೋಟೆಗಳಾಗಿರುತ್ತವೆ. ಆನಂತರದಲ್ಲಿ ಅವುಗಳನ್ನು ಕಲ್ಲಿನ ಕೋಟೆಗಳಾಗಿ ಅಭಿವೃದ್ಧಿ ಪಡಿಸಿರುವ ಸಾಧ್ಯತೆಗಳಿವೆ. ಚಿತ್ರದುರ್ಗದಲ್ಲಿ ಇಂದಿಗೂ ಅಲ್ಲಲ್ಲಿ ಮಣ್ಣಿನಲ್ಲಿ ನಿರ್ಮಿಸಿರುವ ಕೋಟೆಯ ಅವಶೇಷಗಳು ಕಂಡುಬರುತ್ತವೆ. ಇಲ್ಲಿನ ಕೊತ್ತಳಗಳಲ್ಲಿ ಕೆಲವು ಚೌಕಾಕಾರದಲ್ಲಿವೆ. ಇನ್ನು ಕಲವು ವೃತ್ತಾಕಾರದಲ್ಲಿವೆ. ಅಲ್ಲದೆ, ಚೌಕಾಕಾರದ ಕೊತ್ತಳಗಳನ್ನು ಬಿಚ್ಚಿ ವೃತ್ತಾಕಾರಕ್ಕೆ ಪರಿವರ್ತಿಸುವ ಪ್ರಯತ್ನಗಳನ್ನು ಚಿತ್ರದುರ್ಗದ ಕೋಟೆಯಲ್ಲಿ ಕಾಣಬಹುದು. ಈ ಪ್ರಯತ್ನ ಹೈದರ್ ಅಥವಾ ಟಿಪ್ಪು ಕಾಲದ್ದೆಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ. ಇದನ್ನು ಕೋಟೆಗಳ ಲಕ್ಷಣಗಳು ಕುರಿತು ಚರ್ಚಿಸುವಾಗ ಚರ್ಚಿಸಲಾಗುವುದು.

**೪. ಶಿರಾ ಕೋಟೆ**

ತುಮಕೂರು ಜಿಲ್ಲೆಯ ಪ್ರಮುಖ ತಾಲ್ಲೂಕು ಕೇಂದ್ರವಾಗಿದೆ. ತುಮಕೂರು – ಚಿತ್ರದುರ್ಗ ಹೆದ್ದಾರಿಯಲ್ಲಿದೆ. ಜಿಲ್ಲಾ ಕೇಂದ್ರ ತುಮಕೂರಿನಿಂದ ಸುಮಾರು ೫೦ ಕಿ.ಮೀ. ದೂರದಲ್ಲಿದೆ. ಶಿರಾ ಪಟ್ಟಣ ಮತ್ತು ಕೋಟೆಯನ್ನು ನಿರ್ಮಿಸಿದ ಕೀರ್ತಿ ರತ್ನಗಿರಿಯ ಪಾಳೆಯಗಾರನಾದ ರಂಗಪ್ಪನಾಯಕನಿಗೆ ಸಲ್ಲುತ್ತದೆ. ಕೋಟೆಯು ಪೂರ್ಣಗೊಳ್ಳುವ ಮೊದಲು ಶಿರಾ ಮತ್ತು ಸುತ್ತಲ ಪ್ರದೇಶವನ್ನು ಬಿಜಾಪುರದ ದಂಡನಾಯಕನಾದ ರಣದುಲ್ಲಾಖಾನ್ ವಶಪಡಿಸಿಕೊಂಡನು. ನಂತರ ಶಿರಾದ ಸಂಸ್ಥಾನಪಾಲನಾಗಿ ನೇಮಕವಾದ ಮಲ್ಲಿಕ್ ಹುಸೇನನು ಕೋಟೆಯನ್ನು ಪೂರ್ಣಗೊಳಿಸಿ, ಪಟ್ಟಣವನ್ನು ಮಣ್ಣಿನ ಗೋಡೆಯಿಂದ ಆವೃತ್ತಗೊಳಿಸಿದ. ಮಲ್ಲಿಕ್ ರಿಹಾನ್ ಎಂಬಾತನು ೧೬೩೮ ರಿಂದ ೧೬೫೦ ರವರೆಗೆ ಶಿರಾದ ಸುಭಾದಾರನಾಗಿದ್ದನು. ೧೬೮೭ರಲ್ಲಿ ಔರಂಗಜೇಬನು ಬಿಜಾಪುರದ ಆದಿಲ್ ಷಾಹಿಗಳಿಂದ ಶಿರಾವನ್ನು ವಶಪಡಿಸಿಕೊಂಡು ತುಂಗಭದ್ರಾ ನದಿಯ ದಕ್ಷಿಣದಲ್ಲಿ ಹೊಸದಾಗಿ ನಿರ್ಮಿಸಿದ ಸುಭಾ(ಪ್ರಾಂತ್ಯ)ದ ರಾಜಧಾನಿಯಾಗಿ ಮಾಡಲಾಯಿತು. ಈ ಪ್ರಾಂತ್ಯವು ಬಸವಪಟ್ಟಣ, ಬೂದಿಹಾಳ್, ಶಿರಾ, ಪೆನುಗೊಂಡ, ದೊಡ್ಡಬಳ್ಳಾಪುರ, ಹೊಸಕೋಟೆ ಮತ್ತು ಕೋಲಾರಗಳನ್ನು ಒಳಗೊಂಡ ೭ ಪರಗಣಗಳ ಜೊತೆಗೆ ಹರಪನಹಳ್ಳಿ, ಕೊಂಡರ್ಪಿ, ಅನೆಗುಂದಿ, ಬಿದನೂರು, ಚಿತ್ರದುರ್ಗ ಮತ್ತು ಮೈಸೂರು ಮೊದಲಾದ ಸಾಮಂತ ಸಂಸ್ಥಾನಗಳನ್ನು ಒಳಗೊಂಡಿತ್ತು. ಖಾಸಿಂ ಖಾನನನ್ನು ಈ ಪ್ರಾಂತ್ಯದ ಮೊದಲ ರಾಜ್ಯಪಾಲನಾಗಿ ನೇಮಿಸಿದನು. ಇವನಿಗೆ 'ಫೌಜ್‌ದಾರ್ ದಿವಾನ್' ಎಂಬ ಬಿರುದಿತ್ತು. ಇವನು ಶಿರಾವನ್ನು ಮೊಘಲರ ಒಂದು ಪ್ರಮುಖ ಕೇಂದ್ರ ಮತ್ತು ಮಿಲಿಟರಿ ನೆಲೆಯಾಗಿ ರೂಪಿಸುವಲ್ಲಿ ಯಶಸ್ವಿಯಾದನು. ೧೬೯೮ರಲ್ಲಿ ಖಾಸಿಂಖಾನನಿಗೂ ಮತ್ತು ಮರಾಠರಿಗೂ ಚಿತ್ರದುರ್ಗ ಸಮೀಪದ ದೊಡ್ಡೇರಿಯಲ್ಲಿ ನಡೆದ ಕದನದಲ್ಲಿ ಖಾಸಿಂಖಾನ್ ಮೃತಪಟ್ಟನು.

ನಂತರ ಜುಲ್ಫೀಕರ್ ಖಾನ್ ಶಿರಾದ ನವಾಬನಾದನು. ಇವನ ಕಾಲದಲ್ಲಿ ಶಿರಾದ ಬಳಿ 'ರುಸ್ತುಂಬಾದ್' ಎಂಬ ಪೇಟೆಯನ್ನು ನಿರ್ಮಿಸಿದನು.




ಔರಂಗಜೇಬನು ನಿಧನನಾದ ನಂತರ ಹೈದರಾಬಾದಿನಲ್ಲಿ ನಿಜಾಮ್ ಉಲ್ ಮುಲ್ಕ್‌ನು ೧೭೧೩ರಲ್ಲಿ ನಿಜಾಮನಾಗಿ ಅಧಿಕಾರ ವಹಿಸಿಕೊಂಡನು. ಶಿರಾ ಪ್ರಾಂತ್ಯ ಅವನ ನಿಯಂತ್ರಣಕ್ಕೆ ಬರಲಾಗಿ ಅಲ್ಲಿಗೆ ತನ್ನ ನಿಷ್ಠಾವಂತ ಅಧಿಕಾರಿ ಅಮೀನ್ ಖಾನನನ್ನು ೧೭೧೭ರಲ್ಲಿ ನೇಮಿಸಿದನು. ಇದನ್ನು ಒಪ್ಪದ ಅರ್ಕಾಟಿನ ನವಾಬ ಸಾದತ್‌ಖಾನನು ೧೭೨೪ರಲ್ಲಿ ಶಿರಾದ ಮೇಲೆ ಆಕ್ರಮಣ ಮಾಡಿ ತನ್ನ ನಿಷ್ಠನೊಬ್ಬನನ್ನು ನೇಮಿಸುವ ಮೂಲಕ ಶಿರಾವನ್ನು ಆರ್ಕಾಟಿನ ಅಧೀನಕ್ಕೆ ಒಳಪಡಿಸಿಕೊಂಡನು. ಮುಂದೆ ಶಿರಾದ ನವಾಬನಾದ ದಿಲಾವರ್ ಖಾನನು ಅತ್ಯಂತ ಪ್ರಸಿದ್ಧನಾದವನು. ಇವನು ಶಿರಾದಲ್ಲಿ ಒಂದು ಸುಂದರ ಅರಮನೆಯನ್ನು ನಿರ್ಮಿಸಿದನು. ಹೈದರಾಲಿಯು

ಕೆಲಕಾಲ ಶಿರಾದ ನವಾಬನ ಸೈನ್ಯದಲ್ಲಿದ್ದನು. ಈ ಅರಮನೆಯಿಂದ ಪ್ರಭಾವಿತರಾದ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಇದೇ ಮಾದರಿಯ ಅರಮನೆಯನ್ನು ಶ್ರೀರಂಗಪಟ್ಟಣ ಮತ್ತು ಬೆಂಗಳೂರಿನಲ್ಲಿ ನಿರ್ಮಿಸಿದರು. ಮರಾಠರ ಬಾಲಾಜಿ ಬಾಜಿರಾವನು ಮೈಸೂರು ಸಂಸ್ಥಾನದ ಮೇಲೆ ಆಕ್ರಮಣ ನಡೆಸಿದ ಸಂದರ್ಭದಲ್ಲಿ ಶಿರಾವನ್ನು ಮರಾಠರ ಅಧೀನಕ್ಕೆ ಒಳಪಡಿಸಿಕೊಂಡನು. ಮರಾಠರ ಆಳ್ವಿಕೆಗೆ ಒಳಪಟ್ಟಿದ್ದ ಶಿರಾದ ಮೇಲೆ ಹೈದರಾಲಿಯು ಆಕ್ರಮಣ ನಡೆಸಿ ಮರಾಠರನ್ನು ಹಿಮ್ಮೆಟ್ಟಿಸುವ ಮೂಲಕ ಶಿರಾವನ್ನು ೧೭೬೧ರಲ್ಲಿ ಮೈಸೂರು ಸಂಸ್ಥಾನಕ್ಕೆ ಒಳಪಡಿಸಿಕೊಂಡನು. ಪುನಃ ಮರಾಠರು ೧೭೬೬ರಲ್ಲಿ ಶಿರಾವನ್ನು ಗೆದ್ದುಕೊಂಡರು. ಮತ್ತೆ ೧೭೭೪ರಲ್ಲಿ ಟಿಪ್ಪು ಸುಲ್ತಾನನು ಶಿರಾವನ್ನು ಗೆದ್ದು ಮೈಸೂರು ಸಂಸ್ಥಾನಕ್ಕೆ ಸೇರಿಸಿಕೊಂಡನು. (ಹಯವದನ ರಾವ್ ೧೯೩೦: ೫೩೬-೫೪೦; ಯೋಗೀಶ್ವರಪ್ಪ ೨೦೧೭: ೭೨-೭೮).

ಶಿರಾ ಕೆರೆಯ ದಕ್ಷಿಣ ಕೋಡಿಯಲ್ಲಿ ದೇವಣಸಿರಯಾನು ಮಣ್ಣಿನ ಕೋಟೆಯೊಂದನ್ನು ಕಟ್ಟಿದ್ದನು. ಇದು ಎರಡು ಎಕರೆ ಪ್ರದೇಶದಲ್ಲಿ ಚೌಕಾಕಾರದಲ್ಲಿತ್ತು. ಕಾಲಾನಂತರ ಹಾಳಾಯಿತೆಂದು ಹೇಳಲಾಗುತ್ತದೆ. ಪ್ರಸ್ತುತ ಇರುವ ಕೋಟೆಯು ನೆಲೆದುರ್ಗವಾಗಿದ್ದು, ವಿಶಾಲ ಕಂದಕಗಳಿಂದ ಕೂಡಿದೆ. ಕೋಟೆಯ ಉತ್ತರದಲ್ಲಿ ಹೆಬ್ಬಾಗಿಲು ಅದರ ಪಕ್ಕದಲ್ಲಿ ದಿಡ್ಡಿ ಬಾಗಿಲು ಇದೆ. ಪ್ರವೇಶವು ಇಂಗ್ಲಿಷ್ ಅಕ್ಷರದ 'ಎಲ್' ಆಕಾರದಲ್ಲಿದೆ. ದ್ವಾರದ ಬದಿಗಳಲ್ಲಿ ಚಾವಡಿಗಳಿವೆ. ಈ ಕೋಟೆಯ ದಕ್ಷಿಣಕ್ಕೆ ಒಂದು ಕಿರುದ್ವಾರ ಇದೆ. ಇದನ್ನು ಸುರಂಗ ಬಾಗಿಲು ಅಥವಾ ರಹಸ್ಯ ದಿಡ್ಡಿ ಬಾಗಿಲು ಎಂದು ಕರೆಯುತ್ತಾರೆ. ಕೋಟೆಯ ಆಗ್ನೇಯ ಭಾಗದಲ್ಲಿ ಏತದ ಬಾವಿ ಇದೆ. ಇಲ್ಲಿಂದ ಕೋಟೆಯ ಬೇಕಾದ ಭಾಗಗಳಿಗೆ ನೀರು ಸರಬರಾಜು ಮಾಡಲು ಇಟ್ಟಿಗೆ ಗಾರೆಗಳಲ್ಲಿ ಕಟ್ಟಿದ್ದ ಕೊಳಾಯಿಗಳು, ಮತ್ತು ಎತ್ತುಗಳ ಸಹಾಯದಿಂದ ನೀರೆತ್ತುವ ತಿರುಗಣೆಯಂತ್ರದ ವ್ಯವಸ್ಥೆ ಇತ್ತೆಂದು ಹೇಳಲಾಗುತ್ತದೆ. ಮತ್ತೊಂದು ಬಾವಿ ದಕ್ಷಿಣಕ್ಕೆ ಇದೆ. ಏತದ ಬಾವಿಯ ಪಕ್ಕದಲ್ಲಿ ಮತ್ತು ಅಲ್ಲಿಂದ ಉತ್ತರಕ್ಕೆ ಕಟ್ಟಡಗಳ ಅವಶೇಷಗಳಿವೆ. ಮುಖ್ಯದ್ವಾರದ ಎದುರಿಗೂ ಪಾಳುಬಿದ್ದ ದೊಡ್ಡ ಮನೆಯ ಅವಶೇಷಗಳಿವೆ. ಬೃಹತ್ತಾದ ಕೋಟೆ ಚೌಕಾಕಾರದ ಕೊತ್ತಳಗಳು ಈ ಕೋಟೆಯ ವಿಶೇಷ. ಕೋಟೆಯ ವಿಶಾಲ ಕಂದಕಗಳಿಗೆ ಆಗ್ನೇಯ ದಿಕ್ಕಿನಲ್ಲಿರುವ ಕೆರೆಯಿಂದ ಹರಿಸಲಾಗುತ್ತಿತ್ತು. ಈ ಕೋಟೆಯು ಹೋಲಿಕೆಯಲ್ಲಿ ಮಂಜರಾಬಾದ್ ಕೋಟೆಯನ್ನು ಹೋಲುತ್ತದೆ ಎಂಬ ಅಭಿಪ್ರಾಯವಿದೆ (ನಂದೀಶ್ವರ ೨೦೦೮: ೧೬೬-೧೬೯). ಆದರೆ ಈ ಅಭಿಪ್ರಾಯ ಸಮಂಜಸವಾದುದಲ್ಲ.

೫. ದೇವನಹಳ್ಳಿಯ ಕೋಟೆ

ದೇವನಹಳ್ಳಿಯು ಬೆಂಗಳೂರಿನಿಂದ ಹೈದರಾಬಾದಿಗೆ ಹೋಗುವ ಮಾರ್ಗದಲ್ಲಿ ೩೯ ಕಿ.ಮೀ. ದೂರದಲ್ಲಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸೇರಿರುವ ಒಂದು ತಾಲ್ಲೂಕು ಕೇಂದ್ರ. ಇದು ಟಿಪ್ಪು ಸುಲ್ತಾನನು ಜನ್ಮಸ್ಥಳವೆಂದೇ ಪ್ರಸಿದ್ಧವಾಗಿದೆ. ದೇವಗೌಡ ಎಂಬಾತನು ಈ ಊರಿನ ಮುಖ್ಯಸ್ಥನಾಗಿದ್ದನು. ಇವನ ಹೆಸರಿನಿಂದ ದೇವನದೊಡ್ಡಿ ಮತ್ತು ದೇವನಪುರ ಎಂಬ ಹೆಸರು ಬಂದಿದೆ. ದೇವನಹಳ್ಳಿಯ ಕೋಟೆಯನ್ನು ಕ್ರಿ.ಶ ೧೫೦೧ರಲ್ಲಿ ಕಂಚಿಯಿಂದ ವಲಸೆ ಬಂದ ಆವತಿಯ ಮಲ್ಲಭೈರೇಗೌಡನು ಕಟ್ಟಿಸಿದನು. ಆನಂತರ ಅವನ ಸೋದರ ಸಣ್ಣಭೈರೇಗೌಡನು ದೇವನಹಳ್ಳಿಯ ಸುತ್ತಲ ಪ್ರದೇಶವನ್ನು ಕೃಷಿಗೆ ಒಳಪಡಿಸುವ ಮೂಲಕ ಅಭಿವೃದ್ಧಿ ಪಡಿಸಿದನು. ಅವನ ೪೦ ವರ್ಷಗಳ ಆಳ್ವಿಕೆಯ ನಂತರ ಅವನ ಮಗ ಬೈರೇಗೌಡ, ಆನಂತ ದಯಾಲು ಬೈಚೆಗೌಡ, ಮುದ್ದಬೈರೇಗೌಡ, ಇಮ್ಮಡಿ ಬೈರೇಗೌಡ, ಗೋಪಾಲಗೌಡ, ದೊಡ್ಡಬೈರೇಗೌಡ ಅವನ ಮಗ ರಂಗಪ್ಪಗೌಡ ಆಳಿದರು. ರಂಗಪ್ಪಗೌಡನು ಮಕ್ಕಳಿಲ್ಲದೆ ಮಡಿದಾಗ ಅವನ ಬಂಧು ಚಿಕ್ಕಬಳ್ಳಾಪುರದ ಚಿಕ್ಕಪ್ಪಗೌಡನು ಆಡಳಿತ ವಹಿಸಿಕೊಂಡನು. ಇವನ ಕಾಲದಲ್ಲಿ ಅಂದರೆ ಕ್ರಿ.ಶ. ೧೭೪೯ರಲ್ಲಿ ಮೈಸೂರಿನ ದಳವಾಯಿ ನಂಜರಾಜಯ್ಯನು ದೇವನಹಳ್ಳಿಗೆ ಮುತ್ತಿಗೆ ಹಾಕಿದನು. ಎಂಟು ತಿಂಗಳ ಕಾಲ ನಡೆದ ಈ ಮುತ್ತಿಗೆಯಲ್ಲಿ ಪಾಳೇಗಾರ ಸೋತ. ದೇವನಹಳ್ಳಿ ಮೈಸೂರು ಸಂಸ್ಥಾನಕ್ಕೆ ಸೇರಿತು. ಈ ಯುದ್ಧದ ವೇಳೆ ಅಶ್ವಸವಾರನಾದ ಹೈದರಾಲಿಯು ತೋರಿದ ಸಾಹಸ ದಳವಾಯಿಗೆ ಮೆಚ್ಚುಗೆಯಾಯಿತು. ಆಗ ಹೈದರಾಲಿಯನ್ನು ೫೦ ಅಶ್ವಗಳು ಮತ್ತು ೨೦೦ ಪದಾತಿಗಳ ಮುಖ್ಯಸ್ಥನನ್ನಾಗಿ ಮಾಡಿದನು (ಶರ್ಮ ೧೯೯೯(೧೯೭೧): ೧೬-೧೭). ದೇವನಹಳ್ಳಿಯ ಕೋಟೆಯು ಕೆಲಕಾಲ ಹೈದರಾಲಿಯ ನಿಯಂತ್ರಣದಲ್ಲಿ ಉಳಿಯಿತು. ಕುಟುಂಬ ಸಮೇತನಾಗಿ ಇಲ್ಲಿಯೇ ನೆಲೆಸಿದ್ದಾಗ ೧೭೫೦ರಲ್ಲಿ ಟಿಪ್ಪು ಸುಲ್ತಾನ್ ಇಲ್ಲಿಯೇ ಜನಿಸಿದನು. ಹೈದರಾಲಿಯು ಕೋಟೆಯನ್ನು ಮರುನಿರ್ಮಿಸಲು ಆರಂಭಿಸಿದನು. ಕಲ್ಲಿನಿಂದ ಅಂಡಾಕಾರದಲ್ಲಿ ನಿರ್ಮಿಸಿದ ಕೋಟೆಗೆ ವೃತ್ತಾಕಾರದ ಬತೇರಿಗಳನ್ನು ಮತ್ತು ಎರಡು ಕಾವಲುಗೋಪುರಗಳನ್ನು ಪೂರ್ವದಲ್ಲಿ ಕಟ್ಟಲೊರಟನು. ಕೋಟೆಯನ್ನು ನಿರ್ಮಿಸುವಾಗ ಕೋಟೆಯ ಆಗ್ನೇಯ ದಿಕ್ಕಿನಲ್ಲಿ ಕಟ್ಟಲು ಹಳೆಯ ಪೇಟೆಯನ್ನು ವ್ಯವಸ್ಥೆ ಮಾಡಿದನು. ಮತ್ತು ಶತೃಗಳ ಆಕ್ರಮಣ ವೇಳೆ ರಕ್ಷಣೆಗಾಗಿ ಪಶ್ಚಿಮಕ್ಕೆ ಅರ್ಧ ಮೈಲು ದೂರದಲ್ಲಿ ಸುಲ್ತಾನ್‌ಪೇಟೆಯನ್ನು ನಿರ್ಮಿಸಿದನು ಎಂದು ಹಯವದನ ರಾವ್ ದಾಖಲಿಸಿದ್ದಾರೆ. ಆದರೆ ಈ ಅಭಿಪ್ರಾಯಕ್ಕೆ ವ್ಯತಿರಿಕ್ತವಾದ ಅಭಿಪ್ರಾಯವನ್ನು ಅರುಣಿಯವರು ಪಟ್ಟಿದ್ದಾರೆ:

*ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ತಮ್ಮ ಸಂಸ್ಥಾನದ ಉಳಿದ ಕೋಟೆಗಳಂತೆ ಫ್ರೆಂಚರ ಕೋಟೆ ರಕ್ಷಣಾ ತಜ್ಞರ ನೆರವಿನೊಂದಿಗೆ ದೇವನಹಳ್ಳಿ ಕೋಟೆಯನ್ನು ಪುನರ್ರಚಿಸಿದ್ದಾರೆ. ಪ್ರಸ್ತುತ ದೇವನಹಳ್ಳಿಯ ಕೋಟೆ ಟಿಪ್ಪುವಿನ ಕಾಲದಲ್ಲಿ ಪುನರ್ರಚಿಸಿದ ಕೋಟೆಯಾಗಿದೆ ಎನ್ನುತ್ತಾರೆ. (ಅರುಣಿ ೨೦೦೭:೭೪)*



**ದೇವನಹಳ್ಳಿ ಕೋಟೆಯ ತಳನಕ್ಷೆ**

ಟಿಪ್ಪುವು ದೇವನಹಳ್ಳಿಗೆ 'ಯೂಸಫಬಾದ್' ಎಂದು ನಾಮಕರಣ ಮಾಡಿದನು. ಕೋಟೆಯನ್ನು ಮೇಲಿನಿಂದ ನೋಡಿದಾಗ ಕೂರ್ಮ(ಆಮೆ)ಯ ಆಕಾರದಲ್ಲಿ ಕಾಣುತ್ತದೆ. ಪೂರ್ವ ಮತ್ತು ಪಶ್ಚಿಮಗಳಲ್ಲಿ ದ್ವಾರಗಳನ್ನು ನಿರ್ಮಿಸಲಾಗಿತ್ತು. ಈ ಪೂರ್ವದ ದ್ವಾರ ಬಿದ್ದುಹೋಗಿದೆ. ಪಶ್ಚಿಮದ ದ್ವಾರ ಸುಸ್ಥಿತಿಯಲ್ಲಿದ್ದು, ಎರಡು ಪ್ರತ್ಯೇಕ ದ್ವಾರಗಳಿಂದ ಕೂಡಿದ್ದು ಪಕ್ಕದಲ್ಲಿ ದಿಡ್ಡಿಬಾಗಿಲಿದೆ. ಪಶ್ಚಿಮದ ದ್ವಾರಕ್ಕೆ ಹೆಚ್ಚಿನ ರಕ್ಷಣೆ ಒದಗಿಸುವುದಕ್ಕಾಗಿ ೨ ವಿಶೇಷ ಕೊತ್ತಳಗಳಿವೆ. ಕೊತ್ತಳಗಳ ಮೇಲೆ ಕಾವಲುಗಾರರ ಕೋಣೆಗಳಿವೆ. ಉತ್ತರ ಭಾಗದ ಕೋಟೆಯನ್ನು ೫ ಕೊತ್ತಳಗಳು ಹೊಂದಿಕೊಂಡಿವೆ. ಅದೇ ರೀತಿ ದಕ್ಷಿಣ ಭಾಗವನ್ನು ೬ ಕೊತ್ತಳಗಳು ಹೊಂದಿಕೊಂಡಿವೆ. ಕೋಟೆಯ ಈಶಾನ್ಯ ಮೂಲೆಯಲ್ಲಿ ಚೌಕಾಕಾರದ ಬತೇರಿ ಇದೆ. ಇಲ್ಲಿ ಎರಡು ಚಿಕ್ಕ ಮದ್ದಿನ ಮನೆಗಳೂ ಇವೆ. ಎರಡೆರಡು ಪಹರೆಕಟ್ಟೆಗಳು ಇರುವುದು ಇಲ್ಲಿನ ವಿಶೇಷ. ಅಲ್ಲಲ್ಲಿ ಇಳಿಜಾರು ಹಾದಿಗಳೂ ಇವೆ. ದ್ವಾರಕೋಟೆಯ ಒಳಭಾಗದಲ್ಲಿ ವೇಣುಗೋಪಾಲಸ್ವಾಮಿ ದೇವಾಲಯವಿದೆ. ಈ ಕೋಟೆಯನ್ನು ಅಂತಿಮವಾಗಿ ೧೭೯೧ರಲ್ಲಿ ಈಸ್ಟ್ ಇಂಡಿಯಾ ಕಂಪನಿ ಸೇನಾಪತಿ ಕಾರನ್‌ವಾಲೀಸ್ ಮುತ್ತಿಗೆ ಹಾಕಿದನು. ಮುಂದೆ ಇದನ್ನು ಪ್ರತ್ಯೇಕವಾಗಿ ಚರ್ಚಿಸಲಾಗುವುದು (ಹಯವದನ ರಾವ್ ೧೯೩೦: ೧೫೭–೧೬೧; ಅರುಣಿ ೨೦೦೭: ೭೩–೭೭; ಗೋವರ್ಧನ ೨೦೧೨: ೯೩–೯೫).

## ೬. ನಂದಿದುರ್ಗ

ಚಿಕ್ಕಬಳ್ಳಾಪುರ ಜಿಲ್ಲೆಗೆ ಸೇರಿರುವ ನಂದಿದುರ್ಗವು ಜಿಲ್ಲಾ ಕೇಂದ್ರದಿಂದ ೧೦ ಕಿ.ಮೀ. ದೂರದಲ್ಲಿರುವ ಒಂದು ಗಿರಿದುರ್ಗವಾಗಿದೆ. ಅರ್ಕಾವತಿ, ಪಾಲಾರ್ ಮತ್ತು ಪಿನಾಕಿನಿ ನದಿಗಳ ಉಗಮಸ್ಥಾನವೂ ಆಗಿದೆ. ಪೌರಾಣಿಕ ಹಿನ್ನೆಲೆ ಇರುವ ಈ ಬೆಟ್ಟದಲ್ಲಿ ಕೂಷ್ಮಾಂಡನೆಂಬ ಋಷಿಯು ಇಲ್ಲಿ ತಪಸ್ಸು ಮಾಡಿದ್ದರಿಂದ ಇದಕ್ಕೆ ಕೂಷ್ಮಾಂಡ ಪರ್ವತ ಅಥವಾ ಶೃಂಗಿ ಪರ್ವತ ಎಂಬ ಹೆಸರಿತ್ತೆಂದು ಹೇಳುತ್ತಾರೆ. ಶಿವನ ವಾಹನವಾದ ನಂದಿಯು ತಪಸ್ಸಿಗಾಗಿ ಕೂಷ್ಮಾಂಡನ ಗಿರಿಗೆ ಬಂದು ನೆಲೆಸಿದ್ದರಿಂದ ಇದಕ್ಕೆ ನಂದಿಬೆಟ್ಟ ಎಂಬ ಹೆಸರು ಬಂದಿತೆಂದು ಸ್ಥಳಪುರಾಣಗಳು ಹೇಳುತ್ತವೆ (ಗೋಪಾಲಗೌಡ ೨೦೧೪(೧೯೮೮): ೧೦೬). ಸ್ಥಳಪುರಾಣಗಳೇನೇ ಇರಲಿ ನಂದಿ ಬೆಟ್ಟದ ಮೇಲೆ ನೆಲ್ಲಿಕಾಯಿ ಬಸವಣ್ಣ ಎಂಬ ಬೃಹತ್ತಾದ ನಂದಿ ವಿಗ್ರಹವಿರುವುದರಿಂದ ಈ ಹೆಸರು ಬಂದಿರುವುದರಲ್ಲಿ ಅನುಮಾನವಿಲ್ಲ.



ಆರಂಭಕಾಲದಲ್ಲಿ ಜೈನರಾಗಿದ್ದ ಗಂಗರು 'ನಂದಗಿರಿನಾಥ' ಎಂಬ ಬಿರುದನ್ನು ಹೊಂದಿದ್ದರು. ಈ ಬೆಟ್ಟವು ಜೈನರ ಸ್ಥಳವಾಗಿತ್ತೆಂದು ತಿಳಿದುಬರುತ್ತದೆ. ಶ್ರವಣತೀರ್ಥ ಹೊರತು ಪಡಿಸಿದರೆ ಜೈನರ ಯಾವ ಕುರುಹುಗಳು ಉಳಿದಿರುವುದಿಲ್ಲ ಎಂದು ೧೯೩೦ರಲ್ಲಿ ಹಯವದನ ರಾವ್ ಅವರು ದಾಖಲಿಸಿದ್ದಾರೆ. ನಂದಿಬೆಟ್ಟದ ತಪ್ಪಲಿನಲ್ಲಿರುವ ನಂದಿ ಗ್ರಾಮದ ಭೋಗನಂದೀಶ್ವರ ಮತ್ತು ಅರುಣಾಚಲೇಶ್ವರ ದೇವಾಲಯಗಳ ಸಂಕೀರ್ಣವು ನೊಳಂಬ ಮತ್ತು ಬಾಣ ಅರಸರಿಂದ ನಿರ್ಮಿಸಲ್ಪಟ್ಟಿದೆ. ೧೧ನೇ ಶತಮಾನದಲ್ಲಿ ಚೋಳರ ರಾಜೇಂದ್ರಚೋಳನು ನೊಳಂಬವಾಡಿ ಕೈಗೊಂಡ ಯುದ್ಧದ

ಸಂದರ್ಭದಲ್ಲಿ ಭೋಗನಂದೀಶ್ವರ ಮತ್ತು ಅರುಣಾಚಲೇಶ್ವರ ದೇವಾಲಯ ಸಂಕೀರ್ಣದ ವಿವಿಧ ಅಲಂಕಾರಿಕ ಕಂಬಗಳು, ಜಾಲಂದರಗಳು ಇತ್ಯಾದಿಗಳನ್ನು ತನ್ನ ಸಂಸ್ಥಾನಕ್ಕೆ ತೆಗೆದುಕೊಂಡು ಹೋಗಿ ತಂಜಾವೂರಿನ ಬಳಿಯ ತಿರುವಾಯೂರಿನಲ್ಲಿ ದೇವಾಲಯದ ಪ್ರಾಕಾರದ ಒಳಕೈಸಾಲೆಯಲ್ಲಿ ಸ್ಥಾಪಿಸಿದನೆಂದು ವಿದ್ವಾಂಸರ ಇತ್ತೀಚಿನ ಸಂಶೋಧನೆಯಾಗಿದೆ. ಹೀಗೆ ಚೋಳರ ಅಧೀನಕ್ಕೆ ಒಳಪಟ್ಟಾಗ 'ನಂದಗಿರಿ'ಯ ಹೆಸರನ್ನು 'ನಂದಿಗಿರಿ' ಎಂದು ಬದಲಾಯಿಸಿದರು. ಏಕೆಂದರೆ, ವೃಷಭದೇವ ಜೈನರ ಮೊದಲ ತೀರ್ಥಂಕರ. ವೃಷಭ ಎಂದರೆ ನಂದಿ. ಈ ಹಿನ್ನೆಲೆಯಲ್ಲಿ ನಂದಗಿರಿ ಎಂದು ಕರೆಯಲಾಗುತ್ತಿತ್ತೆಂದು ಅದರ ಬದಲಿಗೆ ಶೈವರಾದ ಚೋಳರು ಶಿವನ ವಾಹನ ನಂದಿಯ ಹೆಸರನ್ನೇ ಕರೆಯುವುದನ್ನು ರೂಢಿಗೆ ತಂದಿರಬೇಕು. ನಂದಿ ಗ್ರಾಮದ ಅರುಣಾಚಲೇಶ್ವರ ದೇವಾಲಯವು ಭೋಗನಂದೀಶ್ವರ ದೇವಾಲಯದ ಅನುಕರಣೆಯಂತೆ ತೋರುತ್ತಿದ್ದು ವಿಜಯನಗರ ಅಥವಾ ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಜೀರ್ಣೋದ್ಧಾರಗೊಂಡಿದೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ (ಹಯವದನ ರಾವ್ ೧೯೩೦: ೩೫೧-೩೫೨; ಅರುಣಿ ೨೦೦೭: ೫೩-೬೪).

ನಂದಿದುರ್ಗದ ಕೋಟೆಯನ್ನು ಮೊದಲು ನಿರ್ಮಿಸಿದವರು ಬಳಕೆಯ ಕೋಟೆಯನ್ನಾಗಿ ಪರಿವರ್ತಿಸಿದವರು ಚಿಕ್ಕಬಳ್ಳಾಪುರದ ಪಾಳೇಗಾರರು. ಇವರ ನಂತರ ನಂದಿದುರ್ಗವು ಮರಾಠರ ವಶವಾಯಿತು. ೧೬೮೦ರ ಶಿವಾಜಿಯ ಮಗ ಸಾಂಬಾಜಿಯ ಶಾಸನವೊಂದರಲ್ಲಿ "ಕರ್ನಾಟದ ದೇಶದ ಪೂರ್ವದಲ್ಲಿ ನಂದಿ ಹೆಸರಿನ ಪರ್ವತವಿದೆ. ಅದು ಅತ್ಯುನ್ನತವಾಗಿಯೂ, ಅಭೇದ್ಯವಾದುದಾಗಿದೆ... ಬಳ್ಳಾಪುರದ ದುರ್ಗವಾದ ಇದು ಮಹತ್ವಪೂರ್ಣವಾಗಿದ್ದು, ಮ್ಲೇಚ್ಛರಿಗೂ ನಾಶಮಾಡಲು ಅಸಾಧ್ಯವಾದಂಥ ಬಲವುಳ್ಳದ್ದಾಗಿದೆ" ಎಂದು ವರ್ಣಿಸಿದೆ. ೧೭೭೦ರಲ್ಲಿ ಮರಾಠರ ಮಾಧವರಾವ್‌ನಿಂದ ನಂದಿದುರ್ಗವನ್ನು ಹೈದರಾಲಿಯು ವಶಪಡಿಸಿಕೊಂಡನು. ನಂತರ ಶಿಥಿಲವಾಗಿದ್ದ ಕೋಟೆಯನ್ನು ವಿಸ್ತೃತವಾಗಿ ಬಲಿಷ್ಠಗೋಡೆಗಳನ್ನು ನಿರ್ಮಿಸಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಬಲಪಡಿಸಿದರು. ಕೋಟೆಯು ಎರಡು ಸುತ್ತುಗಳಿಂದ ಕೂಡಿದ್ದು ಅನೇಕ ವೃತ್ತಾಕಾರದ ಕೊತ್ತಳಗಳನ್ನು ಹೊಂದಿದೆ. ಎರಡನೇ ಸುತ್ತಿನ ಕೋಟೆಯ ಎಡಭಾಗದಲ್ಲಿ ಟಿಪ್ಪು ಸುಲ್ತಾನನ ಬೇಸಿಗೆಯ ಅರಮನೆ ಇದೆ. ಅರಮನೆಯೊಳಗಿನ ಅಡುಗೆ ಮನೆ ಮತ್ತು ಪಾಯಿಖಾನೆ ಗಮನ ಸೆಳೆಯುತ್ತವೆ. ಈ ಅರಮನೆಯ ಹಿಂಭಾಗದಲ್ಲಿ ಮೆಟ್ಟಿಲದಾರಿಯು ಬೆಟ್ಟದ ಬುಡದಲ್ಲಿರುವ ಸುಲ್ತಾನ್ ಪೇಟೆಗೆ ಹೋಗುತ್ತದೆ. ನೈರುತ್ಯ ಮೂಲೆಯಲ್ಲಿ ಒಂದು ಕಡಿದಾದ ಸ್ಥಳವಿದ್ದು, ಇದನ್ನು ಟಿಪ್ಪು ಡ್ರಾಪ್ ಎಂದು ಕರೆಯುತ್ತಾರೆ. ಅಪರಾಧಿಗಳನ್ನು ಮತ್ತು ಖೈದಿಗಳನ್ನು ಈ ಸ್ಥಳದಲ್ಲಿ ಬೆಟ್ಟದ ಮೇಲಿನಿಂದ ಕೆಳಕ್ಕೆ ದೂಡಲಾಗುತ್ತಿತ್ತೆಂದು ಹೇಳಲಾಗುತ್ತದೆ.

ಹೈದರ್ ಡ್ರಾಪ್ ಕೂಡ ಇದೆ. ಇದು ನಂದಿ ಗ್ರಾಮದ ಸಮೀಪ ಉತ್ತರಕ್ಕೆ ಇರುವ ಚಿಕ್ಕ ಬೆಟ್ಟವೊಂದರಲ್ಲಿದೆ. ೧೭೯೧ರಲ್ಲಿ ಈ ಕೋಟೆಯು ಬ್ರಿಟಿಷರ ವಶವಾಯಿತು.

### ೭. ಮಧುಗಿರಿ

ಮಧುಗಿರಿಯು ತುಮಕೂರು ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ. ಇದು ಜಿಲ್ಲಾ ಕೇಂದ್ರದಿಂದ ಸುಮಾರು ೪೫ ಕಿ.ಮೀ. ದೂರದಲ್ಲಿದೆ. ವಿಜಯನಗರದ ಸಾಮಂತರಾದ ಮಹಾನಾಡ ಪ್ರಭುಗಳು ಮುಮ್ಮಡಿ ಪಟ್ಟಣ, ಬಿಜ್ಜಾವರಗಳ ಜೊತೆಗೆ ಮದ್ದಗಿರಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದರು. ಮದ್ದಗಿರಿಯಲ್ಲಿ ಕ್ರಿ.ಶ. ೧೧೫೧ರಲ್ಲಿಯೇ ಒಂದು ಜಿನಾಲಯ ಇದ್ದಿತು. ಇದನ್ನು ೧೪೧೮ರಲ್ಲಿ ಮದ್ದಗಿರಿ ಹಳ್ಳಿಯನ್ನು ರಾಮೇಗೌಡ ಎಂಬಾತನಿಗೆ ಗೌಡಿಕೆಯಾಗಿ ಕೊಡಲ್ಪಟ್ಟಿತು. ೧೫೩೦ರ ಸುಮಾರಿನಲ್ಲಿ ವ್ಯಾಸರಾಯ ಸ್ವಾಮಿಗಳು ಬಿಜ್ಜಾದೇವಿ(ಮಾರಮ್ಮ)ಯನ್ನು ಪ್ರತಿಷ್ಠಾಪನೆ ಮಾಡಿದರೆಂದು, ೧೫೬೮ರಲ್ಲಿ ಭಟ್ಟಾಚಾರ್ಯರೆಂಬ ಜೈನ ಮುನಿಗಳು ಇದ್ದರೆಂದು ತಿಳಿಯುತ್ತದೆ. ಜೈನ ಬಸ್ತಿಯಲ್ಲಿರುವ ೧೫೩೧ರ ಶಾಸನದ ಪ್ರಕಾರ ಮಲ್ಲೀನಾಥಸ್ವಾಮಿಯ ಅಮೃತ ಪಡಿಗೆ ಜಯಮ್ಮ ಎಂಬಾಕೆಯು ಅನೇಕ ಅಗ್ರಹಾರಗಳನ್ನು ದಾನ ಮಾಡಿದಳೆಂದು ತಿಳಿಯುತ್ತದೆ. ಮಹಾನಾಡಪ್ರಭು ಇಮ್ಮಡಿ ಚಿಕ್ಕಪ್ಪಗೌಡನಿಗೆ ಒಂದು ದಿನ ಮಧುಗಿರಿಯ ಬೆಟ್ಟದ ಸಮೀಪ ಮೇಯಲು ಬಂದಿದ್ದ ಕುರಿಗಳು ಒದ್ದೆಯಾಗಿರುವುದು ಕಂಡಿತು. ಈ ಬೆಟ್ಟದಲ್ಲಿ ನೀರಿನ ಝುರಿಗಳಿರುವುದರಿಂದ ಜನವಸತಿಗೆ ರಕ್ಷಣಾ ಕೋಟೆಯನ್ನು ಕಟ್ಟಲು ಅನುಕೂಲಕರವಾಗಿದೆ ಎಂದು ತೀರ್ಮಾನಿಸಿದನು. ಅದರಂತೆ ಕಾಡು ಕಡಿಸಿ ೧೬೭೦ರಲ್ಲಿ ಪ್ರಥಮವಾಗಿ ಕೋಟೆಯನ್ನು ಕಟ್ಟಲು ಅಳತೆ ಮಾಡಿಸಿ, ಗೋಪಾಲಕೃಷ್ಣ ದೇವಾಲಯವನ್ನು ಕಟ್ಟಿಸಿ ದೇವಪ್ರತಿಷ್ಠಾಪನೆ ಮಾಡಿಸಿದನು. ಮುಂದೆ ಮುಮ್ಮಡಿ ಚಿಕ್ಕಪ್ಪಗೌಡನು ಮಧುಗಿರಿಯ ಬೆಟ್ಟದ ಮೇಲೆ ಕಣಜ, ದೊಣೆಗಳ ನಿರ್ಮಾಣ ಮಾಡಿಸಿದನು. ಆನಂತರ ಬಂದ ಕಾಳಚಿಕ್ಕಪ್ಪಗೌಡನು ವಿಜಯನಗರದ ದೊರೆ ಶ್ರೀರಂಗರಾಯನ ಅಪ್ಪಣೆಯಂತೆ ತಮ್ಮ ಹಿರಿಯರು ಅರ್ಜಿಸಿದ ನಾಡು-ದುರ್ಗಗಳನ್ನು ಅಭಿವೃದ್ಧಿಪಡಿಸಿ, ಧನ-ಧಾನ್ಯ ಮತ್ತು ಮದ್ದು-ಗುಂಡು ಮುಂತಾದ ಯುದ್ಧೋಪಕರಣಗಳನ್ನು ಕೋಟೆಯಲ್ಲಿ ಇಟ್ಟುಕೊಂಡು ರಾಜಕಾರ್ಯ ಮಾಡುತ್ತಾ ಗ್ರಾಮಗಳ ಎಲ್ಲೆಕಟ್ಟುಗಳನ್ನು ಏರ್ಪಡಿಸಿದನು. ನಂತರ ತನ್ನ ಮಕ್ಕಳಾದ ಚಿಕ್ಕಪ್ಪಗೌಡ(ರಾಮೇಗೌಡ) ಮತ್ತು ತಿಮ್ಮೇಗೌಡರ ನಡುವೆ ಮಹಾನಾಡನ್ನು ಹಂಚಿಕೆ ಮಾಡಿಕೊಟ್ಟನು. ಮೈಸೂರಿನ ಚಿಕ್ಕದೇವರಾಜ ಒಡೆಯರ ಸೈನ್ಯವು ದಳವಾಯಿ ಕಳಲೆ ದೇವರಾಜಯ್ಯನ ನೇತೃತ್ವದಲ್ಲಿ ಮದ್ದಗಿರಿಗೆ ಮುತ್ತಿಗೆ ಹಾಕಿತು. ಅಭೇದ್ಯವಾದ ಮದ್ದಗಿರಿ ಕೋಟೆಯನ್ನು ಮುತ್ತಲು ಮೈಸೂರು ಸೈನ್ಯ ನಡೆಸಿದ ಪ್ರಯತ್ನಗಳೆಲ್ಲ ವಿಫಲವಾದವು. ಹನ್ನೆರಡು ತಿಂಗಳುಗಳು ಕಾದು ಕೂತರೂ ಶರಣಾಗಿ ದುರ್ಗದ

ಬಾಗಿಲನ್ನು ತೆರೆಯುವ ಸಂಭವ ಕಾಣಲಿಲ್ಲ. ಹತಾಶೆಯಿಂದ ಮೈಸೂರು ಸೇನೆ ಮರಳುವ ಸಮಯಕ್ಕೆ ಚಿಕ್ಕದೇವರಾಜರ ಆಜ್ಞೆಯ ಮೇರೆಗೆ ಕೊಮಾರಯ್ಯನ ನೇತೃತ್ವದಲ್ಲಿ ಮತ್ತೊಂದು ಹೊಸಸೈನ್ಯವೊಂದು ಬಂದು ದಳವಾಯಿಯ ಸಹಾಯಕ್ಕೆ ಬಂದಿತು. ೧೬೭೮ರಲ್ಲಿ ಮೈಸೂರು ಸೇನೆಯು ಮದ್ದಗಿರಿಯ ಕೆಳಕೋಟೆಗೆ ಮುತ್ತಿಗೆಹಾಕಿ ಊರನ್ನು ಸ್ವಾಧೀನಪಡಿಸಿಕೊಂಡಿತು. ಚಿಕ್ಕಪ್ಪಗೌಡ ಮತ್ತು ಪರಿವಾರದವರು ಹಾಗೂ ಅಧಿಕಾರಿಗಳು ಸುರಕ್ಷಿತವಾಗಿ ಮದ್ದಗಿರಿಯ ದುರ್ಗದ ಕುಂಭಿಯ ಮೇಲೇರಿದರು. ಮೇಲೇರಿ ಬರುತ್ತಿರುವ ಶತೃಗಳನ್ನು ಹಿಮ್ಮೆಟ್ಟಿಸುವ ಬರದಲ್ಲಿ ಸಂಗ್ರಹಿಸಿಟ್ಟಿದ್ದ ಆಹಾರ ಪದಾರ್ಥಗಳೆಲ್ಲವೂ ಬರಿದಾಯಿತು. ಕೊನೆಗೆ ಎರಡು ತಿಂಗಳುಗಳ ನಂತರ ಚಿಕ್ಕಪ್ಪಗೌಡ ಮತ್ತು ಅವನ ಪರಿವಾರವು ಚಿಕ್ಕದೇವರಾಜ ಒಡೆಯರ ಸೈನ್ಯಕ್ಕೆ ಶರಣಾಯಿತು. ಮುಂದೆ ಚನ್ನರಾಯನದುರ್ಗ, ಮಿಡಗೇಶಿ ಮುಂತಾದವುಗಳು ಮೈಸೂರಿನ ಅಧೀನಕ್ಕೆ ಒಳಪಟ್ಟವು (ನಾರಾಯಣಾಚಾರ್ಯ ೧೯೪೫: ೮-೪೪).

ಶಿರಾದ ಮುಸಲ್ಮಾನರ ದಂಡು ಆಗಾಗ ಮೈಸೂರಿನ ಮೇಲೆ ಆಕ್ರಮಣ ಮಾಡುತ್ತಿದ್ದುದರಿಂದ ಅದನ್ನು ತಡೆಗಟ್ಟುವ ಉದ್ದೇಶದಿಂದ ಗಡಿನಾಡಿನ ದುರ್ಗವಾದ ಮದ್ದಗಿರಿಯ ಕೋಟೆಯನ್ನು ಮತ್ತಷ್ಟು ಬಲಪಡಿಸಿ, ಕಳಲೆಯ ದಳವಾಯಿ ದೊಡ್ಡ ಅರಸುವನ್ನು ದುರ್ಗದ ರಕ್ಷಣೆಗೆಂದು ಸೇನಾ ಸಮೇತನಾಗಿ ಇಟ್ಟನು. ದೊಡ್ಡ ಅರಸು ಆಯಕಟ್ಟಿನ ಸ್ಥಳಗಳಲ್ಲಿ ಕೋಟೆಕಟ್ಟಿಸಿ ದುರ್ಗವನ್ನು ಬಲಪಡಿಸಿದನು. ಈ ಕುರಿತು ಏಳನೇ ಬಾಗಿಲು ಪಕ್ಕದಲ್ಲಿರುವ ಗುಂಡಿನ ಮೇಲಿನ ಚಿಕ್ಕದೇವರಾಜ ಒಡೆಯರ ಶಾಸನ ಮಾಹಿತಿ ನೀಡುತ್ತದೆ. ಕ್ರಿ.ಶ. ೧೬೮೬ರ ಅಕ್ಷಯ ಸಂವತ್ಸರದಲ್ಲಿ ರಾಮಭದ್ರ ಫಿರಂಗಿ ಮತ್ತು ಭೂತನಾಥ ಫಿರಂಗಿಗಳಿಂದ ಗುಂಡು ಹಾರಿಸಲು ಅನುಕೂಲವಾಗುವಂತೆ ಅವುಗಳ ಸುತ್ತ ಐದು ಕಿಂಡಿಗಳನ್ನು ಬಿಟ್ಟು ಗೋಡೆಯನ್ನು ನಿರ್ಮಿಸಿರುತ್ತಾರೆ. ಶತೃಗಳ ಫಿರಂಗಿಧಾಳಿಯಿಂದ ರಕ್ಷಣೆ ಪಡೆದುಕೊಳ್ಳುವುದಕ್ಕಾಗಿ ಕೊತ್ತಳದ ಮೇಲೆ ಎದೆ ಮಟ್ಟದ ಎದೆಮರೆ ಮೋಪುಗಾವಲನ್ನು ಅಂಗಿರಸ ಸಂವತ್ಸರದಲ್ಲಿ (ಕ್ರಿ.ಶ.೧೬೯೨) ಕುಪ್ಪುಗುಂಡ್ಲು ಕೋಟೆಯ ಬಳಿ ನಿರ್ಮಿಸಿದರೆಂದು ತಿಳಿಯುತ್ತದೆ. ಅದೇ ರೀತಿ ಶ್ರೀಮುಖ ಸಂವತ್ಸರದಲ್ಲಿ (ಕ್ರಿ.ಶ. ೧೬೯೩) ಇಲ್ಲಿಯ ಬಾಗಿಲ ಕೆಳಗೆ ಇಳಿಯಲು ೩೫ ಸೋಪಾನುಗಳನ್ನು ನಿರ್ಮಿಸಿದರೆಂದು ಶಾಸನದಿಂದ ತಿಳಿದು ಬರುತ್ತದೆ. ಕುಪ್ಪುಗುಂಡ್ಲು ಬಳಿಯ ಬಾಗಿಲಿಗೆ ಕುಪ್ಪುಗುಂಡ್ಲು ಬಾಗಿಲು ಎಂದು, ಸೋಪಾನ ನಿರ್ಮಿಸಿದ ಬಾಗಿಲಿಗೆ ಸೋಪಾನದ ದಿಡ್ಡಿ ಬಾಗಿಲು ಎಂದು ಕರೆಯುತ್ತಾರೆ. ಹೊಸ ಬಾಗಿಲು ಮತ್ತು ಸೋಪಾನಗಳನ್ನು ನಿರ್ಮಿಸಲು ಮುಖ್ಯಕಾರಣವೆಂದರೆ ೧೬೯೦ರಲ್ಲಿ ಚಿಕ್ಕದೇವರಾಜ ಒಡೆಯನು ತನ್ನ ಧರ್ಮಪತ್ನಿ ಗೌರಮ್ಮಣ್ಣಿಯೊಂದಿಗೆ ಮದ್ದಗಿರಿಗೆ ಆಗಮನಿಸಿ ಕೆಲಕಾಲ ನೆಲೆಸಿದ್ದನು.

ಆಗ ಈ ಬೆಟ್ಟದ ಪೂರ್ವದಲ್ಲಿ ಬೃಂದಾವನವನ್ನು ನಿರ್ಮಿಸಿ ಅಲ್ಲಿ ಕೃಷ್ಣನ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿಸಿದನು. ಬೃಂದಾವನಕ್ಕೆ ಅಗತ್ಯವಿರುವ ನೀರಿಗಾಗಿ ಗೋಪಾಲ ಸರಸು ಎಂಬ ಕೊಳವನ್ನು ನಿರ್ಮಿಸಿದನು. ಗೌರಮ್ಮಣ್ಣಿ ಅವರು ನಿತ್ಯವೂ ಅರಮನೆಯಿಂದ ಇಲ್ಲಿಗೆ ಪೂಜೆಗಾಗಿ ಆಗಮಿಸುತ್ತಿದ್ದರು. ಕೋಟೆಯನ್ನು ಸುತ್ತಿ ಬರಲು ಬಹಳ ಕಷ್ಟವಾದುದರಿಂದ ಹೊಸದಾಗಿ ಈ ಬಾಗಿಲನ್ನು ನಿರ್ಮಿಸಿ ಕೆಳಗೆ ಇಳಿಯಲು ಈ ಸೋಪಾನಗಳನ್ನು ನಿರ್ಮಿಸಿದ್ದಾರೆ. ಈ ಬಾಗಿಲು ನಿರ್ಮಾಣವಾದ ಮೇಲೆ ಈ ಬಾಗಿಲಿನಿಂದ ಗೌರಮ್ಮಣ್ಣಿ ಅವರು ಬೃಂದಾವನಕ್ಕೆ ಪೂಜೆಗಾಗಿ ಆಗಮಿಸುತ್ತಿದ್ದರು ಎನ್ನಬಹುದು. ಬೆಟ್ಟದ ಕುಂಬಿಯ ಮೇಲೆ ಆಹಾರ ಧಾನ್ಯಗಳನ್ನು ಸಂಗ್ರಹಿಸಲು ಕ್ರಿ.ಶ. ೧೭೦೦ರಲ್ಲಿ ದೊಡ್ಡ ಕಣಜವನ್ನು ಕಟ್ಟಿಸಲಾಯಿತು. ಇತ್ತ ಶಿರಾದ ನವಾಬರ ಬಳಿ ಚಾಕರಿಯಲ್ಲಿದ್ದ ಹೈದರಾಲಿಯ ತಂದೆಯು ಮರಣ ಹೊಂದಿದನು. ಹೈದರನ ತಂದೆಯು ಶಿರಾದ ನವಾಬ ಮತ್ತು ವರ್ತಕರ ಬಳಿ ಮಾಡಿದ ಸಾಲವನ್ನು ತೀರಿಸುವ ಸಲುವಾಗಿ ಹೈದರಾಲಿಯು ಮದ್ದಗಿರಿಯ ಅಧಿಕಾರಿಯ ಅಧೀನದಲ್ಲಿ ಕೆಲಕಾಲ ಸೇವೆಗೆ ಸೇರಿದನು. ಮುಂದೆ ಪ್ರವರ್ಧಮಾನಕ್ಕೆ ಬಂದ ಹೈದರಾಲಿಯ ನೇತೃತ್ವದ ಮೈಸೂರು ಸಂಸ್ಥಾನದ ಭಾಗವಾಗಿಯೇ ಮದ್ಧಗಿರಿ ಉಳಿದಿತ್ತು. ೧೭೭೦ರಲ್ಲಿ ಮರಾಠರ ಮಾಧವರಾಯನು ಶ್ರೀರಂಗಪಟ್ಟಣದ ಮೇಲೆ ಆಕ್ರಮಣಕ್ಕೆ ಬಂದಾಗ ಹೈದರಾಲಿಯು ಶಾಂತಿ ಒಪ್ಪಂದ ಮಾಡಿಕೊಂಡನು. ಅದರಂತೆ ೩೦ ಲಕ್ಷ ವರಹಗಳನ್ನು ಕೊಡಬೇಕಾಯಿತು. ಆಗ ಹೈದರನು ೧೫ ಲಕ್ಷ ವರಹಗಳನ್ನು ನೀಡಿ, ಉಳಿದ ಮೊತ್ತ ಪಾವತಿಸುವವರೆಗೆ ಮದ್ದಗಿರಿ ಸೇರಿದಂತೆ ೭ ಕೋಟೆಗಳನ್ನು ಮರಾಠರಿಗೆ ಬಿಟ್ಟುಕೊಟ್ಟನು. ೧೭೭೪ರಲ್ಲಿ ಟಿಪ್ಪು ಸುಲ್ತಾನನು ಶಿರಾ ಮತ್ತು ಮದ್ದಗಿರಿಗೆ ಮೂರು ತಿಂಗಳುಗಳ ಕಾಲ ಮುತ್ತಿಗೆ ಹಾಕಿ ಮರಾಠರನ್ನು ಇಮ್ಮೆಟ್ಟಿಸಿದನು. ನಂತರ ಟಿಪ್ಪುವು ಸೈಯದ್ ಫಕ್ರುದ್ದೀನ್ ಎಂಬವನನ್ನು ಮದ್ದಗಿರಿಯ ಅಧಿಕಾರಿಯಾಗಿ ನೇಮಿಸಿದನು. ಅಲ್ಲದೆ ಮದ್ದರಿಗೆ 'ಫತಹಾಬಾದ್' (ವಿಜಯಪುರ) ಎಂದು ನಾಮಕರಣ ಮಾಡಿದನು (ನಾರಾಯಣಾಚಾರ್ಯ ೧೯೪೫: ೧೯–೫೪; ಕಾವಲಮ್ಮ ೨೦೦೫: ೨೪–೯೫; ಯೋಗೀಶ್ವರಪ್ಪ ೨೦೧೨: ೧೯೪–೧೯೮; ಮುನಿರಾಜ ೨೦೧೨: ೭೯).

ಈ ಮೊದಲು ಚಿಕ್ಕದೇವರಾಜ ಒಡೆಯರು ಕುಪ್ಪುಗುಂಡ್ಲದ ಕೋಟೆಯ ಮೇಲೆ ಎದೆಮರೆ ಮೋಪುಗಾವಲು ಕಟ್ಟಿಸಿದರೆ, ಅದಕ್ಕೆ ಹೈದರಾಲಿಯು ಕ್ರಿ.ಶ. ೧೭೮೩ರಲ್ಲಿ ಹೊಸದಾಗಿ ಬಾಗಿಲನ್ನು ನಿರ್ಮಿಸಿದನೆಂದು ಇಲ್ಲಿ ಶಾಸನವೊಂದರಿಂದ ತಿಳಿಯುತ್ತದೆ (ಎ.ಕ–೧೨ ಮಧುಗಿರಿ–೧). ಮಧುಗಿರಿಯ ಕೋಟೆ ಅತ್ಯಂತ ಅಭೇದ್ಯವಾದ ಕೋಟೆ. ಇದು ಹತ್ತು ಸುತ್ತು ಕೋಟೆಯನ್ನು ಮತ್ತು ೧೫ ದ್ವಾರಗಳನ್ನು ಹೊಂದಿದೆ. ಆಯಕಟ್ಟಿನ

ಜಾಗಗಳಲ್ಲಿ ಕೊತ್ತಳಗಳನ್ನು ಮತ್ತು ಬತೇರಿಗಳನ್ನು ನಿರ್ಮಿಸಿದ್ದಾರೆ. ನೀರಿಗಾಗಿ ಅಲ್ಲಲ್ಲಿ ಸ್ವಾಭಾವಿಕ ಮತ್ತು ಕೃತಕ ನೀರಿನ ಆಸರೆಗಳನ್ನು ಕಲ್ಪಿಸಿಕೊಳ್ಳಲಾಗಿದೆ. ಬೃಹತ್ ಕಣಜಗಳನ್ನು ಮತ್ತು ಅರಮನೆಗಳನ್ನು ನಿರ್ಮಿಸಿಕೊಳ್ಳಲಾಗಿದೆ. ಅಲ್ಲಲ್ಲಿ ಮದ್ದಿನ ಮನೆಗಳು, ಕೋಟೆಗೋಡೆಗೆ ಹೊಂದಿಕೊಂಡಂತೆ ಮೇಲೇರುವ ಮೆಟ್ಟಿಲುಗಳನ್ನು ಕಾಣಬಹುದು. ಒಟ್ಟಾರೆ, ನಾಡಪ್ರಭುಗಳ ಕಾಲದಲ್ಲಿ ಆರಂಭವಾದ ಇಲ್ಲಿನ ಕೋಟೆಯ ನಿರ್ಮಾಣ ಮತ್ತು ಅಭಿವೃದ್ಧಿ ಕಾರ್ಯವು ಟಿಪ್ಪು ಸುಲ್ತಾನನ ಕಾಲದವರೆಗೂ ಮುಂದುರಿದಿರುವುದನ್ನು ಕಾಣಬಹುದು.

### ೮. ವೆಲ್ಲೂರಿನ ಕೋಟೆ

ತಮಿಳುನಾಡಿನ ಒಂದು ಪ್ರಮುಖ ಜಿಲ್ಲಾ ಕೇಂದ್ರ ವೆಲ್ಲೂರು. ಇದು ಪಾಲಾರ್ ನದಿಯ ದಂಡೆಯ ಮೇಲಿದೆ. ಆರ್ಕಾಟಿನ ಅವಿಭಾಜ್ಯ ಅಂಗವಾಗಿರುವ ವೆಲ್ಲೂರು ಬಲಿಷ್ಠವಾದ ನೆಲೆದುರ್ಗವನ್ನು ಹೊಂದಿದೆ. ಸಂಘಂ ಸಾಹಿತ್ಯ ಕಾಲದಿಂದಲೂ ಆರ್ಕಾಟ್ ಸಮೃದ್ಧವಾದ ಪ್ರದೇಶವೆಂದು ತಿಳಿದು ಬರುತ್ತದೆ.



ಸಂಘಂ ಸಾಹಿತ್ಯದಲ್ಲಿ ಇದನ್ನು ಪ್ರಾಚೀನ ಚೋಳರ ರಾಜಧಾನಿಯಾದ ಉರ್ರೈಯೂರಿಗೆ ಸರಿಸಮನಾಗಿತ್ತೆಂದು ಬಣ್ಣಿಸಲ್ಪಟ್ಟಿದೆ. ರಾಷ್ಟ್ರಕೂಟರ ೩ನೇ ಕೃಷ್ಣನ ಶಾಸನದಲ್ಲಿ (ಸೌ. ಇಂ. ಇ. – ೧, ಸಂ.೫೩, ಕ್ರಿ.ಶ. ೯೬೩) ವೆಲ್ಲೂರನ್ನು 'ವೇಲೂರ್‌ಪಾಡಿ' ಎಂದು ಹೆಸರಿಸಿದೆ. 'ವೆಲೂರ್‌ಪಾಡಿ'ಯೇ ಮುಂದೆ 'ವೆಲ್ಲೂರು' ಆಗಿದೆ. ಪ್ರಾಚೀನ ಕಾಲದಲ್ಲಿ ವೇಲಾನ್(ಜಾಲಿ) ಮರಗಳು ಊರಿನ ನಡುವೆ ಬೆಳೆದಿದ್ದವು ಮತ್ತು ನಗರವು ದಟ್ಟ ಅರಣ್ಯ ನಡುವೆ ಇದ್ದುದರಿಂದ 'ವೇಲಪಾಡಿ'ಯು 'ವೇಲೂರ್‌ಪಾಡಿ'ಯಾಗಿದೆ ಎಂದು ಹೇಳಲಾಗುತ್ತದೆ (ಶೇಷಾದ್ರಿ ೨೦೧೬(೨೦೦೬): ೫–೮).

ಆನಂತರ ವೆಲ್ಲೂರನ್ನು ಪಡೈಪೀಡಿಸ ಸಂಬುವರಯಯಾರ್ ಮನೆತನದವರು ಸುಮಾರು ೨ ಶತಮಾನಗಳ ಕಾಲ ಆಳಿದರು. ಈ ಮನೆತನದವರು ಕೋಟೆಯ ಒಳಗಿನ ಜಲಕಂಠೇಶ್ವರ ದೇವಾಲಯದ ಮೊದಲಹಂತವನ್ನು ನಿರ್ಮಾಣ ಮಾಡಿದರಲ್ಲದೆ, ಕೋಟೆಯನ್ನೂ ಮಾಡಿಸಿದರು. ವಿಜಯನಗರದ ಅರಸರಕಾಲದಲಿ ವೆಲ್ಲೂರು ಪ್ರಮುಖ ಪ್ರಾಂತೀಯ ಕೇಂದ್ರವಾಗಿತ್ತು. ಇದೇ ವೇಳೆ ಬಲಿಷ್ಠ ಕೋಟೆಯನ್ನು ನಿರ್ಮಿಸಿ ವಿಜಯನಗರದ ಸಾಮಂತ ನಾಯಕರು ಇಲ್ಲಿಂದ ಆಳಲಾರಂಭಿಸಿದರು. ಅವರಲ್ಲಿ ಮುಖ್ಯನಾದವನು ಚಿನ್ನಬೊಮ್ಮನಾಯಕ. ಇವನು ವಿಜಯನಗರದ ಸದಾಶಿವರಾಯನ ಸಾಮಂತನಾಗಿದ್ದನು. ಇವನ ಮಗನಾದ ಲಿಂಗಮ ನಾಯಕನು ವಿಜಯನಗರದ ಅರಸ ೨ನೇ ವೆಂಕಟನ (೧೫೮೬-೧೬೦೪) ವಿರುದ್ಧ ವಿಫಲ ದಂಗೆ ನಡೆಸಿದನು. ಆಗ ವೆಂಕಟನು ವೆಲ್ಲೂರನ್ನು ಆಕ್ರಮಿಸಿ ವಿಜಯನಗರದ ಎರಡನೇ ರಾಜಧಾನಿ ಮಾಡಿಕೊಂಡನು. ಹೀಗಿರಲು ೧೬೪೬ರಲ್ಲಿ ವಿಜಯನಗರದ ಅರಸರಿಂದ ಮೀರ್-ಜುಮ್ಲ ಎಂಬಾತನು ಕೋಟೆಯನ್ನು ವಶಪಡಿಕೊಂಡನು. ಇದು ೧೬೭೭ರಲ್ಲಿ ಶಿವಾಜಿಗೆ ಹಸ್ತಾಂತರಗೊಂಡಿತು. ೧೭೦೮ರಲ್ಲಿ ಮೊಘಲರು ಈ ಕೋಟೆಯುನ್ನು ವಶಪಡಿಸಿಕೊಳ್ಳುವವರೆಗೆ ಮರಾಠರ ವಶದಲ್ಲಿದ್ದಿತು (ಶೇಷಾದ್ರಿ ೨೦೧೬(೨೦೦೬): ೫-೮; ಮಿಷಲ್ ೨೦೧೩: ೪೨೩-೪೨೪).

೧೮ನೇ ಶತಮಾನದ ಆರಂಭಿಕ ದಶಕಗಳಲ್ಲಿ ವೆಲ್ಲೂರು ಮುರ್ತಾಜ್ ಅಲಿಯ ಅಧೀನದಲ್ಲಿತ್ತು. ಈತನು ಆರ್ಕಾಟ್ ನವಾಬನ ಸಂಬಂಧಿಯಾಗಿದ್ದನು. ಇದನ್ನು ಕಂಪನಿ ಗ್ಯಾರಿಸನ್ ಆಗಿ ೧೭೬೦ರಲ್ಲಿ ಪರಿವರ್ತಿಸಲಾಯಿತು. ೧೭೮೧ರ ಆರಂಭದಲ್ಲಿ ವೆಲ್ಲೂರನ್ನು ಒಳಗೊಂಡಂತೆ ಆರ್ಕಾಟನ್ನು ಕೆಲಕಾಲ ಹೈದರಾಲಿಯು ತನ್ನ ನಿಯಂತ್ರಣದಲ್ಲಿಟ್ಟುಕೊಂಡಿದ್ದನೆಂದು ಟಿಪ್ಪುವಿನ ಖೈದಿಗಳ ಬರವಣಿಗೆಯಿಂದ ತಿಳಿದು ಬರುತ್ತದೆ. ಅದೂ ೧೭೮೧ರ ಅರಂಭದ ಕೆಲದಿನಗಳು ಮಾತ್ರವೆಂದು ತೋರುತ್ತದೆ (ನಾಗೇಗೌಡ ೧೯೯೮: ೧೧೦; ಷೇಕ್‌ಅಲಿ ೧೯೯೭: ೧೮೯-೧೯೧). ಮುಂದೆ ಟಿಪ್ಪು ಸುಲ್ತಾನನ ವಿರುದ್ಧದ ಕಾರ್ಯಾಚರಣೆಗೆ ಲಾರ್ಡ್ ಕಾರನ್‌ವಾಲೀಸನು ವೆಲ್ಲೂರು ಕೋಟೆಯನ್ನು ತನ್ನ ನೆಲೆಯನ್ನಾಗಿ ಮಾಡಿಕೊಂಡಿದ್ದನು. ಮುಂದೆ ಶ್ರೀರಂಗಪಟ್ಟಣದ ಪತನ ಮತ್ತು ಟಿಪ್ಪುವಿನ ಮರಣಾನಂತರ ಅವನ ಕುಟುಂಬದವರನ್ನು ಇಲ್ಲಿಗೆ ಗಡಿಪಾರು ಮಾಡಲಾಯಿತು. ೧೮೦೬ರಲ್ಲಿ ವೆಲ್ಲೂರು ದಂಗೆ ಕೂಡ ಘಟಿಸಿತು. ಟಿಪ್ಪು ಕುಟುಂಬ ಸದಸ್ಯರ ಕೆಲವು ಸಮಾಧಿಗಳು ವೆಲ್ಲೂರಿನಲ್ಲಿವೆ. ಒಟ್ಟಾರೆ, ವೆಲ್ಲೂರಿನ ಕೋಟೆಯು ಅಲ್ಪಕಾಲ ಮಾತ್ರ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ನಿಯಂತ್ರಣದಲ್ಲಿತ್ತು. ಇಲ್ಲಿ ಟಿಪ್ಪು ಮಹಲ್ ಮತ್ತು ಹೈದರ್ ಮಹಲ್ ಎಂಬ ಎರಡು ಅರಮನೆಗಳಿವೆ.

ಹೈದರ್ ಮಹಲ್ ೨೦೦ ಕೋಣೆಗಳನ್ನು ಒಳಗೊಂಡಿದ್ದರೆ, ಟಿಪ್ಪುಮಹಲ್ ೧೮೦ ಕೋಣೆಗಳನ್ನು ಒಳಗೊಂಡಿದೆ. ಬ್ರಿಟಿಷರ ವಿರುದ್ಧ ಯುದ್ಧ ಮಾಡುವ ಸಂದರ್ಭದಲ್ಲಿ ಟಿಪ್ಪು ಸುಲ್ತಾನನು ಇಲ್ಲಿ ನೆಲೆಸಿದ್ದನೆಂದು ಹೇಳಲಾಗುತ್ತದೆ. ಅವುಗಳನ್ನು ಅತೀ ಸುಭದ್ರವಾದ ಸೆರಮನೆಯನ್ನಾಗಿ ಅವುಗಳನ್ನು ಪರಿವರ್ತಿಸಿರುವುದರಿಂದ ಅಲ್ಲಿಗೆ ಸಾರ್ವಜನಿಕರಿಗೆ ಪ್ರವೇಶವಿಲ್ಲ.

ವೆಲ್ಲೂರು ಕೋಟೆಯು ಸುಮಾರು ೧೩೪ ಎಕರೆ ವಿಸ್ತೀರ್ಣವನ್ನು ಹೊಂದಿರುವ ಚೌಕಾಕಾರದ ಕೋಟೆ ೧೮ ಕೊತ್ತಳಗಳನ್ನು ಮತ್ತು ಎರಡು ಬತೇರಿಗಳನ್ನು ಒಳಗೊಂಡಿದೆ. ವಿಶಾಲವಾದ ಮತ್ತು ಆಳವಾದ ಕಂದಕಗಳು ಕೋಟೆಯನ್ನು ಎಲ್ಲಾ ದಿಕ್ಕುಗಳಲ್ಲಿಯೂ ಸುತ್ತುವರಿದಿದೆ. ಕೋಟೆಯ ಪ್ರವೇಶದ್ವಾರ ಪೂರ್ವಕ್ಕಿದೆ. ಕೋಟೆಯ ಗೋಡೆಗಳು ಭಾರಿಗಾತ್ರವನ್ನು ಹೊಂದಿವೆ. ಕೋಟೆಯ ಮೇಲಿನ ಆಳೆತ್ತರದ ಕೈಪಿಡಿಯಲ್ಲಿ ಅಲ್ಲಲ್ಲಿ ಮದ್ದುಗುಂಡುಗಳ ಸಂಗ್ರಹಗಾರಗಳು ಮತ್ತು ಕಾವಲುಗಾರರ ಕೋಣೆಗಳಿವೆ. ಈ ಕೋಟೆಯ ಮತ್ತೊಂದು ವಿಶೇಷ ಎಂದರೆ ಒಂದೇ ಸುತ್ತಿನ ಕೋಟೆಯಾದರೂ, ಎರಡು ಹಂತದ ಪಹರೆಕಟ್ಟೆಯನ್ನು ಹೊಂದಿದೆ. ಮೊದಲ ಹಂತ ಒಳಭಾಗದ ಕೋಟೆಯ ಮೇಲಿರುವ ಪಹರೆಕಟ್ಟೆ. ಎರಡನೆಯದು ಹೊರಭಾಗ ಮತ್ತು ಕಂದಕದ ನಡುವೆ ಇರುವ ಕೆಳಹಂತದ ಪಹರೆಕಟ್ಟೆ. ಇಲ್ಲಿ ಸೈನಿಕರ ರಕ್ಷಣೆಗಾಗಿ ಬಲಿಷ್ಠ ಕೈಪಿಡಿಯನ್ನು ನಿರ್ಮಿಸಲಾಗಿದೆ. ಕಂದಕಗಳಿಗೆ ಬೇಕಾದ ನೀರನ್ನು ಸಮೀಪದಲ್ಲಿರುವ ಪಾಲಾರ್ ನದಿಯ ಮೂಲಕ ಹರಿಸುತ್ತಿದ್ದರು. ಕೋಟೆಯ ಒಳಭಾಗದಲ್ಲಿ ಜಲಕಂಠೇಶ್ವರ ದೇವಾಲಯ, ಚರ್ಚ್, ಮ್ಯೂಸಿಯಂ ಮತ್ತು ಹೈದರ್ ಹಾಗೂ ಟಿಪ್ಪು ಮಹಲ್‌ಗಳಿವೆ. ಮದ್ದಿನ ಮನೆಯ ಅವಶೇಷಗಳಿವೆ. ಪ್ರಸ್ತುತ ಇಲ್ಲಿ ಪೊಲೀಸ್ ತರಬೇತಿ ಕೇಂದ್ರ ಇರುವುದರಿಂದ ಸಾರ್ವಜನಿಕ ಪ್ರವೇಶವನ್ನು ನಿಷೇಧಿಸಲಾಗಿದೆ.

## ೯. ಮಂಜರಾಬಾದ್ ಕೋಟೆ

ಈ ಕೋಟೆಯನ್ನು ಟಿಪ್ಪು ಸುಲ್ತಾನ್ ಹೊಸದಾಗಿ ನಿರ್ಮಾಣ ಮಾಡಿಸಿದ ಏಕೈಕ ಕೋಟೆ ಎಂದೇ ಗುರುತಿಸಲಾಗುವುದು. ಹಾಸನ ಜಿಲ್ಲೆಯ ಸಕಲೇಶ್ವರ ತಾಲ್ಲೂಕು ಕೇಂದ್ರದಿಂದ ೬ ಕಿ.ಮೀ. ದೂರದಲ್ಲಿ ಹಸಿರ ಕಾನನದ ನಡುವೆ ದಿಣ್ಣೆಯೊಂದರ ಮೇಲೆ ಈ ಕೋಟೆಯನ್ನು ನಿರ್ಮಿಸಲಾಗಿದೆ. ಭಾರತದಲ್ಲಿಯೇ ನಕ್ಷತ್ರಾಕಾರದಲ್ಲಿರುವ ಅಪರೂಪದ ಕೋಟೆಗಳಲ್ಲಿ ಒಂದಾಗಿದೆ. ಈ ಕೋಟೆಯನ್ನು ಟಿಪ್ಪು ಸುಲ್ತಾನನು ೧೭೯೨ರಲ್ಲಿ ಕಟ್ಟಿಸಿದನೆಂದು ಹೇಳಲಾಗುತ್ತದೆ. ಈ ಕೋಟೆಯನ್ನು ನೋಡಲು ಟಿಪ್ಪು ಅಲ್ಲಿಗೆ ಬಂದಾಗ ಅಲ್ಲಿಯ ಮಂಜುಕವಿದ ಸುಂದರ ವಾತಾವರಣವನ್ನು ಕಂಡು 'ಮಂಜರಾಬಾದ್' ಎಂದನಂತೆ. ಮಂಜರಾಬಾದ್ ಎಂದರೆ ಸುಂದರ ಪ್ರದೇಶ. ಈ

ಕೋಟೆಯನ್ನು ಫ್ರೆಂಚ್ ತಂತ್ರಜ್ಞರ ನೆರವಿನಿಂದ ನಿರ್ಮಿಸಿದ್ದು, ಸಮಕಾಲೀನ ಫ್ರಾನ್ಸ್ ಕೋಟೆಗಳೊಂದಿಗೆ ಸಾಮ್ಯತೆಯನ್ನು ಹೊಂದಿದೆ. ಅಲ್ಲದೆ ಬ್ರಿಟಿಷರು ಕಟ್ಟಿಸಿದ ಫೋರ್ಟ್ ವಿಲಿಯಮ್ಸ್ ಮತ್ತು ಮದ್ರಾಸಿನ ಫೋರ್ಟ್ ಸೇಂಟ್ ಜಾರ್ಜ್‌ಗಳೊಂದಿಗೂ ಹೋಲಿಸಬಹುದು (ಪಾಟೀಲ ೧೯೯೯: ೨೬೯-೨೭೩).

ಕೋಟೆಯು ಎಂಟು ಮೂಲೆಗಳನ್ನು ಒಳಗೊಂಡಿದ್ದು, ಕಲ್ಲು, ಮಣ್ಣು ಮತ್ತು ಗಾರೆಯಿಂದ ಸುಭದ್ರವಾಗಿ ನಿರ್ಮಿಸಿದ್ದಾರೆ. ಕೋಟೆಯ ಸುತ್ತ ಕಂದಕವನ್ನು ನಿರ್ಮಿಸಲಾಗಿದೆ. ಕೋಟೆಯ ಒಳಭಾಗದಲ್ಲಿ ಎರಡು ಮದ್ದಿನ ಮನೆಗಳಿವೆ. ಪಹರೆ ಕಟ್ಟೆಯ ಕೆಳಭಾಗಗಳನ್ನು ಬಳಸಿಕೊಂಡು ವಾಸದ ಮನೆಗಳನ್ನು ನಿರ್ಮಿಸಿದ್ದಾರೆ. ಒಂದು ನಿವಾಸದ ಪಕ್ಕದಲ್ಲಿ ಪಾಯಿಖಾನೆಯ ವ್ಯವಸ್ಥೆ ಕೂಡ ಇದೆ. ಆಹಾರ ಸಂಗ್ರಹ ಮತ್ತು ನೀರಿನ ಸಂಗ್ರಹಕ್ಕಾಗಿ ಕಣಜ ಮತ್ತು ತೊಟ್ಟಿಗಳನ್ನು ನಿರ್ಮಿಸಿದ್ದಾರೆ. ಕೋಟೆಯ ಎಂಟು ತುದಿಗಳಲ್ಲಿಯೂ ಕೊತ್ತಳಗಳ ಬದಲು ವೀಕ್ಷಣಾ ಕೋಣೆಗಳನ್ನು ನಿರ್ಮಿಸಿದ್ದಾರೆ. ಫಿರಂಗಿಗಳನ್ನು ಹಾರಿಸಲು ಕುಂಬೆ ಅಥವಾ ಕೈಪಿಡಿಗಳಲ್ಲಿ ಫಿರಂಗಿ ಕಿಂಡಿಗಳನ್ನು ಮತ್ತು ಬಂದೂಕು ಕಿಂಡಿಗಳನ್ನು ನಿರ್ಮಿಸಲಾಗಿದೆ. ಕೋಟೆಯ ಮಧ್ಯದಲ್ಲಿ + ಮಾದರಿಯಲ್ಲಿ ನಿರ್ಮಿಸಿರುವ ನೀರಿನ ಕೊಳವಿದೆ. ಇದಕ್ಕೆ ನಾಲ್ಕೂ ದಿಕ್ಕುಗಳಿಂದ ಇಳಿಯಲು ಮೆಟ್ಟಿಲುಗಳಿವೆ.

### ೧೦. ಮಡಿಕೇರಿ ಕೋಟೆ

ಇಂದು ಕೊಡಗಿನ ಜಿಲ್ಲಾ ಕೇಂದ್ರವಾಗಿರುವ ಮಡಿಕೇರಿಯ ಸ್ಥಾಪನೆಯ ಹಿಂದೆ ಒಂದು ಜಾನಪದ ಕತೆ ಇದೆ. ಹಾಲೇರಿ ಮನೆತನದ ಮುದ್ದುರಾಜನ ಕಾಲಾವಧಿಯಲ್ಲಿ (ಕ್ರಿ.ಶ. ೧೬೩೩-೧೬೮೭) ರಾಜಧಾನಿಯು ಹಾಲೇರಿಯಿಂದ ಕೊಡಗಿನ ಮಧ್ಯಭಾಗದಲ್ಲಿರುವ ಸ್ಥಳಕ್ಕೆ ಬದಲಾವಣೆಯಾಯಿತು. ಶತ್ರುಗಳ ಹಾವಳಿಯಿಂದ ರಕ್ಷಣೆ ಬಯಸಿ ಆಯಕಟ್ಟಿನ ಸ್ಥಳಕ್ಕೆ ಸ್ಥಳಾಂತರಿಸಲು ಯೋಚಿಸುತ್ತಿದ್ದನು. ಒಮ್ಮೆ ಮುದ್ದುರಾಜನು ಪ್ರಸ್ತುತ ಮಡಿಕೇರಿ ಇರುವ ಜಾಗದಲ್ಲಿದ್ದ ದಟ್ಟಅರಣ್ಯಕ್ಕೆ ಬೇಟೆಗೆ ಹೋದನು. ಕಾಡು ಮೊಲದ ಮೇಲೆ ಬೇಟೆ ನಾಯಿಯನ್ನು ಛೂ ಬಿಟ್ಟನು. ಆಗ ಗಂಡು ಮೊಲವೊಂದು ಬೇಟೆ ನಾಯಿಯನ್ನು ಬೆದರಿಸಿಕೊಂಡು ಬಂದಿತು. ಇದರಿಂದ ಆಶ್ಚರ್ಯ ಚಕಿತನಾದ ಮುದ್ದುರಾಜನು ಇದು 'ಗಂಡು' ನೆಲವೆಂದು ಭಾವಿಸಿ, ಅಲ್ಲಿನ ಗುಡ್ಡದ ಮೇಲ್ಭಾಗವನ್ನು ಸಮತಟ್ಟು ಮಾಡಿ ಕ್ರಿ.ಶ. ೧೬೮೧ರಲ್ಲಿ ಮಣ್ಣಿನ ಗೋಡೆಯ ಕೋಟೆಯನ್ನು ಕಟ್ಟಿಸಿ ಅದರ ಸುತ್ತಲೂ ಕಂದಕಗಳನ್ನು ತೆಗೆಸಿ ಭದ್ರಪಡಿಸಿದನು. ಅದರ ಒಳಗೆ ಒಂದು ಅರಮನೆಯನ್ನೂ ಕಟ್ಟಿಸಿದನು. ನಂತರ ಅವನ ಚಾವಡಿಕಾರರು, ಪರಿವಾರದವರು, ಅರಮನೆ ಉದ್ಯೋಗಸ್ಥರು, ವ್ಯಾಪಾರಸ್ಥರು ಮಡಿಕೇರಿಗೆ ಬಂದು ನೆಲೆ ನಿಂತರು.

ಕೋಟೆಯ ಮುಂಭಾಗದ ಗುಡ್ಡ ಮತ್ತು ಸುತ್ತಲಿನ ಕಣಿವೆಯಲ್ಲಿ ಜನರು ನೆಲೆನಿಂತರು. ಇದನ್ನು ಜನರು 'ಮುದ್ದುರಾಜಕೇರಿ' ಎಂದು ಕರೆದನು. ಮುದ್ದುರಾಜಕೇರಿಯೇ ಮುಂದೆ ಮಡಿಕೇರಿಯಾಯಿತು ಎಂದು ಪಿಜಯ್ ಪೂಣಚ್ಚ ತಂಬಂಡ ಅವರು ಐತಿಹ್ಯವನ್ನು ದಾಖಲಿಸಿದ್ದಾರೆ (ತಂಬಂಡ ೨೦೦೧: ೩೧೩).

ನಂತರ ಈ ಕೋಟೆಯನ್ನು ೧೭೮೦ರಲ್ಲಿ ವಶಪಡಿಸಿಕೊಂಡ ಟಿಪ್ಪು ಸುಲ್ತಾನನು ಮಣ್ಣಿನ ಕೋಟೆಯನ್ನು ಕಲ್ಲಿನಿಂದ ಪುನರ್ನಿರ್ಮಿಸಿದನು. ಅಲ್ಲದೆ, ಮಡಿಕೇರಿಗೆ 'ಜಹೀರಾಬಾದ್' ಎಂದು ಮರುನಾಮಕರಣ ಮಾಡಿದನು. ಅಲ್ಲಿನ ಉಸ್ತುವಾರಿಗೆ ತನ್ನ ಸೈನ್ಯಾಧಿಕಾರಿ 'ಜಫ಼ರ್ ಅಲಿಬೇಗ್' ಎಂಬವನನ್ನು ನೇಮಿಸಿದನು. ಮೂರನೇ ಆಂಗ್ಲೋ –ಮೈಸೂರು ಯುದ್ಧದ ನಂತರ ಬ್ರಿಟಿಷರಿಗೆ ನಿಷ್ಠರಾಗಿದ್ದ ಕೊಡಗಿನ ಹಾಲೇರಿ ಮನೆತನದ ಅರಸರ ನಿಯಂತ್ರಣಕ್ಕೆ ಒಳಪಟ್ಟಿತು (**ರಾಜೇಂದ್ರನಾಮೆ** ೨೦೧೪(೧೯೫೭): ೨೪೯; ರಿಕ್ಟರ್ ೨೦೧೪(೧೮೭೦): ೧೯೧).

ಮಡಿಕೇರಿಯ ಕೋಟೆಯು ಕಲ್ಲಿನಿಂದ ಕೂಡಿರುವ ಕೋಟೆ. ಇದಕ್ಕೆ ಪೂರ್ವ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಪ್ರವೇಶದ್ವಾರಗಳಿವೆ. ಕೋಟೆಯು ೮ ಕೊತ್ತಳಗಳನ್ನು ಹೊಂದಿದೆ. ವಿಶಾಲ ಪಹರೆಕಟ್ಟೆ ಮತ್ತು ಅದಕ್ಕೆ ಹೊಂದಿಕೊಂಡಿರುವ ಕುಂಬೆ ಅಥವಾ ಕೈಪಿಡಿ. ಪಹರೆ ಕಟ್ಟೆಯು ನೆಲಮಟ್ಟದಿಂದ ಸುಮಾರು ೧೦ ಅಡಿಗಳ ಎತ್ತರದಲ್ಲಿದೆ. ಅದರ ಕೆಳಭಾಗಗಳನ್ನು ಸೆರೆಮನೆ ಮತ್ತು ಮದ್ದಿನ ಮನೆಗಳನ್ನು ನಿರ್ಮಿಸಿರುವಂತೆ ಕಾಣುತ್ತದೆ. ಪಹರೆಕಟ್ಟೆಯನ್ನು ಏರಲು ಪಶ್ಚಿಮದಲ್ಲಿ ದೊಡ್ಡ ರ್‍ಯಾಂಪ್ ಇರುವುದನ್ನು ಕಾಣಬಹುದು.

### ೧೧. ಬೇಕಲ್ ಕೋಟೆ

ಹೈದರ್ ಮತ್ತು ಟಿಪ್ಪು ಸುಲ್ತಾನರು ತಮ್ಮ ಆರ್ಥಿಕ ಶಕ್ತಿಯನ್ನು ವೃದ್ಧಿಸಿಕೊಳ್ಳಲು ಇದ್ದ ಪ್ರಮುಖ ಮಾರ್ಗ ಸಮುದ್ರದ ಮೇಲಿನ ವ್ಯಾಪಾರ. ಅದಕ್ಕಾಗಿ ನೌಕಾಶಕ್ತಿಯನ್ನು ಕಟ್ಟಿ ಕರಾವಳಿಯಲ್ಲಿ ಬಂದರು ನೆಲೆಗಳನ್ನು ನಿರ್ಮಿಸಿಕೊಳ್ಳುವ ಕನಸು ಹೈದರಾಲಿಗೆ ಇತ್ತು. ಅದನ್ನು ಮುಂದೆ ಟಿಪ್ಪು ಕೂಡ ಮುಂದುವರಿಸಿದನು. ಈ ಹಿನ್ನೆಲೆಯಲ್ಲಿ ಮಿರ್ಜಾನ್ ಇಂದ ಕಾಸರಗೋಡಿನ ತನಕ ಪಶ್ಚಿಮ ತೀರವನ್ನು ಟಿಪ್ಪು ತನ್ನ ನಿಯಂತ್ರಣಕ್ಕೆ ಪಡೆದುಕೊಂಡನು. ಈ ಹಿನ್ನೆಲೆಯಲ್ಲಿ ಬೇಕಲ್ ಮತ್ತು ಮಂಗಳೂರಿನ ಕೋಟೆಗಳು ಪ್ರಮುಖವಾದುವು.

ಬೇಕಲ್ ಉತ್ತರ ಕೇರಳದಲ್ಲಿ ಕಾಸರಗೋಡಿನ ಸಮೀಪದಲ್ಲಿದೆ. ಇಲ್ಲಿ ಪ್ರಮುಖ ಮತ್ತು ಸುಸ್ಥಿತಿಯಲ್ಲಿರುವ ಜಂಬಿಟಿಗೆಯಿಂದ ನಿರ್ಮಿಸಿದ ಕೋಟೆ ಇದೆ. ಈ ಕೋಟೆಯ

ಬಹುಭಾಗವನ್ನು ಅರಬ್ಬೀ ಸಮುದ್ರ ಆವೃತ್ತಗೊಂಡಿರುವುದರಿಂದ ಇದನ್ನು ಒಂದು ಜಲದುರ್ಗವೆಂದು ಕರೆಯಬಹುದು.

ಬೇಕಲ್ಲನು ಮಧ್ಯಯುಗದಲ್ಲಿ ಕೇರಳವನ್ನು ಆಳಿದ ಪೆರುಮಾಳನ ಕಾಲದಲ್ಲಿ ಬೇಕಲ್ ಮಹೋದಯಪುರಂನ ಭಾಗವಾಗಿತ್ತು. ೧೨ನೇ ಶತಮಾನದಲ್ಲಿ ಬೇಕಲ್ ಕೊಲತ್ತುನಾಡಿನ ಪ್ರಭುತ್ವದ ಅಡಿಗೆ ಬಂದಿತು. ಇದು ತುಳುನಾಡಿನ ಪ್ರಮುಖ ಬಂದರು ಕೇಂದ್ರವಾಗಿತ್ತು. ಬೇಕಲ್ ಸ್ಥಳನಾವ ನಿಷ್ಪತ್ತಿಯ ಬಗೆಗೆ ವಿವಿಧ ಅಭಿಪ್ರಾಯಗಳಿವೆ.

- ಬೆಂದಕಲ್ಲು ಬೇಕಲ್ ಆಯಿತೆಂಬುದು ಒಂದು ಅಭಿಪ್ರಾಯ.
- ಇಲ್ಲಿನ ಕೃಷ್ಣ ದೇವಾಲಯದ ಹಿನ್ನೆಲೆಯಲ್ಲಿ ಈ ಹೆಸರು ಬಂದಿದೆ. ದೇವಕುಲಮ್ > ದೇಕಲ್ > ಬೇಕಲ್ ಆಗಿದೆ ಎನ್ನುತ್ತಾರೆ.
- ಬೇಕಲ್ ಎಂಬುದು 'ಬಾಲಿಕುಲಂ'ನಿಂದ ಬಂದಿದೆ. ಬಾಲಿಕುಲಂ ಎಂದರೆ ದೊಡ್ಡಸ್ಥಳ. ಮನೆಗಳನ್ನು ನಿರ್ಮಿಸಲು ಇಲ್ಲಿ ವಿಶಾಲ ಸ್ಥಳ ಇದ್ದುದರಿಂದ ಬಾಲಿಕುಲಂ> ಬೇಕುಲಂ > ಬೇಕಲ್ ಆಯಿತೆಂದು ಹೇಳಲಾಗುತ್ತದೆ.



ಬೇಕಲ್ ಕೋಟೆಯ ವೈಮಾನಿಕ ನೋಟ

ಬೇಕಲ್ ಕೋಟೆಯನ್ನು ಕೆಳದಿಯ ಶಿವಪ್ಪನಾಯಕನು (೧೬೪೫-೧೬೬೦) ನಿರ್ಮಿಸಿದನು. ಮುಂದೆ ಸೈನಿಕ ಸಂಘಟನೆಯ ದೃಷ್ಟಿಯಿಂದ ಈ ಕೋಟೆಯು ಮಹತ್ವದ ಪಾತ್ರವನ್ನು ನಿರ್ವಹಿಸಿತು. ೧೭೬೩ರಲ್ಲಿ ಇದನ್ನು ಕೆಳದಿಯ ನಾಯಕರಿಂದ ಹೈದರಾಲಿಯು ವಶಪಡಿಸಿಕೊಂಡನು. ಸುಮಾರು ೪೦ ಎಕರೆ ವಿಸ್ತೀರ್ಣವನ್ನು ಈ ಕೋಟೆ ಹೊಂದಿದೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನನ ಕಾಲದಲ್ಲಿ ಕೋಟೆಯ ಬತೇರಿಗಳು, ಮದ್ದಿನ ಮನೆಗಳು, ಸುರಂಗಗಳು ಮತ್ತು ಕೆಲವು ವಸತಿಗಳು ಮರು ನಿರ್ಮಾಣಗೊಂಡಿವೆ. ಕೋಟೆಯ ಉತ್ತರದಲ್ಲಿ ಹೆಬ್ಬಾಗಿಲು ಇದ್ದರೆ ಉಳಿದ ಮೂರು ದಿಕ್ಕುಗಳಲ್ಲಿ ಒಳಮಾರ್ಗಗಳು ಮತ್ತು ದಿಡ್ಡಿಬಾಗಿಲುಗಳು ಇವೆ. ಕೋಟೆಯು ಪ್ರವೇಶವಾದೊಡನೆ ಆಂಜನೇಯನ ದೇವಾಲಯ ಕಾಣುತ್ತದೆ. ಇದು ನಾಯಕರ ಕಾಲದಲ್ಲಿ ನಿರ್ಮಿಸಲ್ಪಟ್ಟ ದೇವಾಲಯ. ಈ ಕೋಟೆಯನ್ನು ಟಿಪ್ಪು ಸುಲ್ತಾನನಿಂದ ೧೭೯೨ರಲ್ಲಿ ಬ್ರಿಟಿಷರು ವಶಪಡಿಸಿಕೊಂಡರು (ಲೋರ್ದುಸಾಮಿ, ೨೦೧೦: ೫-೫೦; ಮಿಷಲ್ ೨೦೧೩: ೫೫೦).

### ೧೨. ಮಂಗಳೂರು ಕೋಟೆ

ಕರ್ನಾಟಕದ ಪಶ್ಚಿಮ ಕರಾವಳಿಯಲ್ಲಿರುವ ಮಂಗಳೂರು ಒಂದು ಪ್ರಮುಖ ಬಂದರು ಕೇಂದ್ರ. ಇಲ್ಲಿ ಮಂಗಳದೇವಿ ದೇವಾಲಯವಿದ್ದು, ದೇವಿಯ ಹಿನ್ನೆಲೆಯಲ್ಲಿ ಈ ಊರಿಗೆ ಮಂಗಳೂರು ಎಂಬ ಬಂದಿದೆ. ಸ್ಥಳೀಯ ತುಳುವರು ಮಂಗಳೂರನ್ನು 'ಕುಡ್ಲ' ಎಂದು ಕರೆದರೆ, ಕೊಂಕಣಿಗಳು 'ಕೊಡಿಯಾಲ್' ಎಂತಲೂ ಕರೆಯುತ್ತಾರೆ. ಕೆಳದಿಯ ಶಿವಪ್ಪನಾಯಕನು ಮಂಗಳೂರು ಸಂಸ್ಥಾನವನ್ನು ಗೆದ್ದು ಕೆಳದಿಯ ಸಂಸ್ಥಾನದಲ್ಲಿ ಸೇರಿಸಿಕೊಂಡನು. ಮುಂದೆ ಕೆಳದಿಯ ಅರಸರು ಪೋರ್ಚುಗೀಸರಿಗೆ ಮಂಗಳೂರಿನಲ್ಲಿ ವ್ಯಾಪಾರಿ ಕೋಠಿಯನ್ನು ಸ್ಥಾಪಿಸಲು ಅನುಮತಿಸಿದರು. ಆದರೆ ಕೋಟೆ ಕಟ್ಟಲು ಅವಕಾಶಕೊಡಲಿಲ್ಲ. ೧೭೪೭ರಲ್ಲಿ ಮರಾಠರು ಮಂಗಳೂರನ್ನು ಲೂಟಿ ಮಾಡಿದಾಗ ಪೋರ್ಚುಗೀಸರು ತಮ್ಮ ವ್ಯಾಪಾರಿ ಕೋಠಿಗೆ ಕೋಟೆ ಕಟ್ಟುವ ವಿಚಾರ ಪ್ರಸ್ತಾಪವನ್ನು ಕೆಳದಿ ಅರಸರ ಮುಂದಿಟ್ಟರು. ಕೆಳದಿಯ ಮೇಲೆ ಫ್ರೆಂಚರು ಮತ್ತು ಕಣ್ಣಾನೂರಿನ ಅಲಿರಾಜನು ಧಾಳಿ ಮಾಡಿ, ಕೆಳದಿ ಅರಸರು ದುರ್ಬಲರಾದ ಸಂದರ್ಭದಲ್ಲಿ ಪೋರ್ಚುಗೀಸರು ಕೋಟೆಯನ್ನು ನಿರ್ಮಿಸಿಕೊಂಡರು. ನಂತರ ಪೋರ್ಚುಗೀಸರು ತಮ್ಮ ವ್ಯಾಪಾರ ವಹಿವಾಟನ್ನು ಚುರುಕುಗೊಳಿಸಿಕೊಂಡರು. ೧೭೬೩ರಲ್ಲಿ ಹೈದರಾಲಿಯು ಕೆಳದಿ ಸಂಸ್ಥಾನವನ್ನು ಗೆದ್ದಾಗ ಮಂಗಳೂರು ಸೇರಿದಂತೆ ಕರಾವಳಿಯ ಅನೇಕ ಪ್ರದೇಶಗಳು ಅವನ ಅಧೀನಕ್ಕೆ ಬಂದವು. ಈಗ ಪೋರ್ಚುಗೀಸರು ಹೈದರಾಲಿಯ ನೇರ ಸಂಪರ್ಕಕ್ಕೆ ಬಂದರು.



**ಮಂಗಳೂರು ಕೋಟೆ (೧೭೮೩)** **(ಮೂಲ:ಬ್ರಿಟಿಷ್ ಲೈಬ್ರರಿ)**

ಹೈದರಾಲಿಯು ಮಂಗಳೂರಿನಲ್ಲಿ ನೌಕಾಸೇನೆಯನ್ನು ಕಟ್ಟುವ ಪ್ರಯತ್ನಕ್ಕೆ ಮುಂದಾದನು. ಆ ಪ್ರಯತ್ನದಲ್ಲಿ ಹಿನ್ನೆಡೆಯಾಯಿತು. ಪೋರ್ಚುಗೀಸರ ನಿಷ್ಠೆಯ ಬಗೆಗೆ ಅನುಮಾನಗೊಂಡಿದ್ದ ಹೈದರಾಲಿಯು ಅವರ ವಂಚನೆ ತಿಳಿಯುತ್ತಿದ್ದಂತೆ ಅವರ ರಕ್ಷಣಾ ಪಡೆಯನ್ನು ಬರ್ಖಾಸ್ತುಗೊಳಿಸಿ, ಮಂಗಳೂರು ಕೋಟೆಯನ್ನು ತನ್ನ ವಶಕ್ಕೆ ತೆಗೆದುಕೊಂಡನು. ಆದರೆ ೧೭೮೦ರಲ್ಲಿ ಎಡ್ವರ್ಡ್ ಹ್ಯೂಸ್ ಎಂಬ ಕಂಪನಿ ಸೈನ್ಯಾಧಿಕಾರಿಯು ಮಂಗಳೂರನ್ನು ಮುತ್ತಿ ಹೈದರಾಲಿಯ ಕನಸನ್ನು ಭಗ್ನಗೊಳಿಸಿದನು. ಆದರೆ ಎರಡನೇ ಆಂಗ್ಲೋ-ಮೈಸೂರು ಯುದ್ಧದ ಸಂದರ್ಭದಲ್ಲಿ ಟಿಪ್ಪು ಸುಲ್ತಾನನು ಫ್ರೆಂಚ್ ಇಂಜಿನಿಯರ್ ಸಹಾಯದಿಂದ ಮಂಗಳೂರನ್ನು ಎಂಟು ತಿಂಗಳಕಾಲ ಮುತ್ತಿದನು. ಅಂತಿಮವಾಗಿ ಕ್ಯಾಂಪ್ ಬೆಲ್ ಎಂಬ ಕಂಪನಿ ದಳಪತಿ ಟಿಪ್ಪು ಜೊತೆಗೆ ಒಪ್ಪಂದ ಮಾಡಿಕೊಂಡು ಮಂಗಳೂರನ್ನು ಟಿಪ್ಪುವಿಗೆ ಒಪ್ಪಿಸಿ ಹೊರಟನು. ಹೀಗೆ ಮಂಗಳೂರು ಟಿಪ್ಪುವಿನ ವಶವಾಯಿತು (ಸುರೇಂದ್ರರಾವ್ ೨೦೧೬:೧೮೩-೨೦೨). ರಾಜಕೀಯ ಮತ್ತು ಆರ್ಥಿಕ ಚಟುವಟಿಕೆಯ ಕೇಂದ್ರವಾಗಿದ್ದ ಮಂಗಳೂರಿನ ಕೋಟೆಯ ಬಹುಭಾಗ ಇಂದು ಉಳಿದಿಲ್ಲ. ಪ್ರಸ್ತುತ ಕೇವಲ ಒಂದು ಬತೇರಿ ಮಾತ್ರ ಸಮುದ್ರದ ದಂಡೆಯಲ್ಲಿ ಮೂಕಸಾಕ್ಷಿಯಾಗಿ ನಿಂತಿದೆ.

***

ಟಿಪ್ಪು ಸುಲ್ತಾನನ ಕಾಲದಲ್ಲಿ ನಿರ್ಮಾಣಗೊಂಡ ಹಾಗೂ ಪುನರ್ರಚನೆಗೊಂಡ ಕೋಟೆಗಳನ್ನು ಪ್ರಾತಿನಿಧಿಕವಾಗಿ ಆಯ್ದುಕೊಂಡು ಮುಂದಿನ ಭಾಗದಲ್ಲಿ ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆ ಮೂಲಕ ಟಿಪ್ಪು ಕಾಲಘಟ್ಟದ ಕೋಟೆಗಳ

ರಚನೆಯಲ್ಲಿ ಮತ್ತು ಸ್ವರೂಪದಲ್ಲಿ ಆಗಿರಬಹುದಾದ ಬದಲಾವಣೆಗಳನ್ನು ಹಾಗೂ ತಂತ್ರಜ್ಞಾನವನ್ನು ಗುರುತಿಸುವ ಪ್ರಯತ್ನವನ್ನು ನಡೆಸಲಾಗಿದೆ. ವಸ್ತು ವಿಷಯಾಧಾರಿತವಾದ ಅಧ್ಯಯನವಾದ್ದರಿಂದ ಪ್ರತೀ ಕೋಟೆಗಳ ರಚನೆ ಮತ್ತು ತಂತ್ರಜ್ಞಾನಗಳನ್ನು ಬಿಡಿ ಬಿಡಿಯಾಗಿ ನೋಡದೆ, ಸಮಗ್ರವಾಗಿ ನೋಡಲು ಪ್ರಯತ್ನಿಸಲಾಗಿದೆ. ಈ ರೀತಿಯ ಅಧ್ಯಯನದಿಂದ ತಾಂತ್ರಿಕ ಸಾಮ್ಯತೆ ಮತ್ತು ಭಿನ್ನತೆಗಳನ್ನು ಗುರುತಿಸಬಹುದು. ಜೊತೆಗೆ ಸಮಷ್ಟಿಯಾಗಿ ಕೋಟೆಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಿದೆ.

**೩.೪ ಟಿಪ್ಪು ಪುನರ್‌ನಿರ್ಮಿಸಿದ ಕೋಟೆಗಳ ರಚನೆ, ಸ್ವರೂಪ ಮತ್ತು ತಂತ್ರಜ್ಞಾನ**

೧೭೬೧ ರಿಂದ ೧೭೯೯ರ ವರೆಗಿನ ಕಾಲ ಮೈಸೂರಿನ ಚರಿತ್ರೆಯ ಸಂದರ್ಭದಲ್ಲಿ ವಿಶಿಷ್ಟವಾದ ಕಾಲ. ಈ ಅವಧಿಯಲ್ಲಿ ಹೈದರಾಲಿ ಮತ್ತು ಅವನ ಮಗ ಟಿಪ್ಪು ಸುಲ್ತಾನ್ ಆಳ್ವಿಕೆ ನಡೆಸಿದರು. ಹೈದರಾಲಿ ದೂರದೃಷ್ಟಿಯುಳ್ಳ ಒಬ್ಬ ರಾಜಕೀಯ ನಿಪುಣ ಮಾತ್ರವಲ್ಲ, ಅತ್ಯುತ್ತಮ ಯುದ್ಧಕೌಶಲ್ಯಪಟು. ಅನಕ್ಷರಸ್ಥನಾದರೂ ಅಪಾರ ನೆನೆಪಿನ ಶಕ್ತಿಯಿಂದಲೇ ತನ್ನ ಕಾರ್ಯಸಾಧನೆಯನ್ನು ವ್ಯವಸ್ಥಿತವಾಗಿ ನೆರವೇರಿಸಿದವನು. ಸೈನಿಕ ಮತ್ತು ರಕ್ಷಣಾ ಕ್ಷೇತ್ರದಲ್ಲಿ ಹೊಸ ಹೊಸ ಪ್ರಯೋಗಗಳಿಗೆ ತೆರೆದುಕೊಂಡವನು. ಅವನ ದಾರಿಯನ್ನೇ ಇನ್ನೂ ಸ್ಪಷ್ಟವಾಗಿ ಅನುಸರಿಸಿದವನು ಅವನ ಮಗ ಟಿಪ್ಪು ಸುಲ್ತಾನ್.

ಟಿಪ್ಪು ಸುಲ್ತಾನ್ ಆಧುನಿಕತೆಗೆ ಮಾರುಹೋಗಿ, ಅದಕ್ಕೆ ತೀವ್ರವಾಗಿ ತೆರೆದುಕೊಂಡವನು. ತನ್ನ ಕಾಲಘಟ್ಟದಲ್ಲಿ ನಡೆಯುತ್ತಿರುವ ಜಗತ್ತಿನ ಎಲ್ಲಾ ವಿದ್ಯಮಾನಗಳ ಬಗೆಗೂ ಕುತೂಹಲ ಮತ್ತು ಆಸಕ್ತಿಯನ್ನು ಹೊಂದಿದ್ದವನು. ರಾಜಕೀಯ, ವೈಚಾರಿಕ, ವೈಜ್ಞಾನಿಕ, ತಾಂತ್ರಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಹೀಗೆ ಹಲವು ಆಯಾಮಗಳ ಬಗೆಗೆ ಸೂಕ್ಷ್ಮದೃಷ್ಟಿ ನೆಟ್ಟವನು. ಆದ್ದರಿಂದಲೇ ಅಮೇರಿಕಾ ಸಂವಿಧಾನದ ಪ್ರತಿಯನ್ನು ತರಿಸಿ ಓದಿದನು. ಫ್ರಾನ್ಸಿನ ಜಾಕೋಬಿನ್ ಕ್ಲಬ್ ಸದಸ್ಯನಾಗಿದ್ದಲ್ಲದೆ, ಅದರ ಶಾಖೆಯೊಂದನ್ನು ಶ್ರೀರಂಗಪಟ್ಟಣದಲ್ಲಿ ತೆರೆಯುವ ಏರ್ಪಾಟು ಮಾಡಿದನು. ಅಷ್ಟು ಮಾತ್ರವಲ್ಲ ಹೊಸ ಹೊಸ ತಂತ್ರಜ್ಞಾನ ಮತ್ತು ತಂತ್ರಜ್ಞರನ್ನು ಜಗತ್ತಿನ ನಾನಾ ಮೂಲೆಗಳಿಂದ ಸಂಸ್ಥಾನಕ್ಕೆ ಬರಮಾಡಿಕೊಂಡನು. ಇದರಿಂದಾಗಿಯೇ ವೀಣೆಯ ತಂತಿಯಿಂದ ಹಿಡಿದು, ದೊಡ್ಡ ದೊಡ್ಡ ಫಿರಂಗಿಗಳನ್ನು ಸಂಸ್ಥಾನದಲ್ಲಿ ಉತ್ಪಾದಿಸಲು ಸಾಧ್ಯವಾಯಿತು. ರಾಕೆಟ್ ಮಾದರಿಯ ತಂತ್ರಜ್ಞಾನವನ್ನು ಭಾರತದಲ್ಲಿ ಮೊಟ್ಟಮೊದಲ ಬಾರಿಗೆ ಬಳಸಿದ್ದು ಮಾತ್ರವಲ್ಲ; ಅದನ್ನು ಸುಧಾರಣೆ ಮಾಡುವ ಕ್ರಮ ಕೂಡ ಕೈಗೊಂಡನು. ಹಲವು ಭಾಷೆಗಳನ್ನು ಬಲ್ಲವನಾಗಿದ್ದ ಟಿಪ್ಪುವು ತನ್ನ ಅಧ್ಯಯನಕ್ಕೆ ೨೦೦೦ಕ್ಕೂ ಹೆಚ್ಚು ಪುಸ್ತಕಗಳನ್ನು ಒಳಗೊಂಡ ಖಾಸಗಿ ಗ್ರಂಥಾಲಯವನ್ನು ಸಹ ಹೊಂದಿದ್ದನು. ಹೀಗೆ ಆಧುನಿಕತೆಗೆ ತೆರೆದುಕೊಳ್ಳುವ ಮೂಲಕ

ಶಸ್ತ್ರಾಸ್ತ್ರ ಮತ್ತು ಯುದ್ಧ ತಂತ್ರಜ್ಞಾನದಲ್ಲಿಯೂ ಹೊಸ ಹೊಸ ಆವಿಷ್ಕಾರಗಳಿಗೆ ಮೈಸೂರು ಸಂಸ್ಥಾನವನ್ನು ಸಜ್ಜುಗೊಳಿಸಿದನು. ಈ ಹಿನ್ನೆಲೆಯಲ್ಲಿ ಟಿಪ್ಪುವಿನ ಕಾಲದ ಕೋಟೆಗಳಲ್ಲಿ ಅನುಸರಿಸಲಾಗಿರುವ ರಕ್ಷಣಾ ತಂತ್ರಜ್ಞಾನ ಮತ್ತು ಕೋಟೆಯ ರಚನೆ ಹಾಗೂ ಸ್ವರೂಪದಲ್ಲಿ ಆಗಿರುವ ಮಾರ್ಪಾಟುಗಳನ್ನು ಗುರುತಿಸುವುದೇ ಈ ಭಾಗದ ಉದ್ದೇಶವಾಗಿದೆ.

ಈ ಅಧ್ಯಾಯದ ಆರಂಭದಲ್ಲಿಯೇ ಹೇಳಿರುವಂತೆ ಕರ್ನಾಟಕದ ಕೋಟೆಗಳ ಚರಿತ್ರೆಯಲ್ಲಿ ಟಿಪ್ಪುವಿನ ಕಾಲವು ತಾಂತ್ರಿಕ ಮತ್ತು ಕೌಶಲ್ಯದ ದೃಷ್ಟಿಯಿಂದ ಉಚ್ಛ್ರಾಯ ಕಾಲವಾಗಿತ್ತು. ಟಿಪ್ಪುವಿನ ಅಂತ್ಯದೊಂದಿಗೆ ಕೋಟೆಗಳು ಕೂಡ ಅಂತ್ಯಗೊಂಡವು ಎಂದರೆ ತಪ್ಪಾಗದು. ಈ ಭಾಗದಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನನ ಕಾಲದ ಕೋಟೆಗಳ ಲಕ್ಷಣಗಳನ್ನು ವಿವರಿಸುವುದರ ಜೊತೆಜೊತೆಗೆ ಆ ಲಕ್ಷಣದ ಉದ್ದೇಶ ಮತ್ತು ಅದರ ಹಿಂದಿನ ತಾಂತ್ರಿಕತೆ ಹಾಗೂ ಯುದ್ಧ ಕೌಶಲ್ಯದ ವಿವರಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ನಡೆಸಲಾಗಿದೆ. ಆದ್ದರಿಂದ ಟಿಪ್ಪು ಸುಲ್ತಾನನ ಕೋಟೆಗಳ ಲಕ್ಷಣ ಎಂದ ಮಾತ್ರಕ್ಕೆ ಅದು ಕೇವಲ ಭೌತಿಕ ಸ್ವರೂಪವನ್ನು ಹೇಳುವುದಲ್ಲ, ಅದರ ಹಿಂದಿನ ಬೌದ್ಧಿಕ ದೃಷ್ಟಿಕೋನವನ್ನು ಮತ್ತು ತಾಂತ್ರಿಕ ನೈಪುಣ್ಯತೆ ಹಾಗೂ ಬಳಕೆಯ ಹಿಂದಿನ ಸುಧಾರಿತ ಉದ್ದೇಶಗಳನ್ನು ಅರಿಯುವುದಾಗಿದೆ. ಇಲ್ಲಿನ ಅಧ್ಯಯನಕ್ಕೆ ಟಿಪ್ಪು ಸುಲ್ತಾನನ ಕಾಲದ ಕೆಲವು ಆಯ್ದ ಕೋಟೆಗಳನ್ನು ಪ್ರಾತಿನಿಧಿಕವಾಗಿ ತೆಗೆದುಕೊಂಡು ಚರ್ಚಿಸಲಾಗುತ್ತಿದೆಯೇ ವಿನಃ ಪ್ರತಿಯೊಂದು ಕೋಟೆಗಳನ್ನೂ ಬಿಡಿ ಬಿಡಿಯಾಗಿ ನೋಡುವ ಉದ್ದೇಶವನ್ನು ಹೊಂದಿಲ್ಲ. ಆದ್ದರಿಂದ ಇದು ವಿಷಯಾಧಾರಿತ ಅಧ್ಯಯನವೇ ಹೊರತು; ವಸ್ತು ಆಧಾರಿತ ಅಧ್ಯಯನವಾಗಿರುವುದಿಲ್ಲ.

ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದ ಕೋಟೆಗಳ ರಚನೆ, ಸ್ವರೂಪ ಮತ್ತು ತಂತ್ರಜ್ಞಾನಕ್ಕೆ ಸಂಬಂಧಿಸಿದ ಅಧ್ಯಯನಕ್ಕೆ ಒಳಪಡಿಸಿರುವ ವಿಷಯಗಳು ಈ ಕೆಳಗಿನಂತೆ ಇವೆ:

೧. ವೃತ್ತಾಕಾರದ ಕೊತ್ತಳಗಳು ಮತ್ತು ಬತೇರಿಗಳು

೨. ಮದ್ದಿನ ಮನೆಗಳು

೩. ವಿಶಾಲವಾದ ಪಹರೆಕಟ್ಟೆ

೪. ಎತ್ತರವಾದ ಮತ್ತು ಬೃಹತ್ತಾದ ಕುಂಬೆ/ಕೈಪಿಡಿ ಗೋಡೆಗಳು

೫. ಇಳಿಜಾರು ಹಾದಿಗಳು (ರ್‍ಯಾಂಪ್)

೬. ರಾಕೆಟ್ ಮತ್ತು ತಾರಾಮಂಡಲಗಳು

೭. ಫಿರಂಗಿಗಳು

೮. ಬಂದಿಖಾನೆಗಳು

೯. ಶೌಚಾಲಯಗಳು

೧೦. ಅರಮನೆ ಅಥವಾ ಮಹಲ್‌ಗಳು

೧೧. ಗಾರೆಗಚ್ಚು

೧೨. ಇನ್ನಿತರ ಅಂಶಗಳು

ಈ ಮೇಲಿನ ಅಂಶಗಳನ್ನು ಮುಂದೆ ಒಂದೊಂದಾಗಿ ಚರ್ಚಿಸಲಾಗುವುದು.

### ೩.೪.೧ ವೃತ್ತಾಕಾರದ ಕೊತ್ತಳಗಳು ಮತ್ತು ಬತೇರಿಗಳು

ಹಿರಿಯ ಇತಿಹಾಸಕಾರರಾದ ಬಿ. ಷೇಕ್ ಅಲಿ ಅವರು ಟಿಪ್ಪು ಸುಲ್ತಾನನು ಶ್ರೀರಂಗಪಟ್ಟಣದ ಕೋಟೆಗೆ ಚೌಕಾಕಾರದ ಕೊತ್ತಳಗಳನ್ನು ನಿರ್ಮಿಸಿದನೆಂದು ದಾಖಲಿಸಿದ್ದಾರೆ (ಷೇಕ್‌ಅಲಿ ೧೯೯೭: ೫೧೦). ಆದರೆ ಹಳೆಯ ಚೌಕಾಕಾರದ ಕೊತ್ತಳಗಳನ್ನು ಟಿಪ್ಪುವು ವೃತ್ತಾಕಾರದ ಕೊತ್ತಳಗಳಾಗಿ ಪರಿವರ್ತಿಸಲಾಯಿತೆಂದು ಎಸ್.ಕೆ. ಅರುಣಿ ಅವರು ಅಭಿಪ್ರಾಯಪಡುತ್ತಾರೆ (೨೦೦೭: ೨೦೬). ಟಿಪ್ಪು ಸುಲ್ತಾನನ ಕಾಲದ ಕೋಟೆಗಳಲ್ಲಿನ ಬಹುಮುಖ್ಯವಾದ ಲಕ್ಷಣಗಳಲ್ಲಿ ವೃತ್ತಾಕಾರದ ಕೊತ್ತಳಗಳು ಮತ್ತು ಬತೇರಿಗಳೂ ಇವೆ ಎಂಬುದನ್ನು ಕ್ಷೇತ್ರಕಾರ್ಯ ಅಧ್ಯಯನದಿಂದ ಖಾತ್ರಿಪಡಿಸಿಕೊಳ್ಳಲಾಗಿದೆ. ಸಾಮಾನ್ಯವಾಗಿ ಕೊತ್ತಳಗಳನ್ನು ಕೋಟೆಯ ಗೋಡೆಗಳಿಗೆ ಹೊಂದಿಕೊಂಡಂತೆ ಆಯಕಟ್ಟಿನ ಸ್ಥಳಗಳಲ್ಲಿ ನಿರ್ಮಿಸಲಾಗಿರುತ್ತದೆ. ಇವುಗಳು ಕೋಟೆಯ ಗೋಡೆಗಳು ಕುಸಿಯದಂತೆ ಬೆಂಬಲವಾಗಿ ನಿಲ್ಲಿಸುತ್ತವೆ. ಅಲ್ಲದೆ ಕೊತ್ತಳಗಳು ಕೋಟೆಯ ಗೋಡೆಗಳಿಂದ ಹೊರಚಾಚಿರುವುದರಿಂದ ಕೋಟೆಯ ಬುಡದಲ್ಲಿ ನಿಲ್ಲುವ ಶತ್ರುಗಳ ಮೇಲೂ ಕೂಡ ಆಕ್ರಮಣ ನಡೆಸಲು ಸಾಧ್ಯವಾಗುತ್ತದೆ. ಕೋಟೆಗಳ ಬಹುಮುಖ್ಯ ಭಾಗವಾಗಿರುವ ಕೊತ್ತಳಗಳಲ್ಲಿನ ಮಾರ್ಪಾಟನ್ನು ಕುರಿತು ಎಸ್.ಕೆ ಅರುಣಿ ಅವರು ಹೀಗೆ ಅಭಿಪ್ರಾಯಪಡುತ್ತಾರೆ:

> *ಕ್ರಿ.ಶ. ೧೭ನೇ ಶತಮಾನದ ಕಾಲಾವಧಿಯಲ್ಲಿ ಯುದ್ಧಕಲೆಯಲ್ಲಿ ಫಿರಂಗಿಗಳ ಬಳಕೆ ಕಾಣಿಸಿಕೊಂಡಂತೆ ಕೋಟೆಗಳ ನಿರ್ಮಾಣದಲ್ಲಿ ಅವುಗಳ ಬಳಕೆಗೆ ಅನೇಕ ಮಾರ್ಪಾಡುಗಳನ್ನು ಅಳವಡಿಸಿಕೊಳ್ಳಲಾಯಿತು. ಮುಖ್ಯವಾಗಿ ಕೊತ್ತಳಗಳ ರಚನೆ ಸಾಕಷ್ಟು ಪರಿವರ್ತನೆಗೊಂಡವು. ಸಾಂಪ್ರದಾಯಿಕ ಚೌಕಾಕಾರದ ಕೊತ್ತಳಗಳ ಬದಲಾಗಿ ಫಿರಂಗಿಗಳನ್ನು ಯಾವುದೇ ದಿಕ್ಕುಗಳಿಗೆ ಸಲೀಸಾಗಿ ತಿರುಗಿಸಲು ಅನುಕೂಲವಾಗುವಂತೆ ಹಾಗೂ ವೀಕ್ಷಣೆಗೆ ಕೊತ್ತಳಗಳನ್ನು ವರ್ತುಲಾಕಾರದಲ್ಲಿ ನಿರ್ಮಿಸುವ ತಂತ್ರಗಾರಿಕೆ ಪ್ರಾರಂಭವಾಯಿತು (ಅರುಣಿ ೨೦೦೭: ೨೦೬).*

ಮುಂದುವರೆದು ಹೀಗೆ ಹೇಳುತ್ತಾರೆ:

> *...ಕಡೆಗಳಲ್ಲಿ ವರ್ತುಲಾಕಾರದ ಕೊತ್ತಳಗಳ ಕೋಟೆಗಳನ್ನು ಹೊಸದಾಗಿ ನಿರ್ಮಿಸಿರುವ ಉದಾಹರಣೆಗಳಿವೆ. ಈಗಾಗಲೇ ಅಸ್ತಿತ್ವದಲ್ಲಿದ್ದ ಕೋಟೆಗಳನ್ನು ಹಾಗೆಯೇ ಉಳಿಸಿಕೊಂಡು ಅವುಗಳಲ್ಲಿ ಕೆಲವು ಮಾರ್ಪಾಡುಗಳನ್ನು ಕೈಗೊಂಡು ಬಳಸಲಾಯಿತು. ಇನ್ನೂ ಕೆಲವು ಕಡೆಗಳಲ್ಲಿ ಚೌಕಾಕಾರದ ಕೊತ್ತಳಗಳನ್ನು ವರ್ತುಲಾಕಾರದ ಕೊತ್ತಳಗಳನ್ನಾಗಿ ಮಾರ್ಪಡಿಸಲಾಯಿತು. ಈ ರೀತಿಯ ಬದಲಾವಣೆಗಳನ್ನು ಮುಖ್ಯವಾಗಿ ನೆಲದುರ್ಗದಂತಹ ಕೋಟೆಗಳಲ್ಲಿ ಕಾಣುತ್ತೇವೆ (ಅರುಣಿ ೨೦೦೭: ೭೫).*

ಎಸ್.ಕೆ. ಅರುಣಿ ಅವರ ಮೇಲಿನ ಹೇಳಿಕೆಗಳನ್ನು ಭಾಗಶಃ ಒಪ್ಪಬಹುದಾದರೂ ಒಂದು ಆಕ್ಷೇಪವಿದೆ. ಅರುಣಿ ಅವರು ವೃತ್ತಾಕಾರದ ಕೊತ್ತಳಗಳನ್ನು ಮುಖ್ಯವಾಗಿ ನೆಲದುರ್ಗದಂತಹ ಕೋಟೆಗಳಲ್ಲಿ ಕಾಣುತ್ತೇವೆ ಎಂದಿದ್ದಾರೆ. ಆದರೆ ಮಾಗಡಿಯ ಕೋಟೆಯಲ್ಲಾಗಲಿ, ೧೮ನೆಯ ಶತಮಾನದಲ್ಲಿ ಮಹತ್ವದ ರಾಜಕೀಯ ಚಟುವಟಿಕೆಯ ಕೇಂದ್ರವಾಗಿದ್ದ ಶಿರಾದ ಕೋಟೆಯಲ್ಲಾಗಲಿ ಕೊತ್ತಳಗಳು ಚೌಕ ಮತ್ತು ಆಯತಾಕಾರದಲ್ಲಿವೆಯೇ ಹೊರತು ವೃತ್ತಾಕಾರದಲ್ಲಿಲ್ಲ. ಆದರೆ ಗಿರಿದುರ್ಗಗಳಾದ ಸಾವನದುರ್ಗ, ನಂದಿದುರ್ಗ, ಗುಡಿಬಂಡೆ, ಹುತ್ರಿದುರ್ಗ, ಚಿತ್ರದುರ್ಗ, ಹುಲಿಯೂರುದುರ್ಗ, ಮಧುಗಿರಿ, ಮಿಡಿಗೇಶಿ ಹೀಗೆ ಬಹುತೇಕ ಕೋಟೆಗಳಲ್ಲಿ ಕೊತ್ತಳಗಳನ್ನು ವೃತ್ತಾಕಾರಕ್ಕೆ ಪರಿವರ್ತಿಸಿರುವುದನ್ನು ಕಾಣಬಹುದಾಗಿದೆ.

ಮೈಸೂರು ಒಡೆಯರ ಕಾಲದ ಕೋಟೆಗಳು ಮತ್ತು ಅರಮನೆಗಳನ್ನು ಕುರಿತು ಅಧ್ಯಯನ ನಡೆಸಿರುವ ಎಂ. ರಂಗಪ್ಪ ಅವರು ಒಡೆಯರ ಕಾಲದಲ್ಲಿ ನಿರ್ಮಿಸಿರುವ ಕೋಟೆಗಳಲ್ಲಿ ಚೌಕ ಇಲ್ಲವೆ, ಆಯತಾಕಾರದ ಹಾಗೂ ವೃತ್ತಾಕಾರದ ಕೊತ್ತಳಗಳನ್ನು ನಿರ್ಮಿಸುತ್ತಿದ್ದರು ಎಂದು ಅಭಿಪ್ರಾಯಪಟ್ಟಿದ್ದಾರೆ (ರಂಗಪ್ಪ ೨೦೦೬: ೯೧). ಇದು ಪ್ರಶ್ನಿಸಬಹುದಾದ ಅಭಿಪ್ರಾಯವಾಗಿದೆ. ಏಕೆಂದರೆ ಹೈದರ್ ಮತ್ತು ಟಿಪ್ಪು ಸುಲ್ತಾನರು ಹೊಸದಾಗಿ ಕೋಟೆಗಳನ್ನು ನಿರ್ಮಿಸಲಿಲ್ಲ. ಬದಲಿಗೆ ಹಿಂದಿನ ಕೋಟೆಗಳನ್ನು ತಾಂತ್ರಿಕವಾಗಿ ಮಾರ್ಪಾಟುಗಳನ್ನು ಮಾಡಿ ಬಳಕೆಗೆ ತಂದರು. ಹೀಗೆ ಮಾರ್ಪಾಟು ಮಾಡುವ ಸಂದರ್ಭದಲ್ಲಿ ಹಿಂದೆ ಇದ್ದ ಚೌಕಾಕಾರದ ಕೊತ್ತಳಗಳಲ್ಲಿ ಅಗತ್ಯ ಇರುವ ಮತ್ತು ಆಯಕಟ್ಟಿನ ಕೊತ್ತಳಗಳನ್ನು ಮಾತ್ರ ಕಳಚಿ ಮತ್ತೆ ವೃತ್ತಾಕಾರದಲ್ಲಿ ಪುನರ್ರಚಿಸುತ್ತಿದ್ದರೆ ವಿನಃ ಎಲ್ಲಾ ಕೊತ್ತಳಗಳನ್ನಲ್ಲ. ಏಕೆಂದರೆ ಹಲವು ಕೊತ್ತಳಗಳು ನಿರುಪಯುಕ್ತ ಸ್ಥಳಗಳಲ್ಲಿ ಇದ್ದರೆ ಅವುಗಳನ್ನು ಪರಿವರ್ತಿಸುವ ಅಗತ್ಯವೇನು ಇರುತ್ತಿರಲಿಲ್ಲ. ಆದ್ದರಿಂದ ಅವುಗಳನ್ನು ಹಾಗೆಯೇ ಬಿಡುವ ಮೂಲಕ ನಿರುಪಯುಕ್ತ ಗೊಳಿಸಲಾಗುತ್ತಿತ್ತು. ಇದನ್ನು ಅರ್ಥ ಮಾಡಿಕೊಳ್ಳದೆ ಹೋದಲ್ಲಿ ವಿಜಯನಗರೋತ್ತರದ ಒಡೆಯರ್ ಅಥವಾ ಪಾಳೇಗಾರರ

ಕಾಲದ ಕೋಟೆಗಳಲ್ಲಿಯೂ ವೃತ್ತಾಕಾರದ ಕೊತ್ತಳಗಳಿದ್ದವೆಂಬ ಸರಳ ತೀರ್ಮಾನಕ್ಕೆ ಬಂದುಬಿಡಲಾಗುತ್ತದೆ.



ಬಸವನ ಬುರುಜಿನ ಎದುರು ಇರುವ ಕೊತ್ತಳ (ಚಿತ್ರದುರ್ಗ)



ಹಳೆಯ ಚೌಕಾಕಾರದ ಕೊತ್ತಳದ ಪಕ್ಕದಲ್ಲಿಯೇ ಹೊಸದಾಗಿ ನಿರ್ಮಿಸಿರುವ ವೃತ್ತಾಕಾರದ ಅಪೂರ್ಣ ಕೊತ್ತಳ, (ಹುತ್ರಿದುರ್ಗ)



ಚೌಕಾಕಾರದ ಕೊತ್ತಳದ ಮೇಲೆ ನಿರ್ಮಿಸಿರುವ ವೃತ್ತಾಕಾರದ ಕೊತ್ತಳದ ಅವಶೇಷ (ಮಧುಗಿರಿ)

ಪಾಳೆಯಗಾರರ ಕಾಲದ ಕೋಟೆಗಳಲ್ಲಿ ಹಲವು ಕಡೆಗಳಲ್ಲಿ ಚೌಕಾಕಾರದ ಕೊತ್ತಳಗಳನ್ನು ಕಳಚಿ ಪುನರ್ರಚಿಸಿರುವ ಮತ್ತು ಪುನರ್ರಚನೆಯನ್ನು ಅರ್ಧಕ್ಕೆ ನಿಲ್ಲಿಸಿರುವ ನಿದರ್ಶನಗಳನ್ನು ಗುರುತಿಸಬಹುದು. ಚಿತ್ರದುರ್ಗದ ಕೋಟೆ, ಮಧುಗಿರಿ, ಹುತ್ರಿದುರ್ಗ ಮತ್ತು ಗುಡಿಬಂಡೆಯ ಕೋಟೆಗಳಲ್ಲಿಯೂ ಈ ಪ್ರಯತ್ನ ನಡೆದಿರುವುದಕ್ಕೆ ಸಾಕ್ಷಿಗಳಿವೆ. ಚಿತ್ರದುರ್ಗದ ಕೋಟೆಯ ಪಶ್ಚಿಮಕ್ಕಿರುವ ಬಸವನ ಬುರುಜು ಅಥವಾ ಬಂದಿಖಾನೆಗೆ ಹೋಗುವ ಮಾರ್ಗದಲ್ಲಿ ಎಡಕ್ಕೆ ಬಂಡೆಯೊಂದರ ಮೇಲಿರುವ ಕೊತ್ತಳವನ್ನು ಕಳಚಿ ಪುನರ್‌ನಿರ್ಮಿಸಿದ್ದಾರೆ. ಈ ಕೊತ್ತಳದ ತಳಭಾಗ ಚೌಕಾಕೃತಿಯಲ್ಲಿಯೇ ಇದೆ. ಆದರ ಮೇಲು ಭಾಗವನ್ನು ಮಾತ್ರ ವೃತ್ತಾಕಾರದಲ್ಲಿ ನಿರ್ಮಿಸಲಾಗಿದೆ. ಹಾಗೆಯೇ ಮಧುಗಿರಿಯ ಕೋಟೆಯಲ್ಲಿಯೂ ಕೂಡ ಬೃಹತ್ತಾದ ಚೌಕಾಕಾರದ ಕೊತ್ತಳದ ಮೇಲೆ ವೃತ್ತಾಕಾರದ ಕೊತ್ತಳವನ್ನು ನಿರ್ಮಿಸಿರುವ ಕುರುಹುಗಳು ಕಂಡುಬರುತ್ತವೆ. ಹುತ್ರಿದುರ್ಗದ ಪಶ್ಚಿಮ ಭಾಗದಲ್ಲಿ ಹಳೆಯ ಚೌಕಾಕಾರದ ಕೊತ್ತಳದ ಪಕ್ಕದಲ್ಲಿಯೇ ವೃತ್ತಾಕಾರದ ಕೊತ್ತಳ ನಿರ್ಮಿಸಿರುವುದನ್ನು ಕಾಣಬಹುದು. ಈ ಕೊತ್ತಳ ಪೂರ್ಣಗೊಂಡಿರುವುದಿಲ್ಲ. ಇದನ್ನು ಹೇಗೆ ಗ್ರಹಿಸಬಹುದೆಂದರೆ, ಟಿಪ್ಪುಕಾಲದ ಕೊತ್ತಳಗಳ ಮೇಲ್ಭಾಗದಲ್ಲಿ ಸುಮಾರು ೪-೬ ಅಡಿಗಳ ಎತ್ತರದವರೆಗೆ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿರುವ ಬಲಿಷ್ಠವಾದ ಕೈಪಿಡಿಗಳು ಸಾಮಾನ್ಯವಾಗಿರುತ್ತವೆ. ಆ ಕೈಪಿಡಿಗಳಲ್ಲಿ ಫಿರಂಗಿ ಕಿಂಡಿಗಳನ್ನು ನಿರ್ಮಿಸಲಾಗಿರುತ್ತದೆ. ಕೈಪಿಡಿಗಳಿಲ್ಲದೆ ತೆರೆದ ಕೊತ್ತಳಗಳಲ್ಲಿ ಕಾರ್ಯ ನಿರ್ವಹಿಸುವ ಸಿಪಾಯಿಗಳು ಸುಲಭವಾಗಿ ಶತ್ರುಗಳ ಧಾಳಿಗೆ ತುತ್ತಾಗುವ ಸಾಧ್ಯತೆಗಳು ಹೆಚ್ಚಿರುತ್ತವೆ. ಆದ್ದರಿಂದ ಕೈಪಿಡಿಗಳಿಲ್ಲದ ವೃತ್ತಾಕಾರದ ಕೊತ್ತಳಗಳ ಅವಶೇಷಗಳು ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿ ಪುನರ್ರಚನೆಗೊಳ್ಳುತ್ತಿದ್ದ ಕೊತ್ತಳಗಳಾಗಿರುವ ಸಾಧ್ಯತೆಗಳಿವೆ. ಗುಡಿಬಂಡೆಯಲ್ಲಿಯೂ ಕೂಡ ಕೋಟೆಯ ಪಶ್ಚಿಮ ಭಾಗದಲ್ಲಿ ಚೌಕಾಕಾರದ ಕೊತ್ತಳಗಳನ್ನು ವೃತ್ತಾಕಾರದ ಕೊತ್ತಳಗಳನ್ನಾಗಿ ಪರಿವರ್ತಿಸಲು ಪ್ರಯತ್ನಿಸಿರುವುದನ್ನು ಗುರುತಿಸಬಹುದು. ಕೋಟೆಯ ಪಶ್ಚಿಮದಲ್ಲಿಯೇ ಹೆಚ್ಚಾಗಿ ಈ ರೀತಿಯ ಪರಿವರ್ತನೆಗಳಾಗಿರುವುದಕ್ಕೆ ವಿಶೇಷ ಕಾರಣಗಳೇನು ಇಲ್ಲ. ಯಾವ ಸ್ಥಳಗಳು ಆಯಕಟ್ಟಿನ ಸ್ಥಳಗಳೆಂದು ತೋರುತ್ತದೆಯೋ ಅಂತಹ ಸ್ಥಳಗಳಲ್ಲಿ ಈ ಪರಿವರ್ತನೆಗಳು ಹೆಚ್ಚಾಗಿ ನಡೆದಿವೆ. ಇದನ್ನೇ ಸೂಚಿಸುವಂತೆ ಚಿತ್ರದುರ್ಗದಲ್ಲಿ ಚೌಕಾಕಾರದ ಕೊತ್ತಳಗಳ ನಡುವೆಯೇ ಆಯಕಟ್ಟಿನ ಸ್ಥಳದಲ್ಲಿ ಹೊಸದಾಗಿ ವೃತ್ತಾಕಾರದ ಬತೇರಿ ನಿರ್ಮಾಣವಾಗಿರುವುದು ಕಂಡುಬರುತ್ತದೆ.

ಹೊಸ ಮತ್ತು ಹಳೆಯ ನಿರ್ಮಾಣಗಳನ್ನು ಗುರುತಿಸಬಹುದಾದ ಸುಲಭ ವಿಧಾನಗಳಲ್ಲಿ ಕಲ್ಲುಗಳ ಬಣ್ಣ ಕೂಡ ಒಂದು. ಚೌಕಾಕಾರದ ಮತ್ತು ವೃತ್ತಾಕಾರದ ಕೊತ್ತಳಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಹೊಸ ಕೊತ್ತಳದ ಕಲ್ಲುಗಳಿಗಿಂತ ಹಳೆಯ ಕೊತ್ತಳದ

ಕಲ್ಲುಗಳು ಹಳದಿ ಬಣ್ಣಕ್ಕೆ ತಿರುಗಿ ತಮ್ಮ ಕಾಂತಿಯನ್ನು ಕಳೆದುಕೊಂಡಿರುತ್ತವೆ. ವೃತ್ತಾಕಾರದ ಕೊತ್ತಳಗಳಲ್ಲಿ ಗಾರೆಯನ್ನು ಬಳಸಿರುವುದು ಟಿಪ್ಪುಕಾಲದ್ದೆಂದು ನಿಶ್ಚಯಿಸಬಹುದಾಗಿದೆ. ಚಿತ್ರದುರ್ಗದ ಕೋಟೆಯಲ್ಲಿ ಸುಮಾರು ೪೫ ಬತೇರಿಗಳಿವೆ. ಅವುಗಳಲ್ಲಿ ಝುಂಡಾ ಬತೇರಿ, ನೆಲ್ಲಿಕಾಯಿ ಸಿದ್ಧೇಶ್ವರನ ಬತೇರಿ, ಲಾಲ್ ಬತೇರಿ, ತುಪ್ಪದಕೊಳದ ಬತೇರಿ, ಹಿಡಿಂಬೇಶ್ವರ ಬತೇರಿ, ಕಹಳೆ ಬತೇರಿ, ಬಸವನ ಬತೇರಿ ಮುಂತಾದವುಗಳು ಪ್ರಮುಖವಾದುವು. ಇವುಗಳಲ್ಲಿ ಇತಿಹಾಸಕಾರರ ದೃಷ್ಟಿಯಿಂದ ಬಸವನ ಬತೇರಿ ಪ್ರಮುಖವಾದುದು. ಇದನ್ನು ಟಿಪ್ಪು ಸುಲ್ತಾನ್ ನಿರ್ಮಾಣ ಮಾಡಿಸಿದನೆಂದು ಹೇಳುತ್ತಾರೆ. ಈ ಬತೇರಿಯು ಎತ್ತರವಾದ ದಿಣ್ಣೆಯ ಮೇಲೆ ಅಷ್ಟಕೋನಾಕೃತಿಯಲ್ಲಿ ನಿರ್ಮಿಸಲ್ಪಟ್ಟಿದೆ. ಇಟ್ಟಿಗೆ, ಕಲ್ಲು ಮತ್ತು ಗಾರೆಯಿಂದ ಬಲಿಷ್ಠವಾಗಿ ಕಟ್ಟಲಾಗಿದೆ (ಅಥಣಿ ೧೯೯೧: ೮೪-೮೯). ಈ ಬತೇರಿಗೆ ದೊಡ್ಡ ಪ್ರವೇಶ ದ್ವಾರವಿದೆ. ಅಲ್ಲಿಂದ ಮಟ್ಟಿಲುಗಳನ್ನು ಏರಿ ಬತೇರಿಯ ಮೇಲಕ್ಕೆ ಹೋಗಬೇಕು. ಆ ಮೆಟ್ಟಿಲುಗಳ ಎಡಭಾಗದಲ್ಲಿ ಖೈದಿಗಳನ್ನು ಬಂಧಿಸಿಡುವ ಸೆರೆಮನೆ ಇದೆ. ಅಂದರೆ ಬತೇರಿಯ ಕೆಳಭಾಗದಲ್ಲಿ ಬಂದಿಖಾನೆಯನ್ನು ನಿರ್ಮಿಸಲಾಗಿದೆ. ಮೇಲೆ ವಿಶಾಲವಾದ ಪ್ರದೇಶವಿದ್ದು, ಬಲಿಷ್ಠ ಕೈಪಿಡಿ ಗೋಡೆಯಿಂದ ಸುತ್ತುವರಿದಿದೆ. ಇಲ್ಲಿಯೇ ಕಾವಲುಗಾರರ ಕೋಣೆಗಳಿವೆ. ಕೈಪಿಡಿಗಳಲ್ಲಿ ಫಿರಂಗಿ ಕಿಂಡಿಗಳು ಮತ್ತು ಬಂದೂಕು ಕಿಂಡಿಗಳಿವೆ. ಇದು ಟಿಪ್ಪು ಕಾಲದ ಕೋಟೆಗಳಲ್ಲಿ ನಿರ್ಮಿಸಲ್ಪಟ್ಟ ವಿಶಿಷ್ಟವಾದ ಬತೇರಿ ಇದಾಗಿದೆ.



ಚೌಕಾಕಾರದ ಕೊತ್ತಳಗಳ ನಡುವೆ (ವೃತ್ತದಲ್ಲಿ ತೋರಿಸಿದೆ) ವೃತ್ತಾಕಾರದ ಬತೇರಿಯೊಂದು (ಬಾಣದ ಗುರುತು) ನಿರ್ಮಾಣಗೊಂಡಿರುವುದನ್ನು ಕಾಣಬಹುದು (ಚಿತ್ರದುರ್ಗ)



**ಬಸವನ ಬತೇರಿ, (ಚಿತ್ರದುರ್ಗ)**

ಕೊತ್ತಳಗಳ ಮಾದರಿಯನ್ನೆ ಹೋಲುವ ಕೋಟೆಯ ಮತ್ತೊಂದು ಭಾಗ ಬತೇರಿ. ಇವುಗಳನ್ನು 'ಮುಗಿಲಟ್ಟಣೆ' ಎಂದೂ ಕನ್ನಡ ಸಾಹಿತ್ಯದಲ್ಲಿ ಕರೆಯಲಾಗಿದೆ. ಬತೇರಿಗಳು ಕೋಟೆಯ ಒಳಮೂಲೆಗಳಲ್ಲಿ ಮತ್ತು ಒಳ ಭಾಗಗಳಲ್ಲಿ ಪ್ರತ್ಯೇಕವಾಗಿಯೂ ಕಂಡುಬರುತ್ತವೆ. ಟಿಪ್ಪು ಪೂರ್ವದಲ್ಲಿ ಬತೇರಿಗಳನ್ನು ಚೌಕಾಕಾರದಲ್ಲಿ ನಿರ್ಮಿಸಲಾಗುತ್ತಿತ್ತು. ಇವುಗಳು ಪ್ರಧಾನವಾಗಿ ವೀಕ್ಷಣಾ ಗೋಪುರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಟಿಪ್ಪು ಕಾಲದಲ್ಲಿ ಈ ಬತೇರಿಗಳನ್ನು ವೃತ್ತಾಕಾರದಲ್ಲಿ ಎತ್ತರವಾಗಿ ನಿರ್ಮಿಸಿ ಫಿರಂಗಿಗಳನ್ನು ಉಪಯೋಗಿಸಲು ಬಳಸಲಾಗುತ್ತದೆ. ದೇವನಹಳ್ಳಿ ಕೋಟೆಯ (ಪೂರ್ವದ್ವಾರದ ಸಮೀಪ) ಈಶಾನ್ಯ ಮತ್ತು ಆಗ್ನೇಯ ದಿಕ್ಕುಗಳಲ್ಲಿ ಕೋಟೆಗೆ ಹೊಂದಿಕೊಂಡಂತೆ ಚೌಕಾಕಾರದ ಎರಡು ಬತೇರಿಗಳಿವೆ. ಇವು ಪಾಳೇಗಾರರ ಕಾಲದ ನಿರ್ಮಾಣಗಳಾಗಿವೆ. ಪಶ್ಚಿಮ ದ್ವಾರದ ಕೋಟೆಯನ್ನು ಹೈದರಾಲಿ ವಿಸ್ತರಿಸಿದ ಕಾರಣ ಆ ದ್ವಾರದ ಎರಡು ಬದಿಗಳಲ್ಲಿ ಮುಂಚಾಚಿದ ಕೊತ್ತಳಗಳನ್ನು ಹೈದರಾಲಿ ಅಥವಾ ಟಿಪ್ಪು ಸುಲ್ತಾನ್ ಮಾಡಿಸಿದ್ದಾರೆ. ಅದೇ ರೀತಿ ಶ್ರೀರಂಗಪಟ್ಟಣದಲ್ಲಿಯೂ ದಕ್ಷಿಣದ ಒಳಭಾಗದ ಕೋಟೆಗೆ ಹೊಂದಿಕೊಂಡಂತೆ ಚೌಕಾಕಾರದ ಬತೇರಿಗಳಿವೆ. ಇವುಗಳಲ್ಲಿ ಕೆಲವೊಂದಕ್ಕೆ ರ್‍ಯಾಂಪ್‌ಗಳನ್ನು ನಿರ್ಮಿಸಿ, ಫಿರಂಗಿಗಳನ್ನು ಇಟ್ಟಿರುವುದನ್ನು ನೋಡಬಹುದು. ಕೋಟೆಯ ಒಳಭಾಗದಲ್ಲಿರುವ ಸಿಶಾನೆ ಬತೇರಿ ಅತಿ ಎತ್ತರವಿದೆ. ಇದು ಒಡೆಯರ ಕಾಲದ ಮುಗಿಲಟ್ಟಣೆ ಇದಾಗಿರಬಹುದು.



**ಬೇಕಲ್ ಕೋಟೆಯಲ್ಲಿರುವ ಅತ್ಯಂತ ಎತ್ತರವಾದ ಬತೇರಿ**

ಟಿಪ್ಪು ಕೋಟೆಗಳಲ್ಲಿರುವ ಬತೇರಿಗಳಲ್ಲಿ ಅತ್ಯಂತ ದೊಡ್ಡ ಮತ್ತು ಎತ್ತರವಾದ ಬತೇರಿ ಎಂದರೆ ಬೇಕಲ್‌ನ ಕೋಟೆಯ ನಡುಭಾಗದಲ್ಲಿರುವ ಬತೇರಿ. ಇದು ೧೩.೮೦ ಮೀ. ಎತ್ತರವಿದೆ. ಇದಕ್ಕೆ ನಿರ್ಮಿಸಿರುವ ಇಳಿಜಾರುಹಾದಿ (ರ್‍ಯಾಂಪ್) ೨೪.೬ ಮೀ. ಉದ್ದವಿದೆ. ಬತೇರಿಯ ಮೇಲ್ಭಾಗದಲ್ಲಿ ಎಂಟು ಫಿರಂಗಿ ಕಿಂಡಿಗಳಿವೆ. ಮಧ್ಯದಲ್ಲಿ ಒಂದು ವೃತ್ತಾಕಾರದ ವೇದಿಕೆ ಇದೆ. ಬತೇರಿಯ ಮೇಲ್ಭಾಗವು ೧೨ ಮೀ. ವ್ಯಾಸವನ್ನು ಹೊಂದಿದ್ದು, ಅಷ್ಟಕೋನಾಕಾರದಲ್ಲಿದೆ. ಆಕರ್ಷಕವಾಗಿರುವ ಈ ಬತೇರಿಯು ಇಂಡೋ-ಪೋರ್ಚುಗಿಸ್ ಶೈಲಿಯಲ್ಲಿದೆ ಎಂದು ಹೇಳಲಾಗುತ್ತದೆ. ಈ ಬತೇರಿಯ ಮೇಲೆ ನಿಂತು ನೋಡಿದರೆ ಸುತ್ತಲ ಪ್ರದೇಶದಲ್ಲಿ ಶತ್ರುಗಳ ಚಲನವಲನಗಳನ್ನು ಸುಲಭವಾಗಿ ಗುರುತಿಸಬಹುದು. ಬೇಕಲ್ ಕೋಟೆಯಲ್ಲಿ ೧೫ ಕೊತ್ತಳಗಳು ಮತ್ತು ೫ ಬತೇರಿಗಳಿವೆ. ಇದೇ ಮಾದರಿಯ ಬತೇರಿಗಳನ್ನು ಬೇರಾವ ಕೋಟೆಗಳಲ್ಲಿಯೂ ಕಾಣಸಿಗುವುದಿಲ್ಲ (ಲೋರ್ದುಸಾಮಿ ೨೦೧೦: ೯೨-೯೪).

ಕೊತ್ತಳಗಳನ್ನು ವೃತ್ತಾಕಾರದಲ್ಲಿ ನಿರ್ಮಿಸುವುದರಿಂದ ಕೊತ್ತಳಗಳ ಮೇಲಿನ ಫಿರಂಗಿಗಳನ್ನು ೩೬೦ ಯಲ್ಲಿ ಗುರಿಯತ್ತ ಕೇಂದ್ರೀಕರಿಸಲು ಸಾಧ್ಯವಿದೆ. ಫಿರಂಗಿಗಳು ಹೆಚ್ಚಾಗಿ ಬಳಕೆಯಲ್ಲಿ ಇಲ್ಲದ ಕಾಲಘಟ್ಟದಲ್ಲಿ ಅಂದು ಬಳಕೆಯಲ್ಲಿದ್ದ ಶಸ್ತ್ರಾಸ್ತ್ರಗಳಿಗೆ ಅನುಗುಣವಾಗಿ ಚೌಕಾಕಾರದಲ್ಲಿ ನಿರ್ಮಿಸಿಕೊಂಡಿದ್ದರು. ಅಂದರೆ ಶಸ್ತ್ರಾಸ್ತ್ರಗಳ ಉಪಯೋಗಕ್ಕಾಗಿಯೇ ಕೋಟೆಗಳಲ್ಲಿ ಕಾಲಕಾಲಕ್ಕೆ ಸೂಕ್ತ ಮಾರ್ಪಾಟುಗಳನ್ನು ಮಾಡಿಕೊಳ್ಳಲಾಗುತ್ತಿತ್ತೆಂದು ಹೇಳಬಹುದು. ಇಂತಹ ತಾಂತ್ರಿಕ ಮಾರ್ಪಾಟುಗಳಲ್ಲಿ ಟಿಪ್ಪು ಮುಂಚೂಣಿಯಲ್ಲಿದ್ದನು. ಕೆಲವು ಕೊತ್ತಳ ಮತ್ತು ಬತೇರಿಗಳ ಮೇಲೆ

ಕಲ್ಲುಚಪ್ಪಡಿಯನ್ನು ಅರ್ಧಅಡಿ ಕೊರೆದು ಮಣ್ಣಿಗೆ ಅದ್ದಿರುವುದನ್ನು ಕಾಣಬಹುದು. ಇದರ ಉದ್ದೇಶ ಫಿರಂಗಿಗಳಿಂದ ಗುಂಡು ಹಾರಿಸುವಾಗ ಫಿರಂಗಿಗಳು ಹಿಂದಕ್ಕೆ ದಪ್ಪಲ್ಪಡುವುದರಿಂದ ಫಿರಂಗಿಯ ಮಧ್ಯಭಾಗದಲ್ಲಿ ಇಂಗ್ಲಿಷ್‌ನ 'ವೈ' ಮಾದರಿಯ ಬಲವಾದ ಕಬ್ಬಿಣದ ಕವಡು ನೀಡಿ ಅದರ ಮೇಲ ಕೂರಿಸಿರುತ್ತಾರೆ. ಕವಡನ್ನು ಕೊರೆದು ರಂಧ್ರಕ್ಕೆ ಸೇರಿಸಿರುತ್ತಾರೆ. ಈ ಕವಡಿನ ಮತ್ತೊಂದು ಉದ್ದೇಶವೇನೆಂದರೆ, ಫಿರಂಗಿಯನ್ನು ಸುಲಭವಾಗಿ ಎಲ್ಲಾ ದಿಕ್ಕುಗಳಿಗೂ ತಿರುಗಿಸಲು ಸಾಧ್ಯವಿದೆ. ಕವಡು ಫಿರಂಗಿಗಳಿಲ್ಲದ ಕಡೆಗಳಲ್ಲಿ ಫಿರಂಗಿಯ ಹಿಂಬದಿಗೆ ದೊಡ್ಡಕಲ್ಲನ್ನು ನೆಟಿರುತ್ತಾರೆ. ಫಿರಂಗಿ ಹಾರಿದ ನಂತರ ಫಿರಂಗಿ ಹಿಂದಕ್ಕೆ ಹೋಗದಂತೆ ಕಲ್ಲು ತಡೆಯುತ್ತದೆ. ಆದ್ದರಿಂದ ಅವನ ಕಾಲದ ಕೋಟೆಗಳಲ್ಲಿ ನಿರ್ಮಿಸಲ್ಪಟ್ಟ ಕೊತ್ತಳಗಳು ಮತ್ತು ಬತೇರಿಗಳು ಕೋಟೆಯ ಅನನ್ಯ ಶಕ್ತಿಯಾಗಿದ್ದವು ಮತ್ತು ಬಹೂಪಯೋಗಿ ಸೇವೆಗೆ ಒಳಪಟ್ಟಿದ್ದವು.



**ಶ್ರೀರಂಗಪಟ್ಟಣ ಒಳಕೋಟೆಯ ಆಗ್ನೇಯ ಮೂಲೆಯಲ್ಲಿರುವ ಚೌಕಾಕಾರದ ಬತೇರಿಯ ಮೇಲಿರುವ ಫಿರಂಗಿ ಕವಡು ನೆಡುವ ಕುಳಿ**

### ೩.೨.೨ ಮದ್ದಿನ ಮನೆಗಳು

ಹೈದರ್ ಮತ್ತು ಟಿಪ್ಪು ಪೂರ್ವದ ಕೋಟೆಗಳನ್ನೂ, ಅವರ ಕಾಲದ ಕೋಟೆಗಳನ್ನೂ ಗುರುತಿಸಲು ಇರುವ ಮತ್ತೊಂದು ಪ್ರಮುಖ ಲಕ್ಷಣ ಮದ್ದಿನ ಮನೆಗಳು. ಇವುಗಳನ್ನು ಆರ್ಮರಿ, ಮ್ಯಾಗಜಿನ್ ಎಂದೂ ಕರೆಯುತ್ತಾರೆ. ವಿಜಯನಗರೋತ್ತರ ಅಥವಾ ಪಾಳೇಗಾರರ ಕಾಲದ ಕೋಟೆಗಳಲ್ಲಿ ಮದ್ದಿನ ಮನೆಗಳನ್ನು ವಿಶೇಷವಾಗಿ ಕಾಣುವುದಿಲ್ಲ. ಆದರೆ ಟಿಪ್ಪು ಸುಲ್ತಾನ್ ಕಾಲದ ಕೋಟೆಗಳಲ್ಲಿ ಒಂದು ವಿಶಿಷ್ಟತೆಯುಳ್ಳ (ಯುನಿಕ್) ಮದ್ದಿನ ಮನೆಗಳನ್ನು ಕಾಣಬಹುದು.

ಟಿಪ್ಪು ಕಾಲದ ಮದ್ದಿನ ಮನೆಗಳು ಚೌಕಾಕಾರದಲ್ಲಿದ್ದು, ಪ್ರವೇಶದ್ವಾರ ಮಾತ್ರ ಪ್ರತ್ಯೇಕವಾಗಿ ಮುಂದೆ ಚಾಚಿಕೊಂಡಿರುತ್ತವೆ. ಇವುಗಳನ್ನು ಕಲ್ಲು, ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿರುತ್ತಾರೆ. ಹೊರಗೆ ಮತ್ತು ಒಳಗೆ ಗಾರೆಯಿಂದ ಗಿಲಾವ್ ಮಾಡಲಾಗಿರುತ್ತದೆ. ಮದ್ದಿನ ಮನೆಯ ಚಾವಣಿಯ ತುದಿಭಾಗವು ಪಿರಮಿಡ್ ಅಥವಾ ಪಟ್ಟಿಕದಂತಿರುತ್ತದೆ. ಈ ಮಾದರಿಯ ಮದ್ದಿನ ಮನೆಗಳು ಟಿಪ್ಪು ಸುಲ್ತಾನನ ಕೋಟೆಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಇಲ್ಲಿ ಮದ್ದು, ಗುಂಡು, ರಾಕೆಟ್ ಮೊದಲಾದವುಗಳನ್ನು ಸಂಗ್ರಹಿಸಿಡಲಾಗುತ್ತಿತ್ತೆಂದು ಹೇಳಲಾಗುತ್ತದೆ. ಉದಾಹರಣೆಗೆ: ಶ್ರೀರಂಗಪಟ್ಟಣದಲ್ಲಿ ಈ ಮಾದರಿಯ ಎಂಟು ಮದ್ದಿನ ಮನೆಗಳಿವೆ.[೬] ಶ್ರೀರಂಗಪಟ್ಟಣದ ಒಳಕೋಟೆಯ ಆಗ್ನೇಯ ಮೂಲೆಯಲ್ಲಿರುವ ಮದ್ದಿನ ಮನೆ ಬಹುಶಃ ಟಿಪ್ಪು ಸುಲ್ತಾನನ ಕೋಟೆಗಳಲ್ಲಿಯೇ ಅತ್ಯಂತ ದೊಡ್ಡ ಮದ್ದಿನ ಮನೆಯಾಗಿದೆ. ಬೆಂಗಳೂರಿನಲ್ಲಿ ಟಿಪ್ಪು ಕಾಲದ ನಾಲ್ಕು ಮದ್ದಿನ ಮನೆಗಳಿದ್ದವೆಂದು ಹೇಳಲಾಗುತ್ತದೆ. ಆದರೆ ಪ್ರಸ್ತುತ ಬೆಂಗಳೂರು ಮೆಡಿಕಲ್ ಕಾಲೇಜಿನ ಹಿಂಬದಿಯಲ್ಲಿ ಒಂದೇ ಒಂದು ಮಾತ್ರ ಉಳಿದಿದೆ. ಮದ್ದಿನ ಮನೆಗಳನ್ನು ಸಾಮಾನ್ಯವಾಗಿ ಗಾರೆ ಮತ್ತು ಇಟ್ಟಿಗೆಗಳಿಂದ ನಿರ್ಮಿಸಿರುತ್ತಾರೆ. ಆದರೆ ಕೆಲವು ಕೋಟೆಗಳಲ್ಲಿ ಅವುಗಳನ್ನು ವೃತ್ತಾಕಾರದಲ್ಲಿ ನಿರ್ಮಿಸಿರುವುದನ್ನು ಕೂಡ ಕಾಣಬಹುದು. ಉದಾಹರಣೆಗೆ ಮಧುಗಿರಿಯ ಕೋಟೆ.



ಶ್ರೀರಂಗಪಟ್ಟಣದ ಆಗ್ನೇಯ ಮೂಲೆಯಲ್ಲಿರುವ ಬೃಹತ್ ಮದ್ದಿನ ಮನೆ. (ಚಿತ್ರ: ಲೇಖಕರದು)



**ಮಂಜರಾಬಾದ್‌ನಲ್ಲಿರುವ ಅವಳಿ ಮದ್ದಿನ ಮನೆಗಳು. (ಚಿತ್ರ: ಲೇಖಕರದು)**



**ಮದ್ದಿನ ಮನೆ ಅಥವಾ ಆರ್ಮರಿ, ಬೆಂಗಳೂರು. (ಚಿತ್ರ: ಲೇಖಕರದು)**

ಮಂಜರಾಬಾದಿನ ಮದ್ದಿನ ಮನೆಗಳು ಸಾಮಾನ್ಯವಾಗಿ ೯ ಮೀ. ಉದ್ದ ಮತ್ತು ದ್ವಾರ ಭಾಗದಲ್ಲಿ ೫.೮ ಮೀ. ಅಗಲವಿದೆ. ಹಿಂಭಾಗದಲ್ಲಿ ೪ ಮೀ. ಮತ್ತು ಪ್ರವೇಶ ದ್ವಾರದ ಹಿಂಭಾಗದಲ್ಲಿ ೧.೮ ಮೀ. ಅಗಲವಿದೆ.

ಬೆಂಗಳೂರಿನ ಮದ್ದಿನ ಮನೆಯು ಬೃಹತ್ತಾಗಿದೆ. ಇದು ಸುಮಾರು ೧೭ ಮೀ. ಉದ್ದ ಮತ್ತು ೧೦ಮೀ. ಅಗಲವಿದೆ. ಒಳಭಾಗದಲ್ಲಿ ಯಾವುದೇ ವಿಂಗಡಣೆಗಳನ್ನು

ಮಾಡಿರುವುದಿಲ್ಲ. ಪೂರ್ವ ಮತ್ತು ಪಶ್ಚಿಮಗಳಲ್ಲಿ ವಾತಾಯನ ಬಿಡಲಾಗಿದೆ. ಶ್ರೀರಂಗಪಟ್ಟಣದಲ್ಲಿ ವಿವಿಧ ಗಾತ್ರದ ಮದ್ದಿನ ಮನೆಗಳಿವೆ. ಇಲ್ಲಿನ ಮದ್ದಿನ ಮನೆಗಳಲ್ಲಿ ಮೂರು ಭಾಗಗಳ ವಿಂಗಡಣೆ ಇರುವುದನ್ನು ಕಾಣಬಹುದು. ಒಳಭಾಗದಲ್ಲಿ ಕಮಾನು ಆಕಾರಗಳಿದ್ದು, ಇವುಗಳು ಒಳಭಾಗದ ವಿಂಗಡಣೆಗೆ ಕಾರಣವಾಗಿವೆ.



ಮದ್ದಿನ ಮನೆಯ ಒಳಭಾಗ, ಶ್ರೀರಂಗಪಟ್ಟಣ. (ಚಿತ್ರ: ಲೇಖಕರದು)



ಶಿಥಿಲಗೊಂಡಿರುವ ಮದ್ದಿನ ಮನೆ, ಹುತ್ರಿದುರ್ಗ. (ಚಿತ್ರ: ಹಂ.ಗು. ರಾಜೇಶ್)

ಈ ಮಾದರಿಗಳೇ ಅಲ್ಲದೆ ಸಣ್ಣ ಕೋಟೆಗಳಲ್ಲಿ ಚಿಕ್ಕ ಚಿಕ್ಕ ಮದ್ದಿನ ಮನೆಗಳಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡು ಬಂದಿರುತ್ತದೆ. ಇವು ಪ್ರಧಾನ ಕೋಟೆಯಲ್ಲಿನ ಮದ್ದಿನ ಮನೆಗಳಿಗಿಂತ ಚಿಕ್ಕದಾಗಿವೆ. ಹುಲಿಯೂರುದುರ್ಗ ಕುಂಬಿ ಬೆಟ್ಟದ ಮೇಲಿರುವ ಮದ್ದಿನ ಮನೆ ಮತ್ತು ಹುತ್ರಿದುರ್ಗದಲ್ಲಿರುವ ಮದ್ದಿನ ಮನೆಯನ್ನು ಉದಾಹರಿಸಬಹುದು. ಇವುಗಳ ಪ್ರವೇಶ ದ್ವಾರವು ಮುಂಚಾಚಿಕೊಂಡಿರದೆ ಮದ್ದಿನ ಮನೆಯ ಗೋಡೆಯಲ್ಲಿಯೇ ಇದೆ. ಇವು ೪ – ೭ ಅಡಿ ಎತ್ತರ ಮತ್ತು ೪ – ೭ ಅಡಿಗಳ ಅಗಲವಿರುವುದನ್ನು ಕಾಣಬಹುದು. ಎರಡೂ ಕೋಟೆಗಳಲ್ಲಿನ ಮದ್ದಿನ ಮನೆಗಳು ಭಾಗಶಃ ಶಿಥಿಲಗೊಂಡಿವೆ. ಇನ್ನು ಕೆಲವು ಕೋಟೆಗಳಲ್ಲಿ ಚಿಕ್ಕ ಚಿಕ್ಕ ಮದ್ದಿನ ಮನೆಗಳನ್ನು ಕೊತ್ತಳ ಮತ್ತು ಬತೇರಿಗಳ ಒಳಗೆ ಕೈಪಿಡಿ ಗೋಡೆಗಳಿಗೆ ಹೊಂದಿಕೊಂಡಂತೆ ನಿರ್ಮಿಸಲಾಗಿದೆ. ಈ ರೀತಿಯ ವ್ಯವಸ್ಥೆಯನ್ನು ಮಧುಗಿರಿ ಕೋಟೆ, ವೆಲ್ಲೂರಿನ ಕೋಟೆ, ದೇವನಹಳ್ಳಿಯ ಕೋಟೆಗಳಲ್ಲಿ ಗುರುತಿಸಬಹುದು.



**ಫಿರಂಗಿ ಕಿಂಡಿಗಳ ನಡುವೆ ನಿರ್ಮಿಸಲಾಗಿರುವ ಮದ್ದಿನಗೂಡು, ಮಧುಗಿರಿ. (ಚಿತ್ರ: ಲೇಖಕರದು)**

**ಉದ್ದೇಶ :** ಬಹುಶಃ ಕೇಂದ್ರೀಕೃತ ಮದ್ದಿನ ಮನೆಗಳು ದೂರದಲ್ಲಿದ್ದರೆ, ತುರ್ತು ಸಂದರ್ಭದಲ್ಲಿ ಮದ್ದನ್ನು ಸರಬರಾಜು ಮಾಡುವುದರಲ್ಲಿ ವಿಳಂಬವಾಗಬಹುದು. ಆದ್ದರಿಂದ ಕೊತ್ತಳ ಮತ್ತು ಬತೇರಿಗಳ ಸಮೀಪವೇ ಚಿಕ್ಕ ಚಿಕ್ಕ ಮದ್ದಿನ ಮನೆಗಳನ್ನು ನಿರ್ಮಿಸಿ ಸಂಗ್ರಹಿಟ್ಟುಕೊಳ್ಳಲು ನಿರ್ಮಿಸಲಾಗಿರುವ ಸಾಧ್ಯತೆಗಳಿವೆ. ಟಿಪ್ಪುಕಾಲದ ಮದ್ದಿನ ಮನೆಗಳು ಸಾಮಾನ್ಯವಾಗಿ ಭೂಮಟ್ಟದಿಂದ ಸುಮಾರು ಐದು ಅಡಿಗಳ ಆಳದಲ್ಲಿರುವುದನ್ನು ಗಮನಿಸಬಹುದು. ಇದರ ಉದ್ದೇಶ ಆಕಸ್ಮಿಕವಾಗಿ ಸ್ಫೋಟಗೊಂಡರೂ ಕೂಡ ಹೆಚ್ಚಿನ ಅನಾಹುತಗಳು ಉಂಟಾಗಬಾರದೆಂದು ಈ ರೀತಿ ನಿರ್ಮಿಸುತ್ತಿದ್ದರು. ಭೂಮಿಯ ಮೇಲ್ಮೈಯಲ್ಲಿಯೂ, ಬಂಡೆಗಳ ಮೇಲೆ ಕೂಡ ಇರುವ ಮದ್ದಿನ ಮನೆಗಳನ್ನು ಚಿತ್ರದುರ್ಗದಲ್ಲಿ ಕಾಣಬಹುದು.

ಸಾಮಾನ್ಯವಾಗಿ ಮದ್ದಿನ ಮನೆಗಳು ಕೋಟೆಯೊಳಗೆ ಇರುತ್ತಿದ್ದವು. ಇವುಗಳನ್ನು ಕೋಟೆಯೊಳಗಿನ ಜನವಸತಿ ಪ್ರದೇಶದಿಂದ ದೂರದಲ್ಲಿ ಕೋಟೆಯ ಒಳ ಅಂಚಿಗೆ ಸಮೀಪದಲ್ಲಿಯೇ ನಿರ್ಮಿಸುತ್ತಿದ್ದರು. ಇದನ್ನು ಶ್ರೀರಂಗಪಟ್ಟಣ, ಬೆಂಗಳೂರು ಮತ್ತು ವೆಲ್ಲೂರು ಮೊದಲಾದ ನೆಲ ಮತ್ತು ಜಲದುರ್ಗಗಳಲ್ಲಿ ಗುರುತಿಸಬಹುದು. ಏಕೆಂದರೆ ಕೋಟೆಯ ಮಧ್ಯ ಭಾಗದಲ್ಲಿ ಜನವಸತಿ ಪ್ರದೇಶವಿರುತ್ತದೆ. ಅಲ್ಲದೆ ತುರ್ತು ಸಂದರ್ಭಗಳಲ್ಲಿ ಒಳಭಾಗದಿಂದ ಕೋಟೆಯ ಮೇಲ್ಭಾಗಕ್ಕೆ ಸಾಗಿಸುವುದು ಕಷ್ಟದ ಕೆಲಸ. ಸಾಮಾನ್ಯವಾಗಿ ಕೋಟೆಯ ಮಧ್ಯದಲ್ಲಿರುವ ಮದ್ದಿನ ಮನೆಗಳನ್ನು ಗಿರಿದುರ್ಗಗಳಲ್ಲಿ ಕಾಣಬಹುದು. ಅಲ್ಲಿ ಜನವಸತಿ ಕಡಿಮೆ ಇರುವ ಮತ್ತು ಅನುಕೂಲಕರವಾದ ಸ್ಥಳಗಳನ್ನು ಆಯ್ದುಕೊಂಡು ನಿರ್ಮಿಸುತ್ತಿದ್ದರು.

### ೩.೨.೩ ವಿಶಾಲವಾದ ಪಹರೆಕಟ್ಟೆ

ಟಿಪ್ಪುಕಾಲದ ಕೋಟೆಗಳಲ್ಲಿ ಕಾಣುವ ಮತ್ತೊಂದು ಲಕ್ಷಣವೆಂದರೆ ವಿಶಾಲವಾದ ಪಹರೆ ಕಟ್ಟೆ. ಕೋಟೆಯ ಮೇಲಿರುವ ಕುಂಬೆ ಅಥವಾ ಕೈಪಿಡಿ ಗೋಡೆಗೆ ಹೊಂದಿಕೊಂಡಂತೆ ಕೋಟೆ ಗೋಡೆಯ ಮೇಲೆ ವಿಶಾಲವಾದ ಪಹರೆಕಟ್ಟೆಗಳನ್ನು ಕಾಣಬಹುದು. ಪಾಳೇಗಾರರ ಕಾಲದ ಕೋಟೆಗಳಲ್ಲಿ ಪಹರೆಕಟ್ಟೆಗಳು ಸಾಮಾನ್ಯವಾಗಿ ೧–೨ ಮೀ. ಅಗಲವಿದ್ದರೆ, ಟಿಪ್ಪು ಕಾಲದಲ್ಲಿ ೪ ರಿಂದ ೮ ಮೀ. ಅಗಲ ಇರುವುದನ್ನು ಕಾಣಬಹುದು. ವೆಲ್ಲೂರಿನ ಪಹರೆಕಟ್ಟೆಯು ಸುಮಾರು ೮ ಮೀ. ಅಗಲವಿದೆ. ಪಹರೆಕಟ್ಟೆಯ ಹಾದಿಯನ್ನು ಇಟ್ಟಿಗೆ, ಜಂಬಿಟ್ಟಿಗೆ, ಕಲ್ಲು, ಮಣ್ಣಿನಿಂದ ನಿರ್ಮಿಸಿರುತ್ತಾರೆ. ಇನ್ನು ಕೆಲವು ಕೋಟೆಗಳಲ್ಲಿ ಎರಡು ಹಂತದ ಪಹರೆಕಟ್ಟೆಗಳಿವೆ. ಉದಾಹರಣೆ: ದೇವನಹಳ್ಳಿಯ ಕೋಟೆ. ಕೆಳಹಂತದ ಪಹರೆಕಟ್ಟೆಯಿಂದ ಮೇಲಿನ ಹಂತದ ಪಹರೆಕಟ್ಟೆಗೆ ಸಾಗಲು ಇಳಿಜಾರು ಹಾದಿಯನ್ನು (ರ್‍ಯಾಂಪ್) ಕಲ್ಪಿಸಲಾಗಿದೆ.



ಮೊದಲಹಂತದ ಪಹರೆಕಟ್ಟೆಯಿಂದ ಎರಡನೇ ಹಂತಕ್ಕೆ ಸಂಪರ್ಕ ಕಲ್ಪಿಸುವ ಇಳಿಜಾರು ಹಾದಿ, ದೇವನಹಳ್ಳಿ



**ಪಹರೆಕಟ್ಟೆಯ ನೋಟಗಳು, ಮಡಿಕೇರಿ ಮತ್ತು ಬೇಕಲ್ ಕೋಟೆ. (ಚಿತ್ರಗಳು: ಲೇಖಕರದು)**



**ಉದ್ದೇಶ** : ಈ ವಿಶಾಲವಾದ ಪಹರೆಕಟ್ಟೆಯ ಉದ್ದೇಶವೇನೆಂದರೆ ಕೈಪಿಡಿಯಲ್ಲಿನ ಫಿರಂಗಿ ಮತ್ತು ಬಂದೂಕಿನ ಕಿಂಡಿಗಳ ಮೂಲಕ ಆಕ್ರಮಣ ನಡೆಸುವ ಸೈನಿಕರಿಗೆ ಮದ್ದುಗುಂಡುಗಳನ್ನು ಸರಬರಾಜು ಮಾಡಲು ಉಪಯುಕ್ತವಾಗಿವೆ. ವಿಶೇಷವಾಗಿ ಫಿರಂಗಿಯಂತಹ ಭಾರಿ ಶಸ್ತ್ರಾಸ್ತ್ರಗಳನ್ನು ಕೊತ್ತಳದಿಂದ ಕೊತ್ತಳಗಳಿಗೆ ಸಾಗಿಸಲು ಮತ್ತು ಏಕಕಾಲದಲ್ಲಿ ಎದುರುಬದರು ಬರುವ ಫಿರಂಗಿಗಳು ಸರಾಗವಾಗಿ ಸಾಗಲು ಹೀಗೆ ನಿರ್ಮಿಸಲಾಗಿದೆ. ಬೇಕಲ್ ಕೋಟೆಯಲ್ಲಿ ಒಳಕೋಟೆಯ ಸುತ್ತಲೂ ವೇದಿಕೆಯಂತೆ ಜಂಬಿಟ್ಟಿಗೆ ಮತ್ತು ಗಾರೆಯಿಂದ ಪಹರೆಕಟ್ಟೆಯನ್ನು ನಿರ್ಮಿಸಿದ್ದಾರೆ. ಮಡಿಕೇರಿ,

ಶ್ರೀರಂಗಪಟ್ಟಣ, ವೆಲ್ಲೂರು ಮುಂತಾದ ಕಡೆಗಳಲ್ಲಿ ವಿಶಾಲವಾದ ಪಹರೆಕಟ್ಟೆಯ ಕೆಳಭಾಗದಲ್ಲಿ ಸೆರೆಮನೆಗಳನ್ನು, ಕಾರಾಗೃಹಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಉಪಲಭ್ಯವಾದ ಸ್ಥಳಾವಕಾಶವನ್ನು ಸದ್ಬಳಕೆ ಮಾಡಿಕೊಳ್ಳುವ ವಿಧಾನ ಇದಾಗಿದೆ. ಈ ಮಾದರಿಗಳನ್ನು ಸಾಮಾನ್ಯವಾಗಿ ನೆಲದುರ್ಗ ಮತ್ತು ಜಲದುರ್ಗಗಳಲ್ಲಿ ಮಾತ್ರ ಕಾಣಬಹುದು. ಗಿರಿದುರ್ಗಗಳಲ್ಲಿ ಸಮತಟ್ಟಾದ ಪ್ರದೇಶ ದೊರಕದ ಕಾರಣ ಅಂತಹ ಕಡೆಗಳಲ್ಲಿ ಪಹರೆಕಟ್ಟೆಗಳನ್ನು ಇತರ ವ್ಯವಸ್ಥೆಗಳಿಗೆ ಬಳಸಿಕೊಳ್ಳಲು ಸಾಧ್ಯವಾಗುವುದಿಲ್ಲ.

### ೩.೪.೪ ಎತ್ತರವಾದ ಮತ್ತು ಬೃಹತ್ತಾದ ಕುಂಬೆ/ಕೈಪಿಡಿ ಗೋಡೆಗಳು

ಕೋಟೆಯ ಹೊರಭಾಗಕ್ಕೆ ಇಳಿಜಾರಾದ ಕೈಪಿಡಿಗಳ ನಿರ್ಮಾಣ ಟಿಪ್ಪು ಕಾಲದ ಕೋಟೆಗಳ ಮತ್ತೊಂದು ವಿಶೇಷ. ಪಾಳೇಗಾರರ ಕಾಲದ ಕೋಟೆಗಳಲ್ಲಿ ಕೈಪಿಡಿಗಳು ಅಂದರೆ ಕೋಟೆಯ ಮೇಲ್ಭಾಗದಲ್ಲಿ ಪಹರೆಕಟ್ಟೆಗೆ ಹೊಂದಿಕೊಂಡಿರುವ ಗೋಡೆಗಳು ಸಾಮಾನ್ಯವಾಗಿ ೩-೪ ಅಡಿಗಳ ಎತ್ತರವಿರುತ್ತವೆ. ಕೆಲವು ಬಾರಿ ಎತ್ತರದ ತೆನೆಗಳನ್ನು ಒಳಗೊಂಡಿರುತ್ತವೆ. ಈ ತೆನೆಗಳ ನಡುವೆ ಕಿಂಡಿಗಳಿರುತ್ತವೆ. ಈ ವಿಧಾನ ಬಾಣ ಅಥವಾ ಈಟಿ, ಭರ್ಜಿ ಮೊದಲಾದವನ್ನು ಪ್ರಯೋಗಿಸಲು ಸೂಕ್ತ. ಆದರೆ ಬಂದೂಕುಗಳ ಆಕ್ರಮಣವನ್ನು ಎದುರಿಸಲು ಈ ರೀತಿಯ ರಚನೆ ಸೂಕ್ತವಾಗಿರುವುದಿಲ್ಲ. ಹೈದರ್ ಮತ್ತು ಟಿಪ್ಪು ಸುಲ್ತಾನರ ಕಾಲಕ್ಕೆ ಫಿರಂಗಿ ಮತ್ತು ಬಂದೂಕುಗಳ ಬಳಕೆ ವ್ಯಾಪಕವಾಗಿದ್ದರಿಂದ ಕೈಪಿಡಿಗಳನ್ನು ಸಾಕಷ್ಟು ಎತ್ತರಿಸಲಾಗಿದೆ. ಅಂದರೆ ಒಬ್ಬ ವ್ಯಕ್ತಿಯ ತಲೆ ಕಾಣದಷ್ಟು ಎತ್ತರಕ್ಕೆ ಎತ್ತರಿಸಿ ಅವುಗಳಲ್ಲಿ ಬಂದೂಕಿನ ಕಿಂಡಿಗಳನ್ನು ೩-೪ ಕೋನಗಳಲ್ಲಿ ಇಡಲಾಗಿದೆ. ಆ ಕಿಂಡಿಗಳ ಮೂಲಕ ಕೋಟೆಯ ಹೊರಗೆ ಇರುವ ಶತ್ರುಗಳ ಮೇಲೆ ಆಕ್ರಮಣ ಮಾಡಲು ಅನುಕೂಲವನ್ನು ಕಲ್ಪಿಸಿರುವುದನ್ನು ಕಾಣಬಹುದು. ಒಳಭಾಗದಲ್ಲಿರುವ ಸೈನಿಕರ ಮೇಲೆ ಹೊರಗಿನಿಂದ ಯಾವುದೇ ರೀತಿಯಲ್ಲಿ ಆಕ್ರಮಣ ನಡೆದರೂ ಅಪಾಯವಾಗುವ ಸಂಭವಗಳು ಕಡಿಮೆ.

ಟಿಪ್ಪು ಕೋಟೆಗಳಲ್ಲಿನ ಕೈಪಿಡಿ ಗೋಡೆಗಳು ಸುಮಾರು ೩-೫ ಮೀ. ದಪ್ಪವಿರುವುದನ್ನು ಸಾಮಾನ್ಯವಾಗಿ ಕಾಣಬಹುದು. ಇವುಗಳನ್ನು ಒಳಭಾಗದಿಂದ ಹೊರಭಾಗಕ್ಕೆ ಇಳಿಜಾರಾಗಿ ನಿರ್ಮಿಸಿರುವುದನ್ನು ಕಾಣಬಹುದು. ಸಾಮಾನ್ಯವಾಗಿ ಕೈಪಿಡಿ ಗೋಡೆಗಳನ್ನು ಇಟ್ಟಿಗೆ, ಕಲ್ಲು ಮತ್ತು ಗಾರೆಗಳಿಂದ ನಿರ್ಮಿಸಿರುವುದನ್ನು ಕಾಣಬಹುದು. ಕೊತ್ತಳಗಳ ಮೂಲೆಗಳಲ್ಲಿ ಕೈಪಿಡಿಗೋಡೆಗೆ ಹೊಂದಿಕೊಂಡಂತೆ ಕಾವಲುಗಾರರ ಕೋಣೆಗಳನ್ನು ಗಾರೆಯಿಂದ ನಿರ್ಮಿಸಿರುವುದನ್ನು ಕಾಣಬಹುದು. ದೇವನಹಳ್ಳಿಯ ಕೋಟೆಯಲ್ಲಿ ಕಾವಲುಗಾರರ ಕೋಣೆಗಳಿಗೆ ಹೊಂದಿಕೊಂಡಂತೆ ಮಿನಾರೇಟ್‌ನ ವಿನ್ಯಾಸಗಳಿರುವುದನ್ನು ಗುರುತಿಸಬಹುದು. ಇವು ಟಿಪ್ಪು ಕಾಲದ ಕೋಟೆಗಳ ರಚನೆಯಲ್ಲಿನ ಒಂದು ವೈಶಿಷ್ಟ್ಯ. ಇವುಗಳನ್ನು

ಕಾವಲುಗಾರರು ಮಳೆ. ಬಿಸಿಲಿನಿಂದ ರಕ್ಷಣೆ ಪಡೆಯಲು ನಿರ್ಮಿಸಲಾಗಿದೆ. ಮಳೆ ಬಂದರೆ ಸಿಪಾಯಿಗಳು ಆಸರೆಯನ್ನು ಹುಡುಕಿ ಓಡುತ್ತಿದ್ದ ಬಗ್ಗೆ ಟಿಪ್ಪುವಿನ ವೈದ್ಯ ಬ್ರಿಸ್ಟವ್ ಎಂಬಾತ ದಾಖಲಿಸಿದ್ದಾನೆ.[೬] ಆ ರೀತಿ ಪಲಾಯನಗೈಯುದೆ ಕಾರ್ಯನಿರ್ವಹಿಸಲೆಂದು ಕಾವಲುಗಾರರ ಕೋಣೆಗಳನ್ನು ನಿರ್ಮಿಸುತ್ತಿದ್ದರೆಂದು ತೋರುತ್ತದೆ. ಇಂತಹ ಕೋಣೆಗಳನ್ನು ಮಂಜರಾಬಾದ್, ಮಡಿಕೇರಿ, ಚಿತ್ರದುರ್ಗ, ದೇವನಹಳ್ಳಿ, ನಂದಿದುರ್ಗ, ವೆಲ್ಲೂರು ಮೊದಲಾದ ಕೋಟೆಗಳಲ್ಲಿ ಕಾಣಬಹುದು. ಮಂಜರಾಬಾದ್, ನಂದಿದುರ್ಗ ಮೊದಲಾದ ಕಡೆಗಳಲ್ಲಿ ಆ ಕೋಣೆಗಳಲ್ಲಿ ಹೊರಗಿನ ಚಲನವಲನಗಳನ್ನು ವೀಕ್ಷಿಸಲು ಕಿಂಡಿಗಳನ್ನು ಬಿಟ್ಟಿರುವುದು ಗಮನಿಸಬೇಕಾದ ಅಂಶವಾಗಿದೆ.



ಕೈಪಿಡಿಯ ಹೊರಭಾಗದ ಇಳಿಜಾರು ನೋಟ, ಮಂಜರಾಬಾದ್.



ಕೈಪಿಡಿ ಗೋಡೆಯಲ್ಲಿ ನಿರ್ಮಿಸಿರುವ ಬಂದೂಕು ಕಿಂಡಿ, ಬೇಕಲ್.



**ಕೈಪಿಡಿಯ ಹೊರಭಾಗ ಇಳಿಜಾರಾಗಿರುವುದು, ಮಡಿಕೇರಿ ಕೋಟೆ.**
**(ಚಿತ್ರಗಳು: ಲೇಖಕರದು)**



**ಕಾವಲುಗಾರರ ಕೋಣೆ, ಮಡಿಕೇರಿ ಕೋಟೆ.**

**ಉದ್ದೇಶ :** ಶತ್ರುಗಳು ಹಾರಿಸಿದ ಮದ್ದು ಮತ್ತು ಗುಂಡುಗಳು ಕೈಪಿಡಿ ಗೋಡೆಗೆ ತಾಗುತ್ತಿದ್ದವು. ಹೀಗೆ ತಾಗಿದ ಗುಂಡುಗಳು ಯಾವುದೇ ಕಾರಣಕ್ಕೂ ಕೋಟೆಯ ಒಳಭಾಗಕ್ಕೆ ಬೀಳದಂತೆ ತಡೆಯಲು ಹೊರಭಾಗಕ್ಕೆ ಇಳಿಜಾರಾಗಿ ಕೈಪಿಡಿ ನಿರ್ಮಿಸಿರುವುದನ್ನು

ಕಾಣಬಹುದು. ಬಂದೂಕು ಮತ್ತು ಫಿರಂಗಿಗಳ ಒಡೆತವನ್ನು ಸಹಿಸಿಕೊಳ್ಳಲೆಂದೇ ಬಲಿಷ್ಠವಾದ ಮತ್ತು ಭಾರಿಗಾತ್ರದ ಕೈಪಿಡಿಗಳನ್ನು ಗಾರೆ, ಕಲ್ಲು ಮತ್ತು ಇಟ್ಟಿಗೆಗಳಿಂದ ಕಟ್ಟುತ್ತಿದ್ದರು. ಉದಾಹರಣೆಗೆ: ಮಡಿಕೇರಿ, ಮಂಜರಾಬಾದ್ ಕೋಟೆಯ ಕೈಪಿಡಿಗಳ ಮೇಲ್ಭಾಗವು ಇಳಿಜಾರಾಗಿದ್ದು, ೩-೫ ಮೀ. ದಪ್ಪವನ್ನು ಹೊಂದಿವೆ. ಕೈಪಿಡಿಗೋಡೆಯ ಎತ್ತರ ಸುಮಾರು ೫-೬ ಅಡಿಗಳಿವೆ. ಇದು ಟಿಪ್ಪು ಕಾಲದ ಕೋಟೆಯಲ್ಲಿನ ವಿಶೇಷಗಳಲ್ಲಿ ಪ್ರಮುಖವಾದುದಾಗಿದೆ.

### ೩.೨.೫ ಇಳಿಜಾರುಹಾದಿಗಳು (ರ್‍ಯಾಂಪ್)



ಇಳಿಜಾರು ಹಾದಿ, ಬೆಂಗಳೂರು ಕೋಟೆ.

ಹೈದರ್ ಪೂರ್ವದ ಕೋಟೆಗಳಲ್ಲಿ ನೆಲಮಟ್ಟದಿಂದ ಪಹರೆಕಟ್ಟೆಯನ್ನು ಏರಲು ಸಾಮಾನ್ಯವಾಗಿ ಮೆಟ್ಟಿಲುಗಳನ್ನು ಬಳಸುತ್ತಿದ್ದರು. ಆದರೆ ಹೈದರ್ ಮತ್ತು ಟಿಪ್ಪು ಕಾಲದ ಕೋಟೆಗಳಲ್ಲಿ ಇಳಿಜಾರು ಹಾದಿಗಳು ಅಸ್ತಿತ್ವಕ್ಕೆ ಬರುತ್ತವೆ. ಬೆಂಗಳೂರು, ಶಿರಾ, ವೆಲ್ಲೂರು, ಶ್ರೀರಂಗಪಟ್ಟಣ, ಮಂಜರಾಬಾದ್, ದೇವನಹಳ್ಳಿ ಮುಂತಾದ ಕೋಟೆಗಳ ಒಳಾಂಗಣ ಬಾಗಿಲುಗಳ ಪಕ್ಕದಲ್ಲಿಯೇ ಇಳಿಜಾರು ಹಾದಿಗಳಿವೆ. ದೇವನಹಳ್ಳಿಯ ಇಳಿಜಾರು ಹಾದಿ ವಿಶೇಷವಾಗಿದೆ. ಇಲ್ಲಿ ಎರಡು ಹಂತದ ಪಹರೆಕಟ್ಟೆಗಳಿವೆ. ನೆಲಮಟ್ಟದಿಂದ ಮಧ್ಯಮ ಹಂತದ ಪಹರೆಕಟ್ಟೆಗೆ ಏರಲು ಮತ್ತು ಮಧ್ಯಮ ಹಂತದ ಪಹರೆಕಟ್ಟೆಯಿಂದ ಮೇಲಿನ ಹಂತದ ಪಹರೆಕಟ್ಟೆಗೆ ಏರಲು ವಿಶಾಲ ಇಳಿಜಾರು ಹಾದಿಗಳನ್ನು ನಿರ್ಮಿಸಲಾಗಿದೆ. ಬೆಂಗಳೂರಿನ ಇಳಿಜಾರು ಹಾದಿಯು ಸುಮಾರು ೭ ಮೀ. ಅಗಲವಿದೆ. ಸುಮಾರು ೧೬ ಮೀ. ಉದ್ದವಿದೆ. ವೆಲ್ಲೂರಿನ ಕೋಟೆಯಲ್ಲಿರುವ ಇಳಿಜಾರು ಹಾದಿಗಳು ಕೂಡ ಇಷ್ಟೇ ವಿಶಾಲವಾಗಿವೆ. ಬೇಕಲ್ ಕೋಟೆಯ ಮಧ್ಯದಲ್ಲಿರುವ ಬೃಹತ್ ಬತೇರಿಯನ್ನು

ಏರಲು ದೊಡ್ಡ ಇಳಿಜಾರು ಹಾದಿಯನ್ನು ನಿರ್ಮಿಸಲಾಗಿದೆ. ಇದು ಬಹುಶಃ ಟಿಪ್ಪು ಕೋಟೆಗಳಲ್ಲಿಯೇ ಅತಿ ದೊಡ್ಡದಾದ ರ್‍ಯಾಂಪ್ ಎಂದು ಹೇಳಬಹುದು. ಇದು ೨೪.೬ ಮೀ. ಉದ್ದ ಮತ್ತು ೩.೨ ಮೀ. ಅಗಲವಿದೆ. ಕೆಲವು ಕೋಟೆಗಳಲ್ಲಿ ರ್‍ಯಾಂಪನ್ನು ಮಣ್ಣು ಮತ್ತು ಇಟ್ಟಿಗೆಗಳಿಂದ ನಿರ್ಮಿಸಿದ್ದರೆ, ಬಹುತೇಕ ಕಡೆಗಳಲ್ಲಿ ಕಲ್ಲುಗಳಿಂದ ನಿರ್ಮಿಸಿದ್ದಾರೆ.



**ಇಳಿಜಾರು ಹಾದಿ, ಮಡಿಕೇರಿ ಕೋಟೆ.**

**(ಚಿತ್ರಗಳು: ಲೇಖಕರದು)**

**ಉದ್ದೇಶ :** ಬಳಕೆಗೆ ಬಂದ ಭಾರಿ ತೂಕದ ಫಿರಂಗಿಗಳನ್ನು ಮತ್ತು ಅವುಗಳಿಗೆ ಬೇಕಾದ ಮದ್ದುಗುಂಡುಗಳನ್ನು ಕೋಟೆಯ ಮೇಲಕ್ಕೆ ಅಥವಾ ನೆಲಮಟ್ಟದಿಂದ ಕೊತ್ತಳ–ಬತೇರಿಗಳಿಗೆ ಹಾಗೂ ಪಹರೆಕಟ್ಟೆಗೆ ಹೊಯ್ಯಲು ಈ ಇಳಿಜಾರು ಹಾದಿಗಳು ಸಹಕಾರಿಯಾಗಿದ್ದವು. ಏಕೆಂದರೆ, ಭಾರಿ ತೂಕದ ವಸ್ತುಗಳನ್ನು ಬಂಡಿಗಳ ಮೇಲೆ ಪಹರೆಕಟ್ಟೆ ಅಥವಾ ಕೊತ್ತಳ ಹಾಗೂ ಬತೇರಿಗಳಿಗೆ ಸಾಗಿಸುವುದು ಸುಲಭದ ಕೆಲಸವಾಗಿರಲಿಲ್ಲ. ತಾಂತ್ರಿಕ ದೃಷ್ಟಿಯಿಂದ ಈ ಇಳಿಜಾರು ಹಾದಿಗಳನ್ನು ಬಳಕೆಗೆ ತರಲಾಗಿದೆ. ಹೈದರ್ ಮತ್ತು ಟಿಪ್ಪು ಕಾಲದ ಕೋಟೆಗಳಲ್ಲಿ ಇದು ಸಾಮಾನ್ಯ ಲಕ್ಷಣವಾಗಿದೆ.

### ೩.೨.೬ ರಾಕೆಟ್ ಮತ್ತು ತಾರಾಮಂಡಲಗಳು

'ಸಾಕಿ'ಯಂತಹ ಎಡತೀವ್ರವಾದಿ ಇತಿಹಾಸಕಾರರಿಂದ, ಅಬ್ದುಲ್ ಕಲಾಂ ಅವರಂತಹ ಕ್ಷಿಪಣಿ ವಿಜ್ಞಾನಿಗಳು, ರೊದ್ದಂ ನರಸಿಂಹ ಅವರಂತಹ ಖ್ಯಾತ ವಿಜ್ಞಾನಿಗಳು ಕೂಡ ಟಿಪ್ಪುವಿನ ಕಾಲದ ರಾಕೆಟ್ ತಂತ್ರಜ್ಞಾನದ ವಿಚಾರವಾಗಿ ಅಪಾರ ಅಧ್ಯಯನ ನಡೆಸಿದ್ದಾರೆ.

ಏಕೆಂದರೆ ಇಂದು ಆಧುನಿಕ ಜಗತ್ತಿನ ಶಕ್ತಿ ಸಮತೋಲನವು ರಾಕೆಟ್ ತಂತ್ರಜ್ಞಾನದ ಮೇಲೆ ನಿಂತಿದೆ.

ಟಿಪ್ಪು ಸುಲ್ತಾನ್ ಹೊಸ ಹೊಸ ಶಸ್ತ್ರಾಸ್ತ್ರ ಉತ್ಪಾದನೆ ಮತ್ತು ಬಳಕೆಗೆ ಅಪಾರ ಮನ್ನಣೆ ನೀಡಿದ್ದನು. ಅವುಗಳಲ್ಲಿ ಅವನು ಮತ್ತು ಅವನ ತಂದೆ ಹೈದರ್ ಪರಿಚಯಿಸಿದ ಮಹತ್ವದ ಶಸ್ತ್ರಾಸ್ತ್ರ ಎಂದರೆ ರಾಕೆಟ್. ಭಾರತದಲ್ಲಿಯೇ ಮೊಟ್ಟಮೊದಲು ಯುದ್ಧದಲ್ಲಿ ರಾಕೆಟ್ ಬಳಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಆ ಮೂಲಕ ಯುದ್ಧದಲ್ಲಿ ಬಳಸುವ ರಾಕೆಟನ್ನು ಅಭಿವೃದ್ಧಿಪಡಿಸಿದ ಕೀರ್ತಿ ಭಾರತೀಯರಿಗೆ ಸಲ್ಲುತ್ತದೆ. ಸೆಪ್ಟೆಂಬರ್ ೧೦, ೧೭೮೦ರಲ್ಲಿ ಪೊಲ್ಲಿಲೂರು ಕದನದಲ್ಲಿ ಹೈದರ್ ಮತ್ತು ಟಿಪ್ಪು ನೇತೃತ್ವದ ಮೈಸೂರು ಸೈನ್ಯವು ಕಂಪನಿ ಕಮೆಂಡರ್ ಕೊಲೊನಲ್ ಬೈಲಿಯನ್ನು ಮುಖಾಮುಖಿಯಾಯಿತು. ನಿರ್ಣಾಯಕವಾದ ಈ ಕದನದಲ್ಲಿ ಬ್ರಿಟಿಷರ ಮದ್ದುಗುಂಡಿನ ಸಾಗಾಣೆ ಬಂಡಿಗಳ ಮೇಲೆ ಮೈಸೂರು ಸೇನೆಯು ರಾಕೆಟ್ ಧಾಳಿಯನ್ನು ನಡೆಸಿತು. ಬೆಂಕಿಯನ್ನು ಉಗುಳುತ್ತಾ ತೂರಿಬರುವ ಅಪರಿಚಿತ ಅಸ್ತ್ರಗಳಿಂದ ಕಂಪನಿ ಸೈನ್ಯ ಕಂಗಾಲಾಯಿತು. ಸೈನ್ಯದೊಳಗೆ ಗೊಂದಲ ಶುರುವಿಟ್ಟಿತು. ಅಂತಿಮವಾಗಿ ರಾಕೆಟ್ ಧಾಳಿಯ ಪರಿಣಾಮವಾಗಿ ಕಂಪನಿಯ ಸೈನ್ಯವು ಕಾಲ್ಕಿತ್ತಿತು. ಕೆನೆಥ್ ಮ್ಯಾಕ್ಸೆ ಹೇಳುವಂತೆ: ೧೭೮೦ ರಲ್ಲಿ ಬ್ರಿಟಿಷರ ವಿರುದ್ಧ ಮೈಸೂರಿನ ಹೈದರಾಲಿಯು ಮೊದಲ ಪ್ರಯೋಗಿಕ ರಾಕೆಟ್ ಕ್ಷಿಪಣಿಯನ್ನು ಬಳಸಿದನು. ರಾಕೆಟ್‌ಗಳನ್ನು ೧೭೬೭ ರ ಹೊತ್ತಿಗಾಗಲೇ ಬಳಸಲಾಗಿತ್ತೆಂದೂ ತಿಳಿದು ಬರುತ್ತದೆ (ಸಾಕಿ ೧೯೯೮: ೩೮೩).

೧೭೯೯ರಲ್ಲಿ ಶ್ರೀರಂಗಪಟ್ಟಣದ ಪತನದ ಸಂದರ್ಭದಲ್ಲಿಯೂ ಕೂಡ ಟಿಪ್ಪುವಿನ ರಾಕೆಟ್ ಧಾಳಿಯು ಬ್ರಿಟಿಷರನ್ನು ಆತಂಕಕ್ಕೀಡು ಮಾಡಿತು. ಏಪ್ರಿಲ್ ೬, ೧೭೯೯ರ ರಾತ್ರಿ ಕಲೊನಲ್ ಅರ್ಥರ್ ವೆಲ್ಲೆಸ್ಲಿಯ ನೇತೃತ್ವದ ಕಂಪನಿ ಸೇನಾಪಡೆ ಶ್ರೀರಂಗಪಟ್ಟಣದ ಕೋಟೆಯ ಹೊರಗೆ ಮಾವಿನ ತೋಪಿನಲ್ಲಿ ಬೀಡುಬಿಟ್ಟಿತ್ತು. ಈ ವೇಳೆ ಟಿಪ್ಪುವು ರಾಕೆಟ್ ಧಾಳಿ ನಡೆಸಿದನು. ಈ ಧಾಳಿಗೆ ಅನೇಕ ಕಂಪನಿ ಸೈನಿಕರು ಅಸುನೀಗಿದರು. ಈ ಘಟನೆಗೆ ಸಾಕ್ಷಿಯಾದ ಮೇಜರ್ ಷೇ ಹೀಗೆ ದಾಖಲಿಸುತ್ತಾನೆ. “ವೆಲ್ಲೆಸ್ಲಿಯು ಹೃದಯವನ್ನೆ ಕಳೆದುಕೊಂಡನು ಮತ್ತು ಯುದ್ಧ ಭೂಮಿಯಿಂದ ಓಡಿ ಹೋದನು”. ಆದರೆ ವಿಧಿಯಾಟವೇ ಬೇರೆಯಾಗಿತ್ತು. ಮೇ ೨ ರಂದು ನಡೆಯುತ್ತಿದ್ದ ಭೀಕರ ಹಣಾಹಣಿಯಲ್ಲಿ ಕಂಪನಿ ಸೈನಿಕನೊಬ್ಬನ ಗುಂಡೇಟಿನಿಂದಾಗಿ ಶ್ರೀರಂಗಪಟ್ಟಣದ ಕೋಟೆಯೊಳಗಿಟ್ಟಿದ್ದ ರಾಕೆಟ್ ದಾಸ್ತಾನಿಗೆ ಬೆಂಕಿಬಿದ್ದು ಸ್ಫೋಟಗೊಂಡಿತು. ಭಾರಿ ಕಪ್ಪುಮೋಡ ಎದ್ದಿತು. ಕಣ್ಣು ಕೋರೈಸುವ ಬಿಳಿಬಣ್ಣ ಹಂತಹಂತವಾಗಿ ಚಿಮ್ಮುತ್ತಿತ್ತು. ಈ ಘಟನೆಯಲ್ಲಿ ಟಿಪ್ಪುವಿನ ಕೆಲವು ಸೈನಿಕರು ಸಾವನ್ನಪ್ಪಿರುವುದುಂಟು. ಅಂತಿಮವಾಗಿ

ಮೇ ೪, ೧೭೯೯ ರಂದು ತನ್ನ ಕೋಟೆಯ ರಕ್ಷಣೆಗಾಗಿ ಹೋರಾಡುತ್ತಲೇ ಟಿಪ್ಪುವು ಮರಣವನ್ನಪ್ಪಿದನು (ರೊಡ್ಡಂ ೧೯೯೯: ೧೨೩; ಬಾಲಸುಬ್ರಮಣಿಯನ್ ೨೦೦೮: ೩೧೧; ದಾಸ್ ೨೦೧೧: ೬–೮).




“ಬರುತಿದೆ ಮಾನ್ಸೂನ್ ಅಥವಾ ಶ್ರೀರಂಗಪಟ್ಟಣದಿಂದ ಹಿಮ್ಮೆಟ್ಟು” ಶೀರ್ಷಿಕೆಯಲ್ಲಿ ಜೇಮ್ಸ್ ಗಿಲ್‌ರೇ ರಚಿಸಿರುವ ವರ್ಣಚಿತ್ರ (೧೭೯೧). ಈ ಚಿತ್ರದಲ್ಲಿ ಕಂಪನಿ ಸೇನೆ ಮತ್ತು ದಂಡನಾಯಕ ಕಾರನ್‌ವಾಲಿಸ್ ಟಿಪ್ಪುವಿನ ಫಿರಂಗಿ ಮತ್ತು ರಾಕೆಟ್ ಧಾಳಿಗೆ ಹಿಮ್ಮೆಟ್ಟಿ ಓಡುತ್ತಿರುವುದು.



ರಾಕೆಟ್ ಉಡಾಯಿಸುತ್ತಿರುವ ಭಾರತೀಯ ಸಿಪಾಯಿ. ವಿಕ್ಟೋರಿಯ ಮೆಮೋರಿಯಲ್ ಮ್ಯೂಸಿಯಂ, ಕಲ್ಕತ್ತಾದಲ್ಲಿ ಸಂರಕ್ಷಿಸಿ ಇಡಲಾಗಿರುವ ೧೮ನೇ ಶತಮಾನದಲ್ಲಿ ಜೇಮ್ಸ್ ಹಂಟರ್ ರಚಿಸಿದ ಜಲವರ್ಣಚಿತ್ರ



**ರಾಕೆಟ್ ಜೊತೆಗೆ ಬಾಣದಾಳು**
**(ಚಿತ್ರರಚನೆ: ರಾಬರ್ಟ್ ಹೋಮ್).**

**ರಾಕೆಟಿನ ಇತಿಹಾಸ**

ಮದ್ದಿನ ಪುಡಿಯನ್ನು ಬಳಸಿ ಪ್ರಯೋಗಿಸುವ ಬಾಣದ ಬಳಕೆ ಭಾರತಕ್ಕೆ ಬಂದಿದ್ದು ಚೀನಾ ದೇಶದಿಂದ. ೧೩ನೆಯ ಶತಮಾನದಲ್ಲಿ ಚೀನಿಯರು ಈ ರಾಕೆಟ್ ಮಾದರಿಯ ಶಸ್ತ್ರಾಸ್ತ್ರವನ್ನು ಬಳಸಿದರು. ಇದು ಡೆಖನ್ ಮೂಲಕ ಭಾರತದಲ್ಲಿ ಪರಿಚಯಗೊಂಡಿತು. ಅಕ್ಬರನ ತೋಪುಖಾನೆಯಲ್ಲಿ ರಾಕೆಟ್‌ಗಳು ಇದ್ದವೆಂದು ಅಬುಲ್ ಫಜಲ್‌ನ ಬರಣಿಗೆಯಿಂದ ತಿಳಿದು ಬರುತ್ತದೆ. ಭಾರತೀಯ ಸೇನೆಯೊಳಗೆ ವ್ಯಾಪಕವಾಗಿ 'ಬಾಣ' ಎಂಬುದು ಪ್ರಯೋಗಕ್ಕೆ ಬಂದಿತು.[೮] ಯೂರೋಪಿನಲ್ಲಿ ಮುರಟೋರಿ ಎಂಬ ಇಟಾಲಿಯ ವ್ಯಕ್ತಿಯು ೧೩೭೯ರಲ್ಲಿ ಸಿಡಿಮದ್ದಿನಿಂದ ಕೂಡಿದ 'ಬೆಂಕಿ ಬಾಣ' ಹೆಸರಿನಲ್ಲಿ ರಾಕೆಟ್ ಬಳಸಿದ. ಆದರೆ ಅದು ಯುದ್ಧದಲ್ಲಿ ಜನಪ್ರಿಯವಾಗಲಿಲ್ಲ ಎಂದು ಬಾಲಸುಬ್ರಮಣಿಯನ್ ಅವರು ದಾಖಲಿಸುತ್ತಾರೆ. ಅಲ್ಲದೆ, ಟಿಪ್ಪು ಪೂರ್ವದಲ್ಲಿ (ಮಧ್ಯಕಾಲೀನ ಸಂದರ್ಭದಿಂದ) ರಾಕೆಟ್‌ನ ಬಳಕೆಯಿದ್ದ ಕುರಿತು ಸಹ ಬೆಳಕು ಚೆಲ್ಲುತ್ತಾರೆ (ಬಾಲಸುಬ್ರಮಣಿಯನ್ ೨೦೦೮: ೩೧೧–೩೧೫).

ರಾಕೆಟ್‌ನ ಪ್ರಾಚೀನತೆ ಕುರಿತು ಹೇಳುವುದಾದರೆ ಕ್ರಿ.ಶ. ೧೦೪೪ರಲ್ಲಿ ಚೀನಾದ ವು-ಚಿಂಗ್ ತ್ಸುಂಗ್-ಯೋ ಎಂಬಾತನು ಮೊದಲು ಸಿಡಿಮದ್ದಿನ ಪುಡಿಯನ್ನು ಕಂಡು ಹಿಡಿದನು. ಕ್ರಿ.ಶ. ೧೨೩೨ರಲ್ಲಿ ಕೈ-ಕೆಂಗ್ ಯುದ್ಧದಲ್ಲಿ ಮಂಗೋಲರ ವಿರುದ್ಧ ಮೊಟ್ಟಮೊದಲ ಬಾರಿಗೆ ಚೀನಿಯರು ರಾಕೆಟ್‌ಗಳನ್ನು ಬಳಸಿದರು. ಯುದ್ಧದ ನಂತರ ಮಂಗೋಲರು ಕೂಡ ತಮ್ಮದೇ ಆದ ರಾಕೆಟ್‌ಗಳನ್ನು ನಿರ್ಮಿಸಿದರು. ಅಷ್ಟೇ ಅಲ್ಲ, ಈ ತಂತ್ರಜ್ಞಾನವನ್ನು ಯೂರೋಪಿನ ಕಡೆಗೂ ಪ್ರಸಾರ ಮಾಡಿದರು. ಇದೇ ಸಂದರ್ಭದಲ್ಲಿ ಅರಬ್ಬರಿಗೂ ಪರಿಚಯಗೊಂಡಿದ್ದರಿಂದ ಕ್ರಿ.ಶ. ೧೨೮೦ರ ಅರೆಬಿಕ್ ಕೃತಿಗಳು ಸಿಡಿಮದ್ದು ಮತ್ತು ಚೀನಾದ ರಾಕೆಟ್‌ಗಳನ್ನು ಕುರಿತು ಉಲ್ಲೇಖಿಸುತ್ತವೆ. ಕ್ರಿ.ಶ. ೧೪೦೦ರ ಸಮಯಕ್ಕೆ ಸಿಡಿಮದ್ದು ಭಾರತಕ್ಕೆ ಬಂದಿತು. ಅಗ್ನಿಚೂರ್ಣ (ಸಿಡಿಮದ್ದು), ಅಗ್ನಿಬಾಣ (ರಾಕೆಟ್) ಮತ್ತು ಅಗ್ನಿಕ್ರೀಡಾ (ಸಿಡಿಮದ್ದಿನ ವಸ್ತುಗಳು) ಕುರಿತು ಅನೇಕ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ. ಕ್ರಿ.ಶ. ೧೭೮೦-೯೯ರವರೆಗೆ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ರಾಕೆಟ್‌ಗಳನ್ನು ಬಳಸಿದರು (ದಾಸ್ ೨೦೧೧: ೨-೪; ಟೈಮ್ಸ್ ಆಫ್ ಇಂಡಿಯಾ, ೧೮.೧೧.೨೦೦೭).

ಮೈಸೂರಿಗೆ ರಾಕೆಟ್‌ಗಳ ಪರಿಚಯ ಮತ್ತು ಬಳಕೆ: ೧೩ನೆಯ ಶತಮಾನದಲ್ಲಿ ಚೀನಿಯರು ಯುದ್ಧದಲ್ಲಿ ಬಳಸಿದ ರಾಕೆಟ್‌ಗಳನ್ನು ತಯಾರಿಸುವ ವಿಧಾನ ವಿಶಿಷ್ಟವಾಗಿತ್ತು. ಅವರು ಹಳದಿ ಬಣ್ಣದ ೧೬ ಮಡಿಕೆಗಳ ಕಾಗದವನ್ನು ೨ ಅಡಿಗಳ ಉದ್ದದ ನಳಿಗೆಯಂತೆ ಸುತ್ತುತ್ತಿದ್ದರು. ಇದ್ದಿಲು, ಕಬ್ಬಿಣ, ಪೋರ್ಸೆಲೈನ್, ಸಲ್ಫರ್, ಆರ್ಸೆನಿಕ್ ಮುಂತಾದವುಗಳ ಪುಡಿಯನ್ನು ತುಂಬಿ, ಅದನ್ನು ಉದ್ದದ ಕಡ್ಡಿಗೆ ಬೆತ್ತಕ್ಕೆ ಸುತ್ತಿ ಬಳಸುತ್ತಿದ್ದರು. ಮುಂದಿನ ಹಂತದಲ್ಲಿ ಎರಡು ಗಿಣ್ಣುಗಳಿರುವಂತೆ ಬಿದಿರಿನ ಬೊಂಬನ್ನು ಕತ್ತರಿಸಿ, ಒಂದು ಬದಿಗೆ ತೂತನ್ನ ಕೊರೆದು ಅದಕ್ಕೆ ಸಿಡಿಮದ್ದನ್ನು ತುಂಬುತ್ತಿದ್ದರು. ನಂತರ ಅದನ್ನು ಬೆತ್ತವೊಂದಕ್ಕೆ ಕಟ್ಟಿ ಉಡಾಯಿಸುತ್ತಿದ್ದರು. ಆದರೆ, ಸುಧಾರಿತ ಮಾದರಿಯ ರಾಕೆಟ್‌ಗಳನ್ನು ಭಾರತೀಯರು ಬಳಕೆಗೆ ತಂದರು.

ಆರ್ಕಾಟಿನ ಸೇವೆಯಲ್ಲಿದ್ದ ಸಂದರ್ಭದಲ್ಲಿ ರಾಕೆಟ್ ಬಳಕೆಯ ತಂತ್ರಜ್ಞಾನವನ್ನು ಹೈದರಾಲಿಯು ಕಲಿತಿರಬೇಕು ಅಥವಾ ಟಿಪ್ಪುವು ಚೀನಾ ಜೊತೆಗೆ ವ್ಯಾಪಾರ ಹೊಂದಿದ ಸಂದರ್ಭದಲ್ಲಿ ರಾಕೆಟ್‌ನ ಪರಿಚಯವಾಗಿರಬಹುದು ಎಂದು ಹೇಳಲಾಗುತ್ತದೆ. ಆದರೆ, ೧೭೬೭ ರ ಹೊತ್ತಿಗಾಗಲೇ ರಾಕೆಟ್‌ನ ಪರಿಚಯ ಹೈದರನಿಗೆ ಇದ್ದಕಾರಣ ಅದನ್ನು ಅವನೇ ಅಭಿವೃದ್ಧಿಪಡಿಸಿರುವಂತೆ ಕಾಣುತ್ತದೆ. ಆದರೆ, ಟಿಪ್ಪು ಸುಲ್ತಾನನ ಆಳ್ವಿಕೆಯ ಸಂದರ್ಭದಲ್ಲಿ ರಾಕೆಟ್ ವಿನ್ಯಾಸದಲ್ಲಿ ಕೆಲವೊಂದು ಬದಲಾವಣೆಗಳನ್ನು ಕಂಡಿತು. ಕೊಳವೆ ವ್ಯಾಸವನ್ನು ಕಡಿಮೆ ಮಾಡಲಾಯಿತು ಮತ್ತು ಅದರ ಉದ್ದವನ್ನು ಹೆಚ್ಚಿಸಲಾಯಿತು.

ಇದರ ಉದ್ದೇಶ ದೂರಗಾಮಿ ಗಮ್ಯಸ್ಥಾನವನ್ನು ತಲುಪುವಂತೆ ಮಾಡುವುದಾಗಿತ್ತು. ಟಿಪ್ಪು ಮಾದರಿಯ ರಾಕೆಟ್‌ನ ನಳಿಗೆಯು ೧೨ ಇಂಚು ಉದ್ದ ಮತ್ತು ಒಂದು ಇಂಚು ವ್ಯಾಸ ಮತ್ತು ಕಡ್ಡಿಯ ಉದ್ದ ೧೨ ಅಡಿಗಳು. ನಳಿಗೆಯನ್ನು ಸ್ಟೀಲ್‌ನಿಂದ ಮಾಡಿಸಲಾಯಿತು. ೧ ಕೆ.ಜಿ. ಸಿಡಿಮದ್ದನ್ನು ಒಳಗೊಂಡ ರಾಕೆಟ್‌ನ ತೂಕ ೨ ಕೆ.ಜಿ.ಗಳು. ಬಹುತೇಕ ರಾಕೆಟ್‌ಗಳು ಸ್ಫೋಟಿಸುತ್ತಿದ್ದವು. ಇತರ ಕೆಲವು ರಾಕೆಟ್‌ಗಳ ತುದಿಯ ಮೊನೆಯು ಅರಿತವಾಗಿರುತ್ತಿತ್ತು. ಮತ್ತೆ ಕೆಲವು ರಾಕೆಟ್‌ಗಳ ತುದಿಯು ತೀಕ್ಷ್ಣವಾಗಿ ಇರಿಯುತ್ತಿತ್ತು. ಗಾಳಿಯು ಜ್ವಾಲೆಯಾಗಿ ಹೊತ್ತಿಯುರಿಯಲು ನೆರವಾಗುತ್ತಿತ್ತು (ಮೊಹಮ್ಮದ್ ೧೮೫೫: ೧೫೮; ಬಾಲಸುಬ್ರಮಣಿಯನ್ ೨೦೦೮: ೩೧೯; ಸಾಕಿ ೧೯೯೮: ೩೮೩-೮೪).

ಉತ್ತಮ ಕಬ್ಬಿಣದಿಂದ ಮಾಡಿದ ಕೊಳವೆಗಳನ್ನು ಬಳಸಿ ರಾಕೆಟ್‌ಗಳನ್ನು ತಯಾರಿಸುತ್ತಿದ್ದ ಕಾರಣ ಭಾರತೀಯ ರಾಕೆಟ್‌ಗಳು ಯುದ್ಧದಲ್ಲಿ ಯಶಸ್ವಿಯಾದವು. ಕಬ್ಬಿಣದ ಕೊಳವೆಗಳನ್ನು ೧೦-೧೨ ಅಡಿ ಉದ್ದದ ಬಿದಿರಿನ ಬೆತ್ತಕ್ಕೆ ಬಿಗಿಯಲಾಗುತ್ತಿತ್ತು. ನಂತರ ಕೊಳವೆಯನ್ನು ಮದ್ದಿನಿಂದ ತುಂಬಲಾಗುತ್ತಿತ್ತು. ಅವುಗಳಿಗೆ ಬೆಂಕಿ ಇಟ್ಟು ಕೈಯಿಂದಲೇ ಹಾರಿಸಲಾಗುತ್ತಿತ್ತು. ಬೆಂಕಿಯ ಬಾಣದಂತೆ ಹಾರುತ್ತಿದ್ದ ಈ ರಾಕೆಟ್‌ಗಳು ಒಂದು ಕಿ.ಮೀ. ದೂರ ಕ್ರಮಿಸುತ್ತಿದ್ದವು ಎಂದು ಬಾಲಸುಬ್ರಮಣಿಯನ್ ಅವರು ಅಭಿಪ್ರಾಯಪಟ್ಟರೆ, ಟಿಪ್ಪುವಿನ ರಾಕೆಟ್ ಬಗೆಗೆ ವಿಶೇಷ ಅಧ್ಯಯನ ನಡೆಸಿರುವ ವಿಜ್ಞಾನಿ ರೊದ್ದಂ ನರಸಿಂಹ ಅವರು ೨.೪ ಕಿ.ಮೀ. ವರೆಗೆ ಸಾಗುತ್ತಿತ್ತು ಎಂದಿದ್ದಾರೆ. ಅಲ್ಲದೆ ಟಿಪ್ಪುವಿನ ಸೈನ್ಯದಲ್ಲಿ ೫,೦೦೦ ರಾಕೆಟ್ ಆಳುಗಳಿದ್ದರು. ಇವರು ರಾಕೆಟ್‌ನ ಗಾತ್ರ ಮತ್ತು ಗುರಿಯ ದೂರದ ಮೇಲೆ ರಾಕೆಟ್ ಉಡಾಯಿಸುವ ಎತ್ತರವನ್ನು ನಿಗದಿಪಡಿಸುವ ಕೌಶಲ್ಯ ಅವರಲ್ಲಿತ್ತು. ಮೂಖಿಯನ್ನು ಎತ್ತಿದ ಬಂಡಿಗಳನ್ನೆ ಉಡಾವಣೆಯ ರ್‍ಯಾಂಪ್‌ಗಳನ್ನಾಗಿ ಮಾಡಿಕೊಂಡು ಶೀಘ್ರದಲ್ಲಿಯೇ ಉಡಾಯಿಸಿಬಿಡುತ್ತಿದ್ದರು (ಮೊಹಮ್ಮದ್ ೧೮೫೫: ೧೫೮; ರೊದ್ದಂ ೧೯೯೯: ೧೨೩; ಬಾಲಸುಬ್ರಮಣಿಯನ್ ೨೦೦೮: ೩೧೫-೧೬:).

ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧದ (೧೭೯೯) ತರುವಾಯ ಕಂಪನಿ ಸೇನೆಯು ಶ್ರೀರಂಗಪಟ್ಟಣ ಸಮೀಪದ ತುರುಕನಹಳ್ಳಿಯ ಮತಾಪು ಕಾರ್ಖಾನೆಯಲ್ಲಿ ೭೦೦ ರಾಕೆಟ್‌ಗಳನ್ನು ವಶಪಡಿಸಿಕೊಂಡಿತು. ಅವುಗಳಲ್ಲಿ ಎರಡನ್ನು ರಾಯಲ್ ಆರ್ಟಿಲರಿ ಮ್ಯೂಸಿಯಂ, ಇಂಗ್ಲೇಂಡ್‌ನಲ್ಲಿ ಇರಿಸಲಾಗಿದೆ. ಇವುಗಳಲ್ಲಿ ಒಂದು ರಾಕೆಟ್‌ನ ಕೊಳವೆಯು ೫.೮ ಸೆಂ.ಮೀ. ವ್ಯಾಸವನ್ನು ಮತ್ತು ೨೫.೪ ಸೆಂ.ಮೀ. ಉದ್ದವನ್ನು ಹೊಂದಿದೆ. ಕೊಳವೆಯನ್ನು ೧.೦೨ ಮೀ. ಉದ್ದದ ಲೋಹದ ಕತ್ತಿಯೊಂದಕ್ಕೆ

ಬಿಗಿಯಲಾಗಿದೆ. ಮತ್ತೊಂದು ೩.೭ ಸೆ.ಮೀ. ವ್ಯಾಸ ಮತ್ತು ೨೦ ಸೆ.ಮೀ. ಕೊಳವೆಯನ್ನು ಹೊಂದಿದೆ. ಅದನ್ನು ೧.೯ ಮೀ. ಉದ್ದದ ಬಿದಿರಿನ ಬೆತ್ತಕ್ಕೆ ಬಿಗಿಯಲಾಗಿದೆ (ಬಾಲಸುಬ್ರಮಣಿಯನ್ ೨೦೦೮: ೩೧೬).

ಸಿಮೊನ್ ವೆರ್ರೆಟ್ ಅವರು ಟಿಪ್ಪು ಕಾಲದಲ್ಲಿ ನಿರ್ಮಿಸುತ್ತಿದ್ದ ರಾಕೆಟ್‌ಗಳನ್ನು ಕುರಿತು ಹೀಗೆ ದಾಖಲಿಸುತ್ತಾರೆ:

> *೧೬ನೆಯ ಶತಮಾನದ ಭಾರತದಲ್ಲಿ ಸೈನ್ಯದಲ್ಲಿ ಬಳಸುವ ರಾಕೆಟ್‌ಗಳು ವಿಕಾಸ ಹೊಂದಿದವು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಆಧೀನದಲ್ಲಿ ಪ್ರಾಯಶಃ ಸಂಸ್ಥಾನದ ಉತ್ತರ ಭಾಗದಲ್ಲಿರುವ ತೀರ್ಥಹಳ್ಳಿಯ್ ಕೋಟೆಯಲ್ಲಿ ಉತ್ಪಾದನೆಯು ಹೆಚ್ಚಿತು. ಭಾರತೀಯ ಯುದ್ಧದ ರಾಕೆಟ್‌ಗಳು ಮೃದುವಾದ ಸುತ್ತಿಗೆಯ ಕಬ್ಬಿಣದ ಕೊಳವೆಯನ್ನು ಒಳಗೊಂಡಿದೆ. ಇದು ೮ ಇಂಚು ಉದ್ದ ಮತ್ತು ೬-೧೨ ಪೌಂಡ್ ತೂಗುತ್ತಿತ್ತು. ಒಂದು ಅಥವಾ ಎರಡು ಪೌಂಡ್‌ಗಳ ಸಿಡಿಮದ್ದನ್ನು ತುಂಬಲಾಗುತ್ತಿತ್ತು. ಕೊಳವೆಯನ್ನು ಬಿದಿರಿನ ಕೋಲಿಗೆ ಅಥವಾ ಸ್ಟೀಲ್ ಕತ್ತಿಯ ದಬ್ಬೆಗೆ ಸೇರಿಸಿ ಬಿಗಿಯಲಾಗುತ್ತಿತ್ತು (೨೦೧೨: ೬೦೧-೬೦೨).*

ಟಿಪ್ಪು ಕಾಲದಲ್ಲಿ ಎರಡು ಪ್ರಕಾರದ ರಾಕೆಟ್‌ಗಳನ್ನು ತಯಾರಿಸುತ್ತಿದ್ದರು. ಅವುಗಳೆಂದರೆ:

೧. ಆಕಾಶ ಬಾಣ (ಸ್ಕೈ ರಾಕೆಟ್)

೨. ಭೂ ಬಾಣ (ಗ್ರೌಂಡ್ ರಾಕೆಟ್)

**ವಿಲಿಯಂ ಕಾಂಗ್ರೇವ್ಸ್ ತಯಾರಿಸಿದ ರಾಕೆಟ್‌ನ ಸರಣಿಗಳು**

ರಾಕೆಟ್‌ನ ಕಬ್ಬಿಣದ ನಳಿಗೆಯ ಉದ್ದ ಒಂದು ಅಡಿ ಮತ್ತು ನಳಿಗೆಯ ವ್ಯಾಸ ಒಂದು ಇಂಚು. ೧೦-೧೨ ಅಡಿಗಳ ಉದ್ದದ ಬಿದಿರಿನ ಕೋಲಿಗೆ ಮದ್ದು ತುಂಬಿದ ನಳಿಗೆಯನ್ನು ಬಿಗಿಯಾಗಿ ಕಟ್ಟಿ ಹಾರಿಸಲಾಗುತ್ತಿತ್ತು. ಈ ರಾಕೆಟ್‌ಗಳು ಭಾರಿ ಸದ್ದು ಮಾಡುತ್ತಾ ಶತ್ರುಗಳ ಪಾಳೆಯದ ಮೇಲೆ ಬೀಳುತ್ತಿದ್ದವು. ಈ ರಾಕೆಟ್‌ಗಳಲ್ಲಿ ವಾಯು ಮಾರ್ಗವಾಗಿ ಬಾಣಗಳಂತೆ ಹೋಗುವ ರಾಕೆಟ್‌ಗಳನ್ನು ಆಕಾಶ ಬಾಣ ಎಂತಲೂ, ಭೂಮಿಯ ಮೇಲೆ ಹಾವಿನಂತೆ ಅಂಕುಡೊಂಕಾಗಿ ಸಾಗುವ ರಾಕೆಟ್‌ಗಳನ್ನು ಭೂ ಬಾಣ ಅಂತಲೂ ಕೆರೆಯುತ್ತಿದ್ದರು (ಖಾನ್ ೨೦೦೭: ೧೬೮).

**ಟಿಪ್ಪುವಿನ ರಾಕೆಟ್‌ಗಳಿಂದ ಪ್ರಭಾವಿತರಾದ ಬ್ರಿಟಿಷರು**

ಟಿಪ್ಪು ಸುಲ್ತಾನನು ಬಳಸಿದ ರಾಕೆಟ್‌ಗಳನ್ನು ಅಂತಿಮವಾಗಿ ವಿಲಿಯಂ ಕಾಂಗ್ರೀವ್ಸ್ ನಕಲು ಮಾಡಿ ಯೂರೋಪಿನಲ್ಲಿ ರಾಕೆಟ್ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸಿದನು. ಅನೇಕ ಭಾರತೀಯ ರಾಕೆಟ್‌ಗಳನ್ನು ಇಂಗ್ಲೆಂಡಿಗೆ ಕೊಂಡೊಯ್ದು ವಿಶ್ಲೇಷಿಸಲಾಯಿತು.

೧೮೦೧–೦೨ರಲ್ಲಿ ಲಂಡನ್ನಿನಲ್ಲಿ ದೊರೆಯುವ ಅತಿದೊಡ್ಡ ರಾಕೆಟ್ ಕೂಡ ಮೈಸೂರಿನ ರಾಕೆಟಿನ ಅರ್ಧದಷ್ಟು ದೂರ ಕ್ರಮಿಸುವುದಿಲ್ಲ ಎಂದು ದೃಢಪಡಿಸಿದನು. ಇದರಿಂದ ಅತ್ಯುನ್ನತ ಗುಣಮಟ್ಟದ ರಾಕೆಟ್ ತಂತ್ರಜ್ಞಾನ ಭಾರತೀಯರದಾಗಿತ್ತು ಎಂಬುದು ತಿಳಿಯುತ್ತದೆ. ಊಲ್ವಿಚ್ ಅರ್ಸೆನಲ್‌ನಲ್ಲಿರುವ ರಾಯಲ್ ಪ್ರಯೋಗಾಲಯದಲ್ಲಿ ಕಾಂಗ್ರೀವ್ಸ್ ಪರೀಕ್ಷಿಸಿ, ಅನೇಕ ಪ್ರಕಾರದ ಪ್ರೊಪೆಲೆಂಟ್‌ಗಳ (ನೂಕುಬಲದ) ಸಂಯೋಜನೆಗಳನ್ನು ಮಾಡಿ, ಕಬ್ಬಿಣದ ಕವಚವುಳ್ಳ ರಾಕೆಟ್ ಸರಣಿಗಳನ್ನು ಸಿದ್ಧಪಡಿಸಿದನು. ಕಾಂಗ್ರೇವ್ಸ್‌ನ ಪ್ರಸಿದ್ಧ ರಾಕೆಟ್ ಮೊದಲು ಬಳಕೆಯಾಗಿದ್ದು ೧೮೦೬ರಲ್ಲಿ ಬೋಲೋನ ವಿರುದ್ಧ. ಪರಿಣಾಮವಾಗಿ ನೆಪೋಲಿಯನ್ನನ ಆಕ್ರಮಣದ ಯೋಜನೆಯನ್ನು ವಿಫಲಗೊಳಿಸಲಾಯಿತು. ಈ ಯಶಸ್ಸಿನಿಂದ ಯುರೋಪಿನಲ್ಲಿ ನಡೆದ ಯುದ್ಧಗಳಲ್ಲಿ ರಾಕೆಟ್ ಬಳಕೆ ಆರಂಭವಾಯಿತು (ರೊದ್ದಂ ೧೯೯೯: ೧೨೩; ಬಾಲಸುಬ್ರಮಣಿಯನ್ ೨೦೦೮: ೩೧೮).



ವಿಲಿಯಂ ಕಾಂಗ್ರೇವ್ಸ್ ತಯಾರಿಸಿದ ರಾಕೆಟ್‌ನ ಸರಣಿಗಳು

ಟಿಪ್ಪುವು ರಾಕೆಟ್ ಬಗೆಗೆ ತುಂಬಾ ಆಸಕ್ತಿ ಹೊಂದಿದ್ದನು. ಅವನು ಸಿಂಹಾಸನಕ್ಕೆ ಬಂದ ನಂತರ (೧೭೮೩) ರಾಕೆಟ್‌ನ ಬಳಕೆಯನ್ನು ಹೆಚ್ಚಿಸಿದನು. ಕೆಲವು ರಾಕೆಟ್‌ಗಳನ್ನು ಆಟ್ಟೋಮನ್ ಸುಲ್ತಾನನಿಗೂ ಸಹ ಕಳುಹಿಸಿ ಕೊಟ್ಟಿದ್ದನು. ೧೭೮೬ರಲ್ಲಿ ಟಿಪ್ಪುವಿನ ಸೈನ್ಯದಲ್ಲಿದ್ದ ಒಟ್ಟು ಬಾಣದಾಳುಗಳ ಸಂಖ್ಯೆ ೫೦೦೦. ೧೭೯೩ರಲ್ಲಿ ದಾಖಲಾಗಿರುವಂತೆ ಪ್ರತಿಯೊಂದು ಪದಾತಿದಳದ 'ಕುಶುನ್' (ತುಕಡಿ)ಗಳು ೧೩೯೨ ಸೈನಿಕರನ್ನು ಮತ್ತು ಒಬ್ಬ ಬಾಣದಾಳುವನ್ನು ಒಳಗೊಂಡಿರಬೇಕಿತ್ತು.[೧೧] ಟಿಪ್ಪು ಕೂಡ ಶತ್ರುಗಳ ಮೇಲೆ ಮಿಂಚಿನ ಧಾಳಿ ನಡೆಸುವಾಗ ಕುದುರೆಯ ಮೇಲೆ ಕುಳಿತು ರಾಕೆಟ್‌ಗಳನ್ನು ಬಳಸುತ್ತಿದ್ದನು (ಬಾಲಸುಬ್ರಮಣಿಯನ್ ೨೦೦೮: ೩೧೯).

**ನಾಸಾದಲ್ಲಿ ಕಲಾಂ ಕಂಡ ಚಿತ್ರಪಟ**

ಒಮ್ಮೆ ಮಾಜಿ ರಾಷ್ಟ್ರಪತಿಗಳೂ, 'ಕ್ಷಿಪಣಿ ವಿಜ್ಞಾನಿ' ಅಬ್ದುಲ್ ಕಲಾಂ ಅವರು ನಾಸಾಗೆ ಭೇಟಿ ನೀಡಿದಾಗ ಕರಿಯ ಜನರು ರಾಕೆಟನ್ನು ಪ್ರಯೋಗಿಸುತ್ತಿರುವ ಚಿತ್ರವೊಂದನ್ನು ಗಮನಿಸಿ ಸನಿಹವಾಗಿ ನೋಡಿ ಅಚ್ಚರಿಗೊಂಡರಂತೆ. ಕಾರಣ ಟಿಪ್ಪುವಿನ ಸೈನಿಕರು ಬ್ರಿಟಿಷರ ವಿರುದ್ಧ ಯುದ್ಧದಲ್ಲಿ ಉಡಾಯಿಸುತ್ತಿದ್ದ ರಾಕೆಟ್‌ಗಳು ಅವಾಗಿದ್ದವು. ಕಲಾಂ ಅವರು ಈ ಅನುಭವವನ್ನು **ಅಗ್ನಿಯ ರೆಕ್ಕೆಗಳು** (೨೦೦೨) ಎಂಬ ತಮ್ಮ ಆತ್ಮಕಥನದಲ್ಲಿ ಹೀಗೆ ದಾಖಲಿಸಿದ್ದಾರೆ:

> *ಇಲ್ಲಿ(ನಾಸಾ) ಹೊರ ಪ್ರಾಂಗಣದಲ್ಲಿ ವಿಜೃಂಭಿಸುತ್ತಿರುವ ಒಂದು ವರ್ಣಚಿತ್ರದ ದೃಶ್ಯ ನನ್ನ ಮನಸ್ಸಿನಲ್ಲಿ ಸದಾ ಹಸಿರಾಗಿದೆ. ಈ ವರ್ಣಚಿತ್ರದಲ್ಲಿ ಕೆಲವೊಂದು ರಾಕೆಟ್‌ಗಳು ಹಿಂಬದಿ ಬಯಲಲ್ಲಿ ಹಾರಾಡುತ್ತಿದ್ದವು. ಇಂತಹ ಹಾರಾಡುವ ರಾಕೆಟ್‌ಗಳ ಚಿತ್ರ ಈ ಉಡ್ಡಯನದ ಕೇಂದ್ರದಲ್ಲಿ ತೀರಾ ಸಾಮಾನ್ಯ. ಆದರೆ ನನ್ನ ಗಮನ ಸೆಳೆದದ್ದು ಯಾವ ದೃಶ್ಯ ಎಂದರೆ ರಾಕೆಟ್‌ಗಳನ್ನು ಉಡ್ಡಯನದ ಕಾರ್ಯದಲ್ಲಿ ತೊಡಗಿದ್ದ ಸೈನಿಕರು ಬಿಳಿಯವರಾಗಿರಲಿಲ್ಲ. ಕಪ್ಪು ಚರ್ಮದವರಾಗಿದ್ದು ದಕ್ಷಿಣ ಏಷ್ಯ ಜನಾಂಗೀಯರಂತೆ ಕಾಣುತ್ತಿದ್ದರು. ನನ್ನ ಕುತೂಹಲ ತೀವ್ರಗೊಂಡು ತೀರಾ ಹತ್ತಿರದಿಂದ ಆ ಚಿತ್ರವನ್ನು ಗಮನಿಸಿದೆ. ಭೇಷ್! ಇದು ನಮ್ಮ ಟಿಪ್ಪು ಸುಲ್ತಾನನ ಸೈನ್ಯ ಬ್ರಿಟಿಷರೊಂದಿಗೆ ಹೋರಾಡುತ್ತಿರುವುದು. ನಮ್ಮ ದೇಶದಲ್ಲೇ ಮರೆತುಹೋಗಿದ್ದ ಟಿಪ್ಪು ಇಲ್ಲಿ ವಿರಾಜಮಾನನಾಗಿದ್ದಾನೆ. ರಾಕೆಟ್ ಯುದ್ಧಕಲೆಯಲ್ಲಿ ನಾಸಾ ಭಾರತೀಯನೊಬ್ಬನನ್ನು ವೈಭವೀಕರಿಸಿದುದನ್ನು ನೋಡಿ ನಾನು ಸಂತೋಷಗೊಂಡೆ (**ಅಗ್ನಿಯ ರೆಕ್ಕೆಗಳು** ೨೦೧೨: ೫೩–೫೪).*



ಯುದ್ಧದಲ್ಲಿ ಟಿಪ್ಪು ರಾಕೆಟ್‌ಗಳ ಆಕ್ರಮಣದ ಸನ್ನಿವೇಶ (ಮೂಲ: ನಾಸಾ)

## ಶ್ರೀರಂಗಪಟ್ಟಣದ ರಾಕೆಟ್ ಉಡಾವಣ ಅಂಕಣ

ಟಿಪ್ಪುವಿನ ಕೋಟೆ ಮತ್ತು ರಾಕೆಟಿಗೆ ಸಂಬಂಧ ಏರ್ಪಟ್ಟಿರುವುದು ಶ್ರೀರಂಗಪಟ್ಟಣ ಕೋಟೆಯಲ್ಲಿ ಮಾತ್ರ. ಈ ಕೋಟೆಯ ಮೈಸೂರು ದ್ವಾರದಿಂದ ಒಳ ಪ್ರವೇಶಿಸಿದರೆ ಅನತಿ ದೂರದಲ್ಲಿ ಬಲಕ್ಕೆ ಚಾವಣಿ ಇಲ್ಲದ ಒಂದು ಕಟ್ಟಡವಿದೆ. ಅದೇ ಟಿಪ್ಪುವಿನ ರಾಕೆಟ್ ಉಡಾವಣ ಅಂಕಣ ಅಥವಾ ಆವರಣ. ಈ ವೇದಿಕೆಯು ೮೦ ಅಡಿ ಉದ್ದ ಹಾಗೂ ೪೦ ಅಡಿ ಅಗಲವಿದೆ. ದಕ್ಷಿಣದ ಗೋಡೆಯು ೩೫ ಅಡಿ ಎತ್ತರವಿದೆ. ಶ್ರೀರಂಗಪಟ್ಟಣದ ಪತನಾನಂತರ ಇದನ್ನು ಬ್ರಿಟಿಷರ ಸರ್ಪಗಾವಲು ಪಡೆಯು 'ಬಾಲ್ ಅಲ್ಲೆ' (ಚೆಂಡನ್ನು ಉರುಳಿಬಿಟ್ಟು ಎದುರು ನಿಲ್ಲಿಸಿರುವ ವಸ್ತುಗಳನ್ನು ಉರುಳಿಸುವ ಕ್ರೀಡೆ) ಅಂಕಣವಾಗಿ ಪರಿವರ್ತಿಸಿಕೊಂಡಿತು (ಎಂ.ಎ.ಆರ್ ೧೯೩೫: ೬೫).



ಟಿಪ್ಪುವಿನ ರಾಕೆಟ್ ಉಡಾವಣ ಅಂಕಣ, ಶ್ರೀರಂಗಪಟ್ಟಣ. (ಚಿತ್ರ: ಲೇಖಕರದು)

ಟಿಪ್ಪುವಿನ ಅದ್ಭುತ ಅಸ್ತ್ರಕ್ಕೆ ಬ್ರಿಟಿಷರು ನಿಜವಾಗಿಯೂ ಗಾಬರಿಗೊಂಡರು. ಅವರೂ ಕೂಡ ಮೈಸೂರಿನ ರಾಕೆಟ್‌ಗಳನ್ನು ನಕಲು ಮಾಡಿ ಮೈಸೂರಿನ ಅಶ್ವದಳದ ಮೇಲೆ ಪ್ರಯೋಗಿಸಲು ಪ್ರಯತ್ನಿಸಿದರು. ಆದರೆ ಅದೇನು ಪ್ರಯೋಜನವಾಗಲಿಲ್ಲ. ಕಾರಣ ಟಿಪ್ಪುವು ತನ್ನ ಅಶ್ವಗಳಿಗೆ ರಾಕೆಟ್‌ಗಳು ಮಾಡುವ ಸದ್ದಿನ ತರಬೇತಿ ನೀಡಿದ್ದನು. ಆದ್ದರಿಂದ ಬ್ರಿಟಿಷರ ರಾಕೆಟುಗಳ ಶಬ್ದಗಳಿಗೆ ಟಿಪ್ಪುವಿನ ಸೈನ್ಯಗಳು ವಿಚಲಿತಗೊಳ್ಳುತ್ತಿರಲಿಲ್ಲ. ಇಷ್ಟಾದರೂ, ರಾಕೆಟ್‌ಗಳು ನಿಜವಾಗಿಯೂ ಶತ್ರು ಪಾಳಯಕ್ಕೆ ಭಾರಿ ಹಾನಿಯುಂಟು ಮಾಡಿದವೇ ಎಂಬುದು ಮುಖ್ಯವಾದ ಪ್ರಶ್ನೆ. ಈ ರಾಕೆಟ್‌ಗಳಿಂದ ಜೀವಹಾನಿ ಅಷ್ಟಕ್ಕಷ್ಟೇ. ಆದರೆ, ಏಕಕಾಲಕ್ಕೆ ನೂರಾರು ಸಂಖ್ಯೆಯಲ್ಲಿ ಬೆಂಕಿಯನ್ನುಗುಳುತ್ತಾ ತೂರಿ ಬರುವ 'ಬಾಣಬಿರುಸು'ಗಳು ರಾತ್ರಿಯ ವೇಳೆ ಶತ್ರುಗಳಲ್ಲಿ ನಿಜಕ್ಕೂ ಆತಂಕವನ್ನು ಉಂಟುಮಾಡಿ ಓಡುವಂತೆ ಮಾಡುತ್ತಿದ್ದವು. ಆದರೆ ರಾಕೆಟ್‌ಗಳಿಗೆ ತಗಲುತ್ತಿದ್ದ ವೆಚ್ಚ ಮಾತ್ರ ಅವುಗಳ ಉಪಯೋಗಕ್ಕಿಂತ ತುಂಬಾ ದುಬಾರಿಯಾಗಿರುತ್ತಿತ್ತು (ಮೊಹಮ್ಮದ್ ೧೮೫೫: ೧೫೮).

### ತಾರಾಮಂಡಲಗಳು

ಮದ್ದು, ಗುಂಡು ಮತ್ತು ಶಸ್ತ್ರಾಸ್ತ್ರಗಳನ್ನು ಉತ್ಪಾದಿಸುವ ಕೇಂದ್ರಗಳನ್ನು ತಾರಾಮಂಡಲ ಎನ್ನುತ್ತಾರೆ. ಟಿಪ್ಪುವು ನಾಲ್ಕು ತಾರಾಮಂಡಲಗಳನ್ನು ಸಂಸ್ಥಾನದಲ್ಲಿ ಹೊಂದಿದ್ದನು. ಅವುಗಳು ಶ್ರೀರಂಗಪಟ್ಟಣ, ಬೆಂಗಳೂರು, ಬಿದನೂರು (ನಗರ) ಮತ್ತು ಚಿತ್ರದುರ್ಗಗಳಲ್ಲಿ ಇದ್ದವು. ತಾರಾಮಂಡಲ ಎಂಬ ಹೆಸರು ಬಂದಿರುವುದರ ಹಿಂದೆ ಒಂದು ಕತೆ ಇದೆ. ಬೆಂಗಳೂರಿನಲ್ಲಿ ಹೈದರನು ರಾಕೆಟ್‌ಗಳನ್ನು ಆಗಾಗ್ಗೆ ಉಡಾಯಿಸಿ ಪರೀಕ್ಷಿಸುತ್ತಿದ್ದನೆಂದು ಅವು ಗಗನಕ್ಕೆ ಏರಿ ಅಲ್ಲಿ ಸಿಡಿದು ನಕ್ಷತ್ರದ ಪುಂಜಗಳಂತೆ ಚದುರಿಸುತ್ತಿದ್ದವೆಂದೂ ಆದ್ದರಿಂದಲೇ ಈ ಜಾಗಕ್ಕೆ ತಾರಾಮಂಡಲ ಪೇಟೆ ಎಂಬ ಹೆಸರು ಇಟ್ಟನೆಂದು ಹೇಳಲಾಗುತ್ತದೆ. ಶ್ರೀರಂಗಪಟ್ಟಣದಲ್ಲಿ ರಾಕೆಟ್‌ಗಳನ್ನು ಉಡಾಯಿಸುತ್ತಿದ್ದ ಕಟ್ಟಡದ ಒಂದು ಅವಶೇಷ ಕೂಡ ಇದೆ. ಬೆಂಗಳೂರಿನಲ್ಲಿ ಒಂದು ತಿಂಗಳಿಗೆ ಎರಡು ತೋಪನ್ನು ಎರಕ ಹುಯ್ಯುವಂತಹ ತೋಪಿನ ಕಾರ್ಖಾನೆಯನ್ನು ಹಾಗೂ ತಿಂಗಳಿಗೆ ೩೫ ಬಂದೂಕುಗಳನ್ನು ತಯಾರಿಸುವ ಬಂದೂಕು ಕಾರ್ಖಾನೆಯನ್ನು ಸ್ಥಾಪಿಸಲಾಗಿತ್ತು ಎಂದು ಬೆಂಗಳೂರ ಬಖೈರ್ ತಿಳಿಸುತ್ತದೆ (ಖಾನ್ ೨೦೦೭: ೧೪೩; ಮೂನ ೨೦೦೯: ೧೧೦; ಮಂಜುನಾಥ್ ೨೦೦೬: ೩೫-೫೭).

ತಾರಾಮಂಡಲಗಳಲ್ಲಿ ಟಿಪ್ಪು ಸುಲ್ತಾನನು ರಾಕೆಟ್‌ಗಳನ್ನು ಉತ್ಪಾದಿಸುವ ಕಾರ್ಖಾನೆಯನ್ನು ಸ್ಥಾಪಿಸಿದ್ದನು. ಅವನು ಕೇಂದ್ರೀಕೃತ ಸೈನಿಕ ಶಸ್ತ್ರಾಸ್ತ್ರಗಳ ಉತ್ಪಾದನೆಯ ವ್ಯವಸ್ಥೆಯನ್ನು ರೂಪಿಸಿದ್ದನು. ಮೈಸೂರಿನ ಸಮೀಪದ ಕಾಡಿನಲ್ಲಿ ಹೇರಳವಾದ ಸಂಖ್ಯೆಯಲ್ಲಿ

ಏದಿರು ದೊರಕುತ್ತಿತ್ತು. ಕಬ್ಬಿಣವನ್ನು ಚನ್ನಪಟ್ಟಣದಲ್ಲಿ ಉತ್ಪಾದಿಸಲಾಗುತ್ತಿತ್ತು. ಕಬ್ಬಿಣದ ಎರಕ ಹೊಯ್ಯುವ ಕಾರ್ಖಾನೆಯನ್ನು ಮಧುಗಿರಿ, ಚನ್ನರಾಯನದುರ್ಗ ಮತ್ತು ದೇವರಾಯನದುರ್ಗಗಳಲ್ಲಿ ಸ್ಥಾಪಿಸಿದನು. ಒಂದು ಮೌಂಡ್ (೮೨ ಪೌಂಡುಗಳು) ಕಬ್ಬಿಣದ ಉತ್ಪಾದನೆಗೆ ೩ ಫಣಂಗಳ ವೆಚ್ಚ ತಗಲುತ್ತಿತ್ತು. ನೂರು ತೂಕಕ್ಕೆ ೯ ಶಿಲ್ಲಿಂಗ್, ೩.೨೫ ಪೆನ್ಸ್ ತಗಲುತ್ತಿತ್ತು. ಮಸ್ಕಟ್‌ನಿಂದ ಸಲ್ಫರನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ರಾಕೆಟ್ ಕಾರ್ಖಾನೆಯನ್ನು ಬೆಂಗಳೂರಿನ ಚಿಕ್ಕಪೇಟೆಯಲ್ಲಿನ ತಾರಾಮಂಡಲಪೇಟೆಯಲ್ಲಿ ಮತ್ತು ಶ್ರೀರಂಗಪಟ್ಟಣ ಸಮೀಪದ ತುರುಕನಹಳ್ಳಿಯಲ್ಲಿ ಸ್ಥಾಪಿಸಲಾಗಿತ್ತು (ಕೌಶಿಕ್‌ರಾಯ್ ೨೦೦೫: ೬೩೫-೬೫೬).



**ರಾಕೆಟ್ ಸಂಗ್ರಹಿಸಿಡುತ್ತಿದ್ದ ಮದ್ದಿನ ಮನೆ, ಬೆಂಗಳೂರು. (ಚಿತ್ರ: ಲೇಖಕರದು)**

**ಬೆಂಗಳೂರಿನ ತಾರಾಮಂಡಲ:** ಬೆಂಗಳೂರಿನಲ್ಲಿ ತಾರಾಮಂಡಲಪೇಟೆಯನ್ನು ಹೊರತುಪಡಿಸಿದರೆ ತಾರಾಮಂಡಲದ ಯಾವ ಅವಶೇಷಗಳು ಕಂಡುಬರುವುದಿಲ್ಲ. ತಾರಾಮಂಡಲಪೇಟೆಯಲ್ಲಿ ರಾಕೆಟ್‌ಗಳನ್ನು ಉತ್ಪಾದಿಸಲಾಗುತ್ತಿತ್ತು ಎಂದು ಸೂರ್ಯನಾಥ ಕಾಮತ್ ಅವರು **ಬೆಂಗಳೂರು ಗ್ಯಾಸೆಟಿಯರ್**ನಲ್ಲಿ (೧೯೯೦: ೭೯) ದಾಖಲಿಸಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಎಂ. ಜಮುನಾ ಅವರು ಹೇಳುವ ಪ್ರಕಾರ "ಸೂರ್ಯನಾಥ ಕಾಮತ್ ಅವರು ಇಂದಿನ ಹಲಸೂರು ಗೇಟ್ ಪೊಲೀಸ್ ಸ್ಟೇಷನ್ ಹಿಂಭಾಗದಲ್ಲಿ ತಾರಾಮಂಡಲದ ಅವಶೇಷಗಳು ಇದ್ದುದಾಗಿ ಹೇಳಿದ್ದರು. ಆದರೆ ಇಂದು ಅಲ್ಲಿ ಯಾವ ಅವಶೇಷಗಳು ಉಳಿದಿಲ್ಲ..." ಎನ್ನುತ್ತಾರೆ (ಸಂದರ್ಶನ). ಬೆಂಗಳೂರಿನಲ್ಲಿ ನಾಲ್ಕು ಆರ್ಮರಿಗಳಿದ್ದವೆಂದು ಹೇಳಲಾಗುತ್ತದೆ. ಈಗ ಕಾಣಸಿಗುವುದು ಬೆಂಗಳೂರು ಮೆಡಿಕಲ್ ಕಾಲೇಜಿನ ಹಿಂಬದಿಯಲ್ಲಿರುವ ಒಂದೇಒಂದು ಮಾತ್ರ.

ಹೈದರಾಲಿಯು ಬ್ರಿಟಿಷರ ವಿರುದ್ಧ ಯುದ್ಧಲ್ಲಿ ವಿಶೇಷವಾಗಿ ಬಳಸುತ್ತಿದ್ದ ರಾಕೆಟ್‌ಗಳನ್ನು ತಯಾರಿಸಿ ಸಂಗ್ರಹ ಮಾಡುತ್ತಿದ್ದ ಸ್ಥಳವಿದು. ಇವುಗಳನ್ನು ಆರ್ಮರಿ, ಮ್ಯಾಗಜಿನ್ ಎಂದೆಲ್ಲ ಕರೆಯುತ್ತಾರೆ. ಆರ್ಮರಿಯಿಂದ ರಾಕೆಟ್‌ಗಳನ್ನು ಕೋಟೆಗೆ ಸಾಗಿಸಲು ಸುರಂಗ ಮಾರ್ಗವಿತ್ತೆಂದು, ಅದೇ ರೀತಿ ಅರಮನೆಗೂ ಇತ್ತೆಂದು ಹೇಳಲಾಗುತ್ತದೆ (ಮೂನ ೨೦೦೯:೧೧೧).

**ಚಿತ್ರದುರ್ಗದ ತಾರಾಮಂಡಲ:** ಮೂರು ಮತ್ತು ನಾಲ್ಕನೇ ಕೋಟೆಗಳ ಮಧ್ಯೆ ಎಡಭಾಗದಲ್ಲಿ ಶಸ್ತ್ರಾಸ್ತ್ರ ತಯಾರಿಸಲು ಟಿಪ್ಪು ಸುಲ್ತಾನ್ ಸ್ಥಾಪಿಸಿದ ತಾರಾಮಂಡಲದ ಅವಶೇಷಗಳು ಇಲ್ಲಿಯ ಬಯಲಿನಲ್ಲಿವೆ. ಈ ಬಯಲಿನಲ್ಲಿ ಸಾಲಾಗಿ ಕಲ್ಲು ಚಪ್ಪಡಿಗಳ ಮಾದರಿಗಳನ್ನು ಜೋಡಿಸಲಾಗಿದೆ. ಇವುಗಳು ತಾರಾಮಂಡಲದ ಕುರುಹುಗಳು ಮತ್ತು ಸಿಡಿಮದ್ದು ತಯಾರಿಕೆಯಲ್ಲಿ ಬಳಸಲಾಗುತ್ತಿದ್ದವೆನ್ನಲಾದ ಮದ್ದು ಅರೆಯುವಕಲ್ಲುಗಳು ಎಂದು ಲಕ್ಷ್ಮಣ್ ತೆಲಗಾವಿ ಅವರು ಅಭಿಪ್ರಾಯಪಟ್ಟಿದ್ದಾರೆ (೨೦೧೬: ೮೪).

**ಚಿತ್ರದುರ್ಗದ ಮದ್ದು ಬೀಸುವ ಕಲ್ಲು :** ಚಿತ್ರದುರ್ಗದಲ್ಲಿ ಮದ್ದನ್ನು ಬೀಸುವ ಕಲ್ಲುಗಳು ಇವೆ. ಅದೇ ರೀತಿ ಮದ್ದನ್ನು ಅರೆಯುವ ಬೀಸುವ ಬೃಹತ್ ಕಲ್ಲುಗಳು ಕೂಡ ಇವೆ. ಆಯತಾಕಾರದ ನೆಲಾಂತರ್ಗತ ಚೌಕಾಕಾರದ ಆವರಣದಲ್ಲಿ ಒಂದು ವರ್ತುಲಾಕಾರದ ತಿರುಗಣಿ ಪ್ರದೇಶವಿದ್ದು ಮಧ್ಯಭಾಗದಲ್ಲಿ ಕಂಭ ನೆಡಲು ರಂಧ್ರಗಳಿರುವ ಒಂದು ಚೌಕಾಕಾರದ ಕಲ್ಲನ್ನು ಅಳವಡಿಸಲಾಗಿದೆ. ವರ್ತುಲದ ಉತ್ತರ, ದಕ್ಷಿಣ, ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ನಾಲ್ಕು ಬೃಹತ್ – ವರ್ತುಲಾಕಾರದ ಕಣಶಿಲೆಯ ಬೀಸುಕಲ್ಲುಗಳನ್ನು ಎರಡು ತೊಲೆಗಳ ಮೇಲ ಕೂಡಿಸಲಾಗಿದೆ. ಈ ಬೀಸುಕಲ್ಲುಗಳ ಮಧ್ಯಭಾಗದಲ್ಲಿ ಚೌಕಾಕಾರದ ಚುಕ್ಕಾಣಿ ಕುಳಿಯಿದ್ದು ಅವುಗಳನ್ನು ಮಧ್ಯವರ್ತುಲದಲ್ಲಿರುವ ಸ್ತಂಭಕ್ಕೆ ಹೊಂದಿಸಲಾಗುತ್ತಿತ್ತು. ಇದೇ ಅಲ್ಲದೆ ಈ ಬೀಸುಕ್ಲಲಿನ ಮೇಲ್ಭಾಗದ ತಿರುತುಕಲ್ಲಿನ ಪಾರ್ಶ್ವದಲ್ಲಿ ಸಣ್ಣ ಸಣ್ಣ ರಂಧ್ರಗಳನ್ನು ಕೊರೆಸಿ ಅವುಗಳಿಗೆ ಕಲ್ಲು ಹಲ್ಲುಗಳಿರುವ ಪಟ್ಟಿಕೆಗಳನ್ನು ಅಳವಡಿಸಿ ಮಧ್ಯಸ್ತಂಭಕ್ಕೆ ಹೊಂದಿಸಲಾಗುತ್ತಿತ್ತು. ಆದರೆ ಮದ್ದನ್ನು ಮದ್ದು ಕಲ್ಲಿನ ಬುಡದಲ್ಲಿಯೇ ಇರುವ ಸಂಗ್ರಹಣಾ ಕುಳಿಗಳಲ್ಲಿ ಶೇಖರಿಸಿ ನಂತರ ಅರಮನೆ ಸಂಕೀರ್ಣದಲ್ಲಿರುವ ವಿಶೇಷ ಕೊಠಡಿಗಳಲ್ಲಿ ಸಂಗ್ರಹಿಸಲಾಗುತ್ತಿತ್ತು. ಈ ಬೃಹತ್ ತಿರುಗುಯಂತ್ರದ ಒಳಪ್ರವೇಶ ಮಾಡಲು ವಾಯವ್ಯ ಆಗೂ ಈಶಾನ್ಯ ದಿಕ್ಕಿನಲ್ಲಿ ಪಾವಟಿಕೆಗಳನ್ನು ಅಳವಡಿಸಲಾಗಿದೆ. ಇವುಗಳನ್ನು ಮನುಷ್ಯ ಅಥವಾ ಎತ್ತುಗಳ ಸಹಾಯದಿಂದ ಬೀಸುವ ಕಲ್ಲನ್ನು ತಿರುಗಿಸಲಾಗುತ್ತಿತೆಂದು ಹೇಳಲಾಗುತ್ತದೆ. ಬೃಹತ್ತಾದ ಈ ಬೀಸುವ ಕಲ್ಲುಗಳು ಹದಿನೆಂಟನೆಯ ಶತಮಾನದ ತಂತ್ರಜ್ಞಾನಕ್ಕೆ ಉತ್ತಮ ಉದಾಹರಣೆಯಾಗಿವೆ. ಸಿಡಿಮದ್ದಿಗೆ ಬಳಸುವ ಚಕಮಕಿಕಲ್ಲುಗಳನ್ನು

ಪುಡಿಮಾಡಲು ರೂಪಿಸಲಾದ ಈ ಕಲ್ಲುಯಂತ್ರಗಳ ಪ್ರಯೋಗ ವಿಫಲವಾಯಿತೆನ್ನಲಾಗಿದೆ (ತೆಲಗಾವಿ ೨೦೧೬:೮೫).

ಬೆಂಗಳೂರಿನಲ್ಲಿ ತಾರಾಮಂಡಲಪೇಟೆ ಹೆಸರು ಮತ್ತು ರಾಕೆಟ್‌ಗಳನ್ನು ಸಂಗ್ರಹಿಸಿಡುತ್ತಿದ್ದರೆನ್ನಲಾದ ಬೃಹತ್ತಾದ ಮದ್ದಿನ ಮನೆಯೊಂದನ್ನು ಹೊರತು ಬೇರೇನೂ ಕಾಣಸಿಗುವುದಿಲ್ಲ. ಅಂದರೆ ಚಿತ್ರದುರ್ಗದಲ್ಲಿ ಮದ್ದನ್ನು ಅರೆಯುವ ಮತ್ತು ಬೀಸುವ ಸಾಧನಗಳು ಇರುವಂತೆ ಬೆಂಗಳೂರಿನಲ್ಲಿ ಕಾಣಸಿಗುವುದಿಲ್ಲ. ಎಲ್ಲವೂ ನಗರೀಕರಣ ಎಂಬ ರಾಕ್ಷಸನ ಬಾಯಿಗೆ ತುತ್ತಾಗಿರುವಂತೆ ಕಾಣುತ್ತದೆ. ಚಿತ್ರದುರ್ಗದ ಕೋಟೆಯು ಪೇಟೆ ಪ್ರದೇಶದಿಂದ ಪ್ರತ್ಯೇಕತೆ ಕಾಯ್ದುಕೊಂಡಿರುವುದು ಮತ್ತು ಗಿರಿದುರ್ಗವಾಗಿರುವುದರಿಂದ ಪ್ರಾಚ್ಯಾವಶೇಷಗಳಿಗೆ ಹೆಚ್ಚಿನ ಹಾನಿಯಾಗಿರುವುದಿಲ್ಲ.



ತಾರಾಮಂಡಲದ ಮದ್ದು ಅರೆಯುವ ಕಲ್ಲುಗಳು(?) (ಚಿತ್ರದುರ್ಗ)



ತಾರಾಮಂಡಲದ ಅವಶೇಷಗಳು(?)



**ಮದ್ದು ಬೀಸುವ ಕಲ್ಲು (ಚಿತ್ರದುರ್ಗ)**

ಸಿಡಿಮದ್ದನ್ನು ತಯಾರಿಸುವ ವಿಧಾನ: ಮದ್ದನ್ನು ಹೇಗೆ ತಯಾರಿಸುತ್ತಿದ್ದರು ಮತ್ತು ಅದಕ್ಕೆ ಏನೇನು ಸೇರಿಸುತ್ತಿದ್ದರು ಎಂಬುದರ ಬಗೆಗೆ ಸರಿಯಾದ ಮಾಹಿತಿಗಳಿಲ್ಲ. ಆದರೆ ಮದ್ದನ್ನು ಅರೆಯುವ ಸಾಂಪ್ರದಾಯಿಕ ವಿಧಾನವೊಂದಿದೆ. ಇತ್ತೀಚಿನವರೆಗೆ ಕೆಲವು ಗ್ರಾಮಗಳಲ್ಲಿ ಹಬ್ಬಗಳ ಸಂದರ್ಭದಲ್ಲಿ ಭಾರಿ ಸದ್ದನ್ನು ಉಂಟುಮಾಡುವ 'ಗಢಬಾಜು' ಎಂಬ ಸಾಂಪ್ರದಾಯಿಕ ತೋಪನ್ನು ಹಚ್ಚಲಾಗುತ್ತಿತ್ತು. ಅದಕ್ಕೆ ಬೇಕಾದ ಮದ್ದನ್ನು ಊರಿನ ಕೆಲವು ಮದ್ದು ತಯಾರಕರು ಹಬ್ಬಕ್ಕೆ ಮುನ್ನ ತಯಾರಿಸಿಟ್ಟುಕೊಳ್ಳುತ್ತಿದ್ದರು. ಅವರು ಮದ್ದನ್ನು ತಯಾರಿಸಲು ಬಳಸುತ್ತಿದ್ದ ವಸ್ತುಗಳೆಂದರೆ: ಇದ್ದಿಲು, ಗಂಧಕ, ಕಡ್ಡುಪ್ಪು (ಪೆಟ್ಲುಪ್ಪು). ಇವುಗಳನ್ನು ನಿಗದಿತ ಪ್ರಮಾಣದಲ್ಲಿ ಸೇರಿಸಿ ಮದ್ದನ್ನು ತಯಾರಿಸುತ್ತಿದ್ದರು.[೧೧] ಈ ಪದ್ಧತಿ ಇತ್ತೀಚಿನ ದಿನಗಳಲ್ಲಿ ಕಣ್ಮರೆಯಾಗಿದೆ.

### ೩.೨.೭ ಫಿರಂಗಿಗಳು

ಫಿರಂಗಿಗಳು ಕೋಟೆಯ ಒಂದು ಭಾಗವಲ್ಲದಿದ್ದರೂ ಕೋಟೆಯ ರಕ್ಷಣೆಯ ದೃಷ್ಟಿಯಿಂದ ಕೊತ್ತಳ, ಬುರುಜು – ಬತೇರಿಗಳ ಮೇಲೆ ಫಿರಂಗಿಗಳನ್ನು ಪ್ರತಿಷ್ಠಾಪಿಸಿ, ಶತ್ರುಗಳ ಆಕ್ರಮಣದ ವೇಳೆ ಪ್ರಯೋಗಿಸಲಾಗುತ್ತಿತ್ತು. ಫಿರಂಗಿಗಳು ಒಂದು ರೀತಿಯಲ್ಲಿ ಚರಾಸ್ತ್ರವೂ ಹೌದು, ಸ್ಥಿರಾಸ್ತ್ರವೂ ಹೌದು. ಕೋಟೆಯ ಮೇಲಿಟ್ಟರೆ ಸ್ಥಿರಾಸ್ತ್ರಗಳಾಗುತ್ತವೆ. ರಣರಂಗಕ್ಕೆ ಕೊಂಡೊಯ್ದರೆ ಚರಾಸ್ತ್ರಗಳಾಗುತ್ತವೆ. ಮಧ್ಯಯುಗದಲ್ಲಿ ಬಳಕೆಗೆ ಬಂದ ಈ ಫಿರಂಗಿಗಳು ನಂತರದ ಯುದ್ಧಗಳಲ್ಲಿ ನಿರ್ಣಾಯಕ ಪಾತ್ರವಹಿಸಿವೆ.

**ಭಾರತಕ್ಕೆ ಫಿರಂಗಿಗಳ ಆಗಮನ**

ಮಧ್ಯಯುಗದ ಭಾರತೀಯ ಯುದ್ಧರಂಗದಲ್ಲಿ ಫಿರಂಗಿಯ ಪಾತ್ರ ಮಹತ್ವದ್ದಾಗಿದೆ. ಇದು ಭಾರತಕ್ಕೆ ಬಂದಿರಬಹುದಾದ ನಾಲ್ಕು ಮೂಲಗಳನ್ನು ಬಾಲಸುಬ್ರಮಣಿಯನ್ ಅವರು ಸೂಚಿಸಿದ್ದಾರೆ (೨೦೦೮: ೧೯). ಅವುಗಳೆಂದರೆ:

೧. ಮಧ್ಯಪ್ರಾಚ್ಯ ಇಸ್ಲಾಮಿಕ ರಾಜ್ಯಗಳು

೨. ಮಧ್ಯ ಏಷ್ಯಾ

೩. ಪೋರ್ಚುಗೀಸ್

೪. ಚೀನಾ

ಫಿರಂಗಿಯ ತಂತ್ರಜ್ಞಾನಕ್ಕೆ ಸಂಬಂಧಿಸಿದಂತೆ ೧೬ನೆಯ ಶತಮಾನದಲ್ಲಿ ಹೊಸ ಕೌಶಲ್ಯ ಮತ್ತು ಪರಿಕಲ್ಪನೆಗಳು ಪರಿಚಯಗೊಂಡ ಬಗ್ಗೆ ಯೂರೋಪ್ ಮತ್ತು ಅಟೋಮನ್ ರಾಜ್ಯಗಳ ಆಧಾರಗಳು ತಿಳಿಸುತ್ತವೆ. ಪೋರ್ಚುಗೀಸರು ೧೪೯೮ರಲ್ಲಿ ಕಲ್ಲಿಕೋಟೆಗೆ ಬಂದಾಗ ಮತ್ತು ಬಾಬರನು ೧೫೨೬ರಲ್ಲಿ ದೆಹಲಿ ಮತ್ತು ಆಗ್ರಾವನ್ನು ಆಕ್ರಮಿಸಿಕೊಂಡಾಗ ಫಿರಂಗಿಗಳ ಪರಿಚಯವಾಗಿರಬಹುದು. ಆದರೂ, ಇಷ್ಟೇ ಪ್ರಮುಖವಾದ ಮತ್ತೆರಡು ಕಾರಣಗಳಿವೆ. ಡೆಖನ್ ಪ್ರಭುತ್ವವು ಭೂಮಾರ್ಗ ಮತ್ತು ಜಲಮಾರ್ಗದ ಮೂಲಕ ಈಜಿಪ್ಟ್ ಮತ್ತು ಅಟ್ಟೋಮಾನ್ ಸಾಮ್ರಾಜ್ಯಗಳೊಂದಿಗೆ ಸಂಪರ್ಕ ಹೊಂದಿತ್ತು ಮತ್ತು ಚೀನಿಯರ ಜೊತೆಗೆ ವ್ಯಾಪಾರ ಸಂಪರ್ಕ ಹೊಂದಿತ್ತು. ದಕ್ಷಿಣ ಭಾರತದಲ್ಲಿ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳೆರಡೂ ಡೆಲ್ಲಿ ಸುಲ್ತಾನರಿಗೆ ಹೋಲಿಸಿದಾಗ ತುಂಬಾ ಅತ್ಯಾಧುನಿಕ ಫಿರಂಗಿಗಳನ್ನು ಹೊಂದಿದ್ದರು. ದಕ್ಷಿಣ ಭಾರತದ ಸಾಮ್ರಾಜ್ಯಗಳು ತೋಪು (ತೋಫ್ಪಿ) ಮತ್ತು ಫಿರಂಗಿಗಳನ್ನು ತುರ್ಕಿ ಮತ್ತು ಅರೇಬಿಯಾ ದೇಶಗಳಿಂದ ಆಮದು ಮಾಡಿಕೊಳ್ಳುತ್ತಿದ್ದರು (ಬಾಲಸುಬ್ರಮಣಿಯನ್ ೨೦೦೮: ೧೯–೨೦).

ಫಿರಂಗಿಗಳ ಉಗಮ ಕುರಿತಂತೆ ಹೇಳುವುದಾದರೆ, ಆದಿಮ ಫಿರಂಗಿಗಳನ್ನು ರೂಪಿಸಿದವರು ಚೀನಿಯರು. ಜಗತ್ತಿಗೆ ಸಿಡಿಮದ್ದನ್ನು ಪರಿಚಯಿಸಿದ ಚೀನಿಯರು ಫಿರಂಗಿಯ ಮಾದರಿಯಲ್ಲಿ ಬಿದಿರಿನ ಬೊಂಬಿನ ಕೊಳವೆಯಲ್ಲಿ ಮದ್ದು ತುಂಬಿ ಬೆಂಕಿಯನ್ನು ಉಗುಳುತ್ತಿದ್ದರು. ಭಾರತ ಚೀನಾದೊಂದಿಗೆ ಜಲಮಾರ್ಗ ಮತ್ತು ಭೂಮಾರ್ಗದ ಮೂಲಕ ಸಂಪರ್ಕವನ್ನು ಹೊಂದಿತ್ತು. ದಾಖಲಾಗಿರುವಂತೆ ೧೪೮೯ರಲ್ಲಿ ಚೀನಾದ ಹಡಗೊಂದು ಅಗ್ನಿಅಸ್ತ್ರಗಳನ್ನು ತೆಗೆದುಕೊಂಡು ಬಂದಿತು. ೧೫೨೬ರಲ್ಲಿ ಭಾರತದ ಮೇಲೆ ಧಾಳಿ ನಡೆಸಿದ ಬಾಬರನು ಟರ್ಕರಿಂದ ಫಿರಂಗಿಗಳ ಬಗೆಗೆ

ತಿಳಿದಿದ್ದನು. 'ಉಸ್ತಾದ್ ಅಲಿ ಕ್ವಾಲಿ' ಎಂಬ ಬಂದೂಕು ತಜ್ಞನು ಫಿರಂಗಿಗಳನ್ನು ಎರಕ ಉಯ್ಯುತ್ತಿದ್ದನು.

ಭಾರತದಲ್ಲಿಯೇ ಭಾರಿ ತೂಕದ ಫಿರಂಗಿ ಎಂದು ಬಿಜಾಪುರ ಕೋಟೆಯ ಶೇರ್ಜಾಬುರ್ಜ್‌ನ ಮೇಲಿರುವ 'ಮಲ್ಲಿಕ್–ಐ–ಮೈದಾನ್' (ರಣರಂಗದ ರಾಜ) ಎಂದೇ ಗುರುತಿಸಲ್ಪಟ್ಟಿದೆ.[೧೨] ಸುಮಾರು ೫೫ ಟನ್ ತೂಕದೆಂದು ಅಂದಾಜಿಸಲಾಗಿರುವ ಈ ಫಿರಂಗಿಯನ್ನು ಟರ್ಕಿಯ ಇಂಜಿನಿಯರ್ 'ಮೊಹಮ್ಮದ ಬಿನ್ ಹಸನ್ ರುಮಿ'[೧೩] ಎಂಬಾತನು ಕಂಚಿನ ಲೋಹದಲ್ಲಿ ೧೫೪೮–೪೯ರಲ್ಲಿ ನಿರ್ಮಿಸಿದನು. ಪೆಟ್ರೋ ಡಲ್ಲಾವೆಲ್ಲನು ಇದು ಯುದ್ಧದಲ್ಲಿ ಪ್ರಯೋಜನಕ್ಕೆ ಬಾರದು ಎನ್ನುತ್ತಾನೆ (ಬಾಲಸುಬ್ರಮಣಿಯನ್ ೨೦೦೮: ೨೪–೨೫). ಮೈಸೂರು ಸಂಸ್ಥಾನದಲ್ಲಿ ಕೂಡ ಫಿರಂಗಿಯ ಬಳಕೆ ಇತ್ತು. ೧೬೪೮ರಲ್ಲಿ ರಚಿತವಾದ ಗೋವಿಂದ ವೈದ್ಯನ ಕಂಠೀರವ ನರಸರಾಜಯ ವಿಜಯದಲ್ಲಿ ಫಿರಂಗಿಗಳ ಆರ್ಭಟದ ಬಗೆಗೆ ಉಲ್ಲೇಖಿಸಿದ್ದಾನೆ: ರಾಮಬಾಣವು ಭೂತನಾಥ ಲಂಕೆಯ ನಿರ್ಧೂಮ ಧಾಮನು ಹನುಮಂತ ಚಾಮುಂಡಿ ಸಿಡಿಲಜಂಗುಳಿ ಮೇಘನಾದ ನಿಸ್ಸೀಮ ಫಿರಂಗಿಗಳಿಹವು. ಹಾಗೆಯೇ ಮತ್ತೊಂದು ಕಡೆ: ಇಡು ಫಿರಂಗಿಯ ಬೇಗ ಪಿಡಿ ನಿಚ್ಚಣಿಗೆಯ ತುಡುಕು ಗುರಾಣಿ ಖಂಡೆಯವ ಹೊಡೆ ಬಲುಜಬರುಜಂಗಿಯಲಿ ಕೋಟೆಯನೆಂಬ ಕಡುರಭಸಗಳೊಪ್ಪಿದುವು (೧೪–೪) ಎಂದಿದೆ. ಇವೆಲ್ಲಕ್ಕೂ ಮಿಗಿಲಾಗಿ ಕಂಠೀರವ ನರಸರಾಜನು ಮೈಸೂರಿನ ಕೋಟೆಯನ್ನು ಭದ್ರಪಡಿಸಿ ಫಿರಂಗಿಗಳನ್ನು ಇಡಿಸಿದ ಬಗೆಗೆ ಶ್ರೀಮನ್ಮಹಾರಾಜರವರ ವಂಶಾವಳಿ ಭಾಗ ೧ರಲ್ಲಿ ವಿವರಗಳಿವೆ. ಮೈಸೂರಿನ ಒಳಕೋಟೆಯ ಕೊತ್ತಳಗಳಲ್ಲಿ ನಾಲ್ಕು ಮತ್ತು ಹೊರಕೋಟೆಯ ಕೊತ್ತಳಗಳಲ್ಲಿ ಏಳು ಫಿರಂಗಿಗಳನ್ನು ನರಸರಾಜನು ಇಡಿಸಿದ್ದನು. ಕೋಟೆ ಕೊತ್ತಳಗಳಲ್ಲಿದ್ದ ಒಟ್ಟು ಗುಂಡುಗಳ ಸಂಖ್ಯೆ ೪೩,೭೫೯. ಇವುಗಳಲ್ಲಿ ಸಣ್ಣಗುಂಡು, ದೊಡ್ಡಗುಂಡು, ಹೆರಳಿಕಾಯಿ ಗಾತ್ರದ ಗುಂಡು ಮತ್ತು ಕಬ್ಬಿಣದ ಗುಂಡುಗಳಿದ್ದವು (ಶ್ರೀಮ. ವಂ. ೧೯೧೬: ೮೦–೮೨). ಅದೇ ರೀತಿ ಚಿಕ್ಕದೇವರಾಜನು ಕೂಡ ಶ್ರೀರಂಗಪಟ್ಟಣದ ಕೋಟೆಯನ್ನು ಭದ್ರಪಡಿಸಿ ಒಳಕೋಟೆ ಮತ್ತು ಹೊರಕೋಟೆ ಜೇಬಿಗಳಲ್ಲಿರುವ ಕೊತ್ತಳಗಳಲ್ಲಿ ಫಿರಂಗಿಗಳನ್ನು ಇರಿಸಿದನು. ಒಳಕೋಟೆಯ ಕೊತ್ತಳಗಳಲ್ಲಿ ೧೧ ಫಿರಂಗಿಗಳನ್ನು ಮತ್ತು ಹೊರಜೇಬಿಯಲ್ಲಿ ೧೯ ಫಿರಂಗಿಗಳನ್ನು ಇರಿಸಿದನು. ಇವಲ್ಲದೆ ಇನ್ನೂ ೧೪ ಫಿರಂಗಿಗಳಿದ್ದವು (ಶ್ರೀಮ. ವಂ. ೧೯೧೬: ೧೧೧–೧೧೩). ಚಿಕ್ಕದೇವರಾಯನ ಕಾಲದ ಮಧುಗಿರಿಯ ಕೋಟೆಯಲ್ಲಿನ ಶಾಸನವು ಸಹ ಎರಡು ಫಿರಂಗಿಗಳ ಹೆಸರನ್ನು ಉಲ್ಲೇಖಿಸಿದೆ.

ಒಟ್ಟಾರೆ ಕರ್ನಾಟಕದೊಂದಿಗೆ ಫಿರಂಗಿಯ ಸಂಬಂಧ ಭಾರತದಲ್ಲಿ ಪರಿಚಯವಾದ ಕಾಲದಲ್ಲಿಯೇ ಆರಂಭವಾಯಿತೆಂದರೆ ತಪ್ಪಾಗದು.

**ಫಿರಂಗಿಗಳ ಪರಿಚಯ:** ಹೈದರಾಲಿ ಮತ್ತು ಅವನ ಮಗ ಟಿಪ್ಪು ಸುಲ್ತಾನರು ಮೈಸೂರು ಸೇನೆಯ ಒಂದು ಭಾಗವನ್ನು ಯೂರೋಪೀಕರಿಸಿದರು. ಹೈದರಾಲಿಯು ಸೇನೆಯನ್ನು ಪಾಶ್ಚಾತೀಕರಿಸುವ ಚಿಂತನೆಯನ್ನು ತನ್ನ ಅಣ್ಣ 'ಮೀರ್ ಇಸ್ಮಾಯಿಲ್' (ಷಾಬಜ್) ನಿಂದ ಕಲಿತನು. ಇಸ್ಮಾಯಿಲನು ಮೈಸೂರು ಸೇನೆಯಲ್ಲಿ ಮುಖ್ಯಸ್ಥನಾಗಿದ್ದನು. ೧೭೫೧ರಲ್ಲಿ ಮೀರ್ ಇಸ್ಮಾಯಿಲನು ೨೦೦೦ ಸನೀನು (ಬೆಯೊನೆಟ್) ಹೊಂದಿದ ಬಂದೂಕುಗಳನ್ನು, ೬ ಫಿರಂಗಿಗಳನ್ನು ಬಾಂಬೆಯ ಕಂಪನಿ ಸರ್ಕಾರದಿಂದ ಖರೀದಿಸಿದನು. ಅವನು ೩೦ ಮಂದಿ ಯೂರೋಪಿನ ನಾವಿಕರನ್ನು ತನ್ನ ತೋಪುಖಾನೆಯ ಅಧಿಕಾರಿಗಳಿಗೆ ಮಲಬಾರ್ ತೀರದಲ್ಲಿ ತರಬೇತಿ ನೀಡಲು ನೇಮಿಸಿದನು. ಫಿರಂಗಿ ದಳಕ್ಕೆ ನೆರವಾಗುವಂತೆ ಸನೀನು ಉಳ್ಳ ಬಂದೂಕುಧಾರಿ ಪದಾತಿದಳವನ್ನು ನಿರ್ಮಿಸಿದ (ಮೊಹಮ್ಮದ್ ೧೮೫೫: ೩೫). ಹೈದರಾಲಿಯು ತನ್ನ ಅಣ್ಣನಾದ ಇಸ್ಮಾಯಿಲನ ಪ್ರಯೋಗವನ್ನು ದೊಡ್ಡಮಟ್ಟದಲ್ಲಿ ಅನುಕರಣೆ ಮಾಡಿದನು. ೧೭೬೭ರಲ್ಲಿ ಹೈದರಾಲಿಯ ರಣರಂಗದ ಸೇನೆಯು ೧೧,೦೦೦ ಅನಿಯತವಾದ ಅಶ್ವದಳ ಮತ್ತು ೧೨,೦೦೦ ಪದಾತಿದಳವನ್ನು ಹೊಂದಿತ್ತು. ಅದರಲ್ಲಿ ೮,೦೦೦ ಪದಾತಿದಳವು ಬಂದೂಕನ್ನು ಹೊಂದಿತ್ತು ಮತ್ತು ಉಳಿದ ೪,೦೦೦ ಬಂದೂಕನ್ನು ಹೊತ್ತಿಸುವ ಜಾವಿಗೆದಳವಾಗಿತ್ತು. ಅವನ ಅಧಿಕಾರಿಗಳು ಸೈನಿಕ ತರಬೇತಿಯನ್ನು ಫ್ರೆಂಚರ ಪಾಂಡಿಚೆರಿಯಲ್ಲಿ ಪಡೆದರು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಯುದ್ಧಗಳಲ್ಲಿ ಸೆರೆಸಿಕ್ಕ ಯೂರೋಪಿನ ಖೈದಿಗಳನ್ನು ತಮ್ಮ ಪದಾತಿದಳಕ್ಕೆ ತರಬೇತಿ ನೀಡಲು ಪ್ರೋತ್ಸಾಹಿಸುತ್ತಿದ್ದರು. ನಿರಾಕರಿಸಿದವರಿಗೆ ಕಿರುಕುಳವನ್ನು ನೀಡುತ್ತಿದ್ದರು. ೧೭೮೦ರ ಹೊತ್ತಿಗೆ ಮೈಸೂರು ಸೇನೆಯಲ್ಲಿ ೨೩,೦೦೦ ನಿತ್ಯ ಪದಾತಿದಳ ಮತ್ತು ೩೫೦೦ ಅನಿತ್ಯ ಅಶ್ವದಳವಿತ್ತು. ಅಂದರೆ ಅಶ್ವದಳಕ್ಕಿಂತಲು ಪದಾತಿದಳಕ್ಕೆ ಹೆಚ್ಚಿನ ಮನ್ನಣೆ ನೀಡಿದನು (ಕೌಶಿಕ್‌ರಾಯ್ ೨೦೦೫: ೬೬೮). ಹೀಗೆ ಸೇನೆಯಲ್ಲಿ ಆಧುನಿಕ ಶಸ್ತ್ರಾಸ್ತ್ರಗಳನ್ನು ಪರಿಚಯಿಸಿ ಸನ್ನದ್ಧಗೊಳಿಸಿದನು.

**ಟಿಪ್ಪು ಸುಲ್ತಾನನ ಫಿರಂಗಿಗಳು:** ಟಿಪ್ಪು ಸುಲ್ತಾನನ ಕಾಲದಲ್ಲಿಯೂ ಫಿರಂಗಿಗಳ ದೊಡ್ಡ ಪಡೆಯೇ ಇತ್ತು. ಬೆಂಗಳೂರಿನಲ್ಲಿ ಒಂದು ಮತ್ತು ಶ್ರೀರಂಗಪಟ್ಟಣದಲ್ಲಿ ಎರಡು ಫಿರಂಗಿಗಳನ್ನು ಉತ್ಪಾದಿಸುವ ಕಾರ್ಖಾನೆಗಳನ್ನು ಸ್ಥಾಪಿಸಿದ್ದನು. ಶ್ರೀರಂಗಪಟ್ಟಣದ ಕಾರ್ಖಾನೆಯು ಗಾಳಿಯಂತ್ರದ ಮೂಲಕ ಫಿರಂಗಿ ಮತ್ತು ಬಂದೂಕುಗಳಿಗೆ ರಂಧ್ರವನ್ನು ಕೊರೆಯುತ್ತಿದ್ದರು. ಮದ್ದೂರಿನ ಕೋಟೆಯೊಳಗೆ ಕೂಡ ಬಂದೂಕು ಮತ್ತು ಫಿರಂಗಿಗಳನ್ನು ಉತ್ಪಾದಿಸುವ ಎರಡು ಕಾರ್ಯಾಗಾರಗಳು ಇದ್ದವು. ಇದು ಸುಲ್ತಾನನ ಸೇನೆಗೆ

ಫಿರಂಗಿಯ ಸೇವೆಯನ್ನು ಒದಗಿಸುವ ಸಲುವಾಗಿ ೧೭ ತೋಪುಖಾನೆಗಳನ್ನು ಹೊಂದಿತ್ತೆಂದು ಹೇಳಲಾಗುತ್ತದೆ (ನಿಗಂ ೧೯೯೩: ೨೩೬).

ಶ್ರೀರಂಗಪಟ್ಟಣದ ಪತನ ನಂತರ ಬ್ರಿಟಿಷರು ಸುಮಾರು ೯೨೭ ಫಿರಂಗಿಗಳನ್ನು ವಶಪಡಿಸಿಕೊಂಡರು. ಅವುಗಳಲ್ಲಿ ಸುಮಾರು ೪೦೦ ಹಿತ್ತಾಳೆಯ ಫಿರಂಗಿಗಳನ್ನು ಟಿಪ್ಪುವಿನ ಕಾರ್ಖಾನೆಯಲ್ಲಿಯೇ ನಿರ್ಮಿಸಲ್ಪಟ್ಟಿದ್ದವು. ಉಳಿದವು ಫ್ರೆಂಚ್ ಮತ್ತು ಡಚ್ ಮೂಲದವಾಗಿದ್ದವು. ವಶಪಡಿಸಿಕೊಂಡ ಬಹುತೇಕ ಫಿರಂಗಿಗಳನ್ನು ಬ್ರಿಟಿಷರು ನಾಶಪಡಿಸಿದರು. ಕೆಲವೊಂದನ್ನು ಮಾತ್ರ ಗೆಲುವಿನ ಟ್ರೋಫಿಯಾಗಿ ಸಂರಕ್ಷಿಸಿದರು. ಅವುಗಳನ್ನು 'ಕ್ಯಾಸ್ಟ್‌ಆನ್' ವಿಧಾನದ ಮೂಲಕ ಮಾಡಲಾಗಿತ್ತು ಎಂದು ತಜ್ಞರು ಅಭಿಪ್ರಾಯಪಡುತ್ತಾರೆ (ಬಾಲಸುಬ್ರಮಣಿಯನ್ ೨೦೦೮: ೯೬).

ಇದಲ್ಲದೆ ಇನ್ನೂ ಆಧುನಿಕವಾದ ವಿಧಾನಗಳನ್ನು ಕೂಡ ಟಿಪ್ಪುವು ತನ್ನ ಫಿರಂಗಿಗಳ ಉತ್ಪಾದನೆಯಲ್ಲಿ ಬಳಸಿಕೊಂಡಿದ್ದ. ಕ್ಯಾಸ್ಟ್‌ಆನ್ ವಿಧಾನದಲ್ಲಿ ಫಿರಂಗಿಯ ಈಡು ಸರಿಯಾಗಿ ಆಗುತ್ತಿರಲಿಲ್ಲ. ಈ ಸಮಸ್ಯೆಯಿಂದ ಹೊರಬರುವ ಸಲುವಾಗಿ 'ಮಾರ್ಟಿಜ್ ಸಿಸ್ಟಂ'[೧೪] ಎಂಬ ಹೊಸ ವಿಧಾನವನ್ನು ಬಳಸಿಕೊಳ್ಳಲಾಯಿತು. ಮಾರ್ಟಿಜ್ ಸಿಸ್ಟಂ ಇನ್ನು ಆಗಮಿಸದಿದ್ದ ದಕ್ಷಿಣ ಭಾರತದಲ್ಲಿ ಟಿಪ್ಪುವು ಅದಕ್ಕಿಂತಲೂ ಅತ್ಯಾಧುನಿಕವಾದ ಅನೇಕ ವಿಧಾನಗಳನ್ನು ಅನುಸರಿಸುತ್ತಾ, ಸ್ಥಿರವಾಗಿ ಯೂರೋಪಿನ ತಂತ್ರಜ್ಞಾನವನ್ನು ತನ್ನ ಫಿರಂಗಿಗಳಲ್ಲಿ ಉನ್ನತೀಕರಿಸಿಕೊಳ್ಳುತ್ತಿದ್ದನು (ಬಾಲಸುಬ್ರಮಣಿಯನ್ ೨೦೦೮: ೯೩-೯೪).

ಟಿಪ್ಪು ಫಿರಂಗಿಯ ಲಕ್ಷಣಗಳು: ಟಿಪ್ಪು ಫಿರಂಗಿಗಳಲ್ಲಿ ಕಾಣಬಹುದಾದ ಸಾಮಾನ್ಯ ಲಕ್ಷಣಗಳು ಎರಡು: ಅವುಗಳೆಂದರೆ:

ಒಂದು – ತನ್ನ ಸಂಕೇತವಾದ ಹುಲಿಯ ಮುಖವನ್ನು ಸಾಮಾನ್ಯವಾಗಿ ಫಿರಂಗಿಗಳ ಬಾಯಿಯ ಮೇಲೆ ಕೆತ್ತಿಸುತ್ತಿದ್ದನು. ಕೆಲವೊಂದು ಫಿರಂಗಿಗಳಲ್ಲಿ ಹಿಂಬದಿಯಲ್ಲಿಯೂ ಮತ್ತು ಫಿರಂಗಿಯ ಎಡಬಲಗಳಲ್ಲಿರುವ ಆಸರೆ ಚಾಚುಗಳ ಮೇಲೆ ಕೂಡ ಹುಲಿಯ ಮುಖವನ್ನು ಕೆತ್ತಲಾಗುತ್ತಿತ್ತು.

ಮತ್ತೊಂದು – ಹುಲಿಯ ಸಂಕೇತದ ಕೆಳಗೆ ಅರೆಬಿಕ್ ಭಾಷೆಯಲ್ಲಿ 'ಅಸದುಲ್ಲಹ್ ಅಲ್-ಘಾಲಿಬ್' ('ದೇವರ ದಿಗ್ವಿಜಯದ ಸಿಂಹ' ಅಥವಾ 'ದೇವರ ಸಿಂಹದ ದಿಗ್ವಿಜಯಿ') ಎಂದು ಬರೆದಿರುವುದು. ಇದನ್ನು ಸಾಧಾರಣ ಕ್ಯಾಲಿಯೋಗ್ರಾಫಿಯಲ್ಲಿ ಬರೆದಿರುವುದನ್ನು ಕಾಣಬಹುದು. ಕೆಲವೊಮ್ಮೆ ಆ ಬರವಣಿಗೆಗಳಲ್ಲಿಯೂ ತಪ್ಪುಗಳನ್ನು ಬರೆದಿರುವುದಾಗಿ ಬಾಲಸುಬ್ರಮಣಿಯನ್ ಅವರು ಅಭಿಪ್ರಾಯಪಟ್ಟಿದ್ದಾರೆ (೨೦೦೮:

೨೧೧). ಲಕ್ಷ್ಣ ಹಿಂಬದಿಯಲ್ಲಿ ಹುಲಿಯ ಮುಖವುಳ್ಳ ದೊಡ್ಡ ಫಿರಂಗಿಯೊಂದು ಚೆನ್ನೈ ಗೌವರ್ನಮೆಂಟ್ ಮ್ಯೂಸಿಯಂನಲ್ಲಿದೆ.

ಟಿಪ್ಪು ಫಿರಂಗಿಯ ಗುಣಮಟ್ಟ ಕುರಿತು ಅಭಿಪ್ರಾಯಗಳು: ಬ್ರಿಟಿಷರು ೧೭೯೯ರಲ್ಲಿ ಟಿಪ್ಪುವನ್ನು ಶ್ರೀರಂಗಪಟ್ಟಣದ ಯುದ್ಧದಲ್ಲಿ ಮಣಿಸಿದ ಅವನ ಫಿರಂಗಿಗಳನ್ನು ಕಂಡು ಆಶ್ಚರ್ಯ ಚಕಿತಗೊಂಡರು. ಈ ಬಗ್ಗೆ ಟಿಪ್ಪುವಿನ ಶತ್ರುಬಣದ ನಾಯಕನಾದ ಲಾರ್ಡ್ ವೆಲ್ಲೆಸ್ಲಿಯು ಈ ರೀತಿ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾನೆ:

*...ನನ್ನ ಸೇವಾವಧಿಯಲ್ಲಿಯೇ ತುಂಬಾ ಒಳ್ಳೆಯ ಮತ್ತು ಅತ್ಯುತ್ತಮ ಸಾಧನಗಳು. ನಾವೆಂದಿಗೂ ಟಿಪ್ಪು ಬಳಸಿದ ಸಾಧನಗಳನ್ನು ಬಳಸಲಾರೆವು (ಬಾಲಸುಬ್ರಮಣಿಯನ್ ೨೦೦೮: ಪು. ೨೧೨).*



ಟಿಪ್ಪುವಿನ ಹುಲಿಮುಖದ ಫಿರಂಗಿ ಬಾಯಿ



ಟಿಪ್ಪುವಿನ ಫಿರಂಗಿಯ ಆಸರೆ ಚಾಚುಗಳ ಮೇಲೆ ಹುಲಿಮುಖ. ಮೇಲೆ ಅರೆಬಿಕ್ ಬರವಣಿಗೆ ಕಾಣಬಹುದು.



ಫಿರಂಗಿಯ ಹಿಂಭಾಗದಲ್ಲಿ ಹುಲಿಯ ತಲೆಯ ಸಂಕೇತ



ಹುಲಿಮುಖದ ಫಿರಂಗಿಬಾಯಿಯ ಪಾರ್ಶ್ವ ನೋಟ

**ಲಘು ಫಿರಂಗಿಗಳು**

ಟಿಪ್ಪು ಸುಲ್ತಾನನು ಹಗುರ ಫಿರಂಗಿಗಳನ್ನು ಕೂಡ ಉತ್ಪಾದಿಸಿದ್ದನು. ಫಿರಂಗಿಯ ಪರಿಣಾಮಕಾರಿತನವನ್ನು ಅವನ ಲಘು ಫಿರಂಗಿಗಳಲ್ಲಿ ಕಾಣಬಹುದು ಎನ್ನುತ್ತಾರೆ ತಜ್ಞರು. ಹಗುರ ಫಿರಂಗಿಗಳನ್ನು ಶ್ರೀರಂಗಪಟ್ಟಣದ ದರಿಯಾದೌಲತ್ ಅರಮನೆಯ ಮುಂಭಾಗದಲ್ಲಿ ಮತ್ತು ಮಡಿಕೇರಿಯ ಕೋಟೆಯ ಆವರಣದ ಒಳಗೆ ಕಾಣಬಹುದು. ಹೈದರನ ಕಾಲದಲ್ಲಿ ಇವುಗಳನ್ನು ವಿಶೇಷ ತಳಿಯ ಅಮೃತಮಹಲ್ ಎತ್ತುಗಳ ಸಹಾಯದಿಂದ ಎಳೆಸಲಾಗುತ್ತಿತ್ತು. ಅವನು ಸೈನಿಕ ವಸ್ತು ಸಾಗಾಣಿಕೆಗೆ ನೆರವಾಗಲು ಎತ್ತುಗಳ ಗೋಲಂದಾಜ ಪಡೆಯನ್ನು ರಚಿಸಿದ್ದನು. ಅವನ ಪಡೆಯಲ್ಲಿ ೬೦,೦೦೦ ಅಮೃತ್ ಮಹಲ್ ಎತ್ತುಗಳಿದ್ದವೆಂದು ತಿಳಿದು ಬರುತ್ತದೆ. ಟಿಪ್ಪುವು ಅಮೃತಮಹಲ್ ಹಸುಗಳಿಗಾಗಿಯೇ ಅಮೃತಮಹಲ್ ಛಾವಡಿ ಎಂಬ ಪ್ರತ್ಯೇಕ ಇಲಾಖೆಯನ್ನೇ ನಿರ್ಮಿಸಿದ. ಈ ಅಮೃತಮಹಲ್ ರಾಸುಗಳ ಬಗೆಗೆ ಫ್ರೆಂಚ್ ಸೇನಾಧಿಕಾರಿ ಕ್ಯಾಂಬೆಲ್ಲನು ಹೀಗೆ ಹೇಳುತ್ತಾನೆ: "ಟಿಪ್ಪು ಕ್ರಿಯಾಶೀಲ, ಮಹತ್ವಾಕಾಂಕ್ಷಿ ಮತ್ತು ಉತ್ತಮ ರಾಜನಾಗಿದ್ದನು. ನಮಗೆ ಕಂಡಂತೆ ಭಾರತೀಯ ಸಂಸ್ಥಾನಗಳಲ್ಲಿಯೇ ಕಾಣಸಿಗದಂತಹ ಹೆಚ್ಚಿನ ಗುಣಮಟ್ಟದ ದನಗಳು ಆತನ ಸೇನೆಯಲ್ಲಿದ್ದವು. ಟಿಪ್ಪುವಿನ ಗೋಲಂದಾಜ ಪಡೆಗಳು ಬಹಳ ಉತ್ತಮ ಸ್ಥಿತಿಯಿಂದಲೂ ಮತ್ತು ಉತ್ತಮ ಸೇವಾಭಾವನೆಯಿಂದಲು ಕೂಡಿದ್ದವು" ಎಂದಿದ್ದಾನೆ. ಟಿಪ್ಪುವು ಈ ವಿಶೇಷ ತಳಿಗಳಿಗೆ ಫಿರಂಗಿಗಳನ್ನು ವೇಗವಾಗಿ ಎಳೆದೊಯ್ಯುವ ತರಬೇತಿಯನ್ನು ನೀಡಿದ್ದನು. ಲಾರ್ಡ್ ವೆಲ್ಲೆಸ್ಲಿಯು ಟ್ರಫಲ್ಗಾರ್ ಕದನದ ವೇಳೆ ಟಿಪ್ಪುವಿನ ವೇಗದ ಎತ್ತುಗಳನ್ನು ಕುರಿತು ಮೆಚ್ಚುಗೆಯನ್ನು ವ್ಯಕ್ತಪಡಿಸಿದನು ಎನ್ನಲಾಗಿದೆ (ಪುಟ್ಟರಾಜ ೨೦೧೦: ೩೦೦–೩೦೯; ಬಾಲಸುಬ್ರಮಣಿಯನ್ ೨೦೦೮: ೨೧೨).

ಅದೇ ರೀತಿ ಸೈನ್ಯಕ್ಕೆ ಬೇಕಾದ ಕುದುರೆಗಳ ತಳಿ ಸಂವರ್ಧನೆಗಾಗಿ ಕುಣಿಗಲ್‌ನ ದೊಡ್ಡ ಕರೆಯ ಅಂಗಳದಲ್ಲಿ ದೊಡ್ಡ ಅಶ್ವವರ್ಧಕ ಶಾಲೆಯನ್ನು ತೆರೆದನು. ಅಲ್ಲಿ ಕುದುರೆಗಳ ತಳಿ ಅಭಿವೃದ್ಧಿ ಮತ್ತು ಸೈನಿಕ ತರಬೇತಿಯನ್ನು ನೀಡಲಾಗುತ್ತಿತ್ತು. ಇಂದಿಗೂ ಈ ಅಶ್ವವರ್ಧಕ ಶಾಲೆ ಅಸ್ತಿತ್ವದಲ್ಲಿದ್ದು, ರೇಸ್ ಕುದುರೆಗಳನ್ನು ತರಬೇತುಗೊಳಿಸಲಾಗುತ್ತಿದೆ.

ಬೆಂಗಳೂರಿನ ಮೆಟ್ರೋ ರೈಲ್ವೆ ಅಗೆತದ ವೇಳೆ ಟಿಪ್ಪು ಫಿರಂಗಿಗಳ ಪತ್ತೆ: ದಿನಾಂಕ ೨೨ ಮತ್ತು ೨೫ ಫೆಬ್ರವರಿ ೨೦೧೨ ರಂದು ಮೆಟ್ರೋ ರೈಲು ಭೂ ಅಗೆತ ನಡೆಸುವ ವೇಳೆ ಎರಡು ಫಿರಂಗಿಗಳು ಭೂ ಮಟ್ಟದಿಂದ ೪.೫ ಮೀ. ಆಳದಲ್ಲಿ ಪತ್ತೆಯಾದವು. ಭಾರತೀಯ ಪುರಾತತ್ತ್ವ ಸರ್ವೇಕ್ಷಣಾ ಇಲಾಖೆಯ ಉಪಅಧೀಕ್ಷಕ ಪುರಾತತ್ತ್ವವಿಧರಾದ ಟಿ.ಎಂ.ಕೇಶವ ಅವರು ಅವುಗಳನ್ನು ಪರಿಶೀಲಿಸಿದರು. ಅವುಗಳು

ಟಿಪ್ಪು ಸುಲ್ತಾನ್ ಕಾಲದ ಫಿರಂಗಿಗಳೆಂದು ಅಭಿಪ್ರಾಯ ಪಡುತ್ತಾರೆ. ಅಲ್ಲದೆ, ಉತ್ತಮವಾಗಿ ಎರಕ ಉಯ್ಯು ಮಾಡಲಾದ ಒಳ್ಳೆಯ ಫಿರಂಗಿಗಳಾಗಿದ್ದು, ಮಧ್ಯಮ ದೂರ ಕ್ರಮಿಸಬಲ್ಲ ನೀಳ ಕೊಳವೆಯ ಫಿರಂಗಿ ಎನ್ನುತ್ತಾರೆ. ಇವುಗಳ ದೂರ ೫೦೦ ರಿಂದ ೧೦೦೦ ಮೀ.ಗಳು ಎಂದು ಅಭಿಪ್ರಾಯಪಡುತ್ತಾರೆ (ಸಂದರ್ಶನ ೧೭.೦೪.೨೦೧೭). ಆದರೆ ಈ ಫಿರಂಗಿಗಳ ಮೇಲೆ ಹುಲಿಯ ಸಂಕೇತಗಳು ಕಾಣುವುದಿಲ್ಲ. ಎಲ್ಲಾ ಫಿರಂಗಿಗಳ ಮೇಲೂ ಹುಲಿಯ ಸಂಕೇತಗಳು ಕಡ್ಡಾಯವಾಗಿ ಇರಲಿಲ್ಲವೆಂದು ತೋರುತ್ತದೆ.



ಬೆಂಗಳೂರಿನ ಮೆಟ್ರೋ ರೈಲ್ವೆ ಹಳಿಹಾಕಲು ಟಿಪ್ಪು ಅರಮನೆಯ ಮುಂಭಾಗ ಅಗೆಯುತ್ತಿದ್ದಾಗ ದೊರೆತ ಫಿರಂಗಿಗಳು

ಫಿರಂಗಿಗಳನ್ನು ಆಕ್ರಮಣಕ್ಕಾಗಿ ಯುದ್ಧಭೂಮಿಗೆ ಎಳೆದೊಯ್ಯುವಂತೆ ಭಾರಿಗಾತ್ರದ ಫಿರಂಗಿಗಳನ್ನು ರಕ್ಷಣೆಯ ಉದ್ದೇಶಕ್ಕಾಗಿ ಕೋಟೆಗಳ ಕೊತ್ತಳ, ಬತೇರಿ-ಬುರುಜುಗಳ ಮೇಲೆ ಇಡಲಾಗುತ್ತಿತ್ತು. ಕೋಟೆಗಳ ಮೇಲೇರಿ ಬರುವ ಶತ್ರುಗಳ ದೊಡ್ಡ ಸೈನ್ಯವನ್ನು ಹಿಮ್ಮೆಟ್ಟಿಸುವ ಅಸ್ತ್ರ ಫಿರಂಗಿಗಳೇ ಆಗಿದ್ದವು. ಹೈದರಾಲಿಯು ೧೭೮೦ರ ದಶಕದಲ್ಲಿ ಬೆಂಗಳೂರು ಕೋಟೆ ಮತ್ತು ಕೊತ್ತಳಗಳನ್ನು ಕಲ್ಲಿನಲ್ಲಿ ಕಟ್ಟಿಸುವ ಮೂಲಕ ದುರಸ್ಥಿ ಮಾಡಿಸಿ ಕೊತ್ತಳಗಳಿಗೆ ಎರಡೆರಡರಂತೆ ೭೨ ಫಿರಂಗಿಗಳನ್ನು ಇಡಿಸಿದ್ದನೆಂದು ತಿಳಿದು ಬರುತ್ತದೆ. ೧೭೯೧ರಲ್ಲಿ ಬ್ರಿಟಿಷರು ಬೆಂಗಳೂರು ಕೋಟೆಯನ್ನು ಮುತ್ತಿಗೆ ಹಾಕಿದ ನಂತರ ಮರುವರ್ಷ ಬ್ರಿಟಿಷರು ಆ ಕೋಟೆಯನ್ನು ಮತ್ತೆ ಟಿಪ್ಪುವಿಗೆ ಬಿಟ್ಟುಕೊಡುತ್ತಾರೆ. ಆದರೆ ಮುಂದೆ ಈ ಕೋಟೆಯು ಬ್ರಿಟಿಷರಿಗೆ ರಕ್ಷಣಾ ಸ್ಥಾನವಾಗುವುದೆಂದು ಭಾವಿಸಿ ಟಿಪ್ಪು ಸುಲ್ತಾನನು ತನ್ನ ಸೈನಿಕರಿಂದ ಬೆಂಗಳೂರು ಕೋಟೆಯನ್ನು ಕೆಡವಿಸಿದನು (ಮೂನ ೨೦೦೯: ೧೦೫). ಈ ವೇಳೆ ಕೋಟೆಯ ಕೊತ್ತಳಗಳ ಮೇಲಿದ್ದ ಫಿರಂಗಿಗಳು ಕೆಳಕ್ಕುರುಳಿ ಬಿದ್ದಿರಬೇಕು. ಹೀಗೆ ಬಿದ್ದ ಫಿರಂಗಿಗಳು ಕಾಲಕ್ರಮೇಣ ಮಣ್ಣಿನಲ್ಲಿ ಹುದುಗಿಹೋಗಿರಬಹುದು. ಒಟ್ಟಾರೆ ಮಧ್ಯಕಾಲೀನ ಮತ್ತು ನಂತರದ ಘಟ್ಟದಲ್ಲಿ ಕೋಟೆಯ ರಕ್ಷಣೆಯಲ್ಲಿ ಫಿರಂಗಿಯ ಪಾತ್ರ ಮಹತ್ವದ್ದಾಗಿದೆ.

೩.೨.೮ ಬಂದಿಖಾನೆಗಳು

ಟಿಪ್ಪು ಕಾಲದ ಕೋಟೆಗಳಲ್ಲಿ ಗುರುತಿಸಬಹುದಾದ ಮತ್ತೊಂದು ಪ್ರಮುಖ ಅಂಶವೆಂದರೆ ಬಂದಿಖಾನೆಗಳು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ತಮ್ಮ ಆಳ್ವಿಕೆಯ ಬಹುಕಾಲವನ್ನು ಯುದ್ಧಗಳಲ್ಲಿಯೇ ಕಳೆದರು. ಯುದ್ಧಗಳಲ್ಲಿ ಸೆರೆಸಿಕ್ಕ ಶತ್ರು ಸೈನ್ಯದ ಮುಖ್ಯಸ್ಥರು ಮತ್ತು ಯುದ್ಧ ಖೈದಿಗಳನ್ನು ಕರೆತಂದು ಬಂಧನದಲ್ಲಿಡುತ್ತಿದ್ದರು. ೧೭೮೧ರಲ್ಲಿ ಹೈದರಾಲಿಯು ಶ್ರೀರಂಗಪಟ್ಟಣದಲ್ಲಿ ೫೦ ಪಾಳೇಗಾರರನ್ನು ಖೈದಿಗಳನ್ನಾಗಿ ಬಂಧಿಸಿದ್ದನು (ಸಾಕಿ ೧೯೯೮: ೩೭೦). ಅನೇಕ ಖೈದಿಗಳನ್ನು ಮಧುಗಿರಿ, ಹುತ್ರಿದುರ್ಗ, ಕಬ್ಬಾಳು ದುರ್ಗ ಮುಂತಾದ ಕಡೆಗಳಲ್ಲಿ ಬಂಧಿಸಿಡಲಾಗುತ್ತಿತ್ತು. ಅಂದರೆ ಪ್ರತಿಕೋಟೆಗಳಲ್ಲಿಯೂ ಸೆರೆಮನೆಗಳಿದ್ದವು.

ಬಂದಿಖಾನೆ ಇನ್ನೊಂದು ಇನ್‌ಮಾನ್ಸ್ ಬಂದಿಖಾನೆ. ಬೈಲಿ ಬಂದಿಖಾನೆಯು ಡೆಲ್ಲಿ ದ್ವಾರದ ಸಮೀಪದಲ್ಲಿ ಉತ್ತರ ಕೋಟೆ ಗೋಡೆಯಲ್ಲಿ ನಿರ್ಮಿಸಲ್ಪಟ್ಟಿದೆ. ಭೂಮಟ್ಟದಿಂದ ಸುಮಾರು ೪ ಮೀ. ಕೆಳಗೆ ನಿರ್ಮಿಸಲಾಗಿದ್ದು, ಯಾರ ಕಣ್ಣಿಗೂ ತಕ್ಷಣ ಕಾಣದಂತೆ ನಿರ್ಮಿಸಲಾಗಿದೆ. ಇದರ ವಿಸ್ತೀರ್ಣ ೧೦೦ ಉದ್ದ ಮತ್ತು ೪೦ ಅಡಿ ಅಗಲ. ಬಂದಿಖಾನೆಯ ಒಳಗೋಡೆಯು ಇಟ್ಟಿಗೆಯಿಂದ ನಿರ್ಮಿಸಲ್ಪಟ್ಟಿದ್ದು ಗೋಡೆಯ ಸುತ್ತ ಅರ್ಧ ಅಡಿ ಹೊರಬಂದಿರುವ ಚಪ್ಪಡಿಗಳಿವೆ. ಈ ಚಪ್ಪಡಿಗಳಲ್ಲಿ ರಂಧ್ರಗಳನ್ನು ಕೊರೆಯಲಾಗಿದೆ. ಸರಪಳಿಗಳನ್ನು ರಂಧ್ರದ ಮೂಲಕ ಹಾಕಿ ಖೈದಿಗಳನ್ನು ಇಲ್ಲಿ ಕಟ್ಟಿ ಬಂಧಿಸಿಡಲಾಗುತ್ತಿತ್ತೆಂದು ಹೇಳಲಾಗುತ್ತದೆ. ಅನೇಕ ಇಂಗ್ಲಿಷ್ ಸಿಪಾಯಿಗಳನ್ನು ಮತ್ತು ಅಧಿಕಾರಿಗಳನ್ನು ಖೈದಿಗಳನ್ನಾಗಿ ಇಲ್ಲಿ ಬಂಧಿಸಿಡಲಾಗಿತ್ತು. ಅವರನ್ನು ಬತೇರಿ ಮೇಲಿನಿಂದ ಟಿಪ್ಪುವಿನ ಸಿಪಾಯಿಗಳು ವೀಕ್ಷಿಸುತ್ತಿದ್ದರು. ಕೊಲೊನಲ್ ಬೈಲಿಯನ್ನು ಇಲ್ಲಿ ಕೆಲಕಾಲ ಬಂಧಿಸಿಡಲಾಗಿತ್ತು. ಆದ್ದರಿಂದ ಈ ಬಂದಿಖಾನೆಗೆ 'ಬೈಲಿ ಬಂದಿಖಾನೆ' ಎಂಬ ಹೆಸರು ಬಂದಿದೆ. ಶ್ರೀರಂಗಪಟ್ಟಣ ಮುತ್ತಿಗೆಯ ವೇಳೆ ಬತೇರಿ ಮೇಲಿನಿಂದ ಫಿರಂಗಿಯೊಂದು ಉರುಳಿ ಬಿದ್ದಿತಂತೆ. ಅದನ್ನು ಇಂದಿಗೂ ಅಲ್ಲಿಯೇ ಇರಿಸಲಾಗಿದೆ. ಇದರ ಮೇಲ್ಭಾಗದಲ್ಲಿ ಸುಲ್ತಾನ್ ಬತೇರಿ ಎಂದು ಕರೆಯಲಾಗುವ ಭಾರಿ ಬತೇರಿ ನಿರ್ಮಿಸಲಾಗಿದೆ.

ಬಂದಿಖಾನೆಯ ಮೇಲೆ ಬತೇರಿ ಇದೆ. ಇದು ೪೫ ಅಡಿ ಉದ್ದ ಮತ್ತು ೩೨ ಅಡಿ ಅಗಲವಿರುವ ಚಿಕ್ಕ ಸೆರೆಮನೆಯಾಗಿದೆ. ಇದನ್ನು ೧೮೯೫ರಲ್ಲಿ ಥೋಸ್ ಇನ್‌ಮನ್ ಎಂಬ ಇಂಜಿನಿಯರ್ ಬೆಳಕಿಗೆ ತಂದನು. ಆದ್ದರಿಂದ ಅವನ ಹೆಸರನ್ನೆ ಇದಕ್ಕೆ ಇಡಲಾಗಿದೆ. ಶ್ರೀರಂಗಪಟ್ಟಣ ಮುತ್ತಿಗೆಯ ವೇಳೆ ಇಲ್ಲಿ ಬಂಧನದಲ್ಲಿರಿಸಲಾಗಿದ್ದ ಮರಾಠರ ಧೋಂಡಿಯವಾಘ್‌ನನ್ನು ಇಲ್ಲಿಯೇ ಬಂಧಿಸಿಡಲಾಗಿತ್ತು. ಅವನು ಇಸ್ಲಾಂ

ಧರ್ಮಕ್ಕೆ ಮತಾಂತರಗೊಳ್ಳದ ಕಾರಣ ಅವನನ್ನು ಬಂಧಿಸಿ ಸೆರೆಗೆ ತಳ್ಳಲಾಯಿತು (ಎಂ.ಎ.ಆರ್ ೧೯೩೫: ೬೧).



ಬಸವನ ಬರುಜಿನಲ್ಲಿರುವ ಬಂದಿಖಾನೆ (ಚಿತ್ರದುರ್ಗ)



ಬಸವನ ಬರುಜಿನ ಬಂದಿಖಾನೆಯ ಒಳನೋಟ

ಚಿತ್ರದುರ್ಗದ ಬಸವನ ಬುರುಜಿನ ಕೆಳಭಾಗದಲ್ಲಿಯೂ ದೊಡ್ಡ ಬಂದಿಖಾನೆ ಇದೆ. ಕೂಡ ಟಿಪ್ಪುವಿನ ಕಾಲದಲ್ಲಿ ನಿರ್ಮಾಣವಾಗಿದೆ. ಇದನ್ನು ಸಹ ಕೋಟೆಯ ಗೋಡೆಗೆ ಹೊಂದಿಕೊಂಡಂತೆ ನಿರ್ಮಿಸಲಾಗಿದೆ. ಒಳಭಾಗಗಳು ಕಮಾನುಗಳಿಂದ ವಿಭಾಗಿಸಲ್ಪಟ್ಟಿದೆ. ಬಹಳ ಸುಭದ್ರವಾಗಿ ನಿರ್ಮಿಸಲ್ಪಟ್ಟಿರುವ ಈ ಬುರುಜಿನಲ್ಲಿ ಅನೇಕ ಇಂಗ್ಲಿಷ್ ಸೈನಿಕರನ್ನು ಬಂಧಿಸಿಡಲಾಗಿತ್ತು. ಬೆಂಗಳೂರಿನ ಕೋಟೆಯಲ್ಲಿಯೂ ಖೈದಿಗಳನ್ನು

ಬಂಧಿಸುವ ಕಾರಾಗೃಹಗಳನ್ನು ಗೋಡೆಗಳಲ್ಲಿಯೇ ನಿರ್ಮಿಸಿದ್ದಾರೆ. ಇದು ಯಾರಿಗೂ ಗುರುತಿಸಲಾಗದಂತೆ ಅಗೋಚರವಾಗಿವೆ. ಮಡಿಕೇರಿ ಕೋಟೆಯಲ್ಲಿ ಪಹರೆಕಟ್ಟೆಯ ಕೆಳಭಾಗದಲ್ಲಿ ಬಂದಿಖಾನೆಯನ್ನು ನಿರ್ಮಿಸಿದ್ದಾರೆ. ಚನ್ನಪಟ್ಟಣ ಸಮೀಪದ ಕಬ್ಬಾಳು, ಮಧುಗಿರಿ, ಹುತ್ರಿದುರ್ಗಗಳಲ್ಲಿಯೂ ದೊಡ್ಡ ಬಂದಿಖಾನೆಗಳು ಇದ್ದವು. ಆದರೆ ಇಂದು ಶಿಥಿಲವಾಗಿವೆ.

**ಉದ್ದೇಶ** : ಕೋಟೆಯ ಗೋಡೆಯಲ್ಲಿಯೇ ಬಂದಿಖಾನೆಯನ್ನು ನಿರ್ಮಿಸಿ ಅದರ ಮೇಲೆ ಬುರುಜು – ಬತೇರಿಗಳನ್ನು ನಿರ್ಮಿಸುವುದು. ಪಹರೆಕಟ್ಟೆಯ ಕೆಳಗಿನ ಪ್ರದೇಶಗಳನ್ನು, ಕೋಟೆಯ ಗೋಡೆಗಳನ್ನು ಬಳಸಿಕೊಂಡು ಬಂದಿಖಾನೆ ನಿರ್ಮಿಸುವುದು ಟಿಪ್ಪು ಕಾಲದ ಕೋಟೆಗಳಲ್ಲಿನ ವಿಶಿಷ್ಟತೆಯಾಗಿದೆ. ಹೀಗೆ ನಿರ್ಮಾಣ ಮಾಡುವುದರ ಉದ್ದೇಶ ಕೋಟೆಯೊಳಗಿನ ಸ್ಥಳಗಳನ್ನು ಸಮರ್ಪಕವಾಗಿ ಬಳಕೆ ಮಾಡಿಕೊಳ್ಳುವುದಾಗಿದೆ. ಬತೇರಿ, ಬುರುಜುಗಳ ಅಡಿಯಲ್ಲಿಯೇ ನಿರ್ಮಿಸುವುದರಿಂದ ಬತೇರಿಯಲ್ಲಿ ಶತ್ರುಗಳ ಚಲನವಲನಗಳನ್ನು ವೀಕ್ಷಿಸಲು ಸದಾ ಸಿಪಾಯಿಗಳು ಜಾಗೃತರಾಗಿರುತ್ತಾರೆ. ಅವರು ಈ ಬಂದಿಖಾನೆಯಲ್ಲಿರುವ ಖೈದಿಗಳನ್ನು ಸಹ ಸದಾ ವೀಕ್ಷಿಸುತ್ತಿರುತ್ತಾರೆ. ಇದರಿಂದ ಖೈದಿಗಳು ತಪ್ಪಿಸಿಕೊಳ್ಳುವ ಪ್ರಯತ್ನವಿರಲಿ, ಆಲೋಚನೆಯನ್ನೂ ಮಾಡಲಾರರು.

### ೩.೨.೯ ಶೌಚಾಲಯ :



**ಶೌಚಾಲಯ ವ್ಯವಸ್ಥೆ, ಮಂಜರಾಬಾದ್.**

ನಿತ್ಯ ಎಲ್ಲರಿಗೂ ಬೇಕಾಗಿರುವ ಒಂದು ವ್ಯವಸ್ಥೆ ಎಂದರೆ ಶೌಚಾಲಯದ ವ್ಯವಸ್ಥೆ. ಜನಸಾಮಾನ್ಯರು ಇದರ ಬಗೆಗೆ ಹೆಚ್ಚೇನು ತಲೆಕೆಡೆಸಿಕೊಳ್ಳುವುದಿಲ್ಲ. ಆದರೆ ರಾಜಪರಿವಾರ ಮತ್ತು ಕುಲೀನರಿಗೆ ಇದು ಮುಖ್ಯವಾಗಿ ಬೇಕಿರುವ ವ್ಯವಸ್ಥೆ. ಏಕೆಂದರೆ ಜನಸಾಮಾನ್ಯರಂತೆ ಕೋಟೆಯಿಂದ ಹೊರಗೆ ಅಥವಾ ಕೆರೆ, ನದಿ, ಹಳ್ಳಕೊಳ್ಳಗಳ ಬಳಿಗೆ ಹೋಗಲಾಗದು. ಆದ್ದರಿಂದ ವಸತಿ ಪ್ರದೇಶದಲ್ಲಿಯೇ ಶೌಚಾಲಯ ವ್ಯವಸ್ಥೆಯನ್ನು ಹೊಂದುವುದು ಮುಖ್ಯವಾದ ಸಂಗತಿ. ಪ್ರಸ್ತುತ ಮಹಾಪ್ರಬಂಧದಲ್ಲಿ ಈ ಕುರಿತು ಅಧ್ಯಯನ ನಡೆಸಲು ಪ್ರಯತ್ನಿಸಲಾಗಿದೆ.

ಟಿಪ್ಪು ಸುಲ್ತಾನನ ಕಾಲದ ಕೋಟೆಗಳಲ್ಲಿ ಕಂಡುಬರುವ ಮತ್ತೊಂದು ಪ್ರಮುಖ ಲಕ್ಷಣಗಳೆಂದರೆ ಶೌಚಾಲಯಗಳ ವ್ಯವಸ್ಥೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೆಲವು ಕೋಟೆಗಳಲ್ಲಿ ಶೌಚಾಲಯಗಳು ಕಂಡುಬಂದಿವೆ. ಮುಖ್ಯವಾಗಿ ಶ್ರೀರಂಗಪಟ್ಟಣ, ನಂದಿದುರ್ಗ, ಮಂಜರಾಬಾದ್‌ಗಳಲ್ಲಿ ಕ್ಷೇತ್ರಕಾರ್ಯದ ವೇಳೆ ಗಮನಕ್ಕೆ ಬಂದಿವೆ. ನಂದಿದುರ್ಗದಲ್ಲಿರುವ ಟಿಪ್ಪುವಿನ ಅರಮನೆಯ ಒಳಗೆ ಪ್ರತ್ಯೇಕ ಶೌಚಾಲಯ ವ್ಯವಸ್ಥೆ ಇದೆ. ಅದೇ ರೀತಿ ಮಂಜರಾಬಾದ್ ಕೋಟೆಯಲ್ಲಿಯೂ ನಿವಾಸಗಳ ಪಕ್ಕದಲ್ಲಿ ಶೌಚಾಲಯ ವ್ಯವಸ್ಥೆ ಇದ್ದು, ಅದಕ್ಕಾಗಿ ಪ್ರತ್ಯೇಕವಾದ ಚಿಕ್ಕ ಕೋಣೆಯನ್ನು ಮೀಸಲಿಟ್ಟಿದ್ದಾರೆ. ಬೇಕಲ್ ಕೋಟೆಯುಲ್ಲಿ ಅರಮನೆಗಳ ಅವಶೇಷಗಳು ಶಿಥಿಲಗೊಂಡಿರುವುದರಿಂದ ಅಲ್ಲಿ ನಡೆಸಿದ ಉತ್ಖನನದಲ್ಲಿ ಶೌಚಾಲಯ ಕಮೊಡ್ ಸಿಕ್ಕಿದೆ. ಶ್ರೀರಂಗಪಟ್ಟಣದ ಶಿಥಿಲಗೊಂಡಿರುವ ಟಿಪ್ಪುವಿನ ಅರಮನೆ ಲಾಲ್‌ಮಹಲ್‌ನಲ್ಲಿಯೂ ಕೂಡ ಶೌಚಾಲಯ ಗುರುತುಗಳು ದೊರೆತಿವೆ.



ಶೌಚಾಲಯದ ಕುರುಹುಗಳು, ಲಾಲ್‌ಮಹಲ್, ಶ್ರೀರಂಗಪಟ್ಟಣ. (ಚಿತ್ರ: ಲೇಖಕರದು)

### ೩.೨.೧೦ ಅರಮನೆ ಅಥವಾ ಮಹಲ್‌ಗಳು

ಅರಮನೆ ಎಂದರೆ ಅದು ರಾಜಧಾನಿಯಲ್ಲಿ ಮಾತ್ರ ಇರುತ್ತದೆ ಎಂಬ ಸಾಮಾನ್ಯ ಅಭಿಪ್ರಾಯವಿದೆ. ಉತ್ತಮ ಹವಾಮಾನ ಇರುವ ಪ್ರಮುಖವಾದ ಕೋಟೆಗಳಲ್ಲಿ ಟಿಪ್ಪು ಸುಲ್ತಾನ್ ಅರಮನೆಗಳನ್ನು ನಿರ್ಮಿಸಿದ್ದಾನೆ. ಕ್ಷೇತ್ರಕಾರ್ಯ ವೇಳೆ ರಾಜಧಾನಿ ಶ್ರೀರಂಗಪಟ್ಟಣ ಹೊರತು ಪಡಿಸಿದರೆ, ಬೆಂಗಳೂರು, ನಂದಿದುರ್ಗ, ವೆಲ್ಲೂರುಗಳಲ್ಲಿ ಅರಮನೆ ಅಥವಾ ಮಹಲ್‌ಗಳು ಕಂಡು ಬಂದಿವೆ. ಶ್ರೀರಂಗಪಟ್ಟಣದ ಕೋಟೆಯ ಒಳಗೆ ಲಾಲ್‌ಮಹಲ್ ಎಂಬ ಟಿಪ್ಪುವಿನ ಅರಮನೆ ಇತ್ತು. ವಿಶಾಲ ಸಭಾಂಗಣ ಮತ್ತು ಹಲವು ಕೋಣೆಗಳನ್ನು ಹೊಂದಿರುವ ಈ ಅರಮನೆಯು ಅತ್ಯಂತ ಸುಂದರವಾಗಿತ್ತೆಂದು ತೋರುತ್ತದೆ. ಅದರ ಬಗೆಗೆ ಬುಕನಾನ್ ಕೂಡ ಬರೆದಿದ್ದಾನೆ. ಈ ಅರಮನೆಯಲ್ಲಿ ನೀರಿನ ವ್ಯವಸ್ಥೆ ಆಕರ್ಷಕವಾಗಿದೆ. ಇದರ ಹಿಂಭಾಗದಲ್ಲಿಯೇ ಟಿಪ್ಪುವಿನ 'ಜನಾನ' ಇದ್ದ ಕುರುಹುಗಳಿವೆ. ಈ ಅರಮನೆಯಲ್ಲಿ ಶೌಚಾಲಯ ವ್ಯವಸ್ಥೆಗಳಿದ್ದ ಕುರುಹುಗಳಿವೆ. ಇಂತಹ ಅರಮನೆಯನ್ನು ಬ್ರಿಟಿಷರು ಶಿಥಿಲಗೊಳಿಸಿದರು.[೧೪] ಶ್ರೀರಂಗಪಟ್ಟಣದ ಕೋಟೆಯ ಹೊರಗೆ ಗಂಜಾಂ ಮಾರ್ಗದ ಎಡಕ್ಕೆ ನಿರ್ಮಿಸಿರುವ 'ದರಿಯಾ ದೌಲತ್' ಅರಮನೆ ಇಂದು ಸುಸ್ಥಿತಿಯಲ್ಲಿದೆ. ೧೭೮೪ರಲ್ಲಿ ನಿರ್ಮಾಣವಾದ ಇದು ಟಿಪ್ಪುವಿನ ಬೇಸಿಗೆ ಅರಮನೆಯಾಗಿತ್ತು. ಇದಕ್ಕೆ ಸ್ಫೂರ್ತಿ ಅಳಿದು ಹೋಗಿರುವ ಶಿರಾದ ಅರಮನೆ ಎಂದು ಹೇಳಲಾಗುತ್ತದೆ. ಶಿರಾದ ಅರಮನೆಯು ಮೊಘಲ್ ರಾಜ್ಯಪಾಲ ದಿಲ್‌ವರ್ ಖಾನನಿಂದ ನಿರ್ಮಿಸಲ್ಪಟ್ಟಿತ್ತು (ಸ್ವಾಮಿ ೧೯೯೬: ೫೯-೬೦).



**ಅಳಿದುಳಿದ ಲಾಲ್ ಮಹಲ್, ಶ್ರೀರಂಗಪಟ್ಟಣ** (ಚಿತ್ರಕೃಪೆ: ನಮಿತಾ ಪಿ.)

ಇದೇ ಮಾದರಿಯಲ್ಲಿ ಹೆಚ್ಚಾಗಿ ಮರಗಳಿಂದ ನಿರ್ಮಿಸಲ್ಪಟ್ಟ ಬೆಂಗಳೂರಿನ ಅರಮನೆಯು ಆಕರ್ಷಕವಾಗಿದೆ. ಇದನ್ನು ಹೈದರಾಲಿಯು ೧೭೮೧ರಲ್ಲಿ ಕಟ್ಟಿಸಲಾರಂಭಿಸಿದನು. ಅವನು ಮರಣ ಹೊಂದಿದ್ದರಿಂದ ಕೆಲಸವನ್ನು ಮುಂದುವರಿಸಿದ ಟಿಪ್ಪುವು ೧೭೯೨ರಲ್ಲಿ ಪೂರ್ಣಗೊಳಿಸಿದನು. ನಂದಿದುರ್ಗದ ಬೇಸಿಗೆಯ ಅರಮನೆ ಸರಳವಾಗಿರುವ ಕಟ್ಟಡವಾಗಿದೆ. ವೆಲ್ಲೂರಿನಲ್ಲಿ ಹೈದರಾಲಿ ಮತ್ತು ಟಿಪ್ಪುವಿನ ಹೆಸರಿನಲ್ಲಿ ಎರಡು ಮಹಲ್‌ಗಳಿವೆ. ಆದರೆ ಅದು ಇಂದು ಕಾರಾಗೃಹವಾಗಿದ್ದು, ಒಳಗೆ ಪ್ರವೇಶವನ್ನು ನಿಷೇಧಿಸಲಾಗಿದೆ. ಮಡಿಕೇರಿಯ ಕೋಟೆಯ ಒಳಗೂ ಸಹ ಒಂದು ಅರಮನೆ ಇದೆ. ಆದರೆ ಇದಕ್ಕೂ ಟಿಪ್ಪು ಸುಲ್ತಾನನಿಗೂ ಸಂಬಂಧ ಇಲ್ಲ. ಇದನ್ನು ೧೮೧೨ರಲ್ಲಿ ದೊಡ್ಡವೀರ ರಾಜ ನಿರ್ಮಿಸಿದನೆಂದು ರೈಸ್ ಹೇಳುತ್ತಾರೆ (ರೈಸ್ ೧೮೭೮: ೩೦೨).



ಟಿಪ್ಪುವಿನ ಬೇಸಿಗೆ ಅರಮನೆ, ಬೆಂಗಳೂರು. (ಚಿತ್ರ: ಲೇಖಕರದು)



ಟಿಪ್ಪುವಿನ ಬೇಸಿಗೆ ಅರಮನೆ. ನಂದಿದುರ್ಗ. (ಚಿತ್ರಕೃಪೆ: ಟಿ.ಪಿ. ವಿಜಯ್)

### ೩.೨.೧೧ ಗಾರೆಗಚ್ಚು

ಹೈದರ್ ಮತ್ತು ಟಿಪ್ಪು ಸುಲ್ತಾನ್ ಕಾಲದ ಕೋಟೆಗಳಲ್ಲಿ ಗಮನಿಸಬಹುದಾದ ಮತ್ತೊಂದು ಅಂಶ ಗಾರೆಗಚ್ಚು. ಅವರ ಕಾಲದ ಕೋಟೆಗಳನ್ನು ಸಾಮಾನ್ಯವಾಗಿ ಕಲ್ಲಿನಿಂದ ನಿರ್ಮಿಸಿದ್ದು, ಕಲ್ಲುಗಳ ಸಂದುಗಳನ್ನು ಗಾರೆಗಚ್ಚುಗಳಿಂದ ಭರ್ತಿ ಮಾಡಿರುತ್ತಾರೆ. ಇದು ಕೋಟೆಯ ಬಲಿಷ್ಠತೆಗೆ ಕಾರಣವಾಗಿದೆ. ಅಲ್ಲದೆ ಕೋಟೆಗೋಡೆಗಳ ಮೇಲೆ ನಿರ್ಮಿಸುವ ಕುಂಬೆ ಅಥವಾ ಕೈಪಿಡಿಗೋಡೆಗಳನ್ನು ಸಾಮಾನ್ಯವಾಗಿ ಕಾಣಬಹುದು. ಈ ಗೋಡೆಗಳನ್ನು ಇಟ್ಟಿಗೆ ಮತ್ತು ಗಾರೆಯನ್ನು ಬಳಸಿ ನಿರ್ಮಿಸಿದ್ದಾರೆ. ಇವು ಫಿರಂಗಿಗಳ ಒಡೆತಕ್ಕೂ ಸಹ ಅಲುಗದೆ ಸ್ಥಿರವಾಗಿ ನಿಂತಿವೆ. ಕುಂಬೆಗಳ ಗೋಡೆಗಳನ್ನು ಹೊರಭಾಗಕ್ಕೆ ಇಳಿಜಾರಾಗಿ ನಿರ್ಮಿಸಿರುತ್ತಾರೆ. ಮೇಲೆಯೇ ಚರ್ಚಿಸಿರುವಂತೆ ತೂರಿಬರುವ ಫಿರಂಗಿ ಗುಂಡುಗಳು ಕುಂಬೆಗೆ ತಾಗಿ ಹೊರಕ್ಕೆ ಜಾರಿ ಬೀಳಲಿ ಎಂಬುದಾಗಿದೆ. ಇಷ್ಟೆಲ್ಲ ಆಕ್ರಮಣದ ನಡುವೆಯೂ ಕುಂಬೆಗಳು ಸ್ಥಿರವಾಗಿ ನಿಲ್ಲಲ್ಲು ಕಾರಣವಾಗಿರುವ ಅಂಶ ಗಾರೆಗಚ್ಚು.

ಇದಲ್ಲದೆ ಗಾರೆಗಚ್ಚುಗಳಿಂದ ಕೋಟೆಯ ವಿವಿಧ ಭಾಗಗಳನ್ನು ನಿರ್ಮಿಸಲಾಗಿದೆ. ಕೊತ್ತಳಗಳಲ್ಲಿ ಫಿರಂಗಿ ಕಿಂಡಿಗಳು, ಬತೇರಿಗಳು, ಸೈನಿಕರ ವಿಶ್ರಾಂತ ಗೃಹಗಳು, ಮದ್ದಿನ ಮನೆಗಳು, ಕೋಟೆಯ ಗೋಡೆಗಳು, ತೆನೆಗಳು, ನೀರಿನ ದೊಣೆಗಳು ಅಥವಾ ಸಂಗ್ರಹಗಾರಗಳು ಮೊದಲಾದವುಗಳನ್ನು ನಿರ್ಮಿಸುತ್ತಿದ್ದರು. ಮದ್ದಿನ ಮನೆಗಳನ್ನು ಗಾರೆಗಚ್ಚುಗಳಿಂದ ನಿರ್ಮಿಸಿರುವುದನ್ನು ಮೇಲೆ ನೋಡಿದ್ದೇವೆ. ಕಲ್ಲಿನ ಕೋಟೆಯ ಗೋಡೆ ನಿರ್ಮಿಸಿರುವುದನ್ನು ಚಿತ್ರದುರ್ಗ, ಬೆಂಗಳೂರು, ನಂದಿದುರ್ಗ, ದೇವನಹಳ್ಳಿ, ವೆಲ್ಲೂರು ಮುಂತಾದ ಕಡೆಗಳಲ್ಲಿ ಕಾಣಬಹುದು. ಬೇಕಲ್ ಕೋಟೆಯನ್ನು ಜಂಬಿಟ್ಟಿಗೆ ಮತ್ತು ಗಾರೆಯನ್ನು ಸೇರಿಸಿ ನಿರ್ಮಿಸಿದ್ದಾರೆ. ಕೆಲವು ಕಡೆಗಳಲ್ಲಿ ಕೋಟೆಯ ದ್ವಾರಗಳನ್ನು ಗಾರೆಯಿಂದ ಗಿಲಾವ್ ಮಾಡಿದ್ದಾರೆ. ಮಧುಗಿರಿಯಲ್ಲಿ ಮೂರನೇ ದ್ವಾರ ಮತ್ತು ಮುಂದೆ ಕಾಣುವ ಇಸ್ಲಾಮಿಕ್ ಶೈಲಿಯ ಮಹಾನವಮಿ ದಿಬ್ಬಗಳು ಗಾರೆಯಿಂದ ನಿರ್ಮಿಸಲ್ಪಟ್ಟಿವೆ.

### ಗಾರೆಯನ್ನು ಉತ್ಪಾದಿಸುವ ವಿಧಾನ

ನಂದಿದುರ್ಗದ ಪ್ರಧಾನ ದೇವಾಲಯದ ಅರ್ಚಕರಾದ ಟಿ.ಎನ್. ನಾಗರಾಜ ಅವರು ಗಾರೆಯನ್ನು ಉತ್ಪಾದಿಸುವ ಕ್ರಮವನ್ನು ಕುರಿತು ಹೀಗೆ ಹೇಳುತ್ತಾರೆ: ಒಂದು ಮಣ ಬೆಲ್ಲಕ್ಕೆ ಅಷ್ಟೇ ಪ್ರಮಾಣದ ಸುಣ್ಣದಕಲ್ಲು ಮತ್ತು ಕೋಳಿ ಮೊಟ್ಟೆಯನ್ನು ಹಾಕಿ ಚೆನ್ನಾಗಿ ಅರೆಯುತ್ತಾರೆ. ಅದನ್ನು ಬಳಸಿ ಕೋಟೆ, ಕಟ್ಟಡಗಳಿಗೆ ಬಳಸುತ್ತಾರೆ. ನೂರಾರು

ವರ್ಷಗಳ ಕಾಲ ಗಟ್ಟಿಮುಟ್ಟಾಗಿ ಉಳಿಯುವುದೆಂದು ಹೇಳುತ್ತಾರೆ (ಸಂದರ್ಶನ ದಿ: ೩೦.೦೫.೨೦೧೭).



ಗಾರೆ ಮತ್ತು ಕಲ್ಲಿನಿಂದ ನಿರ್ಮಿಸಿರುವ ದ್ವಾರ (ಮಧುಗಿರಿ)



ಗಾರೆ ಮತ್ತು ಕಲ್ಲಿನಿಂದ ನಿರ್ಮಿಸಿರುವ ಮಹಾನವಮಿದಿಬ್ಬ (ಮಧುಗಿರಿ)

### ೩.೨.೧೨ ಇನ್ನಿತರ ಅಂಶಗಳು

ಟಿಪ್ಪುಕಾಲದ ಕೋಟೆಗಳಲ್ಲಿನ ಇನ್ನೂ ಹಲವು ಅಂಶಗಳನ್ನು ಗಮನಿಸಬಹುದಾದರೂ ಅವು ಅಷ್ಟು ಗಂಭೀರವಾದವುಗಳಾಗಿರುವುದಿಲ್ಲ. ಅವುಗಳಲ್ಲಿ ಮುಖ್ಯವಾದ ಒಂದೆರಡು ಅಂಶಗಳ ಬಗೆಗೆ ಇಲ್ಲಿ ಚರ್ಚಿಸಲಾಗುವುದು.

## ನಕ್ಷತ್ರಾಕಾರದ ಕೋಟೆಯ ರಚನೆ

ಟಿಪ್ಪು ಹೊಸದಾಗಿ ಕಟ್ಟಿಸಿದ ಕೋಟೆಗಳು ಕೆಲವೇಕೆಲವು. ಅವುಗಳಲ್ಲಿ ಒಂದು ಮಂಜರಾಬಾದಿನ ಕೋಟೆ. ಇದು ಟಿಪ್ಪುವಿನ ಕೋಟೆಗಳಲ್ಲಿಯೇ ವಿಶಿಷ್ಟವಾಗಿದೆ. ಇದು ನಕ್ಷತ್ರಾಕಾರದಲ್ಲಿದೆ. ಇದನ್ನು ಫ್ರೆಂಚ್ ತಂತ್ರಜ್ಞರ ನೆರವಿನಿಂದ ನಿರ್ಮಿಸಿದನೆಂದು ಹೇಳಲಾಗುತ್ತದೆ. ಇದು ಫ್ರೆಂಚ್‌ನ ನೆಪೋಲಿಯನ್ನ ಕಾಲದ ಕೋಟೆಗಳ ಜೊತೆಗೆ ಹೋಲಿಕೆ ಮಾಡಬಹುದಾಗಿದೆ.

ದೇವನಹಳ್ಳಿಯ ಪಶ್ಚಿಮ ದ್ವಾರದ ಮೇಲ್ಭಾಗದಲ್ಲಿ ಎರಡು ಗೂಡುಗಳಿವೆ. ಆ ಗೂಡುಗಳಲ್ಲಿ ಗಾಲಿಗಳಿದ್ದವೆಂದು ಹೇಳಲಾಗುತ್ತದೆ. ದೇವನಹಳ್ಳಿಯ ದ್ವಾರದ ಮುಂಭಾಗದಲ್ಲಿ ಕಂದಕ ನಿರ್ಮಿಸಲಾಗಿತ್ತು. ಅದನ್ನು ದಾಟಲು ದ್ವಾರದ ಹೆಬ್ಬಾಗಿಲುಗಳನ್ನೇ ಸೇತುವೆಗಳನ್ನಾಗಿ ಬಳಸಲಾಗುತ್ತಿತ್ತು. ಹೆಬ್ಬಾಗಿಲಿನ ಎರಡೂ ಬದಿಗೆ ಕಟ್ಟಿದ ಹಗ್ಗಗಳನ್ನು ಗಾಲಿಯ ಮೂಲಕ ಕೋಟೆಯ ಒಳಕ್ಕೆ ತೆಗೆದುಕೊಳ್ಳಲಾಗಿತ್ತು. ಹಗ್ಗದ ಸಹಾಯದಿಂದ ಬೃಹತ್ ಬಾಗಿಲನ್ನು ಕಂದಕದ ಮೇಲೆ ಸೇತುವೆಯಂತೆ ಮಲಗಿಸಲಾಗುತ್ತಿತ್ತು. ಆ ಮೂಲಕ ಕೋಟೆಯ ಹೊರಗೆ ಮತ್ತು ಒಳಗೆ ಸಾರ್ವಜನಿಕ ಸಂಚಾರಕ್ಕೆ ಅವಕಾಶ ಕಲ್ಪಿಸಲಾಗುತ್ತಿತ್ತು. ನಂತರ ಅದನ್ನು ಮತ್ತೆ ಮೇಲಕ್ಕೆತ್ತಿ ಕೋಟೆಯ ದ್ವಾರಕ್ಕೆ ಬಿಗಿಯಲಾಗುತ್ತಿತ್ತು. ಹೀಗೆ ಒಂದು ಸಾಧನದ ಮೂಲಕ ಎರಡು ಕಾರ್ಯಗಳನ್ನು ಮಾಡಲಾಗುತ್ತಿದ್ದುದನ್ನು ಕಾಣಬಹುದು.

ಇವಲ್ಲದೆ ನೀರಿನ ಬಳಕೆಯ ವಿಧಾನ, ಮಳೆಕೊಯ್ಲು ವಿಧಾನ, ರಹಸ್ಯ ಮಾರ್ಗಗಳು, ದೇವಾಲಯ ಮತ್ತು ಮಸೀದಿಗಳು, ದ್ವಾರದ ಬಾಗಿಲುಗಳನ್ನೇ ಕಂದಕಗಳ ಸೇತುವೆಗಳಾಗಿ ಬಳಸುವ ತಂತ್ರಜ್ಞಾನ, ದೊಡ್ಡ ದೊಡ್ಡ ಬಾಗಿಲುಗಳ ನಿರ್ಮಾಣ ಹೀಗೆ ಅನೇಕ ಅಂಶಗಳನ್ನು ಹೈದರ್ ಮತ್ತು ಟಿಪ್ಪು ಸುಲ್ತಾನ್ ಕಾಲದ ಕೋಟೆಗಳಲ್ಲಿ ಗುರುತಿಸಬಹುದು.

ಟಿಪ್ಪು ಕಾಲದಲ್ಲಿ ಕೋಟೆಯ ಹೆಬ್ಬಾಗಿಲುಗಳನ್ನು ಎತ್ತರವಾಗಿ ನಿರ್ಮಿಸಲಾಯಿತು. ಮೊದಲಿದ್ದ ಪಾಳೇಗಾರರ ಕಾಲದ ಕೋಟೆಗಳು ಕುದುರೆಯ ಪ್ರವೇಶಕ್ಕೆ ಅನುವಾಗುವಷ್ಟು ಮಾತ್ರ ಎತ್ತರವನ್ನು ಹೊಂದಿದ್ದವು. ಅವುಗಳನ್ನು ತೆಗೆಸಿ ದೊಡ್ಡ ಹೆಬ್ಬಾಗಿಲು ಮತ್ತು ದಿಡ್ಡಿ ಬಾಗಿಲುಗಳನ್ನು ಹೈದರ್ ಮತ್ತು ಟಿಪ್ಪು ಕಾಲದಲ್ಲಿ ಮಾಡಿಸಿರುವುದನ್ನು ಕಾಣಬಹುದು. ಉದಾ. ಟಿಪ್ಪುವು ಶ್ರೀರಂಗಪಟ್ಟಣ ಕೋಟೆಯ ಮೈಸೂರು ದ್ವಾರದ ಕಡೆಗೆ ಇದ್ದ ಮೂರನೆ ಸುತ್ತಿನ ಕೋಟೆಯ ದ್ವಾರವು ಚಿಕ್ಕದಾದ್ದರಿಂದ ಅದನ್ನು ತೆಗೆಸಿ ಅಂಬಾರಿ ಹೊತ್ತ ಆನೆಯು ಸುಲಭವಾಗಿ ಸಾಗುವಂತೆ, ಎತ್ತರವಾದ ಆನೆ ಹೆಬ್ಬಾಗಿಲನ್ನು ಮಾಡಿಸಿದನೆಂದು ಹೇಳಲಾಗುತ್ತದೆ. ಹೀಗೆ ಟಿಪ್ಪು ಕಾಲದ ಕೋಟೆಗಳಲ್ಲಿ ಹಲವು ವೈವಿಧ್ಯಗಳನ್ನು ಗುರುತಿಸಬಹುದು.

ಟಿಪ್ಪು ಸುಲ್ತಾನ್ ಆಳಿದ ೧೬ ವರ್ಷಗಳಲ್ಲಿ ಬಹುತೇಕ ಸಮಯವನ್ನು ಯುದ್ಧದಲ್ಲಿಯೇ ಕಳೆಯಬೇಕಾಯಿತು. ವಂಶಪಾರಂಪರ್ಯವಾಗಿ ಯೋಧ ಕುಟುಂಬದಲ್ಲಿಯೇ ಜನಿಸಿದ ಟಿಪ್ಪುವಿಗೆ ಯುದ್ಧಕಲೆಯ ಹಲವು ಪಟ್ಟುಗಳು ತಂದೆಯ ಮೂಲಕ ಕರತಲಾಮಲಕಗೊಂಡಿದ್ದವು. ಅಲ್ಲದೆ ತಂದೆಯ ಬುದ್ಧಿ ಚಾತುರ್ಯಗಳನ್ನು ಹಲವು ಯುದ್ಧಗಳಲ್ಲಿ ಸಮೀಪದಿಂದ ಬಲ್ಲವನಾಗಿದ್ದನು. ತಂದೆ ಹೈದರ್ ಅನಕ್ಷರಸ್ಥನಾದರೂ ಮಗನಿಗೆ ಉತ್ತಮ ವಿದ್ಯಾಭ್ಯಾಸ ನೀಡಿದನು. ಟಿಪ್ಪುವು ಹಲವು ಭಾಷೆಗಳನ್ನು ಕಲಿಯಲು ಅನುವು ಮಾಡಿಕೊಟ್ಟನು. ಹೀಗಾಗಿ ಟಿಪ್ಪುವಿಗೆ ಜಗತ್ತಿನ ಅನೇಕ ವಿದ್ಯಮಾನಗಳ ಬಗೆಗೂ ಕುತೂಹಲಗಳಿದ್ದವು. ಆದ್ದರಿಂದ ಅಮೇರಿಕಾ ಸಂವಿಧಾನದ ಕರಡನ್ನು ತರಿಸಿ ಓದಿದನು. ಫ್ರಾನ್ಸಿನ ಜಾಕೋಬಿನ್ ಕ್ಲಬ್‌ನ ಸದಸ್ಯತ್ವವನ್ನು ಪಡೆದಿದ್ದನು.

ಇದನ್ನೆಲ್ಲ ಗಮನಿಸಿದಾಗ ಟಿಪ್ಪುವು ಜಾಗತಿಕ ಸಂಗತಿಗಳನ್ನು ಬಹುಸೂಕ್ಷ್ಮವಾಗಿ ಗಮನಿಸುತ್ತಿದ್ದ ಮತ್ತು ಗ್ರಹಿಸುತ್ತಿದ್ದನೆಂದು ತಿಳಿಯುತ್ತದೆ. ಆ ಮೂಲಕ ತನ್ನೆಲ್ಲ ವಿಚಾರಗಳನ್ನು, ಆಲೋಚನೆಗಳನ್ನು ಉನ್ನತೀಕರಿಸಿಕೊಳ್ಳುತ್ತಿದ್ದನು. ಅದನ್ನು ನಾವು ಅವನ ಸೈನಿಕ ಆಕ್ರಮಣಗಳಲ್ಲಿ ಮತ್ತು ಕೋಟೆಗಳ ರಕ್ಷಣಾ ತಂತ್ರಜ್ಞಾನಗಳಲ್ಲಿ ಕಾಣಬಹುದು.

ಈ ಮೇಲೆ ನಡೆಸಲಾದ ಚರ್ಚೆಗಳಿಂದ ತಿಳಿದು ಬಂದ ಅಂಶಗಳೆಂದರೆ:

೧. ಟಿಪ್ಪುವು ಚೌಕಾಕಾರದ ಕೊತ್ತಳಗಳನ್ನು ನಿರ್ಮಿಸಿದನೆಂಬ ಷೇಕ್‌ಅಲಿ ಅವರ ಅಭಿಪ್ರಾಯವನ್ನು ಕ್ಷೇತ್ರಕಾರ್ಯ ಹಾಗೂ ಇತರ ಆಕರಗಳ ನೆರವಿನಿಂದ ಮರುಪರಿಶೀಲನೆಗೆ ಒಳಪಡಿಸಲಾಗಿದೆ. ಆ ಮೂಲಕ ಹೈದರ್ ಮತ್ತು ಟಿಪ್ಪು ಕಾಲದಲ್ಲಿ ಹಳೆಯ ಕೋಟೆಗಳಲ್ಲಿದ್ದ ಚೌಕಾಕಾರದ ಕೊತ್ತಳಗಳನ್ನು ವೃತ್ತಾಕಾರವಾಗಿ ಪರಿವರ್ತಿಸಿದರೇ ವಿನಃ ಚೌಕಾಕಾರವಾಗಿ ಮಾಡಿಸಲಿಲ್ಲ ಎಂಬುದನ್ನು ಕಂಡುಕೊಳ್ಳಲಾಗಿದೆ.

೨. ಟಿಪ್ಪು ಸುಲ್ತಾನನು ಸದಾ ಹೊಸ ಹೊಸ ಪ್ರಯೋಗಗಳನ್ನು ಮತ್ತು ಆವಿಷ್ಕಾರಗಳನ್ನು ನಡೆಸಲು ಪ್ರೋತ್ಸಾಹಿಸಿದ್ದನು ಎಂಬುದನ್ನು ಗುರುತಿಸಲಾಗಿದೆ.

೩. ತನ್ನ ಪ್ರಯೋಗಶೀಲತೆಗೆ ಫ್ರೆಂಚ್ ತಂತ್ರಜ್ಞರ ನೆರವನ್ನು ಮತ್ತು ಡಚ್ಚರ ಸಹಾಯವನ್ನು ಪಡೆದಿದ್ದ ಎಂಬುದನ್ನು ಗೊತ್ತುಮಾಡಿಕೊಳ್ಳಲಾಗಿದೆ.

೪. ಸೇನೆಯಲ್ಲಿ ಸರಕುಗಳನ್ನು ಸಾಗಿಸಲು ಬೇಕಾದ ಸಮರ್ಥವಾದ ಅಮೃತಮಹಲ್ ತಳಿಯ ರಾಸುಗಳನ್ನು ಅಭಿವೃದ್ಧಿಪಡಿಸಿದನು. ಅಲ್ಲದೆ ಯುದ್ಧಕ್ಕೆ ಬೇಕಾದ ಕುದುರೆಗಳನ್ನು ಅಭಿವೃದ್ಧಿ ಪಡಿಸಲು ಮತ್ತು ತಳಿ ಸಂವರ್ಧನೆ ಮಾಡಲು ಕುಣಿಗಲ್ಲಿನಲ್ಲಿ ಅಶ್ವವರ್ಧಕ ಶಾಲೆಯನ್ನು ತೆರೆದ ಎಂಬ ಅಂಶವನ್ನು ಗುರುತಿಸಬಹುದು.

೫. ಕೋಟೆಗಳ ಮೇಲಿಡುವ ಬೃಹತ್ ಫಿರಂಗಿಗಳನ್ನು ಮತ್ತು ರಣರಂಗಕ್ಕೆ ಎಳೆದೊಯ್ಯುವ ಲಘು ಫಿರಂಗಿಗಳನ್ನು ಬೆಂಗಳೂರು ಮತ್ತು ಶ್ರೀರಂಗಪಟ್ಟಣದ ತಾರಾಮಂಡಲಗಳಲ್ಲಿ ಉತ್ಪಾದಿಸಲಾಗುತ್ತಿತ್ತು. ಫಿರಂಗಿಗಳನ್ನು ಸಾಗಿಸಲು ಅಮೃತಮಹಲ್ ಎತ್ತುಗಳನ್ನು ವಿಶೇಷವಾಗಿ ಬಳಸಿಕೊಳ್ಳಲಾಗುತ್ತಿತ್ತು ಎಂಬುದನ್ನು ಗುರುತಿಸಲಾಗಿದೆ.

೬. ಹೈದರ್ ಮತ್ತು ಟಿಪ್ಪು ಸುಲ್ತಾನ್ ಭಾರತದಲ್ಲಿ ಮೊಟ್ಟಮೊದಲ ಬಾರಿಗೆ ಯುದ್ಧದಲ್ಲಿ ರಾಕೆಟ್‌ಗಳನ್ನು ಬಳಸಿದರು. ಟಿಪ್ಪುವು ಶ್ರೀರಂಗಪಟ್ಟಣದ ಕೋಟೆಯಲ್ಲಿ ರಾಕೆಟ್ ಉಡಾವಣ ಅಂಕಣವನ್ನು ನಿರ್ಮಿಸಿದ್ದನು.

೭. ಟಿಪ್ಪುವು ಮದ್ದಿನ ಮನೆಗಳನ್ನು ಸಾಮಾನ್ಯವಾಗಿ ಎಲ್ಲಾ ಕೋಟೆಗಳಲ್ಲಿಯೂ ನಿರ್ಮಿಸಿದನು. ಅಲ್ಲದೆ ತಾರಾಮಂಡಲಗಳನ್ನು ನಿರ್ಮಿಸಿ ಫಿರಂಗಿ, ಬಂದೂಕು ಮೊದಲಾದ ಅಗ್ನಿಅಸ್ತ್ರಗಳನ್ನು ಸ್ವತಂತ್ರವಾಗಿ ಉತ್ಪಾದಿಸುವ ಮೂಲಕ ಸ್ವಾವಲಂಬನೆ ಸಾಧಿಸಿದ್ದನು ಎಂಬುದನ್ನು ಕಂಡುಕೊಳ್ಳಲಾಗಿದೆ.

೮. ಟಿಪ್ಪುವು ಕೋಟೆಗಳ ಭಾಗಗಳಾದ ಹೆಬ್ಬಾಗಿಲು, ಕೊತ್ತಳ, ಪಹರೆಕಟ್ಟೆ, ರ್‍ಯಾಂಪ್, ಕುಂಬಿ / ಕೈಪಿಡಿ, ಬಂದಿಖಾನೆ, ಮದ್ದಿನ ಮನೆ ಮೊದಲಾದವುಗಳನ್ನು ಆಧುನೀಕರಿಸಿದನು. ಟಿಪ್ಪುವಿನ ಕಾಲದ ಮದ್ದಿನ ಮನೆಗಳು ಭೂಕಂಪ ನಿರೋಧಕಗಳಾಗಿವೆ ಎಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಈ ಮದ್ದಿನ ಮನೆಗಳು ನಿರ್ವಹಣೆ ಇಲ್ಲದೆಯೂ ನೂರಾರು ವರ್ಷಗಳಿಂದ ಸುಸ್ಥಿರವಾಗಿರುವುದನ್ನು ಕ್ಷೇತ್ರಕಾರ್ಯದ ವೇಳೆ ಗಮನಿಸಲಾಗಿದೆ.

ಕೋಟೆಗಳ ನಿರ್ಮಾಣದ ವಿಚಾರದಲ್ಲಿ ಟಿಪ್ಪುವು ತನ್ನ ತಂದೆ ಹೈದರಾಲಿಯು ಹಾಕಿಕೊಟ್ಟ ಮಾರ್ಗದಲ್ಲಿ ಸಾಗಿದನಲ್ಲದೆ, ಅವನಿಗಿಂತಲೂ ಹೆಚ್ಚು ಸಾಧಿಸಿದನೆಂದರೆ ತಪ್ಪಾಗದು. ಕೋಟೆಗಳ ನಿರ್ಮಾಣದಲ್ಲಿಯೂ ಸಮಕಾಲೀನ ಸಂದರ್ಭಕ್ಕೆ ಅಗತ್ಯವಾದ ಮಾರ್ಪಾಡುಗಳನ್ನು ಮಾಡಿಕೊಳ್ಳುತ್ತಾ ಶತ್ರುಗಳ ಆಕ್ರಮಣವನ್ನು ಬಹುಕಾಲ ಹಿಮ್ಮೆಟ್ಟಿಸುವಲ್ಲಿ ಯಶಸ್ವಿಯಾದನು. ಅಷ್ಟೇ ಅಲ್ಲ ತಂದೆ ಮತ್ತು ಮಗ ಅನೇಕ ಕೋಟೆಗಳನ್ನು ತಮ್ಮ ಕೈವಶ ಮಾಡಿಕೊಳ್ಳುವ ಮೂಲಕ ಮೈಸೂರು ಸಂಸ್ಥಾನವನ್ನು ಕೃಷ್ಣಾ ನದಿಯಿಂದ ಕಾವೇರಿಯಿಂದಾಚೆಗೂ ವಿಸ್ತರಿಸಿದರು. ಇದು ಸಹಜವಾಗಿ ಶತ್ರುಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಸೃಷ್ಟಿಸಿತು. ಮುಖ್ಯವಾಗಿ ಬ್ರಿಟಿಷರು, ಮರಾಠರು ಮತ್ತು ನಿಜಾಮರಿಗೆ ಕಣ್ಣುರಿಯನ್ನುಂಟು ಮಾಡಿತು. ಅವರ ಒಕ್ಕೂಟ ಸೇನೆ ಟಿಪ್ಪುವಿನ ಮೇಲೇರಿ ಬಂದಿತು. ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ನಡೆದ ಆಕ್ರಮಣ ಮತ್ತು ರಕ್ಷಣೆಯ ಈ ರಕ್ತ ಚರಿತ್ರೆ ರೋಚಕವಾದುದು. ಭೂಪ್ರದೇಶಗಳ ಆಕ್ರಮಣವೆಂಬುದು ಒಂದರ್ಥದಲ್ಲಿ ಶಕ್ತಿ ಕೇಂದ್ರಗಳಾದ

ಕೋಟೆಗಳ ಆಕ್ರಮಣವೇ ಆಗಿತ್ತು. ಕೋಟೆಗಳ ಆಕ್ರಮಣ ಮತ್ತು ಪ್ರತಿಆಕ್ರಮಣಗಳನ್ನೊಳಗೊಂಡ ಚಾರಿತ್ರಿಕ ಘಟನೆಗಳನ್ನು ಅವಲೋಕಿಸುವುದು ಕೋಟೆಗಳ ಚರಿತ್ರೆಯ ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗಿದೆ.

ಆದ್ದರಿಂದ ಮುಂದಿನ ಅಧ್ಯಾಯದಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ನಡೆಸಿದ ಕೋಟೆಗಳ ಆಕ್ರಮಣ ಮತ್ತು ಪ್ರತಿಆಕ್ರಮಣವನ್ನು ಕುರಿತು ಚರ್ಚಿಸಲಾಗಿದೆ.

## ಟಿಪ್ಪಣಿಗಳು

೧. ಲಕ್ಷ್ಮಣ್ ತೆಲಗಾವಿ ಅವರು ತಮ್ಮ **ಎಪ್ಪತ್ತೇಳು ಪಾಳೇಗಾರರು** ಕೃತಿಯಲ್ಲಿ ೭೭ ಎಂಬುದು ಸಂಖ್ಯಾ ಆಶಯಮಾತ್ರ. ಪಾಳೇಯಗಾರರ ಸಂಖ್ಯೆ ಅದಕ್ಕಿಂತಲೂ ಹೆಚ್ಚು ಇತ್ತು ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಹೈದರ್‌ನಾಮ ಕೃತಿಯಲ್ಲಿಯೇ ಹೈದರಾಲಿ ಗೆದ್ದ ೩೦೦ಕ್ಕೂ ಹೆಚ್ಚು ಸೀಮೆಗಳನ್ನು ಹೆಸರಿಸಿರುವುದಾಗಿ ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಬೇರೆ ಬೇರೆ ಸಾಹಿತ್ಯ ಕೃತಿಗಳಲ್ಲಿ ಲಭ್ಯವಾಗಿರುವ ಪಾಳೇಪಟ್ಟುಗಳನ್ನು ಈ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

೨. ಹದಿನೆಂಟನೆ ಶತಮಾನದ ಕೊನೆಯ ಭಾಗದಲ್ಲಿ ದಕ್ಷಿಣ ಕರ್ನಾಟಕದ ಹಳ್ಳಿಗಳ ಮನೆಗಳು ಮಾಳಿಗೆಯ ಮನೆಗಳಾಗಿದ್ದು, ಮಣ್ಣಿನಿಂದ ನಿರ್ಮಿಸಲ್ಪಟ್ಟಿದ್ದವು. ಮನೆಗಳ ಮೇಲ್ಭಾಗ ಕೂಡ ಮಣ್ಣಿನಿಂದಲೇ ಕೂಡಿರುತ್ತಿತ್ತು. ಅದನ್ನು ಮಾಳಿಗೆ ಎನ್ನುವರು. ಮಾಳಿಗೆಯನ್ನು ಏರಬೇಕಾದರೆ ಏಣಿಗಳನ್ನು ಬಳಸುತ್ತಿದ್ದರು. ಮಾಳಿಗೆಗಳ ಮೇಲೆ ಕಲ್ಲುಗಳನ್ನು ಸಂಗ್ರಹಿಸಿಟ್ಟಿರುತ್ತಿದ್ದರು. ಗ್ರಾಮಗಳನ್ನು ಲೂಟಿ ಮಾಡಲು ಶತ್ರುಗಳು ಬಂದ ಸಂದರ್ಭಗಳಲ್ಲಿ ಎಲ್ಲರೂ ತಮ್ಮ ಪರಿವಾರದೊಂದಿಗೆ ಮನೆಗಳ ಮಾಳಿಗೆಗಳನ್ನು ಏರಿ ಕುಳಿತುಕೊಳ್ಳುತ್ತಿದ್ದರು. ನಂತರ ಮಾಳಿಗೆಗೆ ಹಾಕಿದ ಏಣಿಗಳನ್ನು ಮೇಲಕ್ಕೆ ತೆಗೆದುಕೊಂಡು ಬಿಡುತ್ತಿದ್ದರು. ಊರಿನ ಕೋಟೆಯನ್ನು ಏರಿ ಒಳನುಸುಳಿ ಬಂದ ಲೂಟಿಕೋರರ ಮೇಲೆ ಮಾಳಿಗೆ ಮೇಲೆ ಸಂಗ್ರಹಿಸಿಟ್ಟಿದ್ದ ಕಲ್ಲುಗಳಿಂದ ಆಕ್ರಮಣ ನಡೆಸುತ್ತಿದ್ದರು. ಈ ಆಕ್ರಮಣಗಳಲ್ಲಿ ಮಹಿಳೆಯರೂ ಕೂಡ ನಡೆಸುತ್ತಿದ್ದರೆಂದು ಬುಕನಾನ್ ದಾಖಲಿಸಿದ್ದಾನೆ (ಬುಕನಾನ್ ೧೮೧೦ : ೨೨).

೩. ಆಧುನಿಕ ಬೆಂಗಳೂರು ನಗರದ ನಿರ್ಮಾಣ ಕಾರ್ಯ ಆರಂಭವಾದ ದಿನಾಂಕದ ಬಗೆಗೆ ಇತ್ತೀಚೆಗೆ ಪ್ರಕಟವಾದ ಎಂ.ಜಿ. ಮಂಜುನಾಥ್ ಅವರು ಸಂಪಾದಿಸಿರುವ **ಬೆಂಗಳೂರಿನ ಬಖೈರುಗಳು** ಕೃತಿಯು ಹೀಗೆ ಹೇಳುತ್ತದೆ: ೧೫೩೮ ಜನವರಿ ೧೪ ರಂದು ಬೆಂಗಳೂರಿನ ಕೋಟೆಯ ತಳಪಾಯದ ಕೆಲಸವನ್ನು ಪ್ರಾರಂಭಿಸಿ ನಾಲ್ಕು ಬತೇರಿಗಳ ಕೋಟೆಯನ್ನು ಕೆಂಪೇಗೌಡನು ನಿರ್ಮಿಸಿದ. ಆಗ ವಿಜಯನಗರದ ಅರಸನಾಗಿದ್ದ ಅಚ್ಯುತರಾಯನು ೧೨ ಹೋಬಳಿಗಳಿಂದ ಕೂಡಿದ ಒಟ್ಟು ೩೦,೦೦೦ ಪಗೋಡಗಳ ಕಂದಾಯ ಬರುತ್ತಿದ್ದ ಪ್ರದೇಶವನ್ನು ಕೆಂಪೇಗೌಡನ ಸಂಸ್ಥಾನಕ್ಕೆ ಸೇರಿಸಿಕೊಟ್ಟ ಎಂಬ ವಿವರಗಳಿವೆ (ಮಂಜುನಾಥ್ ೨೦೦೬: ೬–೭).

೪. ಬೆಂಗಳೂರಿನ ಪ್ರಾಚೀನ ಉಲ್ಲೇಖ ಕ್ರಿ.ಶ ೮೯೦ರ ಬೇಗೂರಿನ ಶಾಸನದಲ್ಲಿದೆ. ಆನಂತರ ಮಡಿವಾಳದ ಸೋಮೇಶ್ವರ ದೇವಾಲಯದ ತಳಹದಿಯ ಮೇಲಿನ ೧೨೪೭ರ ತಮಿಳು ಶಾಸನವೂ ಬೆಂಗಳೂರನ್ನು ಉಲ್ಲೇಖಿಸುತ್ತದೆ. ಮುಂದೆ ೧೪೭೪ರ ಗುಮ್ಮಳಾಪುರದ ತಾಮ್ರಶಾಸನದಲ್ಲಿಯೂ ಕೂಡ ಬೆಂಗಳೂರಿನ ಉಲ್ಲೇಖವಿದೆ (ಎ.ಕ.(ಪು) – ೯: ಬೆಂಗಳೂರು–೧೭೪: ಎ.ಕ.(ರೈ) – ೯: ಬೆಂಗಳೂರು–೬೮; ಉದ್ಧೃತ: ಕಾರ್ತಿಕ್ ೨೦೧೬: ೧೨೬–೧೨೭).

೫. ೧೭೮೧ರಲ್ಲಿ ಪಾಂಡಿಚೆರಿಯ ಸಮೀಪ ಸೆರೆಯಾದ ಖೈದಿ ಜೇಮ್ಸ್ ಬ್ರಿಸ್ಟವ್‌ನನ್ನು ಬೆಂಗಳೂರು ಮಾರ್ಗವಾಗಿ ಶ್ರೀರಂಗಪಟ್ಟಣಕ್ಕೆ ಕರೆದುಕೊಂಡು ಹೋಗಲಾಗುತ್ತದೆ. ಆ ಸಂದರ್ಭದಲ್ಲಿ ಬೆಂಗಳೂರಿನ ಪಶ್ಚಿಮದಲ್ಲಿ ಅಗಳು (ಕಂದಕ) ಅಗೆಯುತ್ತಿದ್ದರೆಂದು ತನ್ನ ದಿನಚರಿಯಲ್ಲಿ ದಾಖಲಿಸಿದ್ದಾನೆ (ನಾಗೇಗೌಡ ೧೯೯೮: ೧೧೧).

೬. ಶ್ರೀರಂಗಪಟ್ಟಣದ ರೈಲ್ವೇ ನಿಲ್ದಾಣದ ಸಮೀಪ ಇದ್ದ ಮದ್ದಿನ ಮನೆಯೊಂದನ್ನು ರೈಲ್ವೇ ಹಳಿಯ ವಿಸ್ತರಣೆಯ ಕಾರಣಕ್ಕಾಗಿ ಇದೇ ವರ್ಷ (೨೦೧೭) ಮಾರ್ಚ್ ತಿಂಗಳ ೬–೧೦ನೇ ದಿನಾಂಕದವರೆಗೆ ಮೂಲಸ್ಥಳದಿಂದ ಸುಮಾರು ೧೪೦ ಅಡಿಗಳ ದೂರಕ್ಕೆ ಸ್ಥಳಾಂತರಿಸಲಾಯಿತು. ಸುಮಾರು ೯೦೦–೧೦೫೦ ಟನ್ ತೂಕದೆಂದು ಅಂದಾಜಿಸಲಾದ ಈ ಮದ್ದಿನ ಮನೆಯನ್ನು ಅಮೆರಿಕಾದ ವೋಲ್ಫ್ ಸಂಸ್ಥೆ ಮತ್ತು ನವದೆಹಲಿಯ ಪಿ.ಎಸ್.ಎಲ್ ಸಂಸ್ಥೆಗಳ ಸಹಯೋಗವು ಈ ಕಾರ್ಯ ಸಾಧಿಸಿತು. ಇದಕ್ಕಾಗಿ ತಗುಲಿದ ಅಂದಾಜು ವೆಚ್ಚ ೧೩.೬೬ ಕೋಟಿ ರೂ.ಗಳು. ಮೊಟ್ಟಮೊದಲು ಸ್ಥಳಾಂತರಿಸಿದ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ಸಂರಕ್ಷಿತ ಸ್ಮಾರಕ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

೭ ಬ್ರಿಸ್ಟವ್ ಎಂಬ ಟಿಪ್ಪುವಿನ ಖೈದಿಯೊಬ್ಬ ದಾಖಲಿಸುವಂತೆ "ಏಷ್ಯಾದ ಸಿಪಾಯಿಗಳು ಒಂದು ರಾತ್ರಿ ಮಳೆಯಾದರೆ ಅಥವಾ ಒಂದು ಸಲ ಮಳೆ ಬಂದರೆ ಸಾಕು ಓಡಿಹೋಗಿ ರಕ್ಷಣೆ ಪಡೆಯುತ್ತಾರೆ. ಆಗ ಇಡೀ ಬಿಡಾರವೇ ಬಿಕೋ ಎನ್ನುತ್ತದೆ" ಎಂದಿದ್ದಾನೆ. ಈತನು ತನ್ನ ಸಹಖೈದಿಗಳೊಂದಿಗೆ ಚಿತ್ರದುರ್ಗದ ಕೋಟೆಯಿಂದ ಒಂದು ರಾತ್ರಿ ತಪ್ಪಿಸಿಕೊಳ್ಳುತ್ತಾರೆ. ಆ ಬಗ್ಗೆ ಹೀಗೆ ದಾಖಲಿಸುತ್ತಾನೆ: "ನಮ್ಮ ಅದೃಷ್ಟಕ್ಕೆ ಸುಮಾರಾಗಿ ಮಳೆ ಶುರುವಾಯಿತು. ಕಾವಲುಗಾರರೆಲ್ಲ ಓಡಿ ಹೋಗಿ ಸೆರೆಮನೆಯ ಪಡಸಾಲೆ ಸೇರಿಕೊಂಡರು. ಬೆಂಕಿಯ ಸುತ್ತ ಸೇದುತ್ತಾ ಕುಳಿತರು. ನಾವು ಹೊರಗೋಡೆಯನ್ನು ಹತ್ತಿ ಕೆಳಗಿಳಿಯುವವರೆಗೆ ಮಳೆ ಬೀಳುತ್ತಲೇ ಇತ್ತು..." ಆದ್ದರಿಂದ ಕೋಟೆಗಳ ಕೊತ್ತಳಗಳಲ್ಲಿರುವ ಸಿಪಾಯಿಗಳು ಮಳೆ ಬಂತೆಂದು ದೌಡಾಯಿಸದೆ ಕಾವಲುಗಾರರ ಕೋಣೆಯಲ್ಲಿ ನಿಂತು ಹೊರಗಿನ ಚಲನವಲನಗಳನ್ನು ವೀಕ್ಷಿಸಲೆಂದು ಈ ರೀತಿಯ ಕೋಣೆಗಳನ್ನು ನಿರ್ಮಿಸುತ್ತಿದ್ದರೆಂದು ತೋರುತ್ತದೆ.

೮. 'ಬಾಣ' ಎಂದು ಭಾರತೀಯರಲ್ಲಿ ಜನಪ್ರಿಯವಾಗಿರುವ ಶಬ್ದವು 'ವಾಣ" ಎಂಬ ಸಂಸ್ಕೃತಿ ಶಬ್ದದಿಂದ ಬಂದಿದೆ. ಅದರ ಅರ್ಥ ಬಾಣ. ಮಧ್ಯಕಾಲದಲ್ಲಿ ಮುಸ್ಲಿಂ ಇತಿಹಾಸಕಾರರು ರಾಕೆಟ್ ಅನ್ನು 'ತರ್ಕ್ಷ', ಮತ್ತು 'ಹವಾಯ್' ಎಂದು ಕರೆದಿದ್ದಾರೆ. ಬಾಣದ ಕೆಲವು ಆರಂಭಿಕ ಹೆಸರುಗಳೆಂದರೆ: 'ತಿರ್–ಐ–ಹವಾಯ್' ಮತ್ತು 'ಹುಕ್ಕ'. ರಾಕೆಟ್‌ಗಳನ್ನು ಟಿಪ್ಪು ಸುಲ್ತಾನನು 'ಸುಹಾಬ್' (ಬೇಟೆಯ ನಕ್ಷತ್ರ) ಎಂದು ಕರೆಯುತ್ತಿದ್ದನು. ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಪಟಾಕಿ ರಾಕೆಟ್‌ಗಳನ್ನು 'ಸೂರಬಾಣ' ಎಂದು ಕರೆಯುವುದು ರೂಢಿಯಲ್ಲಿದೆ. ಟಿಪ್ಪು ಹೆಸರಿಟ್ಟ 'ಸುಹಾಬ್' ಬಾಣವೇ ನಮ್ಮ ಜನಪದರಲ್ಲಿ 'ಸೂರಬಾಣ'ವಾಗಿರಬಹುದು. ಇನ್ನೂ ಒಂದು ಸಾಧ್ಯತೆಯನ್ನು ತಳ್ಳಿಹಾಕಲಾಗದು.

ರಾಕೆಟ್ ಸುರ್ ಸುರ್ ಸದ್ದು ಮಾಡುತ್ತಾ ಹಾರುವುದರಿಂದ ಅದನ್ನು 'ಸೂರಬಾಣ' ಎಂಬ ಹೆಸರಿನಿಂದ ಕರೆದಿರಬಹುದು.

೯. ಸಿಮೊನ್ ವೆರ್ರೆಟ್ ಹೇಳುತ್ತಿರುವ ಕೋಟೆ ಶೀರ್ಫಹಳ್ಳಿ ಆಗಿರಲಾರದು. ಬಹುಶಃ ಅದು ಜಿದನೂರಿನ ಕೋಟೆ ಆಗಿರಬೇಕು.

೧೦. ಕುಶನ್ ಅಂದರೆ ಸೈನಿಕ ತುಕಡಿ. ಇದು ೧೫೯೨ ಸೈನಿಕರನ್ನು ಮತ್ತು ಒಬ್ಬ ಬಾಣದಾಳನ್ನು ಹೊಂದಿರಬೇಕೆಂದು ವೆರ್ರೆಟ್ ಹೇಳಿದರೆ. ಐದು ಸಾವಿರ ಸೈನಿಕರನ್ನು ಒಳಗೊಂಡಿತ್ತು ಎಂದು ಸಿದಿಕ್ ನಕ್ವಿ ಅವರು ಅಭಿಪ್ರಾಯಪಟ್ಟಿದ್ದಾರೆ.

೧೧. ಮದ್ದನ್ನು ಊರಹೊರಗಿನ ಬಂಡೆಯ ಮೇಲೆ ಒಳಕಲ್ಲಿಗೆ ಹಾಕಿ ನೀರು ಸೇರಿಸಿ ಅರೆಯುತ್ತಾರೆ. ಚೆನ್ನಾಗಿ ಅರೆದ ನಂತರ ಅವುಗಳನ್ನು ಹರಳುಕಟ್ಟಿ ಒಣಗಿಸುತ್ತಾರೆ. ಹಬ್ಬದ ದಿನ ಮರದ ದಿಮ್ಮಿಗೆ ಸಿಕ್ಕಿಸಿದ ಕಬ್ಬಿಣದ ನಳಿಕೆಗೆ ಮದ್ದನ್ನು ತುಂಬುತ್ತಾರೆ. ಅದರ ಮೇಲೆ ಕೆಂಪುಮಣ್ಣನ್ನು ಹಾಕಿ ಭದ್ರಪಡಿಸುತ್ತಾರೆ. ನಂತರ ನಳಿಕೆಯ ತಳಭಾಗದಲ್ಲಿರುವ ಒಂದು ರಂಧ್ರದವರೆಗೂ ಮದ್ದನ್ನು ಇಟ್ಟು ದೂರದಿಂದು ಈ ಮದ್ದಿಗೆ ಬೆಂಕಿಯನ್ನು ಹೊತ್ತಿಸುತ್ತಾರೆ. ನಂತರ ನಳಿಕೆಯಲ್ಲಿನ ಮದ್ದು ಭಾರಿ ಸದ್ದಿನೊಂದಿಗೆ ಸ್ಫೋಟಿಸುತ್ತದೆ (ವಕ್ತೃ: ನಂಜಯ್ಯ).

೧೨. ಇದನ್ನು ಅಹಮದ್‌ನಗರದಲ್ಲಿ ಅಬುಲ್ ಗಾಜಿ ನಿಜಾಮ್ ಷಾಹ್ ಎಂಬು ಸುಲ್ತಾನನು ಮಾಡಿಸಿದನು. ಇದನ್ನು ತಾಳಿಕೋಟೆ ಕದನದಲ್ಲಿಯೂ ಬಳಸಲಾಯಿತು. ಆನಂತರ ಪರೆಂಡಾ ಕೋಟೆಯ ಮೇಲಿರಿಸಲಾಯಿತು. ಬಿಜಾಪುರದ ಮುಹಮ್ಮದ್ ಆದಿಲ್ ಷಾಹ್ ಪರೆಂಡಾವನ್ನು ವಶಪಡಿಸಿಕೊಂಡಾಗ ೧೬೩೨ರಲ್ಲಿ ಬಿಜಾಪುರಕ್ಕೆ ಸಾಗಿಸಿ, ಸೇರ್ಜಾ ಬರುಜು (ಸಿಂಹ ಬತೇರಿ) ಎಂಬ ದೊಡ್ಡ ಬರುಜನ್ನು ೧೬೫೮ರಲ್ಲಿ ಕಟ್ಟಿಸಿ ಅದರ ಮೇಲಿರಿಸಿದನು. ಬ್ರಿಟಿಷರ ಕಾಲದಲ್ಲಿ ಅದನ್ನು ಬುರುಜಿನ ಮೇಲಿನಿಂದ ಕೆಳಕ್ಕೆ ಇಳಿಸಿದರು. ಈಗ ಬುರುಜು ಖಾಲಿ ಇದೆ. ಇದನ್ನು ಯುದ್ಧ ಭೂಮಿಗೆ ಎಳೆದೊಯ್ಯಲು ೪೦೦ ಎತ್ತುಗಳು, ೧೦ ಆನೆಗಳು ಮತ್ತು ಅನೇಕ ಜನರ ಸಹಾಯ ಬೇಕಾಗಿತ್ತೆಂದು ಹೇಳಲಾಗುತ್ತದೆ. ಇದು ಹೊರಡಿಸುತ್ತಿದ್ದ ಶಬ್ದ ಎಷ್ಟಿತ್ತೆಂದರೆ, ಫಿರಂಗಿ ಹಾರಿಸುವವರು ಬೆಂಕಿ ಅಚ್ಚಿ ತೊಟ್ಟಿಯ ನೀರಿನಲ್ಲಿ ಮುಳುಗುತ್ತಿದ್ದರಂತೆ. ೧೮೨೩ರಲ್ಲಿ ಇದನ್ನು ಬಾಂಬೆ ಸರ್ಕಾರ ಇಂಗ್ಲೆಂಡಿಗೆ ಸಾಗಿಸಲು ನಿರ್ಧರಿಸಿತ್ತು. ಆದರೆ ಅದನ್ನು ಪರಿಶೀಲಿಸಿದ ಇಂಜಿನಿಯರ್ ಇದನ್ನು ಸಾಗಿಸಲು ಸೂಕ್ತವಾದ ರಸ್ತೆ ಸಂಸ್ಥಾನದಲ್ಲಿಲ್ಲ ಎಂದು ಹೇಳಿದನು. ಆದ್ದರಿಂದ ಅದು ಬ್ರಿಟಿಷ್ ಮ್ಯೂಸಿಯಂನ ಬದಲು ಬಿಜಾಪುರದಲ್ಲಿಯೇ ಉಳಿಯಿತು.

೧೩. ರುಮಿ ತಯಾರಿಸಿದ ಮತ್ತೊಂದು ಭಾರಿ ಗಾತ್ರದ ಕಂಚಿನ ಫಿರಂಗಿ ಎಂದರೆ 'ಕರಕ್ ಬಿಜ್ಲಿ' (ಗುಡುಗು ಮಿಂಚು). ತಾಳಿಕೋಟೆ ಕದನದ ನಂತರ ಬಿಜಾಪುರಕ್ಕೆ ಮತ್ತೆ ಸಾಗಿಸುವಾಗ ದುರಾದೃಷ್ಟವಶಾತ್ ಕೃಷ್ಣ ನದಿಯಲ್ಲಿ ಮುಳುಗಿ ಮರೆಯಾಯಿತು.

೧೪. ಈ ಪಿಧಾನದಲ್ಲಿ ಸಂಪೂರ್ಣ ಫಿರಂಗಿಯನ್ನೇ ಎರಕ ಹುಯ್ಯಲಾಗುತ್ತದೆ. ನಂತರ ಮಧ್ಯದಲ್ಲಿ ರಂಧ್ರವನ್ನು ಕೊರೆಯಲಾಗುತ್ತದೆ.

೧೫. ವೆಲ್ಲೆಸ್ಲಿಯು ಈ ಅರಮನೆಯನ್ನು ೧೮೦೭ ಮತ್ತು ೧೮೦೯ರಲ್ಲಿ ಹೊಡೆದು ಹಾಕಲು ಆದೇಶಿಸಿದನೆಂದು ಹೇಳಲಾಗುತ್ತದೆ.

# ಅಧ್ಯಾಯ – ೪

# ಕೋಟೆಗಳು: ಐತಿಹಾಸಿಕ ಘಟನೆಗಳು ಮತ್ತು ಚಾರಿತ್ರಿಕ ಮಹತ್ವ

ಹದಿನೆಂಟನೆಯ ಶತಮಾನದ ರಾಜಕೀಯ ಅರಾಜಕತೆ ಮತ್ತು ಸೈನಿಕ ಕಾರ್ಯಚಟುವಟಿಕೆಗಳ ಪ್ರಕ್ಷುಬ್ಧತೆಯ ಸಂದರ್ಭಗಳಲ್ಲಿ ರಕ್ಷಣಾ ದೃಷ್ಟಿಯಿಂದ ಆಯಕಟ್ಟಿನ ಕೋಟೆಗಳನ್ನು ಪುನರ್ರಚಿಸಿದ ಅಂಶಗಳನ್ನು ಮತ್ತು ಅವುಗಳು ಬೀರಿದ ಪರಿಣಾಮಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಈ ಅಧ್ಯಾಯದ ಮುಖ್ಯ ಉದ್ದೇಶವಾಗಿದೆ. ಅನೇಕ ಐತಿಹಾಸಿಕ ಘಟನೆಗಳಿಗೆ ಸಾಕ್ಷಿಯಾದ ಈ ಕೋಟೆಗಳ ಚಾರಿತ್ರಿಕ ಹಿನ್ನೆಲೆ ಮತ್ತು ಮಹತ್ವವನ್ನು ಅಭ್ಯಸಿಸುವುದು ಕೂಡ ಈ ಅಧ್ಯಾಯದ ಉದ್ದೇಶವಾಗಿದೆ. ಆದ್ದರಿಂದ ಈ ಕೋಟೆಗಳೊಂದಿಗೆ ಬೆಸೆದುಕೊಂಡಿರುವ ಐತಿಹಾಸಿಕ ಘಟನೆಗಳು ಮತ್ತು ಅವುಗಳ ಚಾರಿತ್ರಿಕ ಮಹತ್ವವನ್ನು ಚರ್ಚಿಸುವುದು ಪ್ರಸ್ತುತ ಅಧ್ಯಾಯದ ಉದ್ದೇಶವಾಗಿದೆ.

ಹಿಂದಿನ ಅಧ್ಯಾಯದಲ್ಲಿ ನಡೆಸಿರುವ ಕೋಟೆಗಳ ರಚನೆ ಮತ್ತು ತಂತ್ರಜ್ಞಾನಗಳಲ್ಲಿ ಉಂಟಾಗಿರುವ ಬದಲಾವಣೆಗಳು ಟಿಪ್ಪುವಿನ ಕೋಟೆಗಳಿಗೆ ಬಲಿಷ್ಠ ಶಕ್ತಿಯನ್ನು ತಂದುಕೊಟ್ಟಿದ್ದವು. ಪ್ರಸ್ತುತ ಅಧ್ಯಯನದಲ್ಲಿ ಟಿಪ್ಪುವಿನ ಕೋಟೆಗಳ ಅಧ್ಯಯನವೆಂದರೆ ಅವನ ತಂದೆ ಹೈದರಾಲಿಯ ಕಾಲದಲ್ಲಿ ನಿರ್ಮಿಸಲಾದ ಅಥವಾ ಪುನರ್ ನಿರ್ಮಿಸಲಾದ ಕೋಟೆಗಳ ಅಧ್ಯಯನ ಕೂಡ ಎಂದು ಅರ್ಥೈಸಲಾಗಿದೆ. ಪ್ರಸ್ತುತ ಅಧ್ಯಯನವು ಈ ಹಿನ್ನೆಲೆಯಲ್ಲಿ ಹೈದರ್ ಮತ್ತು ಟಿಪ್ಪುವಿನ ಕೋಟೆಗಳ ನಡುವೆ ಇರುವ ಸಾಮ್ಯತೆಗಳನ್ನು ಮತ್ತು ಭಿನ್ನತೆಗಳನ್ನು ಅಭ್ಯಸಿಸಲು ಯತ್ನಿಸುತ್ತದೆ. ಸೇನೆ ಎಂಬುದು ಆಕ್ರಮಣದ

ಸಂಕೇತವಾದರೆ, ಕೋಟೆ ಎಂಬುದು ರಕ್ಷಣೆಯ ಸಂಕೇತಗಳಾಗಿವೆ. ಹೈದರ್ ಮತ್ತು ಟಿಪ್ಪುವು ಇಬ್ಬರಲ್ಲಿ ಸೈನ್ಯ ಮತ್ತು ಕೋಟೆಗಳನ್ನು ಸಮರ್ಥವಾಗಿ ಬಳಸಿಕೊಂಡು ರಾಜಕೀಯವಾಗಿ ಕಂಡ ಯಶಸ್ಸಿನ ವಿವರಗಳನ್ನು ತೌಲನಿಕವಾಗಿ ಅಧ್ಯಯನ ನಡೆಸುವ ಉದ್ದೇಶವನ್ನು ಈ ಅಧ್ಯಾಯವು ಇಟ್ಟುಕೊಂಡಿದೆ.

ಹೈದರಾಲಿಯು ನಿರಂತರ ಹೋರಾಟಗಳನ್ನು ನಡೆಸುತ್ತಲೇ ಮೈಸೂರು ಸಂಸ್ಥಾನವನ್ನು ಬಲಪಡಿಸಿದನು. ಹಾಗೆ ನೋಡಿದರೆ ಟಿಪ್ಪುವು ತನ್ನ ತಂದೆಯಷ್ಟು ಯುದ್ಧಗಳನ್ನು ಮಾಡಲಿಲ್ಲ. ಹೈದರನು ಕಟ್ಟಿದ ಸಂಸ್ಥಾನಕ್ಕೆ ಹೆಚ್ಚಿನ ಪ್ರದೇಶಗಳನ್ನು ಸೇರಿಸಿಕೊಳ್ಳಲಿಲ್ಲ. ೧೭೯೦ರ ಹೊತ್ತಿಗೆ ಟಿಪ್ಪುವಿನ ಸಂಸ್ಥಾನ ಗರಿಷ್ಠ ವಿಸ್ತಾರವನ್ನು ಕಂಡಿತು. ನಂತರದ ಯುದ್ಧಗಳಲ್ಲಿ ಟಿಪ್ಪುವಿನ ಸಾಮ್ರಾಜ್ಯದ ಎಲ್ಲೆ ಕುಸಿಯತೊಡಗಿತು. ಪ್ರಸ್ತುತ ಮಹಾಪ್ರಬಂಧವು ಕೋಟೆ ಕೇಂದ್ರಿತ ಅಧ್ಯಯನವಾಗಿದ್ದರಿಂದ ಕೋಟೆಗಳ ಹಿನ್ನೆಲೆಯಲ್ಲಿ ನಡೆದ ಘಟನೆಗಳ ವಿಷಯವನ್ನು ದೀರ್ಘವಾಗಿ ಚರ್ಚಿಸುವ ಯತ್ನವನ್ನು ಮಾಡಲಾಗಿದೆ. ಹೈದರ್ ಮತ್ತು ಟಿಪ್ಪುವಿಗೆ ಸಂಬಂಧಿಸಿದ ಐತಿಹಾಸಿಕ ಯುದ್ಧಗಳ ಸುತ್ತಮುತ್ತಲಿನ ಘಟನೆಗಳನ್ನು ಕೇಂದ್ರವಾಗಿರಿಸಿಕೊಂಡು ಈ ಚರ್ಚೆಯನ್ನು ಮುಂದುವರಿಸಲಾಗಿದೆ. ಹೈದರಾಲಿಯು ಪಾಳೇಗಾರರನ್ನು ದಮನಪಡಿಸಿದ ಘಟನೆಗಳು ಐತಿಹಾಸಿಕವಾಗಿ ಮಹತ್ವವುಳ್ಳದ್ದು. ಆದ್ದರಿಂದ ಅವುಗಳನ್ನು ಚರ್ಚೆಗೆತ್ತಿಕೊಳ್ಳಲಾಗಿದೆ. ಮುಖ್ಯವಾಗಿ, ಹೈದರಾಲಿಯು ನಡೆಸಿದ ಕುರುಗೋಡು ಆಕ್ರಮಣ, ಬಳ್ಳಾರಿ ಆಕ್ರಮಣ, ಚಿತ್ರದುರ್ಗದ ಆಕ್ರಮಣ, ಆರ್ಕಾಟ್ ಮತ್ತು ಆರ್ನಿ ಆಕ್ರಮಣಗಳು ಐತಿಹಾಸಿಕವಾಗಿ ಮಹತ್ವವುಳ್ಳದ್ದಾಗಿವೆ. ಅದೇ ರೀತಿ ಟಿಪ್ಪುವು ಕೊಡಗಿನ ಆಕ್ರಮಣ, ಮಂಗಳೂರು ಆಕ್ರಮಣ, ಬಿದನೂರು ಆಕ್ರಮಣಗಳಲ್ಲಿ ಯಶಸ್ಸು ಕಂಡನು. ಮುಂದೆ ಎದುರಾದ ಮರಾಠ, ನಿಜಾಮರನ್ನೊಳಗೊಂಡ ಬ್ರಿಟಿಷರ ಒಕ್ಕೂಟ ಸೈನ್ಯಗಳನ್ನು ಏಕಾಂಗಿಯಾಗಿ ಎದುರಿಸಲಾರದೆ ಶ್ರೀರಂಗಪಟ್ಟಣದ ಯುದ್ಧಗಳಲ್ಲಿ ಟಿಪ್ಪುವು ಬಸವಳಿದನು. ಮುಖ್ಯವಾಗಿ ಈ ಒಕ್ಕೂಟ ಸೇನೆಯು ಬೆಂಗಳೂರು ಮುತ್ತಿಗೆ ಮತ್ತು ಶ್ರೀರಂಗಪಟ್ಟಣದ ಮುತ್ತಿಗೆಗಳ ಮೂಲಕ ಟಿಪ್ಪುವಿಗೆ ಭಾರಿ ಆಘಾತವನ್ನು ಉಂಟುಮಾಡಿದವು. ಅಂತಿಮವಾಗಿ ರಾಜಧಾನಿ ಶ್ರೀರಂಗಪಟ್ಟಣದ ರಕ್ಷಣೆಗಾಗಿ ಹೋರಾಡುತ್ತಲೆ ಟಿಪ್ಪುವು ಕೊನೆಯುಸಿರೆಳೆದನು. ಈ ಎಲ್ಲ ಘಟನೆಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ವಿಮರ್ಶಿಸುವ ಪ್ರಯತ್ನವನ್ನು ಮಾಡಲಾಗಿದೆ.

***

ಭಾರತದ ಚರಿತ್ರೆಯಲ್ಲಿ ಹದಿನೆಂಟನೆಯ ಶತಮಾನವು ತೀವ್ರ ಕೋಲಾಹಲ ಮತ್ತು ಕುತೂಹಲಕರ ಘಟನೆಗಳಿಗೆ ಸಾಕ್ಷಿಯಾಗಿದೆ. ಷೇಕ್‌ಅಲಿ ಅವರು ಹೀಗೆ ದಾಖಲಿಸುತ್ತಾರೆ:

*ಆರ್ಥಿಕ ವಲಯದಲ್ಲಂತೂ ಕೃಷಿ ಮತ್ತು ಕೈಕಸುಬುಗಳಲ್ಲಿ ಹಳೆಯ ವ್ಯವಸ್ಥೆ ಮೂಲಭೂತ ಬದಲಾವಣೆಗೆ ಎಡೆಗೊಟ್ಟಿತು. ಅಂತಿಮವಾಗಿ ಇದು ನಗರೀಕರಣ, ನಾಣ್ಯ ಚಲಾವಣೆ, ಉದ್ಯಮೀಕರಣ ಮತ್ತು ಬಂಡವಾಳ ನಿರ್ಮಾಣಗಳಿಗೆ ದಾರಿ ಮಾಡಿತು... ಅದು (ಹದಿನೆಂಟನೆಯ ಶತಮಾನ) ಅವಕಾಶ ಮತ್ತು ಗೊಂದಲಗಳ ಶತಮಾನ. ದುರಾಶಾಪೀಡಿತರೂ ಶಕ್ತರೂ ಆಗಿದ್ದವರಿಗೆ ಅದು ಅವಕಾಶಗಳು ತುಂಬಿದ್ದ ಅವಧಿ; ಲಕ್ಷಾಂತರ ಸಾಮಾನ್ಯ ಜನಸಮುದಾಯಕ್ಕೆ ಅದು ಗೊಂದಲ, ಅನಾಯಕತ್ವದ ಅವಧಿ... (ಷೇಕ್‌ಅಲಿ ೧೯೯೭: ೧).*

ಇದೇ ಕಾಲಘಟ್ಟವನ್ನು ಕುರಿತು ಲಕ್ಷ್ಮಿ ಸುಬ್ರಮಣಿಯನ್ ಅವರು **ಹಿಸ್ಟರಿ ಆಫ್ ಇಂಡಿಯಾ,** ೧೭೦೭–೧೮೫೭ ಕೃತಿಯಲ್ಲಿ ಹೀಗೆ ಅಭಿಪ್ರಾಯಪಟ್ಟಿದ್ದಾರೆ:

*ಹೊಸದಾಗಿ ಬಂದವರು ರಾಜಕೀಯ ಘಟಕಗಳ ಮತ್ತು ಸಣ್ಣ ಪ್ರಾದೇಶಿಕ ಸಂಸ್ಥಾನಗಳ ಕಟ್ಟುವಿಕೆಯಲ್ಲಿ ತೊಡಗಿದ್ದು, ಈ ಶತಮಾನವು ಸಂಪನ್ಮೂಲಗಳ ಮರುಹಂಚಿಕೆ ಮತ್ತು ಉತ್ಪಾದನಾ ವಲಯಗಳ ನಿರ್ಮಾಣ ಹಾಗೂ ರಾಜತ್ವ, ಆಡಳಿತ ಮತ್ತು ಸಂಘರ್ಷಗಳ ನಿರೂಪಣೆಯ ಸ್ಪರ್ಧೆಗೆ ಅವಕಾಶಗಳ ಸಮ್ಮತಿಯನ್ನು ಕಲ್ಪಿಸಿತು...*

*...ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿಯು ವಿಸ್ತರಣೆಯ ಮತ್ತು ತನ್ನ ಏಳಿಗೆಯ ಪ್ರತಿಯೊಂದು ಅವಕಾಶವನ್ನು ಎದುರು ನೋಡುತ್ತಿತ್ತು. ಒಂದು ಅಸ್ಥಿರವಾದ ಮತ್ತು ಅವನತಿಯ ಶತಮಾನವೆಂದು ಬಿಂಬಿತವಾಗಿದೆ. ದಿಗ್ವಿಜಯ ಮತ್ತು ಆಕ್ರಮಣಗಳಿಗೆ ನೈತಿಕ ನ್ಯಾಯವನ್ನು ಒದಗಿಸುವ ಅಗತ್ಯವಿದೆ. (ಲಕ್ಷ್ಮಿ ೨೦೧೨(೨೦೧೦): ೧೦).*

ಇದೇ ವಿಷಯವನ್ನು ಕೂಲಂಕಶವಾಗಿ ಪ್ರಸ್ತುತ ಮಹಾಪ್ರಬಂಧದಲ್ಲಿ ಸುದೀರ್ಘವಾಗಿ ಚರ್ಚಿಸಲು ಯತ್ನಿಸಲಾಗಿದೆ.

ಹದಿನೆಂಟನೆಯ ಶತಮಾನವು ಮೊಘಲ್ ಸಾಮ್ರಾಜ್ಯಕ್ಕೆ ಬಿಕ್ಕಟ್ಟಿನ ಕಾಲ. ಆಧುನಿಕ ಪೂರ್ವ ಜಗತ್ತಿನ ಚರಿತ್ರೆಯಲ್ಲಿ ಬೃಹತ್ ಏಕೀಕೃತ ರಾಜ್ಯಗಳಲ್ಲಿ ಒಂದಾದ ಮೊಘಲ್ ಸಾಮ್ರಾಜ್ಯದ ಸಾರ್ವಭೌಮ ರಾಜಕೀಯ ಅಧಿಕಾರವು ಅವನತಿಯ ಹಾದಿ ಹಿಡಿಯಿತು. ಇದಕ್ಕೆ ಕಾರಣ ಹಲವು. ಒಂದೆಡೆ ಬಂಗಾಳ, ಅವಧ್ ಮತ್ತು ಹೈದರಾಬಾದಿನ ರಾಜ್ಯಪಾಲರು ಸ್ವತಂತ್ರ ಘೋಷಿಸಿಕೊಂಡರೆ, ಮತ್ತೊಂದೆಡೆ ಮರಾಠರು ಅಧಿಕಾರದ ಪಾರಮ್ಯತೆಯನ್ನು ಮೆರೆದರು. ಜೊತೆ ಜೊತೆಗೆ ದಖನ್ ಮತ್ತು ದಕ್ಷಿಣ ಭಾರತದಲ್ಲಿ ಮೈಸೂರು, ಆರ್ಕಾಟ್, ತಿರುವಾಂಕೂರು ಮೊದಲಾದ ಸಣ್ಣಪುಟ್ಟ ಸಂಸ್ಥಾನಗಳು ಸ್ವತಂತ್ರಗೊಂಡವು. ಇದಷ್ಟೇ ಅಲ್ಲದೆ ಮೊಘಲ್ ಸಾಮ್ರಾಜ್ಯವು ಸಿಖ್ಖರ ಬಂಡಾಯ, ರಜಪೂತರ ಪ್ರತಿಭಟನೆಗಳನ್ನೂ ಎದುರಿಸಬೇಕಾಯಿತು (ಸುಬ್ರಮಣಿಯನ್ ೨೦೧೨(೨೦೧೦): ೧೧–೨೦). 'ಹಳ್ಳಕ್ಕೆ ಬಿದ್ದವನಿಗೆ ಆಳಿಗೊಂದು ಕಲ್ಲು' ಎಂಬಂತೆ ಮೊಘಲ್ ಸಾಮ್ರಾಜ್ಯದ ಮೇಲೆ ೧೭೩೯ರಲ್ಲಿ ಆಫ್ಘಾನಿನ ನಾದಿರ್ ಷಾಹ್ ಧಾಳಿ

ನಡೆಸಿ ಮೊಘಲರ ಮತ್ತೊಂದು ಮಗ್ಗುಲು ಮುರಿದನು. ೧೭ ಮತ್ತು ೧೮ನೆಯ ಶತಮಾನಗಳ ಅವಧಿಯ ರಾಜಕೀಯ ಮೇಲಾಟಗಳನ್ನು ಕುರಿತು ಮೋಹನ್‌ಕೃಷ್ಣ ರೈ ಅವರು ತಮ್ಮ ಇತ್ತೀಚಿನ **ಯುದ್ಧ ಮತ್ತು ಒಪ್ಪಂದ** ಎನ್ನುವ ಕೃತಿಯಲ್ಲಿ ಹೀಗೆ ದಾಖಲಿಸಿದ್ದಾರೆ:

> *ಸ್ವತಂತ್ರ ಸಂಸ್ಥಾನಗಳು ಅಧೀನ ಸಂಸ್ಥಾನಗಳಾಗುವ, ಅಧೀನ ಸಂಸ್ಥಾನಗಳು ಸ್ವತಂತ್ರ ಸಂಸ್ಥಾನಗಳಾಗುವ, ಇನ್ನು ಕೆಲವು ಸಂಸ್ಥಾನಗಳು ಇತರ ಸಂಸ್ಥಾನದೊಂದಿಗೆ ವಿಲೀನಗೊಳ್ಳುವ ಇಲ್ಲವೇ ಸಂಪೂರ್ಣವಾಗಿ ಕಣ್ಮರೆಯಾಗುವ ಪ್ರಕ್ರಿಯೆಗಳೆಲ್ಲವೂ ಈ ಅವಧಿಯಲ್ಲಿ ನಡೆದವು (ರೈ, ೨೦೦೭: ೧).*

ಹದಿನೆಂಟನೆಯ ಶತಮಾನದ ರಾಜಕೀಯ ಭೂಪಟದಲ್ಲಿ ಮಹತ್ವದ ಸಂಕ್ರಮಣ ಘಟ್ಟವಾಗಿ ಪ್ರಾದೇಶಿಕ ಸಂಸ್ಥಾನಗಳ ಏಳಿಗೆಯನ್ನು ಗುರುತಿಸಬಹುದಾಗಿದೆ. ಏಳಿಗೆಗೆ ಬಂದ ಈ ಹೊಸಸಂಸ್ಥಾನಗಳು ಅಧಿಕಾರ ಮೂಲವನ್ನಾಧರಿಸಿದ ಹೊಸ ಜ್ಞಾನ ಶಿಸ್ತಿನ ಪರಿಭಾಷೆಯ ದೃಷ್ಟಿಯಿಂದ ವೈವಿಧ್ಯಪೂರ್ಣವಾಗಿವೆ. ಹೊಸ ಪ್ರಾದೇಶಿಕ ಪ್ರಭುತ್ವಗಳ ಉದಯವನ್ನು ಕುರಿತು ಸಿ.ಎ. ಬೈಲಿ ಅವರು ಹೀಗೆ ಹೇಳುತ್ತಾರೆ:

> *ಬೃಹತ್ ಸೈನಿಕ ಪಡೆಗಳ ಉಪಸ್ಥಿತಿಯು ವಾಣಿಜ್ಯ ಚಟುವಟಿಕೆಗಳನ್ನು ಉದ್ದೀಪಿಸಿತು ಮತ್ತು ನಾಣ್ಯದ ಹರಿವನ್ನು ಹೆಚ್ಚಿಸಿತು ಹಾಗೂ ಸಣ್ಣ ಕೇಂದ್ರಗಳಿಗೆ ಸಹಕಾರಿಯಾಯಿತು. ಕಿರು ಮತ್ತು ಹೊಸ ಪ್ರಾದೇಶಿಕ ಸಂಸ್ಥಾನಗಳ ಆಶ್ರಯದಲ್ಲಿ ವಿಶೇಷವಾಗಿ ನಾಣ್ಯ ಟಂಕಿಸುವ ಚಟುವಟಿಕೆಗಳ ಆಧಾರವು ನಗರಗಳ ಬೆಳವಣಿಗೆಯ ಪ್ರಗತಿಯಲ್ಲಿ ಪ್ರಶಂಸನೀಯವಾದುದಾಗಿದೆ. (ಉದ್ಧೃತ: ಲಕ್ಷ್ಮಿ ೨೦೧೨(೨೦೧೦): ೨೧).*

ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಆಳ್ವಿಕೆಯ ಸುಮಾರು ನಾಲ್ಕು ದಶಕಗಳ (೧೭೬೧-೧೭೯೯) ಕಾಲಾವಧಿಯಲ್ಲಿ ಮೈಸೂರು ಸಂಸ್ಥಾನವು ಪ್ರಬಲ ಸೈನಿಕ ಶಕ್ತಿಯಾಗಿ ಬೆಳೆಯಿತು. ಮೈಸೂರು ಸಂಸ್ಥಾನವು ಒಂದು ಸೈನಿಕ ಶಕ್ತಿಯಾಗಿ ಬೆಳೆದು ಬ್ರಿಟಿಷರನ್ನು ಪ್ರತಿರೋಧಿಸಬಲ್ಲ ಹಂತಕ್ಕೆ ಹೇರಿದ್ದರ ಹಿಂದೆ ಕೆಲವು ಪ್ರಮುಖ ಅಂಶಗಳಿವೆ. ಅವುಗಳಲ್ಲಿ ಒಂದು – ಆರ್ಥಿಕ ಬೆಳವಣಿಗೆ. ಮೈಸೂರು ಸಂಸ್ಥಾನವು ನೀರಾವರಿ, ಕೃಷಿ, ತೋಟಗಾರಿಕೆ, ಕೈಗಾರಿಕೆ, ಶಸ್ತ್ರಾಸ್ತ್ರಗಳ ಉತ್ಪಾದನೆಯ ಮೂಲಕ ಸ್ವಾವಲಂಬನೆಯನ್ನು ಸಾಧಿಸಿತ್ತಲ್ಲದೆ ವಿದೇಶಗಳಿಗೂ ಸಂಸ್ಥಾನದ ಉತ್ಪನ್ನಗಳನ್ನು ರಫ್ತು ಮಾಡುತ್ತಿತ್ತು. ಈ ಕ್ಷೇತ್ರಗಳ ಅಭಿವೃದ್ಧಿಗಾಗಿ ಟಿಪ್ಪುವು ದೇಶ ವಿದೇಶಗಳಿಂದ ತಂತ್ರಜ್ಞರನ್ನು, ಕುಶಲಕರ್ಮಿಗಳನ್ನು ಮತ್ತು ವ್ಯಾಪಾರಿಗಳನ್ನು ಆಹ್ವಾನಿಸಿದ್ದನು (ಮೊಹಿಬ್ಬುಲ್ ಹಸನ್ ೧೯೮೮: ೩೦೦-೩೧೬; ಸಾಕಿ ೧೯೯೮: ೪೧೭-೩೦೬). ಹೀಗೆ ಟಿಪ್ಪುವಿನ ದೂರದೃಷ್ಟಿಯಿಂದ ಸದೃಢವಾದ ಆರ್ಥಿಕ ವ್ಯವಸ್ಥೆಯನ್ನು ಹೊಂದಲು ಮೈಸೂರು ಸಂಸ್ಥಾನಕ್ಕೆ ಸಾಧ್ಯವಾಯಿತು.

ಪ್ರಸ್ತುತ ಅಧ್ಯಾಯಕ್ಕಾಗಿ ವಸಾಹತು ಬರಹಗಾರರು ಮತ್ತು ದೇಶಿ ಬರಹಗಾರರ ಬರವಣಿಗೆಗಳನ್ನು ಹೆಚ್ಚಿನದಾಗಿ ಬಳಸಿಕೊಳ್ಳಲಾಗಿದೆ. ಮುಖ್ಯವಾಗಿ ನಲ್ಲಪ್ಪ ಬರೆದ **ಹೈದರ್‌ನಾಮ** (೧೯೭೩). 'ಮಿಸಕಿಂನ್ ನಸೀರುದ್ದೀನ್' ಬರೆದ **ಜಂಗ್‌ನಾಮ** (೨೦೧೧), ಮತ್ತು **ರಾಜೇಂದ್ರನಾಮೆ** (೧೯೫೯)ಗಳನ್ನು ಬಳಸಿಕೊಳ್ಳಲಾಗಿದೆ. ಅಲ್ಲದೆ ಮೀರ್ ಹುಸೇನ್ ಕಿರ್ಮಾನಿ ಬರೆದ **ದಿ ಹಿಸ್ಟರಿ ಆಫ್ ಹೈದರ್ ನಾಯಕ** ಮತ್ತು **ಹಿಸ್ಟರಿ ಆಫ್ ಟಿಪ್ಪು ಸುಲ್ತಾನ್** (೧೮೬೪), ಗುಲಾಮ್ ಮೊಹಮ್ಮದ್ ಬರೆದ **ದಿ ಹಿಸ್ಟರಿ ಆಫ್ ಹೈದರ್ ಷಾ ಅಲಿಯಾಸ್ ಹೈದರ್ ಅಲಿ ಖಾನ್ ಬಹದೂರ್: ಅಂಡ್ ಆಫ್ ಹಿಸ್ ಸನ್ ಟಿಪ್ಪೂ ಸುಲ್ತಾನ್** (೧೮೫೫) ಹಯವದನ ರಾವ್ ಅವರ **ಮೈಸೂರ್ ಗ್ಯಾಸೆಟಿಯರ್** (ಐದು ಸಂಪುಟಗಳಲ್ಲಿ ೧೯೨೭-೧೯೩೦) ಮತ್ತು **ಹಿಸ್ಟರಿ ಆಫ್ ಮೈಸೂರ್** (ಮೂರು ಸಂಪುಟಗಳು ೧೯೪೩, ೧೯೪೫ ಮತ್ತು ೧೯೪೬) ಕೃತಿಗಳು ಹೈದರ್ ಮತ್ತು ಟಿಪ್ಪುವಿನ ಸೈನಿಕ ಸಾಧನೆಗಳನ್ನು ಕುರಿತು ಅಪಾರ ಮಾಹಿತಿಗಳನ್ನು ಹೊಂದಿರುವ ಕೃತಿಗಳಾಗಿವೆ.

ಅದೇ ರೀತಿ ವಸಾಹತು ಬರಹಗಾರರಾದ ಕರ್ನಲ್ ಮಾರ್ಕ್ ವಿಲ್ಕ್ಸ್‌ನ **ಹಿಸ್ಟಾರಿಕಲ್ ಸ್ಕೆಚಸ್ ಆಫ್ ದಿ ಸೌಥ್ ಆಫ್ ಇಂಡಿಯಾ ಇಸ್ ಆ್ಯನ್ ಅಟೆಂಟ್ ಟು ಟ್ರೇಸ್ ದಿ ಹಿಸ್ಟರಿ ಆಫ್ ಮೈಸೂರ್** (ಸಂ- ೧ ೧೮೧೦, ಸಂ- ೨ ಮತ್ತು ೩, ೧೮೧೭), ಬಿ.ಎಲ್ ರೈಸ್ ಅವರ **ಮೈಸೂರ್ ಗ್ಯಾಸೆಟಿಯರ್** (೧೮೭೮, ೧೮೯೮), ಲೂಯಿ ಬೆಂಥಾಮ್ ಬೌರಿಂಗ್ ಬರೆದ **ಹೈದರ್ ಅಲಿ ಅಂಡ್ ಟಿಪು ಸುಲ್ತಾನ್: ಅಂಡ್ ದಿ ಸ್ಟ್ರಗಲ್ ವಿಥ್ ದಿ ಮುಸಲ್ಮಾನ್ ಪವರ್ ಆಫ್ ದಿ ಸೌಥ್ ಇಂಡಿಯಾ**(೧೮೯೯) ಮುಖ್ಯವಾದ ಕೃತಿಗಳಾಗಿವೆ.

ಸಮಕಾಲೀನ ಇತಿಹಾಸಕಾರರು ಬರೆದಿರುವ ಕೃತಿಗಳಲ್ಲಿ ಮೊಹಿಬಲ್ ಹಸನ್ ಅವರ **ಟಿಪೂ ಸುಲ್ತಾನನ ಇತಿಹಾಸ** (೧೯೮೮), ಬಿ. ಷೇಕ್ ಅಲಿ ಅವರು ಬರೆದಿರುವ **ಕರ್ನಾಟಕ ಚರಿತ್ರೆ ಸಂಪುಟ-೫** (೧೯೯೭), **ಟಿಪು ಸುಲ್ತಾನ್: ಎ ಸ್ಟಡಿ ಇನ್ ಡಿಪ್ಲೊಮಸಿ ಅಂಡ್ ಕಾನ್‌ಫ್ರಂಟೇಷನ್** (೨೦೦೬) ಕೃತಿಗಳು ಈ ನಿಟ್ಟಿನಲ್ಲಿ ಬಹುಮುಖ್ಯ ಕೃತಿಗಳಾಗಿವೆ. ಇವಲ್ಲದೆ ಬಿ. ಮುದ್ದಾಚಾರಿ ಅವರ **ಮರಾಠರ ಅತಿಕ್ರಮಣ, ಮೈಸೂರಿನ ಪ್ರತಿಭಟನೆ** (೨೦೦೧) ಕೃತಿಯಲ್ಲಿ ಹೈದರಾಲಿ ಹಾಗೂ ಟಿಪ್ಪು ಸುಲ್ತಾನ್ ಮರಾಠರ ವಿರುದ್ಧ ಸೆಣೆಸಿದ ವಿವರಕ್ಕಾಗಿ ನೋಡಲಾಗಿದೆ.

### ೪.೧ ಹೈದರಾಲಿ ಮತ್ತು ಕೋಟೆಗಳಿಗೆ ಸಂಬಂಧಿಸಿದ ಕೆಲವು ಘಟನೆಗಳು

ಮೂಲತಃ ಯೋಧ ಮನೆತನಕ್ಕೆ ಸೇರಿದ ಹೈದರಾಲಿಯು ಅನಕ್ಷರಸ್ಥನಾದರೂ ತನ್ನ ಶಕ್ತಿ ಮತ್ತು ಸಾಮರ್ಥ್ಯಗಳ ಮೂಲಕ ಮೈಸೂರಿನ ಸೇನೆಯಿಂದಲೇ ಮೇಲೆ

ಮೇಲೆ ಬಂದನು. ಹದಿನೆಂಟನೆಯ ಶತಮಾನವು ಸದಾ ಯುದ್ಧ ಮತ್ತು ಆಕ್ರಮಣಗಳಿಂದ ಕ್ರಿಯಾಶೀಲವಾಗಿದ್ದ ಕಾಲಘಟ್ಟವಾದ್ದರಿಂದ ಮೈಸೂರು ಸೇನೆಯ ಜೊತೆಯಲ್ಲಿದ್ದ ಹೈದರನು ಹಲವು ಯುದ್ಧಗಳಲ್ಲಿ ಪಾಲ್ಗೊಳ್ಳಲು ಸಾಧ್ಯವಾಯಿತು. ಇದರಿಂದ ಯೂರೋಪ್ ಮಾದರಿಯ ಯುದ್ಧ ತಂತ್ರಜ್ಞಾನ, ಸೈನಿಕ ಕಾರ್ಯಾಚರಣೆಗಳನ್ನು ಸಮೀಪದಿಂದ ಗಮನಿಸಲು ಸಾಧ್ಯವಾಯಿತು. ಅಲ್ಲದೆ, ಮೊಘಲರ ಅಧೀನ ಸರದಾರರ ಯುದ್ಧಕ್ರಮಗಳು ಮತ್ತು ದೇಶಿಯ ಸೇನೆಗಳ ಯುದ್ಧ ಕಲೆ ಮತ್ತು ತಂತ್ರಗಳನ್ನು ಗಮನಿಸುತ್ತಾ ಬಂದನು. ಒಳ್ಳೆಯ ಸಂಗತಿಗಳನ್ನು ಅಳವಡಿಸಿಕೊಳ್ಳುವ ಮೂಲಕ ಯುದ್ಧ ಕೌಶಲ್ಯವನ್ನು ಸಹಜವಾಗಿಯೇ ಕರಗತ ಮಾಡಿಕೊಂಡನು.

ಮೈಸೂರು ಸಂಸ್ಥಾನದ ದಳವಾಯಿಗಳನ್ನು ಮೂಲೆಗುಂಪು ಮಾಡಿ ಅಥವಾ ನಿವೃತ್ತಿಗೊಳಿಸಿ, ೧೭೫೮ರ ಹೊತ್ತಿಗೆ ಸೇನೆಯ ಚುಕ್ಕಾಣಿಯನ್ನು ಹೈದರಾಲಿ ತನ್ನ ನಿಯಂತ್ರಣಕ್ಕೆ ತೆಗೆದುಕೊಂಡನು. ೧೭೬೧ರ ಹೊತ್ತಿಗೆ ಆಂತರಿಕ ಪಿತೂರಿಗಳೆಲ್ಲವನ್ನು ಮಟ್ಟನಿಂತನಲ್ಲದೆ, ಸೇನಾ ಸಂಘಟನೆಗೆ ಆದ್ಯತೆ ನೀಡಿದನು. ಅದಕ್ಕಾಗಿ ಭಾರತದ ಮೂಲೆ ಮೂಲೆಗಳಿಂದ ಸಮರ್ಥರನ್ನು ಸೇನೆಗೆ ಸೇರಿಸಿಕೊಳ್ಳುವ ಸಲುವಾಗಿ ಆಹ್ವಾನಿಸಿ, ಧಾರಾಳವಾಗಿ ಸಂಬಳ, ಭತ್ಯೆ, ಮೊದಲಾದವುಗಳನ್ನು ನೀಡಿದನು. ಕಿರ್ಮಾನಿ ಹೇಳುವಂತೆ:

> *ಹಲವಾರು ಬುಡಕಟ್ಟುಗಳಿಗೆ ಮತ್ತು ದೇಶಗಳಿಗೆ ಸೇರಿದ ವೀರ ಯೋಧರು, ಕುಶಲ ಕರ್ಮಿಗಳು, ಉದ್ಯೋಗವಿಲ್ಲದೆ ಒರೆಯೊಳಕ್ಕೆ ಇಳಿಸಿದ ಕತ್ತಿಯಂತೆ ಎಲ್ಲೋ ಮೂಲೆಯಲ್ಲಿ ಹುದುಗಿಕೊಂಡಿದ್ದರು. ಇವರೆಲ್ಲ ಈ ಆಹ್ವಾನದಿಂದ ಮೇಲೆದ್ದರು. ತಮ್ಮ ಅದೃಷ್ಟದ ಮುಖಕ್ಕೆ ಮೆತ್ತಿದ್ದ ಧೂಳನ್ನೂ, ತುಕ್ಕನ್ನೂ ಒರಸಿ, ತಲೆ ಮೇಲಕ್ಕೆತ್ತಿಕೊಂಡು ಹೈದರನ ಮುಂದೆ ಬಂದು ನಿಂತರು. ಅವನು ಅವರವರ ಸಾಮರ್ಥ್ಯ ಮತ್ತು ಅರ್ಹತೆಗಳಿಗನುಗುಣವಾಗಿ ತನ್ನ ಸೇನೆಯಲ್ಲಿ ಉದ್ಯೋಗ ಕೊಟ್ಟು ನಿಲ್ಲಿಸಿದನು (ಕಿರ್ಮಾನಿ ೧೮೪೨: ೧೦೦).*

ಹೀಗೆ ಹೈದರಾಲಿಯು ಪ್ರತಿಭಾವಂತರನ್ನು ಗುರುತಿಸಿ, ಆಹ್ವಾನಿಸಿ ಸೇನೆಯನ್ನು ಸಂಘಟಿಸುವಲ್ಲಿ ಯಶಸ್ವಿಯಾದ ನಂತರ ತನ್ನ ಜೈತ್ರಯಾತ್ರೆಯನ್ನು ಮುಂದುವರಿಸಿದನು. ಇವನ ಹೊಡೆತಕ್ಕೆ ಅನೇಕ ಪಾಳೆಯಗಾರರು ನೆಲೆಯನ್ನು ಕಳೆದುಕೊಂಡರು. ಅವರ ಸೀಮೆಗಳೆಲ್ಲವನ್ನು ಮೈಸೂರು ಸಂಸ್ಥಾನಕ್ಕೆ ಸೇರಿಸಿಕೊಳ್ಳುತ್ತಾ ತನ್ನ ಅಧಿಕಾರಿಗಳನ್ನು ನೇಮಿಸುತ್ತಾ ನಡೆದನು. ಅದೇ ರೀತಿ ಮರಾಠರ ರಘೋಬನಿಂದ ತುಮಕೂರು ಜಿಲ್ಲೆಯ ಕೆಲವು ಕೋಟೆಗಳನ್ನು ಪಡೆದುಕೊಂಡ ವಿವರಗಳನ್ನು ಮುಂದೆ ಅವಲೋಕಿಸಲಾಗಿದೆ.

***

ಹೈದರಾಲಿಯ ಪಾಲಿಗೆ ೧೭೬೨ ನೆಯ ವರ್ಷವು ಬಹಳ ಫಲಪ್ರದಾಯಕವಾಗಿತ್ತು. ಆ ವರ್ಷ **ಚಿಕ್ಕಬಳ್ಳಾಪುರ, ಪೆನುಗೊಂಡ, ಮಡಕಶಿರಾ, ರಾಯದುರ್ಗ, ಹರಪನಹಳ್ಳಿ** ಮುಂತಾದ ಪ್ರದೇಶಗಳು ಅವನ ವಶಕ್ಕೆ ಬಂದವು. ದೇವನಹಳ್ಳಿಯ ಮೇಲೆ ಆಕ್ರಮಣ ನಡೆಸಿದಾಗ ದೇವನಹಳ್ಳಿಯ ಪಾಳೇಗಾರನಿಗೆ ಚಿಕ್ಕಬಳ್ಳಾಪುರದ ಪಾಳೇಗಾರನು ಆಶ್ರಯ ನೀಡಿದನು. ಆದ್ದರಿಂದ ಹೈದರನ ಕಣ್ಣು ಚಿಕ್ಕಬಳ್ಳಾಪುರದ ಮೇಲೆ ಬಿತ್ತು. ಚಿಕ್ಕಬಳ್ಳಾಪುರದ ಮೇಲೇರಿ ಬರುತ್ತಿರುವ ಹೈದರನನ್ನು ಕಂಡು ಗುತ್ತಿಯ ಮುರಾರಿರಾಯನ ನೆರವನ್ನು ಪಾಳೇಗಾರ ಯಾಚಿಸಿದನು. ಎರಡೂ ಸೈನ್ಯಗಳು ಹೈದರನ ಸೈನ್ಯದ ಮುಂದೆ ನಿಲ್ಲದಾದವು. ಕೊನೆಗೆ ಸೋತ ಚಿಕ್ಕಬಳ್ಳಾಪುರದ ಪಾಳೆಯಗಾರನು ಒಂಬತ್ತು ಲಕ್ಷ ರೂಪಾಯಿ ಕೊಟ್ಟು ಶಾಂತಿ ಸಂಧಾನ ಮಾಡಿಕೊಂಡನು. ಆದರೆ ಹೆಚ್ಚು ಕಾಲ ಅಲ್ಲಿ ನಿಲ್ಲದೆ ಹೈದರನ ಸೈನ್ಯ ದೇವನಹಳ್ಳಿಗೆ ಹಿಂತಿರುಗಿತು. ಇದೇ ಸಮಯ ನೋಡಿ ಗುತ್ತಿಯ ಮುರಾರಿರಾಯನ್ನು ಚಿಕ್ಕಬಳ್ಳಾಪುರವನ್ನು ಆಕ್ರಮಿಸಿಕೊಂಡನು. ಈ ವೇಳೆ ಚಿಕ್ಕಬಳ್ಳಾಪುರದ ಪಾಳೆಯಗಾರನು ನಂದಿದುರ್ಗಕ್ಕೆ ಹೋಗಿ ಆಶ್ರಯ ಪಡೆದನು. ಇದರಿಂದ ಕುಪಿತಗೊಂಡ ಹೈದರನು ಮಿಂಚಿನ ವೇಗದಲ್ಲಿ ಹೋಗಿ ಚಿಕ್ಕಬಳ್ಳಾಪುರವನ್ನು ವಶಪಡಿಸಿಕೊಂಡು ತನ್ನ ದಕ್ಷ ಅಧಿಕಾರಿಯಾದ ಬದ್ರುಜಮಾನ್‌ಖಾನ್‌ನನ್ನು ಅಲ್ಲಿಗೆ ನೇಮಿಸಿದನು. ನಂತರ ಮುರಾರಿರಾಯನನ್ನು ಮಣಿಸಿದನು. ಆನಂತರ ಪೆನುಗೊಂಡೆ, ಮಡಕಶಿರಾ, ರಾಯದುರ್ಗ, ಹರಪನಹಳ್ಳಿ ಮೊದಲಾದವುಗಳು ಮೈಸೂರು ಸಂಸ್ಥಾನಕ್ಕೆ ಸೇರಿದವು. ಚಿತ್ರದುರ್ಗದ ಪಾಳೆಯಗಾರ ಮಾತ್ರ ಹೈದರನಿಗೆ ಸ್ವಲ್ಪಮಟ್ಟಿನ ಪ್ರತಿರೋಧವನ್ನು ತೋರಿದನು (ಷೇಕ್‌ಅಲಿ ೧೯೬೭: ೫೨).

ಮರಾಠರಲ್ಲಿ ಪೇಶ್ವೆ ನಾರಾಯಣ ರಾವ್‌ನನ್ನು ಕೊಂದು ರಘೋಬ ಅಧಿಕಾರಕ್ಕೆ ಬಂದನು. ಮರಾಠ ಸರ್ಕಾರ ಮತ್ತು ಹೈದರಾಲಿ ನಡುವೆ ಉಂಟಾದ ತಪ್ಪು ತಿಳಿವಳಿಕೆಯ ಪರಿಣಾಮ ರಘೋಬ ಮೈಸೂರು ಸಂಸ್ಥಾನದ ಮೇಲೆ ಧಾಳಿ ಮಾಡಿದ. ಆಗ ಹೈದರಾಲಿಯು ಅವನೊಂದಿಗೆ ಒಪ್ಪಂದ ಮಾಡಿಕೊಳ್ಳಲು ಪ್ರಧಾನ ವೆಂಕಪ್ಪಯ್ಯ, ಹರಿಕರ್ ನರಸಪ್ಪ ನಾಯಕ ಮತ್ತು ಅಪ್ಪಾಜಿ ರಾವ್ ಅವರನ್ನು ಕಳುಹಿಸಿದನು. ಈ ಮೂವರು ರಘೋಬನನ್ನು ಸಂಡೂರು ಸಮೀಪ ಭೇಟಿಯಾದರು. ಆದರೆ ಇದೇ ಸಮಯಕ್ಕೆ ಹತ್ಯೆಯಾಗಿದ್ದ ಪೇಶ್ವೆ ನಾರಾಯಣ ರಾವ್ ಮಡದಿಯು ಗಂಡು ಮಗುವೊಂದಕ್ಕೆ ಜನ್ಮ ನೀಡಿದಳು. ಆ ಮಗುವಿಗೆ ಸವಾಯ್ ಮಾಧವರಾವ್ ಎಂದು ನಾಮಕರಣ ಮಾಡಿ ಬಾಲಾಜಿ ಪಂಥ್ ಮತ್ತು ನಾನಾ ಸಾಹೇಬ್ ಮತ್ತಿತರರು ಮಗುವಿನ ಹೆಸರಿನಲ್ಲಿ ಆಳಲಾರಂಭಿಸಿದರು. ಈ ವಿಷಯವನ್ನು ಕೇಳಿದ ರಘೋಬನ ಜೊತೆಗೆ ಬಂದಿದದ ಸರದಾರರು **ರಘೋಬ**ನಿಗೂ ತಿಳಿಸದೆ ಪೂನಾಗೆ ಹಿಂತಿರುಗಿದರು. ಆದ್ದರಿಂದ

ರಘೋಬ ಹೈದರನೊಂದಿಗೆ ಒಪ್ಪಂದಕ್ಕೆ ಬಂದನು. ಶಿರಾ, ಮಧುಗಿರಿ, ಚನ್ನರಾಯನದುರ್ಗ, ಹೊಸಕೋಟೆ, ದೊಡ್ಡಬಳ್ಳಾಪುರ ಮತ್ತಿತರ ಸ್ಥಳಗಳು ಸೇರಿದಂತೆ ಕೃಷ್ಣಾ ನದಿಯವರೆಗಿನ ಪ್ರದೇಶಗಳನ್ನು ಬಿಟ್ಟುಕೊಟ್ಟನು. ಪ್ರತಿಯಾಗಿ ತಾನು ಪೇಶ್ವೆಯಾಗಲು ಹೈದರಾಲಿಯ ಸಹಾಯವನ್ನು ಕೇಳಿದನು (ಎಂ.ಎ.ಆರ್, ೧೯೩೦: ೯೮; ಷೇಕ್‌ಅಲಿ ೧೯೯೭: ೯೬–೯೯).

ಆದರೆ ಮಹಿಮಾಜಿ ಸಿಂಧ್ಯನ ಮಗ ಶಾಮಜಿ ಸಿಂಧ್ಯನು ಶಿರಾವನ್ನು ಖಾಲಿ ಮಾಡಲು ನಿರಾಕರಿಸಿದನಲ್ಲದೆ ರಘೋಬನ ಸನ್ನದನ್ನು ಮಾನ್ಯ ಮಾಡಲಿಲ್ಲ. ಆಗ ಟಿಪ್ಪು ಸುಲ್ತಾನ್ ಮತ್ತು ಸರ್ದಾರ್ ಖಾನ್‌ರನ್ನು ಶಿರಾವನ್ನು ವಶಪಡಿಸಿಕೊಳ್ಳಲು ಕಳುಹಿಸಲಾಗಿತ್ತು. ಈಗ ಶಿರಾದತ್ತ ನಡೆದ ಹೈದರನು ಕೋಟೆಯ ಮುತ್ತಿಗೆಗೆ ಸಿದ್ಧತೆ ನಡೆಸಿದನು. ಈ ಕೋಟೆಯು ತ್ರಿಯಂಬಕ ಕೃಷ್ಣ ಎಂಬ ದಕ್ಷ ಸೇನಾಪತಿಯ ರಕ್ಷಣೆಯಲ್ಲಿತ್ತು. ಮೂರು ತಿಂಗಳ ಕದನದ ನಂತರ ಹೈದರನು ಮಿಂಚಿನ ಕಾರ್ಯಾಚರಣೆಯ ಮೂಲಕ ಕೋಟೆಯನ್ನು ಕೈವಶ ಮಾಡಿಕೊಂಡನು. ಅಲ್ಲಿದ್ದ ಬೃಹತ್ ಪ್ರಮಾಣದ ಶಸ್ತ್ರಾಸ್ತ್ರ ಮತ್ತು ಆಹಾರ ಧಾನ್ಯಗಳು ಅವನ ಕೈವಶವಾಯಿತು. ಬಸಲತ್ ಜಂಗನು ಔಪಚಾರಿಕವಾಗಿ ಹೈದರಾಲಿಯನ್ನು ಗೌರವಿಸಿ ಸನ್ನದನ್ನು ನೀಡಿದನು. ವಾರ್ಷಿಕ ಪಷ್‌ಕುಷ್ ಸಲ್ಲಿಸುವಂತೆ ತಿಳಿಸಿ ಶಿರಾ ಸುಭಾದ ವರಮಾನವೆಲ್ಲವನ್ನೂ ಹೈದರನಿಗೆ ವಹಿಸಿಕೊಟ್ಟನು. ಹೈದರನು ಶಿರಾ ಕೋಟೆಗೆ ಮೀರ್ ಇಸ್ಮಾಯಿಲ್ ಹುಸೇನ್‌ನನ್ನು ಕಿಲ್ಲೇದಾರನನ್ನಾಗಿ ನೇಮಿಸಿದನು.

ನಂತರ **ಮಧುಗಿರಿ**ಯನ್ನು ೨–೩ ದಿನಗಳಲ್ಲಿ ವಶಪಡಿಸಿಕೊಂಡು ಅಲ್ಲಿದ್ದ ಲಕ್ಷ್ಮಣ ಪಂಥನನ್ನು ಪೂನಾಗೆ ಓಡಿಸಿದರು. ಆನಂತರ ಚನ್ನರಾಯನದುರ್ಗವನ್ನು ಗೆಲ್ಲಲು ಎರಡು ತಿಂಗಳುಗಳ ಕಾಲ ಕಾದಾಡಿದರು. ಶಿರಾ, ಮಧುಗಿರಿ ಮತ್ತು ಚನ್ನರಾಯನದುರ್ಗದ ಮಾಮಲೆದಾರನಾಗಿ ಪ್ರಧಾನ ವೆಂಕಪ್ಪಯ್ಯನನ್ನು ನೇಮಕ ಮಾಡಿದನು. ನಂತರ ಹೊಸಕೋಟೆಯನ್ನು ೧೭೭೪ರ ಜೂನ್ ಮತ್ತು ಜುಲೈ ತಿಂಗಳಲ್ಲಿ ನವಾಬನು ಶ್ರೀರಂಗಪಟ್ಟಣದಿಂದ ಬಂದು ಮುತ್ತಿಗೆ ಹಾಕಿ ಗೆದ್ದನು ಪಟ್ಟಣವನ್ನು ಗೆದ್ದನಂತರ ಗುರ್‍ರಂಕೊಂಡವನ್ನು ಗೆಲ್ಲಲು ಟಿಪ್ಪು ಸುಲ್ತಾನನನ್ನು ಕಳುಹಿಸಿ ನವಾಬನು ಬೆಂಗಳೂರಿಗೆ ಹಿಂತಿರುಗಿದನು (ಎಂ.ಎ.ಆರ್. ೧೯೩೦: ೯೪; ಹೈ.ನಾ. ೧೯೭೧(೧೯೯೯): ೬೫).

**ಕುರುಗೋಡು** ಬಳ್ಳಾರಿ ಪಾಳೆಯಗಾರರ ಅಧೀನಕ್ಕೆ ಒಳಪಟ್ಟ ಕೋಟೆ. ಬಳ್ಳಾರಿಯ ಪಾಳೆಯಗಾರರ ಮನೆತನದಲ್ಲಿ ಅಧಿಕಾರಕ್ಕೆ ಬಂದ ದೊಡ್ಡಪ್ಪನಾಯಕನ ಕಾಲದಲ್ಲಿ ಹೈದರಾಲಿಯು ಸೈನ್ಯ ಸಮೇತನಾಗಿ ಬಳ್ಳಾರಿಯ ಮೇಲೆ ದಂಡೆತ್ತಿ ಬಂದನು. ಶ್ಯಾಮಲ ಪಿ.ಆರ್. ಅವರ ಅಭಿಪ್ರಾಯದ ಪ್ರಕಾರ, ಆಗ ದೊಡ್ಡಪ್ಪನಾಯಕನು ತನ್ನ ಮಡದಿಯರ

ಜೊತೆ ಕುರುಗೋಡಿಗೆ ಪಲಾಯನಗೈದನು. ಕುರುಗೋಡನ್ನು ಮುತ್ತಲು ಬಂದ ಹೈದರಾಲಿ ಕಡೆಯ ರಾಯದುರ್ಗದ ಕೃಷ್ಣಪ್ಪನಾಯಕನ ಕುದುರೆ, ಮದ್ದು ಗುಂಡುಗಳನ್ನು ಕಸಿದುಕೊಂಡು ಕೋಟೆಯೊಳಗೆ ಸಜ್ಜಾಗಿ ನಿಂತರು. ಇದರಿಂದ ಕೆರಳಿದ ಹೈದರಾಲಿಯು ಸುಡುಗಾಡುಮಟ್ಟಿಗೆ ಬಂದನು. ತೋಪುಗಳನ್ನು, ಕೋಟೆಯನ್ನು, ಚಳ್ಳೂರಯ್ಯನ ಬಾವಿಯನ್ನೂ ನೆಲಸಮ ಮಾಡಿದನು. ಆಗ ಕೆಳಗಿನ ಕೋಟೆಯವರು ಕೋಟೆ ಮುರಿದು ಬಿದ್ದ ಸ್ಥಳವನ್ನು ನೋಡುತ್ತಿರಲಾಗಿ, ಹೈದರಾಲಿಯ ಸೈನ್ಯ ನಾಲ್ಕೈದು ಸಾವಿರ ಕಳ್ಳಿ ಹೊತ್ತ ಮಂದಿ ಆರ್ಭಟ ಮಾಡುತ್ತ ತೋಪುಗಳು, ಬಜಾಲಿ, ರೇಖಲಿ, ತುಪಾಕಿ, ಬಾಣ ಮುಂತಾದುವುಗಳಿಂದ ಆಕ್ರಮಣ ಮಾಡಿದರು. ಕೋಟೆಯೊಳಗಿನ ಜನರು ಕವಣೆಕಲ್ಲು, ಕೋಲು ಬಡಿಗೆಗಳಿಂದ ಪ್ರತಿಧಾಳಿ ನಡೆಸಿದರು. ಮೇಲಿನ ಕೋಟೆಯಲ್ಲಿದ್ದವರೂ ಇದೇ ರೀತಿ ಧಾಳಿ ನಡೆಸಿದರು. ಇವರ ಆಕ್ರಮಣವನ್ನು ತಡೆಯಲಾರದ ಹೈದರಾಲಿಯ ಸೈನಿಕರು ಹಿಂದುರಿಗಿ ಓಡಿಹೋಗುತ್ತಿರಲು, ಅವರನ್ನು ಬಡಿಗೆಯಿಂದ ಹೊಡೆಸಿ ಮತ್ತೆ ಆಕ್ರಮಣ ನಡೆಸಲು ಹಿಂದಕ್ಕೆ ಕಳುಹಿಸುತ್ತಿದ್ದನು. ಕೋಟೆಯನ್ನು ಹತ್ತಲು ನವಾಬನ ಸೈನ್ಯ ನಿಚ್ಚಣಿಕೆಯನ್ನು ಹಾಕಿ ಹತ್ತುವ ಸಮಯಕ್ಕೆ ಬಾಣಾಗಾರ ಕಾಟಮರಾಜು ಬಾಣಗಳಿಗೆ ಬೆಂಕಿ ಹಚ್ಚಿ ಅಗಳ್ತೆಗೆ ಹಾಕಲು, ಒಳಗೂ ಹೊರಗೂ ಬಹಳ ಜನ ಸತ್ತರು. ಎಷ್ಟೇ ಕಷ್ಟಪಟ್ಟರೂ ಕೋಟೆಯೊಳಗಿನವರು ಹಿಂದೆಗೆಯಲಿಲ್ಲ. ಮರುದಿನ ನವಾಬನು ಸೆರೆಯಲ್ಲಿಟ್ಟಿದ್ದ ವಕೀಲ ಕಾಂತರಾಯನನ್ನು ಕರೆಯಿಸಿ, ಕೆಲವು ಖಂಡಣಿ ಮುಗಿಸಿಕೊಂಡು ಅವನನ್ನು ಬಳ್ಳಾರಿ ಕೋಟೆಯೊಳಗೆ ಕಳುಹಿಸಿ, ತಾನು ಹಿಂದಿರುಗಿದನು. ನಂತರ ನಡೆದ ಬಿರುಸಿನ ರಾಜಕೀಯ ಚಟುವಟಿಕೆಯಿಂದಾಗಿ ಕಂಗೆಟ್ಟ ದೊಡ್ಡಪ್ಪನಾಯಕನು ಕೆಂಚನಗುಡ್ಡ, ಕರೂರುಗಳಲ್ಲಿ ರಕ್ಷಣೆ ಪಡೆದು ಅಂತಿಮವಾಗಿ ಬಳ್ಳಾರಿಯನ್ನು ಸೇರಿಕೊಂಡನು (ಶ್ಯಾಮಲ ೨೦೧೭: ೫೦-೫೨).

ದೊಡ್ಡಪ್ಪನಾಯಕನು ಬಳ್ಳಾರಿಯಲ್ಲಿ ಸಂಸ್ಥಾನವಾಳುವಾಗ ಆದವಾನಿಯ ನವಾಬನಾದ ಬಸಲತ್‌ಜಂಗನು ತನ್ನ ಸರದಾರರಾದ ದೇವಿಚಂದ್ ಮತ್ತು ಅಮೀನ್ ಸಾಹೇಬ ಎಂಬುವವರೊಡನೆ ಮೂಸಲಾಲಿ ಎಂಬ ಫಿರಂಗಿಯವರೊಡನೆ ಸೈನ್ಯ ಕಳುಹಿಸಿದನು. ಅವರು ೧೭೭೫ರಲ್ಲಿ ಬಳ್ಳಾರಿಗೆ ಮುತ್ತಿಗೆ ಹಾಕಿದರು. ಮೂರು ತಿಂಗಳವರೆಗೂ ಮುತ್ತಿಗೆ ಹಾಕಿದಾಗ ಬಳ್ಳಾರಿ ಕೋಟೆಯಲ್ಲಿದ್ದ ದೊಡ್ಡಪ್ಪನಾಯಕನು ಯೋಚನೆಯಲ್ಲಿ ಮುಳುಗಿದನು. ಬಸಲತ್ ಜಂಗನ ಸೇನೆ ಬಳ್ಳಾರಿಗೆ ಮುತ್ತಿಗೆ ಹಾಕಿರುವ ಸುದ್ದಿ ತಿಳಿದ ಕೂಡಲೆ ಹೈದರಾಲಿಯು ಸೈನ್ಯಸಮೇತ ಬಂದು ದೇವಿಚಂದನ ಸೈನ್ಯವನ್ನು ಮುತ್ತಿಕೊಂಡು ಅವನನ್ನು ಕೊಲ್ಲಲಾಗಿ ಸೇನೆ ಚದುರಿತು. ಅಮೀನ ಸಾಹೇಬನು ತಲೆತಪ್ಪಿಸಿಕೊಂಡು ಓಡಿಹೋದನು. ನಗಾರಿ, ನೌಪತ್ತು, ಡೇರಾ, ಆನೆ, ಕುದುರೆ ಮೊದಲಾದವುಗಳು

ಹೈದರಾಲಿಯ ವಶವಾದವು. ಈ ಸಂದರ್ಭದಲ್ಲಿ ದೊಡ್ಡಪ್ಪನಾಯಕನು ಬಳ್ಳಾರಿಯ ಕೋಟೆಯೊಳಗೆ ದೇಸಾಯಿ, ನಾಡಿಗರು ಮೊದಲಾದ ಅಧಿಕಾರಿಗಳನ್ನು ಬಿಟ್ಟು ಕೆಲವು ನಾಯಕವಾಡಿಗಳೊಡನೆ ಗುಪ್ತವಾಗಿ ನಾಗರಕೆರೆ ಅಗಳ್ತೆಯ ಕಡೆಯಿಂದ ತುಂಗಭದ್ರಾ ನದಿಯನ್ನು ದಾಟಿ ಹೋದನು. ಅದೇ ರಾತ್ರಿ ಬಳ್ಳಾರಿಯ ಪಾಳೇಗಾರನ ಪತ್ನಿಯು ಕೋಟೆಯಿಂದ ಪಲಾಯನಗೈದಳು. ಮರುದಿನ ಹೈದರಾಲಿ ಬಳ್ಳಾರಿ ಕೋಟೆಯ ಒಡೆಯನಾದನು. ಕುರುಗೋಡು ಮತ್ತು ಬಳ್ಳಾರಿಗಳನ್ನು ರಾಯದುರ್ಗದ ಕೃಷ್ಣಪ್ಪ ನಾಯಕನಿಗೆ ವಹಿಸಿಕೊಟ್ಟನು. ಅಲ್ಲದೆ ಬಳ್ಳಾರಿ ಕೋಟೆಗೆ ಹೈದರ್ ಭಕ್ಷಿ ಎಂಬಾತನನ್ನು ಕಿಲ್ಲೇದಾರನಾಗಿ ನೇಮಿಸಿದನು. ಭಕ್ಷಿಯ ನಂತರ ರಾಣೋಜಿರಾಯ, ಮನೋಜಿರಾಯ ಎಂಬುವವರು ಕಿಲ್ಲೇದಾರರಾದರು. ಬಳ್ಳಾರಿಯ ಕೋಟೆಯನ್ನು ದುರಸ್ತಿ ಮಾಡಲು ಆದೇಶಿಸಿ ಹೋದನು. ಹೊಸದಾಗಿ ಬುನಾದಿ ಹಾಕಿ ಕಟ್ಟಲಾರಂಭಿಸಿದ ಕೆಲಸವು ಟಿಪ್ಪು ಸುಲ್ತಾನನ ಕಾಲದಲ್ಲಿ ಪೂರ್ಣಗೊಂಡಿತು (ಎಂ.ಎ.ಆರ್. ೧೯೩೦: ೯೪; ಶ್ಯಾಮಲ ೨೦೧೭: ೫೨-೫೩).

ಅಲ್ಲಿಂದ ಹೈದರ್ **ಗುತ್ತಿಯ** ಮೇಲೆ ಆಕ್ರಮಣ ನಡೆಸಲು ನಿರ್ಧರಿಸಿದನು. ಗುತ್ತಿಯು ಒಂದು ಕಾಲದಲ್ಲಿ ಹೈದರನ ಕಡುವೈರಿಯಾಗಿದ್ದ ಮುರಾರಿರಾಯನ ಭದ್ರಕೋಟೆಯಾಗಿತ್ತು. ಎಲ್ಲಾ ದಿಕ್ಕುಗಳಿಂದ ಆಕ್ರಮಣ ನಡೆಸಲು ವ್ಯವಸ್ಥೆ ಮಾಡಿದನು. ಒಂದು ದಿಕ್ಕಿನಿಂದ ಹೈದರ್ ನವಾಬ ಮತ್ತೊಂದು ಕಡೆ ಟಿಪ್ಪು ಸುಲ್ತಾನ್, ಉಳಿದ ಕಡೆಗಳಿಂದ ಚಿತ್ರದುರ್ಗ, ರಾಯದುರ್ಗ, ಹರಪನಹಳ್ಳಿ ಮೊದಲಾದ ಪಾಳೆಯಗಾರರು ಆಕ್ರಮಣ ನಡೆಸುವುದಾಗಿತ್ತು. ಐದು ವಾರಗಳ ಮುತ್ತಿಗೆಯ ನಂತರ ಆಕ್ರಮಣ ಮಾಡಿ ವಶಪಡಿಸಿಕೊಂಡನು. ಕೋಟೆಯು ಇನ್ನೂ ಭದ್ರವಾಗಿಯೇ ಉಳಿದಿತ್ತು. ಹೈದರನಿಗೆ ಅಪಾರ ಪ್ರಮಾಣದ ಸಂಪತ್ತಿನ ಜೊತೆಗೆ ಸೈನ್ಯದ ಉಗ್ರಾಣ, ಆನೆಗಳು, ಕುದುರೆಗಳು ಮೊದಲಾದವು ದೊರಕಿದವು. ಮುರಾರಿರಾಯನು ಪೂನಾದ ಮರಾಠರನ್ನು ಸಂಪರ್ಕಿಸುವ ಎಲ್ಲ ಪ್ರಯತ್ನಗಳನ್ನು ಹೈದರ್ ವಿಫಲಗೊಳಿಸಿದನು. ಅನ್ಯ ಮಾರ್ಗವಿಲ್ಲದೆ ಮುರಾರಿರಾಯ ಹೈದರನೊಂದಿಗೆ ಸಂಧಿಮಾಡಿಕೊಳ್ಳಬೇಕಾಯಿತು. ೧೨ ಲಕ್ಷ ರೂಪಾಯಿ ಸಲ್ಲಿಸಿ ಶಾಂತಿ ಸಂಧಾನ ಮಾಡಿಕೊಳ್ಳಲು ಹೈದರಾಲಿ ನಿರ್ಬಂಧಿಸಿದನು. ಅದರಂತೆ ಮುರಾರಿರಾಯನು ಎಂಟು ಲಕ್ಷ ನಗದು, ಉಳಿದ ನಾಲ್ಕು ಲಕ್ಷಕ್ಕೆ ಪಾಲಿಖಾನ್ ಎಂಬ ಪಠಾಣನನ್ನು ಒತ್ತೆ ಇಟ್ಟನು. ಆದರೆ, ಗುತ್ತಿಯನ್ನು ತನ್ನ ಸಂಸ್ಥಾನಕ್ಕೆ ಸೇರಿಸಿಕೊಂಡು ಮುರಾರಿರಾಯನನ್ನು ಶಿಕ್ಷಿಸುವುದು ಹೈದರನ ಉದ್ದೇಶವಾಗಿತ್ತು. ಆದ್ದರಿಂದ ಹೈದರನು ಒತ್ತೆಯಾಳದ ಪಾಲಿಖಾನನನ್ನು ವಿಶ್ವಾಸದಿಂದ ಮನವಲಿಸಿಕೊಳ್ಳುವಲ್ಲಿ ಯಶಸ್ವಿಯಾದನು. ಹೈದರನ ಪ್ರೀತಿಗೆ ಮರುಳಾದ ಪಾಲಿಖಾನ್ ತನಗೆ ಅರಿವಿಲ್ಲದೆಯೇ

ಕೋಟೆಯೊಳಗಿನ ವಿವರಗಳನ್ನು ಹೈದರನಿಗೆ ಹೇಳಿದನು. ಕೋಟೆಯೊಳಗೆ ಇರುವ ಆಹಾರ ಸಾಮಗ್ರಿ ಮತ್ತು ಕುಡಿಯುವ ನೀರಿನ ಸಂಗ್ರಹ ಹೆಚ್ಚೆಂದರೆ ಮೂರು ದಿನಗಳಿಗೆ ಸಾಕಾಗುವಷ್ಟು ಮಾತ್ರ ಇರುತ್ತದೆ ಎಂಬ ವಿಚಾರವು ಅವನಿಂದ ಹೈದರನಿಗೆ ತಿಳಿಯಿತು. ಒಪ್ಪಂದದ ಪ್ರಕಾರ ಕೊಟ್ಟಿರುವ ಆಭರಣಗಳು ಮತ್ತು ಚಿನ್ನ ಅಂದಾಜು ಮಾಡಿರುವ ಮೌಲ್ಯಕ್ಕಿಂತಲೂ ಕಡಿಮೆಯಾಗಿವೆ ಎಂಬ ನೆಪ ಒಡ್ಡಿ ಹೈದರನು ಸಂಧಾನವನ್ನು ಎಳೆದಾಡುತ್ತಾ ಹೋದನು. ಕೊನೆಗೆ ಗುತ್ತಿಯ ಕೋಟೆಗೆ ದಿಢೀರ್ ಮುತ್ತಿಗೆ ಹಾಕಲು ಆಜ್ಞಾಪಿಸಿದನು. ದಾರಿ ಕಾಣದೆ ಗುತ್ತಿಯ ಜನರು ಶಾಂತಿ ಒಪ್ಪಂದಕ್ಕಾಗಿ ವಕೀಲನನ್ನು ಕಳುಹಿಸಿದರು. ದೇಸಾಯಿ ನರಸಿಂಗರಾವ್ ಮತ್ತು ಅವನ ಮಗ ಮೊಬಲರಾವ್ ಕೂಡ ನವಾಬನ ಬಳಿ ಬಂದರು. ಇದೇ ವೇಳೆ ೪೦,೦೦೦ ಜನರು ನೀರಿಲ್ಲದೆ ಬಳಲಿದರು. ಆದ್ದರಿಂದ ಕೂಡಲೇ ಯಾವುದೇ ನಿಬಂಧನೆಗೆ ಬರಲಾಗಲಿಲ್ಲ. ಎರಡೇ ದಿನಗಳಲ್ಲಿ ಹೈದರಾಲಿಯು ಗುತ್ತಿಯನ್ನು ತನ್ನ ವಶಕ್ಕೆ ಪಡೆದು ಕುದುರೆ, ಆನೆ, ಆಭರಣಗಳನ್ನು ಅಪಾರ ಪ್ರಮಾಣದಲ್ಲಿ ಸೂರೆ ಮಾಡಿದನು. ಮುರಾರಿರಾಯನ್ನು ಕುಟುಂಬ ಸಮೇತ ಮೊದಲು ಶ್ರೀರಂಗಪಟ್ಟಣಕ್ಕೆ ಕಳುಹಿಸಿದನು. ಆನಂತರ ಅವರನ್ನು ಕಬ್ಬಾಳುದುರ್ಗದಲ್ಲಿ ಇರಿಸಿದನು. ಅಲ್ಲಿಯೇ ಮುರಾರಿರಾಯನು ಮರಣ ಹೊಂದಿದನು. ಹೀಗೆ ಗುತ್ತಿಯನ್ನು ಮೈಸೂರು ಸಂಸ್ಥಾನಕ್ಕೆ ಸೇರಿಸಿಕೊಂಡ ಹೈದರ್, ಬಾಲಾಜಿರಾವ್‌ನನ್ನು ಗುತ್ತಿಯ ಕಿಲ್ಲೇದಾರನಾಗಿ ನೇಮಿಸಿದನು (ಹಯವದನ ರಾವ್ ೧೯೩೦: ೨೫೧೦; ಹೈ.ನಾ.: ೬೬–೬೭; ಷೇಕ್‌ಅಲಿ ೧೯೯೭: ೬೯).

ಮಲೆನಾಡಿನ ಮಡಿಲಿನಲ್ಲಿರುವ **ಬಿದನೂರು** ಬಹಳ ಸಂಪದ್ಭರಿತ ಸೀಮೆಯಾಗಿತ್ತು. ಬಿದನೂರಿನ ರಾಜನಾದ ಬಸಪ್ಪನಾಯಕನು ಮರಣ (೧೭೫೫) ಹೊಂದುವ ಮೊದಲು ಚೆನ್ನಬಸವಯ್ಯ ಎಂಬಾತನನ್ನು ದತ್ತು ತೆಗೆದುಕೊಂಡಿದ್ದ. ರಾಜನ ಮರಣ ನಂತರ ರಾಣಿ ವೀರಮ್ಮಾಜಿಯು ಇತರರೊಂದಿಗೆ ಸೇರಿ ಪಿತೂರಿ ನಡೆಸಿ ಚೆನ್ನಬಸವಯ್ಯನನ್ನು ಸಂಸ್ಥಾನದಿಂದ ಹೊರದೂಡಿದಳು. ಆಕೆಯು ನಂಜಯ್ಯ ಎಂಬಾತನ ಜೊತೆಗೆ ಅಕ್ರಮ ಸಂಬಂಧವನ್ನು ಹೊಂದಿದ್ದರಿಂದ ಅವಳ ಬಗೆಗೆ ಪ್ರಜೆಗಳು ಮತ್ತು ಸೈನಿಕರು ಅಸಂತುಷ್ಟಗೊಂಡಿದ್ದರು. ಇತ್ತ ಜೀವಭಯದಿಂದ ಸಂಸ್ಥಾನಭ್ರಷ್ಟನಾಗಿ ತಲೆಮರೆಸಿಕೊಂಡಿದ್ದ ಚೆನ್ನಬಸವಯ್ಯನು ಚಿತ್ರದುರ್ಗದ ಮದಕರಿ ನಾಯಕನ ಬಳಿ ಬಂದನು. ಈ ಸಂದರ್ಭದಲ್ಲಿ ನಾಯಕನು ಹೈದರಾಲಿಗೆ ಚೆನ್ನಬಸವನನ್ನು ಪರಿಚಯಿಸಿದನು. ಚೆನ್ನಬಸವನು ತನಗೆ ಮರಳಿ ಸಿಂಹಾಸನ ಕೊಡಿಸುವಂತೆ ಹೈದರನಲ್ಲಿ ಮನವಿ ಮಾಡಿದನು. ಇದಕ್ಕೆ ಹೈದರಾಲಿಯು ಕೂಡಲೆ ಸಮ್ಮತಿಸಿದನಲ್ಲದೆ, ಈ ಸಹಾಯಕ್ಕೆ ಪ್ರತಿಫಲವಾಗಿ ೪೦ ಲಕ್ಷ ರೂಪಾಯಿಗಳನ್ನು ನೀಡಬೇಕೆಂಬ ಭರವಸೆಯನ್ನು ಪಡೆದನು.



**ನವಾಬ್ ಹೈದರಾಲಿ ಖಾನ್**

ನಂತರ ಬೇಹುಗಾರರಿಂದ ಮಾಹಿತಿಯನ್ನು ಸಂಗ್ರಹಿಸಿದ ಹೈದರನು ಚೆನ್ನಬಸವನ ವಿಚಾರವನ್ನೆ ಕಾರಣವಾಗಿಟ್ಟುಕೊಂಡು ಬಿದನೂರಿನ ಮೇಲೆ ಆಕ್ರಮಣಕ್ಕೆ ಮುಂದಾದನು. ಅಲ್ಲದೆ ಜನರ ವಿಶ್ವಾಸವನ್ನು ಗಳಿಸುವ ಸಲುವಾಗಿ ಪ್ರತಿಹಂತದಲ್ಲಿಯೂ ದೇಶಭ್ರಷ್ಟನಾದ ನಿಜವಾದ ರಾಜ ಚೆನ್ನಬಸವನ ಹೆಸರಿನಲ್ಲಿಯೇ ಘೋಷಣೆಗಳನ್ನು ಹೊರಡಿಸಿ, ಪ್ರಜೆಗಳ ಬೆಂಬಲಕ್ಕೆ ಮನವಿ ಮಾಡಿದನು. ಜನರು ಅವನನ್ನು ಸಂತೋಷದಿಂದ ಸ್ವಾಗತಿಸಿದರು. ಮೊದಲು ಶಿವಮೊಗ್ಗವನ್ನು ವಶಪಡಿಸಿಕೊಂಡ ಹೈದರ್ ನಂತರ ಕುಂಸಿಯಲ್ಲಿ ಮರಣ ಹೊಂದಿದ ರಾಜನ ಮಂತ್ರಿ ಲಿಂಗಣ್ಣನನ್ನು ರಾಣಿ ಸೆರೆಯಲ್ಲಿಟ್ಟಿದ್ದಳು. ಅವನನ್ನು ಸೆರೆಯಿಂದ ಬಿಡಿಸಿದ ಹೈದರ್, ಲಿಂಗಣ್ಣನ ಮಾರ್ಗದರ್ಶನದಲ್ಲಿ ರಹಸ್ಯ ಮಾರ್ಗದ ಮೂಲಕ ಬಿದನೂರಿಗೆ ಕರೆದೊಯ್ದನು. ಹೈದರನ ಸೈನ್ಯ ಶೀಘ್ರದಲ್ಲಿ ಮುನ್ನುಗ್ಗಿ ಬರುತ್ತಿರುವುದನ್ನು ಕಂಡು ದಿಗ್ಭ್ರಮೆಗೊಂಡ ರಾಣಿಯು ಸಂಧಾನಕ್ಕೆ ಯತ್ನಿಸಿದಳು. ಆದರೆ ಹೈದರ್ ಅದಕ್ಕೆ ಒಪ್ಪಲಿಲ್ಲ. ಸಂಧಾನ ಮುರಿದು ಬಿದ್ದುದರಿಂದ ರಾಣಿಯ ಬಿದನೂರಿನ ರಕ್ಷಣೆಗೆ ಟೊಂಕಕಟ್ಟಿ ನಿಂತಳು. ಆಕೆಯು ಸವಣೂರಿನ ನವಾಬನಿಗೆ ಭಾರಿ ಮೊತ್ತವನ್ನು ನೀಡಿದ್ದರಿಂದ ಅವಳ ನೆರವಿಗೆ ಸೇನೆಯನ್ನು ತಂದು ನಿಲ್ಲಿಸಿದನು. ಇದರಿಂದ ಕುಪಿತಗೊಂಡ ಹೈದರ್ ೧೭೬೩ರಲ್ಲಿ ಬಿದನೂರಿಗೆ ಮುತ್ತಿಗೆ ಹಾಕಿದನು. ಅತ್ತ ರಾಣಿಯೇ ಮುಂದೆ ನಿಂತು ಹೋರಾಟವನ್ನು ನಡೆಸಿದಳು. ಹೀಗೆ ಮುತ್ತಿಗೆಗೆ ಒಂದು ವರ್ಷಗಳು ಕಳೆದರೂ ಯಾವುದೇ ಪ್ರತಿಫಲ ದೊರೆಯದಾಯಿತು. ಅಂತಿಮವಾಗಿ

ಹೈದರನು ಅಪಾರ ಹಣದ ಆಮಿಷವೊಡ್ಡಿ ಕೋಟೆಗೆ ಲಗ್ಗೆಯಿಡಲು ಸೈನಿಕರಿಗೆ ಸೂಚಿಸಿದನು. ಈ ಬಾರಿ ಬಿದನೂರಿನ ಕೋಟೆ ಕುಸಿದುಬಿದ್ದಿತು. ಇನ್ನು ಪ್ರತಿಭಟಿಸುವುದರಿಂದ ಪ್ರಯೋಜನವಿಲ್ಲ ಎಂದರಿತ ರಾಣಿಯು ಅರಮನೆಗೆ ಬೆಂಕಿಯಿಟ್ಟು, ಭಾರಿ ಭಂಡಾರದೊಂದಿಗೆ ತನ್ನ ಪ್ರಿಯಕರನ ಜೊತೆಗೂಡಿ ಕವಲೆದುರ್ಗಕ್ಕೆ ಓಡಿ ಹೋದಳು. ಹೈದರ್ ಅಲ್ಲಿಗೂ ಮುತ್ತಿಗೆ ಹಾಕಲಾಗಿ, ಕೊನೆಗೆ ರಾಣಿಯು ಶರಣಾಗಬೇಕಾಯಿತು. ಮಧುಗಿರಿಯ ಕೋಟೆಯಲ್ಲಿ ಅವಳು ತನ್ನ ಪ್ರಿಯಕರ ನಂಜಯ್ಯ ಮತ್ತು ಇಷ್ಟಕ್ಕೆಲ್ಲ ಕಾರಣನಾದ ಚೆನ್ನಬಸವಯ್ಯನೊಂದಿಗೆ ತನ್ನ ಕೊನೆಯ ದಿನಗಳನ್ನು ಕಳೆಯಬೇಕಾಯಿತು (ಷೇಕ್‌ಅಲಿ ೧೯೯೭: ೫೩-೫೫).

ಇದನ್ನು ಗೆದ್ದ ನಂತರ ಹೈದರನು ಬಿದನೂರನ್ನು ಮೈಸೂರು ಸಂಸ್ಥಾನಕ್ಕೆ ಸೇರಿಸಿಕೊಳ್ಳದೆ ತನ್ನ ನೇರನಿಯಂತ್ರಣದಲ್ಲಿಯೇ ಇಟ್ಟುಕೊಂಡನು. ಬಹಳ ಸಂಪದ್ಭರಿತವಾಗಿದ್ದ ಬಿದನೂರಿನಲ್ಲಿ ಹೇರಳ ಪ್ರಮಾಣದ ಸಂಪತ್ತು ಹೈದರನಿಗೆ ಲಭ್ಯವಾಯಿತು. ಅಲ್ಲದೆ ತನ್ನ ಹೆಸರಿನಲ್ಲಿ ಬಹದ್ದರಿ ವರಹ ಎಂಬ ಪ್ರತ್ಯೇಕ ನಾಣ್ಯವನ್ನು ಹೊರಡಿಸಿ ಟಂಕಸಾಲೆಯನ್ನು ತೆರೆದನು. ಅಲ್ಲದೆ ಬಿದನೂರಿಗೆ 'ಹೈದರ್‌ನಗರ್' ಎಂದು ಮರುನಾಮಕರಣ ಮಾಡಿದನು. ಅದನ್ನು ತನ್ನ ರಾಜಧಾನಿಯೆಂದು ಘೋಷಿಸಿಕೊಂಡನು. ಇದು ಹೈದರಾಲಿಯ ಮುಂದಾಲೋಚನೆಯ ಪ್ರತೀಕವಾಗಿತ್ತು. ಬಿದನೂರನ್ನು ಗೆದ್ದ ನಂತರ ಕರಾವಳಿಯ ಮಂಗಳೂರು, ಹೊನ್ನಾವರ, ಬಲ್ಲಾರಿ ದುರ್ಗ ಮೊದಲಾದವುಗಳನ್ನು ಆಕ್ರಮಿಸಿಕೊಳ್ಳುವ ಮೂಲಕ ಸಮುದ್ರದ ಮೇಲಿನ ವ್ಯಾಪಾರಕ್ಕೆ ಮಾರ್ಗವನ್ನು ಸುಗಮಗೊಳಿಸಿಕೊಂಡನು. ಹೈದರನ ಈ ನಡೆಗಳು ಅವನ ಚಾಣಾಕ್ಷತನವನ್ನು ತೋರಿಸುತ್ತವೆ.

ಹೈದರನ ನಿಷ್ಠನಾಗಿಯೇ ಇದ್ದ **ಚಿತ್ರದುರ್ಗದ** ಮದಕರಿ ನಾಯಕನು ಹೈದರನ ನಡೆಗಳ ಬಗೆಗೆ ಸಂಶಯಗೊಂಡನು. ಎಲ್ಲಾ ಪಾಳೇಗಾರರ ನಂತರ ನನ್ನ ಸರದಿ ಬಂದೇಬರುತ್ತದೆ ಎಂದು ತಿಳಿದಿದ್ದ ನಾಯಕನು ರಕ್ಷಣಾತ್ಮಕ ನಡೆಗಳನ್ನು ಇಡತೊಡಗಿದನು. ಅದಕ್ಕಾಗಿ ಪುರುಷೋತ್ತಮ ಪಂಥ್ ಎಂಬ ವಕೀಲನನ್ನು ಮೊಘಲರಲ್ಲಿಗೆ ಕಳುಹಿಸಿದ್ದನು ಮತ್ತು ಮೈಸೂರಿನ ಮೇಲೆ ಆಕ್ರಮಣ ನಡೆಸಲು ಮರಾಠರನ್ನು ಆಹ್ವಾನಿಸಿದ್ದನು. ಮದಕರಿಯ ಬಗೆಗೆ ವಕ್ರದೃಷ್ಟಿ ನೆಟ್ಟಿದ್ದ ಹೈದರಾಲಿಗೆ ಇದಾವುದನ್ನು ಸಹಿಸಲಾಗಲಿಲ್ಲ. ಇದೇ ವೇಳೆ ಸರ್ದಾರ್ ಇಬ್ರಾಹಿಂ ಖಾನ್‌ನು ೬೦,೦೦೦ ಅಶ್ವದಳ ಮತ್ತು ೮೦ ಫಿರಂಗಿಗಳೊಂದಿಗೆ ಹೈದರಾಬಾದಿನಿಂದ ಬಂದು ಗುತ್ತಿ ತಾಲ್ಲೂಕಿನ ಕೆಲಭಾಗವನ್ನು ಲೂಟಿ ಮಾಡಿದನು. ಈ ಸುದ್ದಿ ತಿಳಿದ ನವಾಬನು ಸೂಕ್ತ ಸೇನೆಯೊಂದಿಗೆ ತೆರಳಿ ಹೈದರಾಬಾದಿನ ಸೇನೆಯನ್ನು ಓಡಿಸಿದನು. ಅವನು ನಂತರ ಜೂನ್ ೧೭೭೭ರಲ್ಲಿ

ಚಿತ್ರದುರ್ಗವನ್ನು ಮತ್ತಿಗೆ ಹಾಕಿದನು (ಹೈನಾ: ೬೮–೭೦; ಎಂ.ಎ.ಆರ್. ೧೯೩೦: ೯೫; ವಿಲ್ಕ್ಸ್ ೧೯೧೭: ೧೮೨).

ಈ ಕುರಿತು ಎಂ.ಎಸ್. ಪುಟ್ಟಣ್ಣ ಅವರ ಚಿತ್ರದುರ್ಗದ ಪಾಳಯಗಾರರು ಕೃತಿಯಲ್ಲಿನ ಸಂಗತಿಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

ವಿಳಂಬಿ ಸಂವತ್ಸರ (೧೭೭೯) ಮಾಘ ಮಾಸದಲ್ಲಿ ಶತ್ರುಗಳು ಮತ್ತೆ ಆಕ್ರಮಣ ನಡೆಸಲು ಪ್ರಯತ್ನಿಸಿದರು. ಭಾರಿ ಯುದ್ಧವಾಯಿತು. ಆದರೂ ಶತ್ರುಗಳಿಗೆ ಏನೂ ಪ್ರಯೋಜನವಾಗಲಿಲ್ಲ. ಎರಡೂ ಕಡೆ ಅನೇಕರು ಸತ್ತರು. ಬಾಳಾಜಿಪಂತು ಮರಣವನ್ನಪ್ಪಿದ್ದು ಪಾಳೇಗಾರನಿಗೆ ದೊಡ್ಡ ಬಲ ಮುರಿದಂತಾಯಿತು. ರಂಗಯ್ಯನ ಬಾಗಿಲ ಕಡೆ ಹೈದರನ ಸೇನೆಯವರು ಹೊರಗಿನಿಂದ ಫಿರಂಗಿಯ ಮೂಲಕ ಭಾರಿ ಆಕ್ರಮಣ ನಡೆಸಿದರು. ಇದಕ್ಕೆ ಪ್ರತಿಯಾಗಿ ದುರ್ಗದವರು ಮೊಹರ್ಚೆ ಕೆಳಗೆ ಸುರಂಗ ಮಾಡಿ ನೂರು ಬುದ್ದಲಿಗೆ ಮದ್ದು ತುಂಬಿ ಬೆಂಕಿ ಇಟ್ಟರು. ಇದರಿಂದ ಹೊರಗಿನ ಮೊಹರ್ಚೆ ಹಾರಿಹೋಗಿ ಶ್ರೀರಂಗಪಟ್ಟಣದ ದಂಡು ಬಹಳ ಹಾನಿಯಾಯಿತು. ಆದರೂ ಹೊರಗಿನಿಂದ ಏಟು ಬಲವಾಯಿತು. ಹೊರಗಿನ ಕೋಟೆಗೆ ಒಳಗಿನ ಜನ ಸಾಲಲಿಲ್ಲ. ಆ ಕೋಟೆ ಕುಸಿಯಿತು. ಪಟ್ಟಣದ ಜನ ಹೊಂಡದ ನೀರಿಗೆ ಹೋಗದಂತಾಯಿತು. ಹೊರಗಿನ ಖಿಲ್ಲೆ ಬಿಟ್ಟು ಗಾರೆ ಬಾಗಿಲ ಖಿಲ್ಲೆ ಬಲವಾಗಿದ್ದ ಕಾರಣ, ಉಳಿದ ಸೇನೆಯನ್ನು ಅಲ್ಲಿ ಸಜ್ಜು ಮಾಡಿದರು. ಆತುರದಲ್ಲಿ ಹೊರಗಿನ ಜನ ಹೊರಗೆ, ಒಳಗಿನ ಜನ ಒಳಗೆ ನಿಂತರು. ಗಾರೆ ಬಾಗಿಲಿಗೂ ನವಾಬರ ಕಡೆಯವರು ಮೊಹರ್ಚೆ ಕಟ್ಟಿ ಮಕರಡಿಬ್ಬಿ ಹೊಡೆಯುತಾ ಬಂದರು.

ಹೆಬ್ಬುಲಿಕಲ್ಲು ಚಿತ್ರದುರ್ಗ ಕೋಟೆಯ ದುರ್ಬಲವಾದ ಸ್ಥಳವೆಂದು ಹೈದರನಿಗೆ ಜರಿಮಲೆಯವರು ಗುಟ್ಟು ತಿಳಿಸಿದರು. ಆದ್ದರಿಂದ ೧೨,೦೦೦ ದಂಡಿನೊಡನೆ ಅಲ್ಲಿಗೆ ಹೈದರನ ಸೈನ್ಯ ನುಗ್ಗಿತು. ಮದಕರಿನಾಯಕನು ೫,೦೦೦ ಸೇನೆಯೊಡನೆ ಅಲ್ಲಿಗೆ ಹೋಗಿ ಆ ಶತ್ರುಗಳ ಮೇಲೆ ಬಹಳವಾಗಿ ಯುದ್ಧ ನಡೆಯಲು ಎರಡೂ ಕಡೆಗಳಲ್ಲಿಯೂ ಬಹಳ ಜನ ಸತ್ತರು. ನವಾಬನ ಸೈನಿಕರು ಗಾರೇ ಬಾಗಿಲ ಬಳಿ ಒಂದು ದಬದಬ ಕಟ್ಟಿ ೬ ಫಿರಂಗಿ ಏರಿಸಿ ಹೊಡೆಯುತ್ತಾ ಬಂದರು. ಮಕರಡಿಬ್ಬಿ ಏಟು ಜೋರಾಯಿತು. ಓತೂರಿಯಿಂದ ಬಸವನ ಬುರುಜನ್ನೂ ಅಲ್ಲಿನ ಸೇನೆಯವರು ಹಗೆಗಳ ವಶ ಮಾಡಿದರು. ಅಂತಿಮವಾಗಿ ದುರ್ಗ ಉಳಿಯುವ ಹಾಗೆ ಕಾಣಲಿಲ್ಲ. ಆಗ ಮದಕರಿನಾಯಕನು ದುರ್ಗ ಉಳಿಯುವುದಿಲ್ಲ. ಶತ್ರುಗಳ ವಶವಾಗುವುದು ಖಂಡಿತ. ಶತ್ರುಗಳಿಗೆ ಸೆರೆಯಾಗುವುದಕ್ಕಿಂತಲೂ ವೀರಸ್ವರ್ಗ ಸೇರುವುದೇ ಸೂಕ್ತವೆಂದು ತನ್ನ ಹಿರಿ ಮಗ ಭರಮಪ್ಪನಾಯಕನಿಗೆ ಪಟ್ಟಾಭಿಷೇಕ ಮಾಡಿ ಇಷ್ಟ ಕಾರ್ಯಗಳೆಲ್ಲವನ್ನು ನೆರವೇರಿಸಿ

ವೀರರೊಡಗೂಡಿ ಹೊರಟನು. ಈ ವೇಳೆಗೆ ಹೈದರಾಲಿಯು ಉತ್ಸವಾಂಬನ ಗುಡಿಯಲ್ಲಿ ಉಳಿದು, ಮುಂದೆ ಒಳಕೋಟೆಯನ್ನು ಹತ್ತಲು ಪ್ರಯತ್ನ ನಡೆಸುತ್ತಿದ್ದನು. ಶತ್ರುಗಳನ್ನು ಮುಖಾಮುಖಿಯಾದ ಮದಕರಿನಾಯಕನು ವೀರಾವೇಶದಿಂದ ಹೋರಾಡುತ್ತಿರಲು ಅವನಿಗೆ ಬಲವಾದ ಪೆಟ್ಟುಬಿದ್ದಿತು. ಅವನ ಸಂಗಡ ಬಂದಿದ್ದ ಪರಿವಾರವೂ ಕೂಡ ಬಹಳ ಏಟು ತಿಂದಿತು. ಹೇವಿಳಂಬಿ ಸಂವತ್ಸರದಿಂದ ವಿಳಂಬಿ ಸಂವತ್ಸರದವರೆಗೆ (೧೭೭೭-೭೮) ಸುಮಾರು ಒಂದೂವರೆ ವರ್ಷಗಳ ಕಾಲ ಹೈದರನು ಯುದ್ಧ ನಡೆಸಿ ಚಿತ್ರದುರ್ಗ ಸಂಸ್ಥಾನವನ್ನು ವಶಪಡಿಸಿಕೊಂಡನು. ಮದಕರಿನಾಯಕನು ಹೈದರನ ಕೈಗೆ ಸೆರೆಸಿಕ್ಕಿದನೆಂದು ಕೆಲವರು ಹೇಳುತ್ತಾರೆ (ಪುಟ್ಟಣ್ಣ ೧೯೨೪: ೯೫-೯೮; ಶ್ರೀನಿವಾಸ ಜೋಯಿಸ್ ೧೯೭೬: ೧೦೫-೧೧೬).

ಕಠಿಣ ಹೋರಾಟದ ಸವಾಲಿನ ನಂತರ ನವಾಬನೊಂದಿಗೆ ಶಾಂತಿ ಒಪ್ಪಂದ ಏರ್ಪಟ್ಟಿತು. ಎಂಟು ಲಕ್ಷ ದುರ್ಗಿ ವರಹವನ್ನು ನಾಯಕ ಕೊಡಲೊಪ್ಪಿದನು. ವಿಲ್ಕ್ಸನ ಪ್ರಕಾರ ೧೩ ಲಕ್ಷ ಪಗೋಡಗಳನ್ನು ನಾಯಕನು ಹೈದರನಿಗೆ ಕೊಡಲು ಒಪ್ಪಿದನು ಎಂದಿದ್ದಾನೆ. ಆ ಹಣ ಕೊಡುವವರೆಗೆ ಪಾಳೇಗಾರನ ಸೋದರನನ್ನು ಒತ್ತೆಯಾಳಾಗಿ ಹಿಡಿದಿಡಲಾಯಿತು.

ಮುಖ್ಯವಾಗಿ ನಾಯಕನು ಹೈದರಾಲಿಯ ಶತ್ರುಗಳಾದ ಮರಾಠರೊಡನೆ ಸಖ್ಯವನ್ನು ಬೆಳೆಸಿಕೊಂಡನು. ಅಲ್ಲದೆ, ಶ್ರೀರಂಗಪಟ್ಟದ ಮುತ್ತಿಗೆಗೂ ಚಿನಕುರಳಿ ಕಾಳಗಕ್ಕೂ ಸೇನೆಯೊಡನೆ ಹೋಗಿ ಜಯವನ್ನು ಹೊಂದಿ ಬಂದನು. ಇದು ಸಹಜವಾಗಿಯೇ ಹೈದರಾಲಿಯಲ್ಲಿ ಮದಕರಿಯ ಬಗೆಗೆ ದ್ವೇಷವನ್ನು ಹೆಚ್ಚಿಸಿತು. ಹೈದರನು ಮದಕರಿಯ ಮೇಲೆ ಆಕ್ರಮಣ ನಡೆಸಲು ಇನ್ನೂ ಕೆಲವು ಕಾರಣಗಳಿವೆ. ನವಾಬನು ಶಿರಹಟ್ಟಿಯ ಆಕ್ರಮಣದಲ್ಲಿ ತೊಡಗಿದ್ದಾಗ, ಮದಕರಿ ನಾಯಕನು ಚನ್ನಗಿರಿ, ಬಸವಪಟ್ನ, ಸಂತೆಬೆನ್ನೂರು ಮತ್ತಿತರ ಸ್ಥಳಗಳನ್ನು ದೋಚಲಾರಂಭಿಸಿದನು. ಇದು ನವಾಬನನ್ನು ಕೆರಳಿಸಿತು. ಅವನ ವಿರುದ್ಧ ಟಿಪ್ಪು ಸುಲ್ತಾನನನ್ನು ಕಳುಹಿಸಿದನು. ಇದನ್ನು ತಿಳಿದ ನಾಯಕನು ಚಿತ್ರದುರ್ಗಕ್ಕೆ ಹಿಂತಿರುಗಿದನು. ಅದೇ ದಿನ ಟಿಪ್ಪು ಸುಲ್ತಾನ್ ಕೂಡ ಚಿತ್ರದುರ್ಗಕ್ಕೆ ಬಂದನು. ನಂತರ ನವಾಬ ಕೂಡ ಬಂದು ಸೇರಿದನು. ೨-೩ ತಿಂಗಳ ಕದನದ ನಂತರ ಕೋಟೆಯು ಹೈದರಾಲಿಯ ವಶವಾಯಿತು. ಆದರೆ ಹುಲ್ಲೂರು ಶ್ರೀನಿವಾಸ ಜೋಯಿಸರು ಹೇಳುವಂತೆ "ಪ್ರಥಮ ಯುದ್ಧಾರಂಭದಿಂದ ಅಂತ್ಯದವರೆಗೆ ಉಭಯ ದಿನಗಳೂ ಸೇರಿ ಒಂದು ವರ್ಷ ಆರು ತಿಂಗಳು ಇಪ್ಪತ್ತೈದು ದಿನಗಳ ಕಾಲ ಹಿಡಿಯಿತು." ಈ ಕಾರ್ಯಸಾಧನೆಯಲ್ಲಿ ಹೈದರಾಲಿಗೆ ದೊಡ್ಡಮದಕರಿನಾಯಕ[1] ಕೂಡ ನೆರವಾದನು. ಫೆಬ್ರವರಿ ೧೭೭೯ರಲ್ಲಿ ಮದಕರಿನಾಯಕ, ಅವನ ತಮ್ಮ ಪರಶುರಾಮಪ್ಪ, ಕುಮಾರ

ಭರಮಪ್ಪ ನಾಯಕ, ಅಳಿಯ ಹುಚ್ಚಪ್ಪನಾಯಕ, ನೆಚ್ಚಿನ ಮಡದಿಯರಾದ ಕಡೂರಿ, ಗೌಡಿಸಾಗಿ ಮತ್ತಿತರನ್ನಲ್ಲದೆ, ಮದಕರಿಯ ೨೦,೦೦೦ ಬೇಡ ಸೈನಿಕರನ್ನು ಸಹ ಶ್ರೀರಂಗಪಟ್ಟಣಕ್ಕೆ ಬಿಗಿಪಹರೆಯಲ್ಲಿ ಕಳುಹಿಸಿದನು. ಇದೇ ವೇಳೆ ತಂದೆ – ಮಗನ ನಡುವೆ ತಪ್ಪು ತಿಳುವಳಿಕೆಯುಂಟಾಗಿ ಹೈದರನು ಟಿಪ್ಪುವನ್ನು ಬಿಗಿಪಹರೆಯಲ್ಲಿ ಶ್ರೀರಂಗಪಟ್ಟಣಕ್ಕೆ ಕಳುಹಿಸಿದನು ಮತ್ತು ಟಿಪ್ಪುವಿನ ಜಾಗೀರಾಗಿದ್ದ ಮಳವಳ್ಳಿಯನ್ನು ಮುಟ್ಟುಗೋಲು ಹಾಕಿಕೊಂಡನು. ಚಿತ್ರದುರ್ಗ ಸಂಸ್ಥಾನವು ಮೈಸೂರು ದೇಶದ ಒಂದು ಸುಭಾವಾಯಿತು. ಅದಕ್ಕೆ ಹೈದರಾಲಿಯು ತನ್ನ ಆಪ್ತನಾದ ಷೇಕ್ ಅಯಾಜನನ್ನುಳಿ ಸುಭಾದಾರನಾಗಿ ನೇಮಿಸಿದನು. ಅವನಿಗೆ ಮುಲ್ಕಿಬಾಬುಗಳ ಆಡಳಿತಕ್ಕೆ ಒಬ್ಬ ಮುಸಲ್ಮಾನ ಸರದಾರನನ್ನೂ ಸಹಾಯಕ ಅಧಿಕಾರಿಗಳನ್ನಾಗಿ ನೇಮಿಸಿದನು. (ಹೈ.ನಾ: ೬೮–೭೦; ಎಂ.ಎ.ಆರ್. ೧೯೩೦: ೯೫; ವಿಲ್ಕ್ಸ್ ೧೯೧೭: ೧೮೨; ಪುಟ್ಟಣ್ಣ ೧೯೨೪: ೯೯–೧೦೦, ಶ್ರೀನಿವಾಸ ಜೋಯಿಸ, ೧೯೭೬: ೧೧೨).

***

ದೇಶಿಯ ಸಂಸ್ಥಾನಗಳ ಜೊತೆಗೆ ಮಾತ್ರವಲ್ಲ, ಯೂರೋಪಿನ ಶಕ್ತಿಗಳಿಗೂ ಕೂಡ ಹೈದರಾಲಿಯು ಸಿಂಹಸ್ವಪ್ನವಾಗಿದ್ದನು. ಅದನ್ನು **ಎರಡನೆಯ ಆಂಗ್ಲೋ–ಮೈಸೂರು ಯುದ್ಧದಲ್ಲಿ** ಕಾಣಬಹುದು.

ಬ್ರಿಟಿಷರು ಮದ್ರಾಸಿನಿಂದ ಕರ್ನಲ್ ಮನ್ರೋ ಮತ್ತು ಬಾಂಬೆಯಿಂದ **ಕರ್ನಲ್ ಬೈಲಿ** ಎಂಬ ದಂಡನಾಯಕರನ್ನು ಕಳುಹಿಸಿದರು. ಹೈದರನು ಬಾಂಬೆ ಸೇನೆಯ ವಿರುದ್ಧ ಟಿಪ್ಪು ಸುಲ್ತಾನನ್ನು ಕಳುಹಿಸಿದನು. ತಾನು ಮದ್ರಾಸ್ ಮತ್ತು ಬಾಂಬೆ ಸಂಯುಕ್ತ ಸೇನೆಯನ್ನು ಎದರಿಸಲು ಸನ್ನದ್ಧನಾದನು. ಆದರೆ ಮುಂಚಿತವಾಗಿ ಇದನ್ನ ಅರಿತ ಬೈಲಿಯು ಮನ್ರೋ ಸೇನೆಯ ಜೊತೆಗೆ ಸೇರಲು ಪ್ರಯತ್ನಿಸಿದನು. ಆದರೆ ಹೈದರಾಲಿಯು ತನ್ನೆಲ್ಲ ಸೇನೆಯೊಂದಿಗೆ ಹೋಗಿ ಬೈಲಿಯನ್ನು ಸುತ್ತುವರಿದನು. ಭೀಕರ ಯುದ್ಧದ ನಂತರ ಕಂಪನಿ ಸೇನೆಯು ಸಂಪೂರ್ಣವಾಗಿ ಸೋತಿತು ಮತ್ತು ಬೈಲಿಯನ್ನು ಬಂಧಿಸಿ ಖೈದಿಯಾಗಿ ಶ್ರೀರಂಗಪಟ್ಟಣಕ್ಕೆ ಕಳುಹಿಸಲಾಯಿತು. ಬೈಲಿಯನ್ನು ಈಗಿನ ಬೈಲಿ ಬಂಧಿಖಾನೆಯಲ್ಲಿ ಇರಿಸಲಾಗಿತ್ತು. ಆತನು ಅಂತಿಮವಾಗಿ ಅಲ್ಲಿಯೇ ತೀರಿಕೊಂಡನು. ಚಾಣಾಕ್ಷ ಜಯದ ನಂತರ ಹೈದರಾಲಿಯು ಮನ್ರೋ ಸೇನೆಯ ವಿರುದ್ಧ ತಿರುಗಿಬಿದ್ದನು. ಅವನು ಮದ್ರಾಸಿಗೆ ಪಲಾಯನ ಗೈದನು. ಈಗ ಹೈದರ್ ಮತ್ತೊಮ್ಮೆ ಆರ್ಕಾಟನ್ನು ತನ್ನ ವಶ ಮಾಡಿಕೊಂಡನು. ಯುದ್ಧ ಮೂರು ತಿಂಗಳ ಕಾಲ ಮುಂದುವರಿಯಿತು. ಅಂತಿಮವಾಗಿ ಡಿಸೆಂಬರ್ ೧೭೮೦ರಲ್ಲಿ ಕೋಟೆಯು ಹೈದರಾಲಿಯ ಕೈವಶವಾಯಿತು. ಹೈದರನು ಆರ್ಕಾಟ್‌ನ ನವಾಬ ಎಂಬ ಬಿರುದನ್ನು

ಧರಿಸಿದನು. ನಂತರ ಅವನು ಅನೇಕ ಸ್ಥಳಗಳನ್ನು ಗೆದ್ದುಕೊಂಡನು. ಬಹುಬೇಗ ಜನಪ್ರಿಯ ನಾಯಕನಾದನು (ಷೇಕ್‌ಅಲಿ ೧೯೯೭: ೧೮೮–೧೯೦; ಎಂ.ಎ.ಆರ್ ೧೯೩೦: ೯೭).



**ಚಿತ್ರ–೪.೩ ಕಡಲೂರು ಆಕ್ರಮಣದ ವೇಳೆ ಹೈದರಾಲಿಯ ಸೇನೆಯನ್ನು ಸಯ್ಯದ್ ಸಾಯಿಬ್ ಮುನ್ನಡೆಸುತ್ತಿರುವ ಬ್ರಿಟಿಷರ ಚಿತ್ರ**

ಬಂಗಾಳದ ಗೌರ್ನರ್ ಆದ ವಾರನ್ ಹೆಸ್ಟಿಂಗ್ಸ್‌ನು ಬೈಲಿಯ ಸೋಲಿನ ಸೇಡು ತೀರಿಸಿಕೊಳ್ಳಲು ಮತ್ತು **ಕರ್ನಾಟಿಕ್** ಪ್ರದೇಶವನ್ನು ಮತ್ತೆ ತಮ್ಮ ನಿಯಂತ್ರಣಕ್ಕೆ ತೆಗೆದುಕೊಳ್ಳವ ಸಲುವಾಗಿ ಮನ್ರೋನ ಸ್ಥಾನಕ್ಕೆ ಸರ್ ಐರ್‌ಕೂಟ್ ಎಂಬ ಹೊಸ ಸೇನಾಧಿಕಾರಿಯನ್ನು ನೇಮಿಸಿದನು. ಕೂಟನು ೩೩೦ ಯೂರೋಪಿಯನ್ನ ಸೈನಿಕರು, ೨೦೦ ಗೋಲಂದಾಜರು, ೬೩೦ ಚಪ್ರಾಸಿಗಳು, ೬ ಫಿರಂಗಿಗಳು ಮತ್ತು ೨೦೦ ಬ್ಯಾರಲ್‌ಗಳನ್ನು ಎಂಟು ತುಕಡಿ ಸೈನಿಕರನ್ನು ಕಳುಹಿಸಿಕೊಟ್ಟನು. ಮದ್ರಾಸಿನ ಗೌವರ್ನರ್ ವೈಟ್‌ಹಿಲ್ ನಿಂದ ಒತ್ತಾಯಪೂರ್ವಕವಾಗಿ ಐರ್‌ಕೂಟನು ಅಧಿಕಾರವನ್ನು ಕಸಿದುಕೊಂಡನು. ಈ ವೇಳೆ ಕರ್ನಾಟಿಕ್ ಪ್ರದೇಶದಲ್ಲಿ ಬ್ರಿಟಿಷರ ಸೇನೆ ಮದ್ರಾಸ್ ಹೊರತು ಬೇರೆಲ್ಲಿಯೂ ಇರಲ್ಲಿಲ್ಲ. ಆದ್ದರಿಂದ ೧೭೮೧ರ ಜನವರಿಯಲ್ಲಿ ಕೂಟನು ವೆಲ್ಲೂರಿನ ರಕ್ಷಣೆಗೆ ಮದರಾಸಿನಿಂದ ಆಗಮಿಸಿದನು. ಬಹಳ ಪ್ರಯತ್ನದ ಫಲವಾಗಿ ವೆಲ್ಲೂರು, ವಾಂಡಿವಾಷ್ ಮತ್ತು ಪರಮಕೋಯಿಲ್‌ಗಳನ್ನು ಆಕ್ರಮಿಸಿಕೊಳ್ಳುವಲ್ಲಿ ಯಶಸ್ವಿಯಾದನು. ಬಂಗಾಳದ ಸೇನೆ ಬರದಿದ್ದರೆ ಮದ್ರಾಸ್ ಹೈದರಾಲಿಯ ಕೈವಶವಾಗಿ ಹೋಗುತ್ತಿತ್ತು. ಅದಕ್ಕೆ ಅವಕಾಶ ಕೊಡದಂತೆ ಹೆಸ್ಟಿಂಗ್ಸ್‌ನು ಮದ್ರಾಸಿಗೆ ಆಹಾರ, ಮದ್ದುಗುಂಡು, ಹಣಕಾಸಿನ ಸಹಾಯ ನೀಡಿದನು. ಜೂನ್ – ಜುಲೈ ೧೭೮೧ರಲ್ಲಿ ಕರ್ನಲ್ ಕೂಟ್ ಮತ್ತು ಹೈದರ್ ನಡುವೆ ಯುದ್ಧ ಏರ್ಪಟ್ಟಿತು.

**ಸರ್ ಐರ್ ಕೂಟನು** ೧೭೮೦ರಲ್ಲಿ ಚಿಲ್ಲಂ ಬ್ರಾಮ್‌ನಲ್ಲಿದ್ದ ಹೈದರಾಲಿಯ ಕೋಟೆಯ ಮೇಲೆ ರಾತ್ರಿಯ ವೇಳೆ ಗುಟ್ಟಾಗಿ ಆಕ್ರಮಣ ಮಾಡಿದನು. ಆ ವೇಳೆ ಕೋಟೆಯ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ವ್ಯಕ್ತಿ – ಯೂಸೂಫ್ ಖಾನ್. ನುಗ್ಗಿ ಬರುತ್ತಿದ್ದ ಕಂಪನಿ ಪಡೆಗಳ ಮೇಲೆ ರಾಕೆಟ್‌ಗಳ ಸುರಿಮಳೆಯನ್ನೆ ಸುರಿಸಿ ಅವರನ್ನು ತಡೆದನು. ಈ ಯುದ್ಧದಲ್ಲಿ ಕಂಪನಿ ಸೈನ್ಯವು ಸಾಕಷ್ಟು ಸಾವು ನೋವುಗಳನ್ನು ಅನುಭವಿಸಿತು. ಸುಮಾರು ೩೦೦ ಮಂದಿ ಕಂಪನಿ ಸೈನಿಕರು ಗತಿಸಿದರು. ಉಳಿದವರು ಪಲಾಯನ ಮಾಡಿದರು (ದಾಸ್ ೨೦೧೧: ೭).

ತಮಿಳುನಾಡಿನ **ಪುಲ್ಲಿಲೂರಿನಲ್ಲಿ** ಹೈದರಾಲಿ ಮತ್ತು ಜನರಲ್ ಐರ್ ಕೂಟ್ ನೇತೃತ್ವದ ಕಂಪನಿ ಸೇನೆಯು (೧೭೮೦) ಮುಖಾಮುಖಿಯಾದವು. ಈ ವೇಳೆ ತನ್ನ ರಾಕೆಟ್ ಪರಿಣತ ಸೈನಿಕರನ್ನು ಗೆರಿಲ್ಲಾ ಮಾದರಿಯ ಯುದ್ಧಕ್ಕೆ ತೊಡಗಿಸಿ ಕಂಪನಿ ಸೇನೆಯನ್ನು ಕಂಗೆಡಿಸಿದನು. ಈ ವೇಳೆ ಹೈದರಾಲಿಯ ಸೈನಿಕರು ಐರ್ ಕೂಟನ ಸೈನ್ಯಕ್ಕೆ ವಸ್ತುಗಳನ್ನು ಸರಬರಾಜು ಮಾಡುತ್ತಿದ್ದ ಬಂಡಿಗಳನ್ನು ಆಯ್ದುಕೊಂಡರು. ರಾಕೆಟ್ ಉಡಾವಣೆ ಮಾಡುತ್ತಿದ್ದ ಹೈದರನ ಸೈನಿಕರು ಮರಗಳ ಮರೆಯಲ್ಲಿ ನಿಂತು ಕಂಪನಿ ಸೈನ್ಯದ ಮೇಲೆ ಅವರ ಸರಕು ಸರಂಜಾಮುಗಳ ಮೇಲೆ ರಾಕೆಟ್ ಧಾಳಿ ನಡೆಸಿದರು. ರಾಕೆಟ್ ಧಾಳಿಯಿಂದ ಕಂಪನಿ ಸೈನ್ಯ ತತ್ತರಿಸಿ ಗೊಂದಲಕ್ಕೀಡಾಯಿತು. ಸರಕು ಸರಬರಾಜು ಬಂಡಿಗಳೆಲ್ಲ ಧ್ವಂಸವಾದವು. ಅಲ್ಲದೆ, ಮದ್ದಿನ ದಾಸ್ತಾನಿಗೆ ರಾಕೆಟ್‌ನ ಬೆಂಕಿ ತಗುಲಿ ಸುಟ್ಟು ಹೋಯಿತು. ಪರಿಣಾಮವಾಗಿ ಬ್ರಿಟಿಷರು ಸೋತು ಪಲಾಯನಗೈಯಬೇಕಾಯಿತು (ದಾಸ್ ೨೦೧೧: ೭೮).

ಕಂಪನಿ ಸೇನೆಯನ್ನು ಅವಸರದಲ್ಲಿ ಹೈದರಾಲಿಯ ಸೈನ್ಯವು ಬೆನ್ನಟ್ಟಿತು. ಆ ವೇಳೆ ನದಿ ದಂಡೆಯ ಮರಳ ರಾಶಿಯಲ್ಲಿ ಕುದುರೆಗಳ ಕಾಲುಗಳು ಹೂತು ಹೋದವು. ಸಂಪೂರ್ಣ ಸೇನೆಯೇ ಕಂಗೆಟ್ಟಿತು. ಇದೇ ಸಮಯದಲ್ಲಿ ನಡೆದ ಇಂಗ್ಲಿಷರ ಗುಂಡಿನ ಧಾಳಿಗೆ ಅನೇಕರು ಸತ್ತರು. ಆದರೂ ಕರ್ನಲ್ ಕೂಟ್ ಹೈದರನ ಮೇಲೆ ಧಾಳಿ ಮಾಡಲಾಗಲಿಲ್ಲ. ಅಲ್ಲದೆ ಅವನು ಹಿಮ್ಮೆಟ್ಟಿ ಮದ್ರಾಸ್‌ನತ್ತ ನಡೆದನು. ಕೆಲವು ತಿಂಗಳುಗಳ ಬಳಿಕ ಮೆಕ್ಲೀಸ್ ಮದ್ರಾಸಿಗೆ ಬಂದನು. (ಷೇಕ್‌ಅಲಿ ೧೯೯೭: ೧೯೪–೧೯೫).

೧೭೮೨ರಲ್ಲಿ ಫ್ರೆಂಚರ ೨೦೦೦ ಸೈನ್ಯವು ಬುಸ್ಸಿ ನೇತೃತ್ವದಲ್ಲಿ ಹೈದರನ ನೆರವಿಗೆ ಬಂದಿತು. ಬ್ರಿಟಿಷರು ಸೇನೆಯನ್ನು ಎರಡು ಪಡೆಗಳನ್ನಾಗಿ ವಿಭಜಿಸಿ ಸಣ್ಣ ಪಡೆಯನ್ನು ವೆಲ್ಲೂರಿಗೂ, ದೊಡ್ಡ ಪಡೆಯನ್ನು **ಆರ್ನಿ** ಬಳಿ ಕಳುಹಿಸಿ ಬಿಡಾರ ಹಾಕಿತು. ಪೆರಮುಕಲ್ಲು ಬಳಿ ಇದ್ದ ಹೈದರಾಲಿಗೆ ಆರ್ನಿಯ ಕಿಲ್ಲೇದಾರನಿಂದ ಕಂಪನಿ ಸೇನೆ ಆರ್ನಿ ಬಳಿ ಬಿಡಾರ ಹೂಡಿರುವ ಸಂದೇಶ ಬಂದಿತು. ಅದಕ್ಕೆ ಸ್ಫೂರ್ತಿದಾಯಕ ಪತ್ರ

ಬರೆಸಿದ ಹೈದರನು ನಿರ್ಭೀತಿಯಿಂದ ಬ್ರಿಟಿಷರನ್ನು ಪ್ರತಿಭಟಿಸುವಂತೆ ಪತ್ರ ಬರೆದನು. ಹೈದರನು ಸೇನೆಯನ್ನು, ಪಾಳೇಗಾರರನ್ನು, ಲ್ಯಾಲಿ ಮತ್ತು ಮಹಮದ್ ಅಲಿ, ಟಿಪ್ಪು ಹಾಗೂ ತನ್ನ ನೇತೃತ್ವದಲ್ಲಿ ನಾಲ್ಕು ಭಾಗಗಳನ್ನಾಗಿ ಮಾಡಿದನು. ಎಲ್ಲಾ ದಿಕ್ಕುಗಳಿಂದ ಬ್ರಿಟಿಷರನ್ನು ಮುತ್ತಲು ಯೋಜಿಸಿದನು. ತಾನು ಶೀಘ್ರಗತಿಯಲ್ಲಿ ಆರ್ನಿಯತ್ತ ಸಾಗಿದನು. ಅದೇ ದಿನ ಇಂಗ್ಲಿಷರು ಆರ್ನಿ ಮುತ್ತಿಗೆ ಹಾಕಲಾರಂಭಿಸಿದರು. ಕೋಟೆಯ ಮೇಲೆ ಧಾಳಿ ಆರಂಭಿಸಲು ಕೋಟೆಯ ಮುಂದೆ ಬತೇರಿಯನ್ನು ನಿರ್ಮಿಸುತ್ತಿದ್ದರು. ಇದೇ ವೇಳೆ ಕಿಲ್ಲೇದಾರ ಹೈದರಾಲಿಯ ಪತ್ರವನ್ನು ಸ್ವೀಕರಿಸಿದ. ಸಾಹಸದಿಂದ ಹೋರಾಡಲು ಮುಂದಾದನು. ನಿಧಾನವಾಗಿ ಹೈದರನ ಕಡೆಯ ಸೇನೆ ಬೇರೆ ಬೇರೆ ದಿಕ್ಕುಗಳಿಂದ ಇಂಗ್ಲಿಷರನ್ನು ಮುತ್ತಲಾರಂಭಿಸಿತು. ಅನಿರೀಕ್ಷಿತ ಧಾಳಿಯಿಂದ ಕಂಗಾಲಾದ ಇಂಗ್ಲಿಷರು ಹಿಮ್ಮೆಟ್ಟಿ ವೆಲ್ಲೂರಿನತ್ತ ಪಲಾಯನಗೈದರು. ಅವರನ್ನು ಹೈದರ್ ಬೆನ್ನಟ್ಟಿದ. ಅನೇಕರನ್ನು ಕೊಂದು ಸುಮಾರು ೨೦೦೦ ಸೈನಿಕರನ್ನು ಬಂಧಿಸಿದನು. ಆದರೆ ವಿಲ್ಕ್ಸ್‌ನು ಆರ್ನಿ ಯುದ್ಧದಲ್ಲಿ ಬ್ರಿಟಿಷರು ಜಯಶೀಲರಾದರೆಂದು ದಾಖಲಿಸಿದ್ದಾನೆ. ಮುಂದೆ ಫ್ರೆಂಚರ ನೆರವಿನಿಂದ ವಾಂಡಿವಾಷ್‌ನಲ್ಲಿ ಇಂಗ್ಲಿಷರನ್ನು ಗೆಲ್ಲುವ ಹೈದರನ ಯೋಜನೆ ಕೈಗೂಡಲಿಲ್ಲ.

ಈ ಮೇಲಿನ ಪ್ರಕರಣಗಳಲ್ಲಿ ಹೈದರನ ರಾಜತಾಂತ್ರಿಕ ಕೌಶಲ್ಯ, ಯುದ್ಧತಂತ್ರ ಮತ್ತು ರಾಜಕೀಯ ಮುತ್ಸದ್ದಿತನವನ್ನು ಗುರುತಿಸಬಹುದಾಗಿದೆ.

### ೪.೨ ಟಿಪ್ಪು ಸುಲ್ತಾನ್ ಮತ್ತು ಕೋಟೆಗಳಿಗೆ ಸಂಬಂಧಿಸಿದ ಕೆಲವು ಘಟನೆಗಳು

ಹೈದರಾಲಿಯ ನಂತರ ಅವನ ದಾರಿಯಲ್ಲಿಯೇ ಅದಮ್ಯ ಚೈತನ್ಯದಿಂದ ಅಧಿಕಾರಕ್ಕೆ ಬಂದವನು ಟಿಪ್ಪು ಸುಲ್ತಾನ್. ಟಿಪ್ಪುವು ಹೈದರಾಲಿಯ ಪ್ರೀತಿ ಪಾತ್ರ ಪುತ್ರನೂ ಆಗಿದ್ದನು. ಟಿಪ್ಪು ತನ್ನ ಆಳ್ವಿಕೆಯ ಹದಿನೇಳು ವರ್ಷಗಳನ್ನು ಬರಪೂರ ಯುದ್ಧಗಳಲ್ಲಿಯೇ ಕಳೆಯಬೇಕಾಯಿತು. ಈ ಸಂದರ್ಭದಲ್ಲಿ ಟಿಪ್ಪುವು ತನ್ನ ಉತ್ಕರ್ಷ ಕಾಲದಲ್ಲಿ ನಡೆಸಿದ ಕೆಲವು ಕೋಟೆಗಳ ಆಕ್ರಮಣದ ಘಟನೆಗಳನ್ನು ಮತ್ತು ಅವನ ಪತನದ ದಿನಗಳಲ್ಲಿ ಕೋಟೆಗಳನ್ನು ಕಳೆದುಕೊಂಡ ಸಂಗತಿಗಳನ್ನು ಗುರುತಿಸಬಹುದು. ರಾಜಧಾನಿ ಶ್ರೀರಂಗಪಟ್ಟಣದ ಕೋಟೆಯ ಪತನದೊಂದಿಗೆ ಟಿಪ್ಪುವಿನ ಪತನ ಕೂಡ ಘಟಿಸಿದ್ದು, ಚಾರಿತ್ರಿಕ ಮಹತ್ವದ ಘಟನೆಯಾಗಿದೆ. ಈ ಘಟನೆಯು ಕೋಟೆಯ ಪ್ರಾಮುಖ್ಯತೆಯನ್ನು ಸೂಚಿಸುತ್ತದೆ.

ಹೈದರಾಲಿಯು ಅನಕ್ಷರಸ್ಥನಾದರೂ ಅಕ್ಷರದ ಮಹತ್ವವನ್ನು ಬಲ್ಲವನಾಗಿದ್ದನು. ಆದ್ದರಿಂದ ತನ್ನ ಮಗ ಟಿಪ್ಪುವಿಗೆ ಬಹು ಭಾಷೆಯನ್ನು ಪರಿಚಯಿಸುವ ಮತ್ತು ಕಲಿಸುವ ಏರ್ಪಾಡು ಮಾಡಿದನು. ಪರಿಣಾಮವಾಗಿ ಟಿಪ್ಪುವು ಬಾಲ್ಯದಿಂದಲೇ ಉತ್ತಮ

ವಿದ್ಯಾಭ್ಯಾಸ ಪಡೆದು ಯುದ್ಧ ಕಲೆಗಳಲ್ಲಿ ಪರಿಣತಿಯನ್ನು ಪಡೆದುಕೊಂಡನು. ಚಿಕ್ಕ ವಯಸ್ಸಿನಿಂದಲೇ ತಂದೆಯ ಜೊತೆ ಅನೇಕ ಯುದ್ಧಗಳಲ್ಲಿ ಭಾಗವಹಿಸಿದನು. ೧೭೬೬ರಲ್ಲಿ ಮಲಬಾರನ್ನು ಹೈದರ್ ಮುತ್ತಿಗೆ ಹಾಕಿದಾಗ ಟಿಪ್ಪು ಅದರಲ್ಲೂ ಭಾಗವಹಿಸಿದ್ದನು. ಮೊದಲನೇ ಮೈಸೂರು ಯುದ್ಧದಲ್ಲಿ ಹೈದ್ರಾಬಾದ್ ನಿಜಾಮನ ಜೊತೆ ರಾಜತಾಂತ್ರಿಕ ಮಾತುಕತೆಯನ್ನು ನಡೆಸಿ ಯಶಸ್ವಿಯಾದನು. ಇವನ ಕೌಶಲ್ಯವನ್ನು ಪರಿಗಣಿಸಿ ನಿಜಾಮನು ಅವನಿಗೆ 'ಫತ್ ಆಲಿಖಾನ್' ಎಂಬ ಬಿರುದನ್ನು ನೀಡಿದನು (ಷೇಕ್ ಅಲಿ ೨೦೦೪(೧೯೭೯): ೫).

**ಎರಡನೆಯ ಆಂಗ್ಲೋ-ಮೈಸೂರು ಯುದ್ಧದ** ಸಂದರ್ಭದಲ್ಲಿ ಹೈದರಾಲಿಯು ಬ್ರಿಟಿಷರ ವಿರುದ್ಧ ಆರ್ಕಾಟ್ ಪ್ರದೇಶದಲ್ಲಿ ಯುದ್ಧದಲ್ಲಿ ತೊಡಗಿದ್ದಾಗ ಟಿಪ್ಪುವು ಮಹತ್ವದ ಪಾತ್ರವನ್ನು ನಿರ್ವಹಿಸಿದನು. ೧೦, ಸೆಪ್ಟೆಂಬರ್ ೧೭೮೦ರಂದು ಪೊಲ್ಲಿಲೂರು ಕದನದಲ್ಲಿ ಟಿಪ್ಪುವು ಬೈಲಿಯನ್ನು ಸೋಲಿಸಿ, ಹಲವು ಸೈನಿಕರೊಡನೆ ಸೆರೆಹಿಡಿದನು. ನಂತರ ಬೈಲಿಯನ್ನು ಶ್ರೀರಂಗಪಟ್ಟಣದ ಸೆರೆಮನೆಯಲ್ಲಿ ಬಂಧಿಸಿಡಲಾಯಿತು. ಬೈಲಿಯ ಸೋಲಿನ ನಂತರ 'ಬಕ್ಸರ್ ಕದನದ ವೀರ' ಹೆಕ್ಟರ್ ಮನ್ರೋ ಟಿಪ್ಪುವನ್ನು ಎದುರಿಸಲಾರದೆ ಶಸ್ತ್ರಾಸ್ತ್ರ ಮದ್ದುಗುಂಡುಗಳನ್ನು ಕಂಚಿಯ ಕೆರೆಗೆ ಎಸೆದು ಮದರಾಸಿನತ್ತ ಪಲಾಯನ ಗೈದನು. ಈ ವೇಳೆ ಅವನನ್ನು ಬೆನ್ನತ್ತಿದ ಟಿಪ್ಪುವು ಚಂಗಲ್ ಪೇಟೆವರೆಗೂ ಹೋಗಿ ಅವನ ಸರಕು ಸರಂಜಾಮುಗಳನ್ನು ಕಸಿದುಕೊಂಡು ಗಾಯಗೊಳಿಸಿ ಬಂದನು.

ನಂತರ ೧೭೮೦ರ ಅಕ್ಟೋಬರ್‌ನಲ್ಲಿ ಆರ್ಕಾಟ್ ನವಾಬನ ರಾಜಧಾನಿಯಾದ ಆರ್ಕಾಟಿನ ಮೇಲೆ ಧಾಳಿ ನಡೆಸಿದನು. ಆನಂತರ ಅಂಬೂರ್, ಸಾತ್‌ಘರ್, ತಿಯಾಘರ್‌ಗಳ್ನು ವಶಪಡಿಸಿಕೊಳ್ಳುವುದರಲ್ಲಿಯೂ ಟಿಪ್ಪುವು ಹೈದರಾಲಿಗೆ ನೆರವಾದನು. ತದನಂತರ ಆರ್ಕಾಟಿನಿಂದ ತಂಜಾವೂರಿಗೆ ಟಿಪ್ಪುವನ್ನು ಕಳುಹಿಸಲಾಯಿತು. ೧೭೮೨ರ ಫೆಬ್ರವರಿಯಲ್ಲಿ ಬೈಲಿಯಂತೆ ಬ್ರೇತ್‌ವೇಟ್‌ನನ್ನು ಸೆರೆಹಿಡಿದನು. ಅಲ್ಲಿ ೧೬೦೦ ಸೈನಿಕರನ್ನು ಸೆರೆಹಿಡಿಯಲಾಯಿತು. ಅವರಲ್ಲಿ ೧೦೦ ಮಂದಿ ಐರೋಪ್ಯ ಸೈನಿಕರಿದ್ದರು. ನಂತರ ಕಡಲೂರನ್ನು ಕೂಡ ಜಯಿಸಿದನು. ಈ ನಡುವೆ ಮಲಬಾರ್ ಪ್ರದೇಶದಲ್ಲಿದ್ದ ಹೈದರನ ಪ್ರದೇಶಕ್ಕೆ ಬ್ರಿಟಿಷರಿಂದ ಅಪಾಯ ಎದುರಾದ್ದರಿಂದ ಅಲ್ಲಿಗೆ ಟಿಪ್ಪುವು ಹೋಗಬೇಕಾಯಿತು. ಕರೂರಿನಿಂದ ಶೀಘ್ರದಲ್ಲಿಯೇ ತೆರಳಿ ಪಾಲಘಾಟನ್ನು ವಶಕ್ಕೆ ಪಡೆಯುವಲ್ಲಿ ಟಿಪ್ಪು ಯಶಸ್ವಿಯಾದನು. ನಂತರ ಮಲಬಾರ್ ಕರಾವಳಿಯಲ್ಲಿ ಕಂಪನಿ ಕರ್ನಲ್ ಅಂಬರ್‌ಸ್ಟೋನ್‌ನನ್ನು ಬೆನ್ನತ್ತಲಾಗಿ, ಆತನು ಪೊನ್ನಾನಿ ದುರ್ಗವನ್ನು ಸೇರಿಕೊಂಡನು. ಆವನ ಸಹಾಯಕ್ಕೆ ಮೆಕ್ಲಿಯಾಡ್ ಬಂದಿದ್ದನು. ಟಿಪ್ಪುವು ಪೊನ್ನಾನಿದುರ್ಗಕ್ಕೆ ಮುತ್ತಿಗೆ ಹಾಕಿದ್ದನು. ಇತ್ತ ನರಸಿಂಗರಾಜಪೇಟೆಯಲ್ಲಿ ಹೈದರಾಲಿಯು ಬೆನ್ನುಫಣಿ ರೋಗದಿಂದ

ಮರಣ ಹೊಂದಿದನು.[೫] ಪೂರ್ಣಯ್ಯ ಮತ್ತು ಕೆಲವು ನಿಷ್ಠಾವಂತ ಅಧಿಕಾರಿಗಳು ಹೈದರನು ಸತ್ತ ಸುದ್ದಿಯನ್ನು ಗೌಪ್ಯವಾಗಿಟ್ಟರು. ಅಲ್ಲದೆ, ಮಾಹಾ ಮಿರ್ಜಾಖಾನ್‌ನನ್ನು ಟಿಪ್ಪುವಿನ ಬಳಿಗೆ ಅತ್ಯಂತ ವೇಗವಾಗಿ ಹೋಗಿ ಅವನನ್ನು ಕರೆತರಲು ಕಳುಹಿಸಿದರು. ಆಗ ಯುದ್ಧವನ್ನು ಅಲ್ಲಿಗೆ ನಿಲ್ಲಿಸಿ ಸೇನೆಯನ್ನು ಐಷದ್‌ಬೇಗ್ ಮತ್ತು ದೊಡ್ಡಮದಕರಿ ನಾಯಕನಿಗೆ ವಹಿಸಿ ಕಲ್ಲಿಕೋಟೆಗೆ ಕಳುಹಿಸಿದನು. ಶೀಘ್ರವೇ ಶ್ರೀರಂಗಪಟ್ಟಣಕ್ಕೆ ಹೋಗಿ ಟಿಪ್ಪುವು ಅಧಿಕಾರ ವಹಿಸಿಕೊಂಡನು (ಷೇಕ್ ಅಲಿ ೧೯೯೭: ೨೨೭–೨೮).

ಟಿಪ್ಪುವು ಮಲಬಾರಿನಿಂದ ಹಿಂದೆಸರಿದ ಕೂಡಲೇ ಬ್ರಿಟಿಷರು ಮಂಗಳೂರು ಮತ್ತು ಬಿದನೂರುಗಳನ್ನು ಆಕ್ರಮಿಸಿಕೊಂಡರು. ಅಲ್ಲದೆ ಮಲಬಾರಿನ ಪಾಳೇಗಾರರು ಟಿಪ್ಪುವಿನ ವಿರುದ್ಧ ದಂಗೆಯೇಳುವಂತೆ ಪ್ರಚೋದಿಸಿದರು. ಕರ್ನಲ್ ಫುಲ್ಲರ್‌ಟನ್ ಏಪ್ರಿಲ್ ೧೭೮೩ ರಂದು ಕರೂರು ಕೋಟೆಯನ್ನು ಆಕ್ರಮಿಸಿಕೊಂಡನು. ನಂತರ ದಿಂಡಿಗಲ್, ಕುರಿಬೆ, ಧಾರಾಪುರಂ ಮೊದಲಾದ ಕೋಟೆಗಳನ್ನು ಬ್ರಿಟಿಷರು ವಶಪಡಿಸಿಕೊಂಡರು.

ಟಿಪ್ಪು ನಡೆಸಿದ ಆಕ್ರಮಣಗಳಲ್ಲಿ **ಕೊಡಗಿನ ಆಕ್ರಮಣ** ಪ್ರಮುಖವಾದುದು. ಟಿಪ್ಪುವಿಗೂ ಮೊದಲು ಹೈದರಾಲಿಯು ಕೊಡಗನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡಿದ್ದನು. ಏಕೆಂದರೆ, ಹೈದರಾಲಿಯು ಕೊಡಗನ್ನು ಗೆಲ್ಲುವ ಮೊದಲು ಅದರ ಸುತ್ತಮುತ್ತಲ ಪ್ರದೇಶವನ್ನು ಗೆದ್ದುಕೊಂಡಿದ್ದನು. ಬೆಟ್ಟಗುಡ್ಡಗಳಿಂದ ಕೂಡಿದ್ದ ಕೊಡಗನ್ನು ಹಾಲೇರಿ ರಾಜಮನೆತನಕ್ಕೆ ಸೇರಿದ ಲಿಂಗರಾಜನ ಸಹಾಯವಿಲ್ಲದೆ ಹೈದರನು ಗೆಲ್ಲಲು ಸಾಧ್ಯವಿರಲಿಲ್ಲ. ಹೈದರಾಲಿಗೆ ಕೊಡಗು ಬೇಕಾಗಿದ್ದುದು ತನ್ನ ಸಂಸ್ಥಾನದ ವಿಸ್ತರಣೆಗಲ್ಲ; ಕೊಡಗು, ದಕ್ಷಿಣ ಕನ್ನಡ, ಮಲೆನಾಡು ಮತ್ತು ಮೈಸೂರುಗಳ ಮಧ್ಯೆ ಬೆಟ್ಟಗಳ ಮೇಲಿನ ಕಾಡು ಸೀಮೆಯಾಗಿದ್ದುದರಿಂದ ಅದನ್ನು ವಶಪಡಿಸಿಕೊಂಡು ಅಲ್ಲಿ ತನ್ನ ಸೈನ್ಯವನ್ನಿಟ್ಟುಕೊಂಡರೆ ಅದರ ಸುತ್ತಲಿನ ಸೀಮೆಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಸುಲಭವಾಗುವುದೆಂದು ಆತನು ತಿಳಿದಿದ್ದನು (ಕೃಷ್ಣಯ್ಯ ೧೯೯೫(೧೯೭೪): ೧೪೯).

ಹೈದರಾಲಿಯ ಮರಣದ ಸುದ್ದಿ ಕೇಳಿ ಮುಂಬೈನ ಕಂಪನಿ ಜನರಲ್ ಮ್ಯಾಥ್ಯೂಸನು ಸೇನೆಯೊಡನೆ ಆಗಮಿಸಿ **ನಗರ ಮತ್ತು ಕೊಡಿಯಾಲ** (ಮಂಗಳೂರು) ಕೋಟೆಗಳನ್ನು ವಶಪಡಿಸಿಕೊಂಡನು. ಈ ಸಮಾಚಾರವನ್ನು ಕೇಳಿದ ಟಿಪ್ಪುವು ಸೈನ್ಯ ಸಹಿತ ನಗರದ ಕಡೆಗೆ ಹೊರಟಾಗ ಗೊರೂರಿನಲ್ಲಿದ್ದ ಕೊಡಗಿನ ರಾಜಪರಿವಾರವನ್ನು ಪಿರಿಯಾಪಟ್ಟಣಕ್ಕೆ ಸ್ಥಳಾಂತರಿಸಿದನು.[೬] ೧೭೮೪ರ ಹೊತ್ತಿಗೆ ಮ್ಯಾಥ್ಯೂಸನ ಸೇನೆಯು ಹಿಡಿದುಕೊಂಡಿದ್ದ ನಗರ ಮತ್ತು ಕೊಡಿಯಾಲದ ಕೋಟೆಗಳನ್ನು ಮರುವಶಪಡಿಸಿಕೊಳ್ಳುವಲ್ಲಿ ಯಶಸ್ವಿಯಾದನು. ಕೊಡಿಯಾಲದ ಕೋಟೆಯನ್ನು ಕೆಡಪಿಸಿ ಶ್ರೀರಂಗಪಟ್ಟಣಕ್ಕೆ ಹಿಂತಿರುಗುವಾಗ ಕೊಡಗಿನ

ಮೇಲೆ ದಂಡನ್ನು ತರುವ ಅವಕಾಶ ಒದಗಿ ಬಂದಿತು. ಈ ಸಂದರ್ಭದಲ್ಲಿ ಕೊಡಗಿನ ಮುಖ್ಯಸ್ಥರನ್ನು ಕರೆಸಿ ಅವರು ಆತನ ಮೇಲೆ ದಂಗೆಯೆದಿದ್ದರೂ ಕ್ಷಮಿಸುವುದಾಗಿ ಭರವಸೆ ಕೊಟ್ಟು, ಅವರು ಮುಂದೆ ದಂಗೆಯೆದ್ದರೆ ಅವರನ್ನು ಮತಾಂತರಗೊಳಿಸುವುದಾಗಿ ಬೆದರಿಕೆ ಹಾಕಿದನು. ಅಲ್ಲದೆ, ಮಣ್ಣಿನಲ್ಲಿ ಕಟ್ಟಿದ್ದ ಮಡಿಕೇರಿಯ ಕೋಟೆಗೋಡೆಗಳನ್ನು ತೆಗೆಸಿ ಕಲ್ಲಿನಿಂದ ಕೋಟೆಯನ್ನು ಕಟ್ಟಿಸಿದನು. ಈ ಕೋಟೆಯ ಒಳಗಡೆ ತನ್ನ ಸೈನಿಕರ ಒಂದು ಠಾಣ್ಯವನ್ನಿಟ್ಟು ಅದರ ಕಿಲ್ಲೇದಾರನಾಗಿ ಜಾಫರ್ ಕುಲಿ ಬೇಗ್ ಎಂಬ ಸರದಾರನನ್ನು ನೇಮಿಸಿದನು. ಅಲ್ಲದೆ ಆ ಸರದಾರನ ಹೆಸರನ್ನೆ ಮಡಿಕೇರಿಗೆ ಇಟ್ಟು 'ಜಾಫರ್‌ಬಾದ್'[೭] ಎಂದು ಕರೆದನು. ಹಾಗೆಯೇ ಬೆಪ್ಪುನಾಡಿನ ಅರಮನೆಗೇರಿ, ಕುಶಾಲನಗರ ಮತ್ತು ಭಾಗಮಂಡಲಗಳಲ್ಲಿ ಕೋಟೆಗಳನ್ನು ಕಟ್ಟಿಸಿ ತನ್ನ ಸೈನ್ಯದ ತುಕಡಿಗಳಿಟ್ಟನು. ಭಾಗಮಂಡಲದಲ್ಲಿ ಈಗ ಭಗಂಡೇಶ್ವರ ಮತ್ತು ಇತರ ದೇವಸ್ಥಾನಗಳು ಇರುವ ಆವರಣವೆಲ್ಲವೂ ಟಿಪ್ಪುವಿನ ಸೈನಿಕ ಠಾಣ್ಯಗಳಾಗಿ ಮಾರ್ಪಟ್ಟಿತ್ತು. ತಲಕಾವೇರಿಯ ತೀರ್ಥ ಜಾಗವನ್ನು 'ಅಬ್ಜಲಾಬಾದ್' ಎಂದು ಕರೆದನು (ಹೈ.ನಾ: ೨೮೯; ಕೃಷ್ಣಯ್ಯ ೧೯೯೫(೧೯೭೪): ೧೫೨).

**ಪಿರಿಯಾಪಟ್ಟಣದ ಕೋಟೆಯಲ್ಲಿ** ಟಿಪ್ಪುವಿನ ನಿಯಂತ್ರಣದಲ್ಲಿದ್ದ ವೀರರಾಜೇಂದ್ರ ಮತ್ತವನ ಪರಿವಾರವು ೧೭೮೮ರಲ್ಲಿ ಟಿಪ್ಪುವಿನ ಅಧಿಕಾರಿ ಇಸ್ಮಾಯಿಲ್ ಖಾನ್ ಮತ್ತು ಸರದಾರ ಹೊಂಬಾಳೆ ನಾಯಕನ ನೆರವಿನಿಂದ ತಪ್ಪಿಸಿಕೊಂಡು ಕೊಡಗಿನ ಶ್ರೀಮಂಗಲ ಸಮೀಪದಲ್ಲಿ ನೆಲೆಸುತ್ತದೆ. ನಂತರ ನಾಲ್ಕುನಾಡಿನಲ್ಲಿ ಅರಮನೆಯನ್ನು ಕಟ್ಟಿಸುತ್ತಾನೆ. ನಂತರ ಟಿಪ್ಪುವಿನ ಸೈನ್ಯ ಠಾಣ್ಯಗಳಿದ್ದ ನಾಲ್ಕು ಕೋಟೆಗಳಲ್ಲಿ ಕುಶಾಲನಗರದ ಕೋಟೆಯು ಒಂದು. ಸುಲ್ತಾನನ ಸೈನಿಕರು ಕೋಟೆಯ ಗೋಡೆಯನ್ನು ಬಲಪಡಿಸುತ್ತಿದ್ದಾಗ ೧೭೮೯ರಲ್ಲಿ ವೀರರಾಜೇಂದ್ರನು ೧೫೦೦ ಮಂದಿ ಕೊಡಗರನ್ನು ಕರೆದುಕೊಂಡು ಹೋಗುತ್ತಾನೆ. ಕಾರ್ಯಕಾರ ಕುಲ್ಲೆಟ್ಟ ಪೊನ್ನಣ್ಣನ ನೇತೃತ್ವದಲ್ಲಿ ಕುಶಾಲನಗರದ ಕೋಟೆಯ ಮೇಲೆ ಆಕ್ರಮಣ ನಡೆಸುತ್ತಾರೆ. ಕೊಡಗರ ಗುಂಡಿನ ಧಾಳಿಯನ್ನು ತಾಳಲಾರದೆ ಕೋಟೆಯೊಳಗಿದ್ದ ೭೦೦ ಮಂದಿ ಸೈನಿಕರು ಮತ್ತು ಪಹರೆಯವರು ಕೋಟೆಯನ್ನು ತೊರೆದು ಬೆಟ್ಟದಪುರದ ಕಡೆಗೆ ಕತ್ತಲಲ್ಲಿ ಓಡಲಾರಂಭಿಸುತ್ತಾರೆ. ಅವರನ್ನು ವೀರರಾಜೇಂದ್ರನ ಸೈನಿಕರು ಕೊಂದು ಹಾಕಿ ಕೋಟೆಯನ್ನು ವಶಪಡಿಸಿಕೊಳ್ಳುತ್ತಾರೆ. ಅಲ್ಲಿದ್ದ ಅಪಾರ ಪ್ರಮಾಣದ ದವಸ ಧಾನ್ಯ, ಮದ್ದುಗುಂಡು, ದನಕರು ಮೊದಲಾದವನ್ನು ವಶಕ್ಕೆ ಪಡೆಯುತ್ತಾರೆ. ನಂತರ ಕೋಟೆಯು ಶತ್ರುಗಳಿಗೆ ಉಪಯೋಗಕ್ಕೆ ಬಾರದಿರಲೆಂದು ಕೋಟೆಯೊಳಗಿನ ಮರದ ಕಟ್ಟಡಕ್ಕೆ ಬೆಂಕಿ ಇಟ್ಟು ಸುಟ್ಟುಬಿಡಲಾಗುತ್ತದೆ (ಕೃಷ್ಣಯ್ಯ ೧೯೯೫(೧೯೭೪): ೧೮೫-೮೮).

ವೀರರಾಜೇಂದ್ರನು ೧೭೮೯ರ ಆಗಸ್ಟ್ ತಿಂಗಳಲ್ಲಿ ತನ್ನ ಜನರೊಡನೆ ಹೋಗಿ ಬೆಪ್ಪುನಾಡಿನ ಮರದ ಕೋಟೆಗೆ ಮುತ್ತಿಗೆ ಹಾಕುತ್ತಾನೆ. ಆ ಕೋಟೆಯನ್ನು ಅನಂತಪುರ ಜಿಲ್ಲೆಯ ರಾಯದುರ್ಗದ ಜನರು ಪಹರೆಗಿದ್ದರು. ಅವರು ವೀರರಾಜೇಂದ್ರನ ಜನರ ಎದುರು ನಿಲ್ಲಲಾರದೆ ಶರಣಾದರು. ಅವರಿಗೆ ವೀರರಾಜೇಂದ್ರನು ತಮ್ಮ ಸ್ವಂತ ಸಾಮಾನುಗಳೊಂದಿಗೆ ಕೊಡಗಿನಿಂದ ಹೊರಗೆ ಹೋಗಲು ಅವಕಾಶ ಕಲ್ಪಿಸಿದನು. ನಂತರ ಕೋಟೆಯ ಒಳಗಿದ್ದ ಅಪಾರ ಮದ್ದುಗುಂಡುಗಳನ್ನು ನಾಲ್ಕು ನಾಡಿನ ಅರಮನೆಗೆ ಸಾಗಿಸಿದನು. ದವಸ ಧಾನ್ಯಗಳನ್ನು ಜನರಿಗೆ ಹಂಚಿಸಿದನು. ನಂತರ ಬೆಪ್ಪುನಾಡಿನ ಮರದ ಕೋಟೆಗೆ ಬೆಂಕಿಯನ್ನು ಇಟ್ಟು ಸುಟ್ಟುಬಿಟ್ಟನು (ಕೃಷ್ಣಯ್ಯ ೧೯೯೫(೧೯೭೪): ೧೮೯-೯೨).

ವೀರರಾಜೇಂದ್ರನು ೧೭೯೦ರ ಫೆಬ್ರವರಿಯಲ್ಲಿ ತನ್ನ ಶಸ್ತ್ರಸಜ್ಜಿತ ಸೈನಿಕರೊಡನೆ ಭಾಗಮಂಡಲದ ಕೋಟೆಗೆ ಮುತ್ತಿಗೆ ಹಾಕಿದನು. ಆ ಕೋಟೆಯ ಹತ್ತಿರದಲ್ಲಿ ಹರಿಯುವ ಕಾವೇರಿಯ ದಂಡೆಯಲ್ಲಿರುವ ದಿಣ್ಣೆಯ ಮೇಲೆ ಫಿರಂಗಿಯನ್ನಿಟ್ಟು ಮದ್ದು ತುಂಬಿಸಿ ಸ್ವತಃ ವೀರರಾಜೇಂದ್ರನೇ ಕೋಟೆಗೆ ಗುಂಡು ಹಾರಿಸುತ್ತಿದ್ದನು. ಟಿಪ್ಪುವಿನ ಸೈನಿಕರು ಕೂಡ ಸುಲ್ತಾನನ ಮೇಲೆ ಗುಂಡು ಹಾರಿಸುತ್ತಿದ್ದರು. ಹೀಗೆ ೫ ದಿವಸಗಳ ಕಾಲ ನಡೆದ ಧಾಳಿ ಪ್ರತಿಧಾಳಿಯ ನಂತರ ಕೋಟೆಯು ವೀರರಾಜೇಂದ್ರನ ವಶವಾಯಿತು. ಕೋಟೆಯೊಳಗಿನ ಯುದ್ಧಸಾಮಗ್ರಿ ಮತ್ತು ಮದ್ದುಗುಂಡುಗಳನ್ನು ನಾಲ್ಕುನಾಡಿನ ಅರಮನೆಗೆ ಸಾಗಿಸಿದನು (ಕೃಷ್ಣಯ್ಯ ೧೯೯೫(೧೯೭೪): ೧೯೨-೯೩).

ವೀರರಾಜೇಂದ್ರನು ನಂತರ ಮಂಡೆಪಂಡ ಅಪ್ಪಯ್ಯ ಮತ್ತು ನಗರಹಳ್ಳಿ ಪಟ್ಟೇಗೌಡರ ಮೂಲಕ ಅರಕಲಗೂಡು, ಕೊಣನೂರು ಮತ್ತು ಐಗೂರು ಹಾಗೂ ಮಂಜರಾಬಾದ್ ತಾಲ್ಲೂಕಿನ ಕೆಲವು ಸೀಮೆಗಳನ್ನು ನಿಯಂತ್ರಣಕ್ಕೆ ಪಡೆದರು. ಮಂಜರಾಬಾದ್ ಸಮೀಪದ ಅರಕೆರೆಯಲ್ಲಿ ಮಣ್ಣಿನ ಕೋಟೆಯನ್ನು ಕಟ್ಟಿ ಅಲ್ಲಿ ಸೈನಿಕ ಠಾಣ್ಯವನ್ನು ಸ್ಥಾಪಿಸಿ, ಆ ಠಾಣ್ಯದ ಸರದಾರನಾಗಿ ಪುಟ್ಟೇಗೌಡನನ್ನು ನೇಮಿಸಿದನು.

ಇನ್ನು ವೀರರಾಜೇಂದ್ರನಿಗೆ ದಕ್ಕಬೇಕಿದ್ದ ಏಕೈಕ ಕೋಟೆ ಎಂದರೆ ಮಡಿಕೇರಿ ಕೋಟೆ. ಇದು ಟಿಪ್ಪುವಿನ ನಿಷ್ಠಾವಂತ ಅಧಿಕಾರಿ ಜಾಫರ್ ಕುಲಬೇಗನ ನೇತೃತ್ವದಲ್ಲಿತ್ತು. ವೀರರಾಜೇಂದ್ರನು ಕೋಟೆಗೆ ಹೋಗುತ್ತಿದ್ದ ಆಹಾರ ಧಾನ್ಯಗಳನ್ನು ತಡೆದನು. ಈ ಸುದ್ದಿಯನ್ನು ತಿಳಿದ ಟಿಪ್ಪುವು ಖಾದರ್‌ಖಾನ್ ಕೈಸಗಿ ಎಂಬ ಸೈನ್ಯಾಧಿಕಾರಿಯ ಜೊತೆಗೆ ಸೈನ್ಯ ಮತ್ತು ಆಹಾರವನ್ನು ಮಡಿಕೇರಿಗೆ ಕಳುಹಿಸಿಕೊಟ್ಟನು. ಆದರೆ ಮಾರ್ಗಮಧ್ಯೆ ವೀರರಾಜೇಂದ್ರನ ಸೈನಿಕರು ಖಾದರ್‌ಖಾನನನ್ನು ಯಾವುದೇ ಕಾರಣಕ್ಕೂ ಕೊಲ್ಲದೆ ಬಂಧಿಸಿದರು." ನಂತರ ಅವನನ್ನು ಆಹಾರ ಸಾಮಗ್ರಿ ಸಹಿತ ಮಡಿಕೇರಿಗೆ ಕಳುಹಿಸಿಕೊಟ್ಟರು.

ಆಹಾರ ಸಾಮಗ್ರಿಗಳು ಮುಗಿದ ನಂತರ ಮಡಿಕೇರಿ ಕೋಟೆಯ ಕಿಲ್ಲೇದಾರನಾದ ಜಾಫರ್‌ಕುಲಿಬೇಗನು ಟಿಪ್ಪುವಿನ ಸರಕು ಸರಂಜಾಮುಗಳನ್ನು ಮತ್ತು ಮದ್ದುಗುಂಡುಗಳನ್ನು ವೀರರಾಜೇಂದ್ರನಿಗೆ ಒಪ್ಪಿಸಿ ಶ್ರೀರಂಗಪಟ್ಟಣಕ್ಕೆ ಹಿಂತಿರುಗಿದನು. ಇದೇ ವೇಳೆ ಮೂರು ತಿಂಗಳುಗಳಿಂದ ಸಂಬಳವಿಲ್ಲದೆ ಪರದಾಡುತ್ತಿದ್ದ ಟಿಪ್ಪುವಿನ ಸೈನಿಕರಿಗೆ ಒಂದು ಸಾವಿರ ವರಹವನ್ನು ಇನಾಮ್ ಆಗಿ ನೀಡಿ ಕಳುಹಿಸಿದನು. ಹೀಗೆ ಅನಾಯಾಸವಾಗಿ ಮಡಿಕೇರಿಯ ಕೋಟೆಯನ್ನು ವೀರರಾಜೇಂದ್ರನು ವಶಪಡಿಸಿಕೊಂಡನು (ತಂಬಂಡ ೨೦೦೧: ೩೨೩-೨೪).

ಹಂಬರ್ಸ್ಟನ್ ವಿರುದ್ಧ **ಮಲಬಾರಿ**ಗೆ ಟಿಪ್ಪುವು ಸೈನ್ಯವನ್ನು ತೆಗೆದುಕೊಂಡು ಹೋದಾಗ, ಹಂಬರ್ಸ್ಟನ್ ನೆರವಿಗೆ ಮುಂಬೈನಿಂದ ಬ್ರಿಟಿಷರು ಜನರಲ್ ಮ್ಯಾಥ್ಯೂಸ್‌ನನ್ನು ಸೈನ್ಯ ಸಹಿತ ಕಳುಹಿಸಿದರು. ಅವನು ರಾಜಮನ್‌ದುರ್ಗ ಮತ್ತು ಹೊನ್ನಾವರಗಳನ್ನು ಗೆದ್ದು ಹೈದರನ ಕೆಲವು ಯುದ್ಧ ನೌಕೆಗಳನ್ನು ನಾಶಪಡಿಸಿದನು. ಇದೇ ಸಮಯಕ್ಕೆ ಹೈದರನು ಮೃತನಾದ ಸುದ್ದಿ ತಿಳಿದಿದ್ದರಿಂದ ಮ್ಯಾಥ್ಯೂಸ್‌ಗೆ ಬಿದನೂರು(ನಗರ) ಮೇಲೆ ಆಕ್ರಮಣ ನಡೆಸಲು ಮುಂಬೈ ಸರ್ಕಾರ ಸೂಚಿಸಿತು. ಅದರಂತೆ ಕುಂದಾಪುರ, ಹೊಸಂಗಡಿ ಮಾರ್ಗವಾಗಿ ಹೈದರ್‌ಘರ್ ತಲುಪಿದನು. ಅಲ್ಲಿಂದ ಬಿದನೂರು ತಲುಪಿದನು. ಬಿದನೂರು ಹೈದರಾಲಿಯ ನಂಬಿಕಸ್ಥನಾಗಿದ್ದ ಶೇಕ್ ಅಯಾಜ್‌ನ ಕೈಯಲ್ಲಿತ್ತು. ಮ್ಯಾಥ್ಯೂಸನ ಬಳಿ ಬಿದನೂರನ್ನು ಆಕ್ರಮಿಸುವಷ್ಟು ಮದ್ದುಗುಂಡುಗಳಿರಲಿಲ್ಲ. ಆದರೆ ಇರುವ ಶಸ್ತ್ರಾಸ್ತ್ರಗಳನ್ನು ಕೂಡ ಬಳಸುವ ಪ್ರಮೇಯವೇ ಸೃಷ್ಟಿಯಾಗಲಿಲ್ಲ. ಏಕೆಂದರೆ, ಶೇಕ್ ಅಯಾಜ್‌ನು ಡೋನಾಲ್ಡ್ ಕ್ಯಾಂಬೆಲ್ ಎಂಬ ಕಂಪನಿ ಸೆರೆಯಾಳನ್ನು ಬಿಡುಗಡೆಗೊಳಿಸಿ, ಮೊದಲಿನಂತೆ ಬಿದನೂರು ಪ್ರಾಂತದ ಪ್ರಾಂತ್ಯಾಧಿಕಾರಿ ಹುದ್ದೆಯನ್ನು ವಹಿಸಿಕೊಡುವುದಾದರೆ ಬಿದನೂರಿನ ಪಟ್ಟಣ ಮತ್ತು ಕೋಟೆ ಮಾತ್ರವಲ್ಲ ಇಡೀ ಪ್ರಾಂತ್ಯವನ್ನೆ ಶರಣಾಗತಗೊಳಿಸುವುದಾಗಿ ಮ್ಯಾಥ್ಯೂಸ್‌ಗೆ ಹೇಳಿ ಕಳುಹಿಸಿದನು. ಮ್ಯಾಥ್ಯೂಸ್ ಅದಕ್ಕೊಪ್ಪಿದಾಗ ಅಯಾಜ್ ಬಿದನೂರನ್ನು ಒಪ್ಪಿಸಿದನು. ಹೇರಳ ಪ್ರಮಾಣದಲ್ಲಿದ್ದ ಸಂಪತ್ತನ್ನು ಕಂಪನಿ ಸೈನಿಕರು ಮತ್ತು ಅಯಾಜ್ ಹಂಚಿಕೊಂಡರು. ಮೊದಲಿನಿಂದಲೂ ಅಯಾಜ್ ಬಗೆಗೆ ಟಿಪ್ಪುವಿಗೆ ಮಾತ್ಸರ್ಯವಿದ್ದುದರಿಂದ ಆತನ ಸ್ಥಾನಕ್ಕೆ ಲುಫ್ತ ಅಲಿ ಬೇಗ್ ಎಂಬಾತನನ್ನು ನೇಮಿಸಿದನು. ಇದರಿಂದ ಅಸಮಾಧಾನಗೊಂಡ ಶೇಕ್ ಅಯಾಜ್‌ನು ಬಿದನೂರು ಕೋಟೆಯನ್ನು ಕಂಪನಿ ಜನರಲ್ ಮ್ಯಾಥ್ಯೂಸ್‌ಗೆ ಒಪ್ಪಿಸಿದನು. ಅಲ್ಲಿದ್ದ ಸಂಪತ್ತಿನೊಂದಿಗೆ ಮುಂಬೈಗೆ ಪಲಾಯನ ಮಾಡಿದನು. ಇದರಿಂದ ಕುಪಿತಗೊಂಡ ಟಿಪ್ಪುವು ಬಿದನೂರಿಗೆ ತುರ್ತಾಗಿ ಧಾವಿಸಿಬಂದು ಬಿದನೂರು ಪಟ್ಟಣವನ್ನು ಮುತ್ತಿದನು. ಮ್ಯಾಥ್ಯೂಸ್ ಕೋಟೆಯೊಳಗೆ ಸೇರಿಕೊಂಡನು. ಟಿಪ್ಪು ಅದನ್ನು ಕೂಡ ಮುತ್ತಿ ೧೩ ಫಿರಂಗಿಗಳಿಂದ

ಸಿಡಿಸಿದ ಗುಂಡುಗಳು ಕೋಟೆಯ ಒಳಗಿನ ಕಟ್ಟಡಗಳಿಗೆ ಭಾರಿ ಹಾನಿಯನ್ನುಂಟುಮಾಡಿತು. ಅಲ್ಲದೆ ಟಿಪ್ಪುವು ಬಿದನೂರನ್ನು ಮಂಗಳೂರಿನ ಸಂಪರ್ಕದಿಂದ ಪ್ರತ್ಯೇಕಿಸಿದನು. ಆಹಾರ, ಮದ್ದುಗುಂಡು ಮತ್ತು ನೀರಿನ ಕೊರತೆಯಿಂದ ಕಂಪನಿ ಸೇನೆ ಸಂಕಷ್ಟಕ್ಕೀಡಾಯಿತು. ಜ್ವರವು ಕೋಟೆಯಲ್ಲಿ ಹರಡಿತಲ್ಲದೆ, ವಾಸದ ಕಟ್ಟಡಗಳು ಧ್ವಂಸವಾದ್ದರಿಂದ ೩೫೦ ರೋಗಿಗಳು ಮತ್ತು ಗಾಯಾಳುಗಳು ಬಿಸಿಲಿನಲ್ಲಿಯೇ ಬಿದ್ದಿದ್ದರು. ಇಂತಹ ಯಾತನಾಮಯ ಸಂದರ್ಭದಲ್ಲಿಯೂ ಕೋಟೆಯನ್ನು ೧೮ ದಿನಗಳ ಕಾಲ ರಕ್ಷಿಸಿಕೊಂಡಿದ್ದ ಮ್ಯಾಥ್ಯೂಸ್‌ನು ೧೭೮೩ ಏಪ್ರಿಲ್ ೨೮ ರಂದು ಕೋಟೆಯಿಂದ ಹೊರಬಂದನು. ಶರಣಾಗತಿಯ ಒಪ್ಪಂದವನ್ನು ಉಲ್ಲಂಘಿಸಿ ಕೋಟೆಯೊಳಗಿನ ಸಂಪತ್ತನ್ನು ಕಂಪನಿ ಅಧಿಕಾರಿಗಳೇ ಹಂಚಿಕೊಂಡಿದ್ದರಿಂದ ಟಿಪ್ಪು ಕುಪಿತಗೊಂಡನು. ಅಲ್ಲದೆ ಮ್ಯಾಥ್ಯೂಸ್ ಮತ್ತು ಅವನ ಸಂಗಡಿಗರನ್ನು ಬಂಧಿಸಿ ಶ್ರೀರಂಗಪಟ್ಟಣಕ್ಕೆ ಕಳುಹಿಸಿದನು. ಅಲ್ಲಿ ಮ್ಯಾಥ್ಯೂಸ್ ಅಪಾರ ಕಷ್ಟನಷ್ಟಗಳನ್ನು ಅನುಭವಿಸಿ ಸೆರೆಯಲ್ಲಿಯೇ ಮರಣ ಹೊಂದಿದನು (ವಿಲ್ಕ್ಸ್ ಸಂ.೨: ೪೫೪-೬೨; ಮೊಹಿಬ್ಬುಲ್ ಹಸನ್ ೧೯೮೮: ೪೬-೪೮; ಸುರೇಂದ್ರರಾವ್ ೨೦೧೬: ೧೯೦-೯೫).

ಟಿಪ್ಪುವು ಬಿದನೂರನ್ನು ಗೆದ್ದ ನಂತರ ಬ್ರಿಟಿಷರ ನಿಯಂತ್ರಣದಲ್ಲಿದ್ದ ಮಂಗಳೂರಿನ ಕಡೆಗೆ ಗಮನ ಹರಿಸಿದನು. ೧೭೮೩ರ ಏಪ್ರಿಲ್‌ನಲ್ಲಿ ಹುಸೇನ್ ಅಲಿಖಾನನ ನೇತೃತ್ವದಲ್ಲಿ ಕಳುಹಿಸಿದ ೪೦೦೦ ಸೈನಿಕರು ಗುರುಪುರದ ಸಮೀಪ ಸೋಲನ್ನಪ್ಪಿದ್ದರಿಂದ ೧೭೮೩ರ ಮೇ ಮಧ್ಯಂತರದಲ್ಲಿ ಟಿಪ್ಪುವು **ಮಂಗಳೂರು** ನಗರಕ್ಕೆ ಮುತ್ತಿಗೆ ಹಾಕಿದನು. ಕಂಪನಿ ಕರ್ನಲ್ ಕ್ಯಾಂಪ್‌ಬೆಲ್‌ನು ಮೈಸೂರು ಸೈನ್ಯ ಮತ್ತು ಫ್ರೆಂಚ್ ಇಂಜಿನಿಯರ್‌ಗಳ ಪ್ರಬಲ ಆಕ್ರಮಣವನ್ನು ತಡೆದು ನಿಲ್ಲಿಸಿದನು. ಈ ಸಂದರ್ಭದಲ್ಲಿ ಟಿಪ್ಪುವು ೧೧ ಕಡೆಗಳಲ್ಲಿ ಕೋಟೆಗೆ ಇಳಿಜಾರುಗಳನ್ನು ಕಟ್ಟಿದನು. ಎಲ್ಲಾ ದಿಕ್ಕುಗಳಲ್ಲಿ ಸ್ಥಾಪಿಸಿದ್ದ ತುಪಾಕಿಯ ಸಾಲುಗಳಿಂದ ನಿರಂತರವಾಗಿ ಗುಂಡಿನ ಮಳೆಗರೆದನು. ಇದರಿಂದ ಅಪಾರ ಪ್ರಮಾಣದ ಜೀವಹಾನಿ ಮತ್ತು ಕಟ್ಟಡಗಳ ಹಾನಿ ಸಂಭವಿಸಿತು. ಆದರೂ ಶರಣಾಗಲಿಲ್ಲ. ಜುಲೈ ಅಂತ್ಯದಲ್ಲಿ ಕೋಟೆಯ ಮುತ್ತಿಗೆಗೆ ಪ್ರಯತ್ನಿಸಲಾಯಿತು. ಮೂರು ಕಡೆಗಳಲ್ಲಿ ಬತೇರಿಗಳನ್ನು ಸಂಪೂರ್ಣವಾಗಿ ನಾಶಮಾಡಿ, ಕಂದಕಗಳನ್ನು ತೆಂಗಿನ ಮರಗಳಿಂದ ಮತ್ತು ಕೋಟೆಯ ಅವಶೇಷಗಳಿಂದ ಮುಚ್ಚಲಾರಂಭಿಸಿದರು. ಮಂಗಳೂರು ಕೋಟೆಯು ಸಾಕಷ್ಟು ಶಿಥಿಲವಾಯಿತು. ಅಂತಿಮವಾಗಿ ಫ್ರೆಂಚ್ ರಾಯಭಾರಿಯ ಪ್ರಯತ್ನದ ಫಲವಾಗಿ ಯುದ್ಧ ವಿರಾಮ ಏರ್ಪಟ್ಟಿತು. ಯಥಾಸ್ಥಿತಿಯನ್ನು ಕಾಯ್ದುಕೊಳ್ಳುವಲ್ಲಿ ಬ್ರಿಟಿಷರು ವಿಫಲರಾದರು. ಎಂಟು ತಿಂಗಳ ದೀರ್ಘ ಮುತ್ತಿಗೆಯ ನಂತರ ಕೋಟೆಯೊಳಗಿದ್ದ ಅನೇಕ ಕಂಪನಿ ಸೈನಿಕರು ಸ್ಕರ್ವಿ ರೋಗಕ್ಕೆ ತುತ್ತಾದರು.

ಅಂತಿಮವಾಗಿ ಕ್ಯಾಂಪ್‌ಬೆಲ್ ನೇತೃತ್ವದ ಕಂಪನಿ ಸೇನೆಯು ೧೭೮೪ರ ಜನವರಿ ೩೦ ಮತ್ತು ೩೧ ರಂದು ಕೋಟೆಯಿಂದ ಹೊರಬಂದರು. ಅವರು ಮರ್ಯಾದೆಯಾಗಿ ತೆರಳಲು ಟಿಪ್ಪುವು ಅನುವು ಮಾಡಿಕೊಟ್ಟನು. ಈ ಮುತ್ತಿಗೆಯ ಸಂದರ್ಭದಲ್ಲಿ ಸತ್ತ, ಗಾಯಗೊಂಡ ಮತ್ತು ನಾಪತ್ತೆಯಾದ ಇಂಗ್ಲಿಷರ ಸಂಖ್ಯೆ ೧೪೦೦ನ್ನು ದಾಟುತ್ತದೆ. ನಂತರ ಮಂಗಳೂರಿನ ಕೋಟೆಯನ್ನು ಟಿಪ್ಪುವು ಕೆಡವಿಸಿದನೆಂದು **ರಾಜೇಂದ್ರನಾಮೆ** ಹೇಳುತ್ತದೆ (**ರಾಜೇಂದ್ರನಾಮೆ:** ೨೮; ಮೊಹಿಬ್ಬುಲ್ ಹಸನ್ ೧೯೮೮: ೪೮-೫೦; ಸುರೇಂದ್ರರಾವ್ ೨೦೧೬: ೧೯೨-೯೩;).

ಎರಡನೇ ಆಂಗ್ಲೋ-ಮೈಸೂರು ಯುದ್ಧವು **ಮಂಗಳೂರು ಒಪ್ಪಂದ**ದೊಂದಿಗೆ (ಮಾರ್ಚ್ ೧೧, ೧೭೮೪) ಕೊನೆಗೊಂಡಿತು. ಒಪ್ಪಂದದ ಪ್ರಕಾರ ಎರಡೂ ಪಕ್ಷಗಳು ಯುದ್ಧದಲ್ಲಿ ತಾವು ಗೆದ್ದ ಪ್ರದೇಶಗಳನ್ನು ಪರಸ್ಪರ ಹಿಂದಿರುಗಿಸಬೇಕಾಗಿತ್ತು. ಮುಖ್ಯವಾಗಿ ಟಿಪ್ಪುವು ಕರ್ನಾಟಿಕ್ ಪ್ರದೇಶದಲ್ಲಿ ತಿರುಚನಾಪಳ್ಳಿಯನ್ನು ಒಳಗೊಂಡಂತೆ ಗೆದ್ದ ಪ್ರದೇಶಗಳನ್ನು ಬಿಟ್ಟುಕೊಡಬೇಕಾಯಿತು. ಒಬ್ಬರ ವಿರುದ್ಧ ಮತ್ತೊಬ್ಬರು ಯುದ್ಧ ಸಾರದಂತೆ, ವೈರಿಗಳಿಗೆ ಸಹಾಯ ಮಾಡದಂತೆ ಇರುವುದು. ಈ ಒಪ್ಪಂದವು ಟಿಪ್ಪುವಿಗೆ ರಾಜತಾಂತ್ರಿಕ ದೃಷ್ಟಿಯಿಂದ ವಿಜಯವನ್ನೇ ತಂದುಕೊಟ್ಟಿತೆಂದು ಹೇಳಲಾಗುತ್ತದೆ (ಬ್ರಿಟಲ್‌ಬ್ಯಾಂಕ್ ೨೦೧೬: ೪೩-೪೪; ಸುರೇಂದ್ರರಾವ್ ೨೦೧೬: ೧೯೬).

***

೧೭೮೯ರ ಡಿಸೆಂಬರ್ ೨೯ ರಂದು ತಿರುವಾಂಕೂರಿನ ಸೈನ್ಯಕ್ಕೂ ಮೈಸೂರಿನ ಪಡೆಗೂ ಕಾಳಗ ನಡೆದ ದಿನವೇ ಒಂದು ರೀತಿಯಲ್ಲಿ **ಮೂರನೆಯ ಆಂಗ್ಲೋ-ಮೈಸೂರು ಯುದ್ಧ**ವು ಪ್ರಾರಂಭವಾಯಿತು. ಆದರೆ ರಾಜನೂ ಇಂಗ್ಲಿಷರೂ ಪೂರ್ತಿಯಾಗಿ ಆಟವನ್ನು ಮುಗಿಸಿಯೇ ಬಿಡಬೇಕೆಂದು ನಿರ್ಧಾರ ಮಾಡಿದ್ದರು. ಟಿಪ್ಪುವಿನ ಆಶ್ರಿತವಾದ ಕೊಚ್ಚಿಯ ರಾಜನಿಗೆ ಸೇರಿದ ಭೂಪ್ರದೇಶದಲ್ಲಿ ನಿರ್ಮಿಸಿದ್ದ ಕೊತ್ತಳಗಳನ್ನು ನೆಲಸಮಗೊಳಿಸಲು ನಿರ್ಧರಿಸಿದನು. ಕ್ರಾಂಗನೂರು ಮತ್ತು ಆಯಕೋಟಾಗಳನ್ನು ವಶಪಡಿಸಿಕೊಂಡನು.

ಯುದ್ಧವು ಎರಡು ವರ್ಷಗಳ ಕಾಲ ನಡೆಯಿತು. ಡಿಸೆಂಬರ್ ೧೭೮೯ ರಿಂದ ಫೆಬ್ರವರಿ ೧೭೯೨ ರವರೆಗೆ. ೧೭೯೦ ಏಪ್ರಿಲ್‌ನಿಂದ ೧೭೯೦ ಡಿಸೆಂಬರ್‌ವರೆಗೆ ಮೊದಲನೆಯ ಹಂತದಲ್ಲಿ ಯುದ್ಧರಂಗವು ದಕ್ಷಿಣ ಭಾರತದಲ್ಲಿ ಪೂರ್ವಘಟ್ಟಗಳ ಕೆಳಗೆ, ಹಾಗೂ ಪಶ್ಚಿಮ ಕರಾವಳಿಯವರೆಗೆ ಸೀಮಿತಗೊಂಡಿದ್ದಿತು. ಮೈಸೂರಿನ ಮೇಲೆ ಆಕ್ರಮಣ ಮಾಡಿ, ಟಿಪ್ಪುವಿನ ಬಲವಾದ ಕೋಟೆಗಳನ್ನು ಗೆದ್ದುಕೊಳ್ಳಲು ಬಹಳ ಕಷ್ಟಪಟ್ಟರು. ಕೊನೆಗೆ ೧೭೯೨ ಫೆಬ್ರವರಿ ೬ ರಂದು ಒಂದು ಅನಿರೀಕ್ಷಿತ ಇರುಳು

ಧಾಳಿ ನಡೆಸಿ ಶ್ರೀರಂಗಪಟ್ಟಣ ದ್ವೀಪವನ್ನು ಪ್ರವೇಶಿಸಿದರು. ಇದರಿಂದ ಟಿಪ್ಪುವು ಸಂಧಿಯನ್ನು ಕೋರಬೇಕಾಯಿತು. ಶ್ರೀರಂಗಪಟ್ಟಣ ಒಪ್ಪಂದವು ಜಾರಿಗೆ ಬಂದು ಯುದ್ಧವು ಮುಕ್ತಾಯವಾಯಿತು.




ಟಿಪ್ಪು ಸುಲ್ತಾನನ ಮೈಸೂರು ಸಂಸ್ಥಾನ (೧೭೯೮) (ಕೃಪೆ: ಷೇಕ್‌ಅಲಿ ೧೯೯೭: ೩೨೭)

ಕಾರನ್‌ವಾಲೀಸನು ಯುದ್ಧದ ಪಥವನ್ನು ಬದಲಾಯಿಸಿದನು. ಮೆಡೋಸ್ ಗಜ್ಜಲಹಟ್ಟಿ ಕಣಿವೆಯ ಮೂಲಕ ಮೈಸೂರಿನ ಮೇಲೆ ಧಾಳಿ ಮಾಡಬೇಕೆಂದು ಇಚ್ಛೆಸಿದ್ದನು. ಆದರೆ ಕಾರ್ನ್‌ವಾಲಿಸ್, ಮದರಾಸನ್ನು ಕೇಂದ್ರವಾಗಿ ಮಾಡಿಕೊಂಡು ಈಶಾನ್ಯ ದಿಕ್ಕಿನಿಂದ ಚಲಿಸಬೇಕೆಂದು ಬಯಸಿದನು. ಟಿಪ್ಪುವು ಆಗಿನ್ನು ಪಾಂಡಿಚೆರಿಯಲ್ಲಿದ್ದನು. ಇಂಗ್ಲಿಷರ ಯುದ್ಧ ತಂತ್ರದಲ್ಲಾದ ಬದಲಾವಣೆಯನ್ನು ಅವನು ನಿರೀಕ್ಷಿಸಿರಲಿಲ್ಲ. ಕಾರನ್‌ವಾಲೀಸನು ಫೆಬ್ರವರಿ ೨೮ ರಂದು ಕೋಲಾರವನ್ನು, ಮಾರ್ಚ್ ೨ ರಂದು ಹೊಸಕೋಟೆಯನ್ನು ವಶಪಡಿಸಿಕೊಂಡನು. ಈ ಎರಡೂ ಸ್ಥಳಗಳಲ್ಲಿ ಕಾವಲು ಪಡೆಯಿರಲಿಲ್ಲವಾಗಿ, ಬೇಗ

ಬಿದ್ದುಹೋದವು. ಇಂಗ್ಲಿಷರ ಸೈನ್ಯವು ಬೆಂಗಳೂರಿಗೆ ಹತ್ತು ಮೈಲಿ ದೂರದಲ್ಲಿದೆ ಎನ್ನುವಾಗಲೇ ಟಿಪ್ಪುವಿನ ಅಶ್ವಾರೋಹಿ ಪಡೆಯು ಅದನ್ನು ಕಾಡತೊಡಗಿತು. ಮಾರ್ಚ್ ೫ ರಂದು ತೋಪುಗಳು ಸಿಡಿದು ಕಂಪನಿ ಸೇನೆಗೆ ತಡೆಯೊಡ್ಡಿ ಸುಮಾರು ಹತ್ತು ಜನರನ್ನು ಬಲಿತೆಗೆದುಕೊಂಡವು.

ಮಾರ್ಚ್ ೬ನೆಯ ತಾರೀಖು ಫ್ಲಾಯ್ಡ್ ಮತ್ತು ಟಿಪ್ಪು ಇವರ ಸೇನೆಗಳ ನಡುವೆ ಒಂದು ಘರ್ಷಣೆಯಾಯಿತು. ಫ್ಲಾಯ್ಡ್‌ನಿಗೆ ಅಪಾರವಾದ ಹಾನಿಯಾಯಿತು. ಅವನಿಗೆ ಗಾಯಗಳಾದವು. ಬಹುಕಷ್ಟದಿಂದ ಅವನ ಕಡೆಯ ಜನರು ಆತನನ್ನು ಎತ್ತಿಕೊಂಡು ಹೋದರು. ಈ ಕಾಳಗದಲ್ಲಿ ಇಂಗ್ಲಿಷರು ಸುಮಾರು ೪೦೦ ಜನರನ್ನು ಕಳೆದುಕೊಂಡರು. ಸುಮಾರು ೧೦೦ ಜನರು ಟಿಪ್ಪುವಿಗೆ ಸೆರೆಸಿಕ್ಕಿದರು. ಆಮೇಲೆ ಅವನು ಕೆಂಗೇರಿಯ ಕಡೆಗೆ ಚಲಿಸಿದನು. ಕಾರ್ನ್‌ವಾಲಿಸ್ **ಬೆಂಗಳೂರು ಕೋಟೆಗೆ ಮುತ್ತಿಗೆ** ಹಾಕಲು ನಿರ್ಧರಿಸಿದನು. ನಗರದ ಮೇಲೆ ಧಾಳಿ ಮಾಡಬೇಕೆಂದು ಮಾರ್ಚ್ ೭ ನೆಯ ತಾರೀಖು ಕಾರ್ನ್‌ವಾಲಿಸ್ ಆಜ್ಞೆ ಮಾಡಿದನು. ಕಾವಲು ಪಡೆಯು ದಿಟ್ಟತನದಿಂದ ಅವರನ್ನು ಎದುರಿಸಿತು. ನಗರವನ್ನು ವಶಪಡಿಸಿಕೊಂಡು ಲೂಟಿ ಹೊಡೆಯಲು ಆದೇಶಿಸಲಾಯಿತು.

ಬೆಂಗಳೂರು ಮೈಸೂರು ಸಂಸ್ಥಾನದ ಪ್ರಮುಖ ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಯ ಕೇಂದ್ರವಾಗಿತ್ತು. ಇದನ್ನು ಹೈದರಾಲಿಯು ೧೭೫೮ರಲ್ಲಿ ಜಾಗೀರಾಗಿ ಪಡೆದ ನಂತರ ಇಲ್ಲಿದ್ದ ಹಳೆಯ ಕೋಟೆಯನ್ನು ಕಲ್ಲು ಮತ್ತು ಗಾರೆಯಿಂದ ದುರಸ್ತಿ ಮಾಡಿಸಿದನು. ಹೈದರನ ಕಾಲದಲ್ಲಿ ಬೆಂಗಳೂರಿನ ಕಿಲ್ಲೇದಾರನಾಗಿದ್ದ ಇಬ್ರಾಹಿಂ ಸಾಹೇಬನು ಗಟ್ಟಿಯಾದ ಕಲ್ಲುಗಳಿಂದ ಮತ್ತು ಉತ್ತಮವಾದ ಗಾರೆ ಕೆಲಸದಿಂದ ಬೆಂಗಳೂರು ಕೋಟೆಯನ್ನು ಪಾಯದಿಂದಲೇ ಮತ್ತೆ ಕಟ್ಟಿಸಿದನು. ಅಂಡಾಕಾರದ ಕೋಟೆಯನ್ನು ನಿರ್ಮಿಸಿ ವೃತ್ತಾಕಾರದ ಕೊತ್ತಳಗಳನ್ನು ಮಾಡಿಸಿದನು. ಅಲ್ಲದೆ, ಕೆಂಪೇಗೌಡ ಮತ್ತು ಶಹಜಿ ಕಾಲದ ಹಳೆಯ ಫಿರಂಗಿಗಳನ್ನು ತೆಗೆದು ಅವುಗಳ ಜಾಗದಲ್ಲಿ ಪಂಚಲೋಹದ ತೋಪುಗಳನ್ನು ಬತೇರಿಗೆ ೨ ತೋಪುಗಳಂತೆ ಎಪ್ಪತ್ತೆರಡು ತೋಪುಗಳನ್ನು ಇದರೊಂದಿಗೆ ಹಲವು ತೋಪುಗಳನ್ನು ಸನ್ನದ್ಧ ಸ್ಥಿತಿಯಲ್ಲಿರುವಂತೆ ಏರ್ಪಡಿಸಿದನು. ಕೋಟೆಯ ಸುತ್ತ ಉತ್ತಮ ಕಂದಕಗಳಿದ್ದವು. ಆದರೆ ಅವುಗಳಲ್ಲಿ ದಸಿಬೇಲಿಯನ್ನು ಹಾಕಿರಲಿಲ್ಲ. ಕೋಟೆಯಿಂದ ಇಳಿಜಾರಾಗಿ ಹೋಗುವ ಇಳುಕಲು ಅಲ್ಲಲ್ಲಿ ಪರಿಪೂರ್ಣವಾಗಿರಲಿಲ್ಲ. ಈ ಕೋಟೆಗೆ ಎರಡು ದ್ವಾರಗಳಿದ್ದು, ಉತ್ತರದ ದ್ವಾರವು ದೆಹಲಿ ದ್ವಾರವೆಂತಲೂ, ದಕ್ಷಿಣದ ದ್ವಾರವು ಮೈಸೂರು ದ್ವಾರವೆಂತಲೂ ಕರೆಯಲ್ಪಡುತ್ತಿತ್ತು. ೧೭೮೧ರಲ್ಲಿ ಜೇಮ್ಸ್ ಬ್ರಿಸ್ಟವ್ ಎಂಬ ಯುದ್ಧ ಖೈದಿಯನ್ನು ಆರ್ಕಾಟಿನಿಂದ

ಶ್ರೀರಂಗಪಟ್ಟಣಕ್ಕೆ ಸಾಗಿಸುವಾಗ ಒಂದು ದಿನ ಬೆಂಗಳೂರಿನ ಪೇಟೆಯಲ್ಲಿ ಉಳಿಯಬೇಕಾಯಿತು. ಆ ಸಂದರ್ಭದಲ್ಲಿ ಕೋಟೆಯ ಪಶ್ಚಿಮ ಭಾಗದಲ್ಲಿ ಆಗಳು ಆಗೆಯುತ್ತಿದ್ದರು ಎಂಬುದಾಗಿ ತನ್ನ ದಿನಚರಿಯಲ್ಲಿ ದಾಖಲಿಸಿದ್ದಾನೆ. ಒಟ್ಟಾರೆ, ಸದೃಢವಾದ ಕೋಟೆಯನ್ನಾಗಿ ಹೈದರಾಲಿ ಮಾರ್ಪಡಿಸಿದ್ದನು (ನಾಗೇಗೌಡ ೧೯೯೮: ೧೧೧; ಮಂಜುನಾಥ್ ೨೦೦೬: ೫೪).

ಎರಡನೇ ಆಂಗ್ಲೋ-ಮೈಸೂರು ಯುದ್ಧದ ಅಂತ್ಯದಲ್ಲಿ ಏರ್ಪಟ್ಟ ಮಂಗಳೂರು ಒಪ್ಪಂದವು ಟಿಪ್ಪುವಿಗೆ ಕೀರ್ತಿಯನ್ನು ತಂದುಕೊಟ್ಟಿತು. ದಿನೇದಿನೇ ಪ್ರವರ್ಧಮಾನಕ್ಕೆ ಬರುತ್ತಿರುವ ಟಿಪ್ಪುವನ್ನು ಬ್ರಿಟಿಷರು ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಸಹಿಸದಾದರು. ೧೭೮೬ರಲ್ಲಿ ಬ್ರಿಟಿಷರ ಗವರ್ನರ್ ಜನರಲ್ ಆಗಿ ನೇಮಕಗೊಂಡ ಲಾರ್ಡ್ ಕಾರನ್ ವಾಲಿಸ್ ಕಂಪನಿ ಸೈನ್ಯದ ಮುಂದಾಳತ್ವವನ್ನು ವಹಿಸಿದ್ದನು. ಅಮೇರಿಕಾ ಸ್ವಾತಂತ್ರ ಸಂಗ್ರಾಮದಲ್ಲಿ ವಾಷಿಂಗ್‌ಟನ್‌ನಿಂದ ಪರಾಭವಗೊಂಡು ತೀವ್ರ ಮುಖಭಂಗ ಅನುಭವಿಸಿದ್ದ ಕಾರನ್‌ವಾಲೀಸನಿಗೆ ಮತ್ತೆ ತನ್ನ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವ ಉಮೇದಿನಲ್ಲಿದ್ದ. ಆದ್ದರಿಂದ ಯುದ್ಧ ಕೈಗೊಳ್ಳುವುದನ್ನು ಮೊದಲು ನಿರಾಕರಿಸಿದ್ದ ಕಂಪನಿಯ ಅಧಿಕಾರಿಗಳನ್ನು ಅವನು ಮತ್ತೆ ಪುಸಲಾಯಿಸುವಲ್ಲಿ ಯಶಸ್ವಿಯಾಗಿದ್ದನು. ಅದರ ಮುಂದಿನ ಭಾಗವಾಗಿ ಬೃಹತ್ ಸೇನೆಯೊಂದಿಗೆ ಮದ್ರಾಸಿನಿಂದ ೧೭೯೧ರ ಫೆಬ್ರವರಿಯಲ್ಲಿ ಮೈಸೂರಿನತ್ತ ತೆರಳಿದನು. ವೆಲ್ಲೂರು, ನಂತರ ಅಂಬೂರುಗಳ ಮಾರ್ಗವಾಗಿ ಹೊರಟು ಕೋಲಾರವನ್ನು ವಶ ಪಡಿಸಿಕೊಂಡು ಬೆಂಗಳೂರಿನತ್ತ ಕಂಪನಿ ಸೈನ್ಯ ಹೊರಡಿತು. ನಂತರ ಹೊಸಕೋಟೆ ಮಾರ್ಗವಾಗಿ ಬೆಂಗಳೂರಿನತ್ತ ಹೊರಟರು. ಅತ್ತ ಕಂಪನಿ ಸೈನ್ಯವನ್ನು ಮಾರ್ಗಮಧ್ಯದಲ್ಲಿಯೇ ತಡೆಯಬೇಕೆಂದು ಟಿಪ್ಪುವು ಅಂಬೂರ್ ಘಾಟ್‌ನಲ್ಲಿ ಕಂಪನಿ ಸೇನೆಯನ್ನು ಇದಿರುನೋಡುತ್ತಿದ್ದನು. ಆದರೆ ಬೇರೆ ಮಾರ್ಗದ ಮೂಲಕ ಕಾರನ್‌ವಾಲೀಸನು ಬೆಂಗಳೂರಿನ ಕಡೆಗೆ ಸಾಗಿಬಂದಿದ್ದನು. ಕಾರನ್ ವಾಲೀಸನ ಸೈನ್ಯದಲ್ಲಿ ಒಟ್ಟು ೧,೩೦,೦೦೦ ಸೈನಿಕರಿದ್ದರು (ಸುಂದರ್‌ರಾವ್ ೨೦೧೧(೧೯೮೫): ೨೨೬-೨೨೯; ಅರುಣಿ ೨೦೧೧: ೪೦-೪೧).

ಟಿಪ್ಪುವು ಬೆಂಗಳೂರು ಕೋಟೆಯ ಹೊಸ ಕಿಲ್ಲೇದಾರ ಬಹದ್ದೂರ್ ಖಾನನಿಗೆ ಕೋಟೆಯ ಕಾವಲನ್ನು ವಹಿಸಿದನು. ತಾನು ಕೆಂಗೇರಿಯ ಸಮೀಪ ಸೇನೆಯೊಂದಿಗೆ ಬಿಡಾರ ಹಾಕಿದ್ದನು. ಬಹುಶಃ ಬೆಂಗಳೂರು ಪತನ ಹೊಂದಿದರೆ ನಂತರ ಶ್ರೀರಂಗಪಟ್ಟಣದ ಕಡೆಗೆ ಬ್ರಿಟಿಷರ ಸೈನ್ಯ ಚಲಿಸದಂತೆ ತಡೆಯುವ ಉದ್ದೇಶ ಟಿಪ್ಪುವಿನದಾಗಿದ್ದಿರಬಹುದು. ೧೭೯೧ನೆಯ ಮಾರ್ಚ್ ೪ ರಂದು ಬೆಂಗಳೂರಿನ ಮೇಲೆ ಆಕ್ರಮಣ ನಡೆಯಿತು.೧೦ ಕಿಲ್ಲೇದಾರ ಬಹದ್ದೂರ್ ಖಾನ್ ತನ್ನ ಎಂಟು ಸಾವಿರ ಸೈನ್ಯವನ್ನು ವಿಂಗಡಿಸಿ

ಬೆಂಗಳೂರಿನ ಪೇಟೆ ಹಾಗೂ ಕೋಟೆಗಳೆರಡನ್ನು ಸಂರಕ್ಷಿಸುವುದಕ್ಕಾಗಿ ಬ್ರಿಟಿಷರ ಆಕ್ರಮಣದ ಮೇಲೆ ಪ್ರತಿಧಾಳಿ ಆರಂಭಿಸುತ್ತಾನೆ. ಟಿಪ್ಪುವಿನ ಸೈನ್ಯ ಕೂಡ ಅತ್ಯಾಧುನಿಕ ಯುದ್ಧ ಫಿರಂಗಿಗಳನ್ನು ಹೊಂದಿರುತ್ತದೆ. ಬಹದ್ದೂರ್ ಖಾನ್‌ನ ನೇತೃತ್ವದ ಟಿಪ್ಪು ಸೈನ್ಯ ತನ್ನ ತೀವ್ರಗತಿಯ ಪ್ರತಿರೋಧದೊಂದಿಗೆ ಬ್ರಿಟಿಷರ ಸೈನ್ಯದ ಮೇಲೆ ಮೇಲಿಂದ ಮೇಲೆ ಫಿರಂಗಿ ಗುಂಡುಗಳನ್ನು ಹಾಗೂ ತುಪಾಕಿಗಳನ್ನು ಸಿಡಿಸುವುದರ ಮೂಲಕ ವೈರಿಗಳ ಯೋಜನೆಗಳನ್ನು ಭಗ್ನಗೊಳಿಸುತ್ತದೆ. ಹಲಸೂರು ದ್ವಾರವನ್ನು ನಾಶಗೊಳಿಸಿ ಪೇಟೆಯ ಒಳಾಂಗಣಕ್ಕೆ ನುಗ್ಗುವುದು ಬ್ರಿಟಿಷರ ಯೋಜನೆಯಾಗಿರುತ್ತದೆ. ಈ ಒಂದು ದ್ವಾರವನ್ನು ಆಕ್ರಮಿಸಲು ಬ್ರಿಟಿಷರು ತಮ್ಮೆಲ್ಲಾ ಸೈನ್ಯದೊಂದಿಗೆ ಸುಮಾರು ಮೂರು ದಿನಗಳ ಕಾಲ ಹೋರಾಟ ನಡೆಸಬೇಕಾಗುತ್ತದೆ. ಈ ಮೂರು ದಿನಗಳ ಹೋರಾಟದಲ್ಲಿ ಬ್ರಿಟಿಷರ ಸೈನ್ಯಕ್ಕೆ ಭಾರಿ ಪ್ರಮಾಣದಲ್ಲಿ ಹಾನಿ ಅನುಭವಿಸಬೇಕಾಗುತ್ತದೆ. ಕಂಪನಿ ಸೈನ್ಯದ ಕರ್ನಲ್ ಮೂರ್‌ಹೌಸ್, ಕ್ಯಾಪ್ಟನ್ ಡೆಲನ್ಯ, ಕ್ಯಾಪ್ಟನ್ ಕೊನೌನ್ ಹಾಗೂ ಹಲವು ಸೈನಿಕರು ಅಸುನೀಗುತ್ತಾರೆ. ತೀವ್ರ ಆಘಾತಗೊಂಡ ಕಂಪನಿ ಸೈನ್ಯಕ್ಕೆ ಕಿಲ್ಲೇದಾರ ಸಿಂಹಸ್ವಪ್ನವಾಗಿ ಕಾಡುತ್ತಾನೆ. ಮಾರ್ಚ್ ೭ರ ಬೆಳಗಿನ ಜಾವ ಕಂಪನಿ ಸೈನ್ಯ ಹಲಸೂರು ದ್ವಾರವನ್ನು ವಶಪಡಿಸಿಕೊಳ್ಳುವುದಕ್ಕಾಗಿ ತನ್ನ ಎಲ್ಲಾ ಶಕ್ತಿಯನ್ನು ಪ್ರಯೋಗಿಸಿ ಯಶಸ್ವಿಯಾಗಲು ಹವಣಿಸುತ್ತದೆ. ಪೇಟೆಯಲ್ಲಿ ವಾಸವಾಗಿದ್ದ ನಾಗರಿಕರ ಜೀವಗಳನ್ನು ಉಳಿಸುವುದಕ್ಕಾಗಿ ಕಿಲ್ಲೇದಾರ ಬಹದ್ದೂರ್ ಖಾನ್ ನೇತೃತ್ವದ ಟಿಪ್ಪು ಸೈನ್ಯ ಹಲಸೂರು ದ್ವಾರದ ಮೇಲಿನ ಹಿಡಿತವನ್ನು ಕೈಬಿಟ್ಟು ಕೋಟೆಯನ್ನು ಛಿದ್ರಗೊಳಿಸುತ್ತದೆ. ಬ್ರಿಟಿಷರು ಪೇಟೆಯನ್ನು ವಶಪಡಿಸಿಕೊಂಡ ಸುದ್ದಿ ತಿಳಿಯುತ್ತಿದ್ದಂತೆ ಕೆಂಗೇರಿಯಲ್ಲಿ ಸೈನ್ಯ ಸಮೇತ ಬೀಡುಬಿಟ್ಟು ಗಮನಿಸುತ್ತಿದ್ದ ಟಿಪ್ಪುಸುಲ್ತಾನ್ ಕಂಪನಿ ಸೈನ್ಯದ ಮೇಲೆ ಮರುಧಾಳಿ ಮಾಡುವುದಕ್ಕೆ ಬರುತ್ತಾನೆ. ಆದರೆ ಕಾರನ್‌ವಾಲೀಸ್ ನೇತೃತ್ವದ ಕಂಪನಿ ಸೈನ್ಯ ಟಿಪ್ಪುಸುಲ್ತಾನನ ಯೋಜನೆಯನ್ನು ವಿಫಲಗೊಳಿಸುತ್ತದೆ. ಕಿಲ್ಲೇದಾರ ಬಹದ್ದೂರ್ ಖಾನ್ ಕೋಟೆಯೊಳಗೆ ಪರಾಕ್ರಮಿ ಎಂದು ಗುರುತಿಸುವ ಎರಡು ಸಾವಿರ ಸೈನ್ಯವನ್ನು ಸಜ್ಜುಗೊಳಿಸಿ ಕೋಟೆಯ ಯಾವ ದಿಕ್ಕುಗಳಿಂದಲೂ ಎರಗುವ ಕಂಪನಿ ಸೈನ್ಯದ ಆಕ್ರಮಣಗಳನ್ನು ತಕ್ಷಣವೇ ಪ್ರತಿರೋಧಿಸುವುದು ಹಾಗೂ ಪೇಟೆಯೊಳಗೆ ಪ್ರವೇಶಿಸಿದ ಬ್ರಿಟಿಷರನ್ನು ಆದಷ್ಟು ಬೇಗ ತೆರವುಗೊಳಿಸುವಲ್ಲಿ ನಿರತನಾಗುತ್ತಾನೆ. ದುರಾದೃಷ್ಟವಶಾತ್ ಕೋಟೆಯ ಹೊರವಲಯದಲ್ಲಿದ್ದ ಟಿಪ್ಪುಸುಲ್ತಾನ್ ಹಾಗೂ ಅಪಾರ ಸಂಖ್ಯೆಯ ಸೈನ್ಯದವರು ಕೋಟೆಯ ಹಾಗೂ ಬಹದ್ದೂರ್ ಖಾನ್‌ನ ರಕ್ಷಣೆಗೆ ಸಹಾಯ ನೀಡಲು ಸಾಧ್ಯವಾಗದ ಪರಿಸ್ಥಿತಿ ಎದುರಿಸುತ್ತಾರೆ. ಆದರೂ ಧೃತಿಗೆಡದ ಕಿಲ್ಲೇದಾರ ಬಹದ್ದೂರ್ ಖಾನ್ ತನ್ನ ನಿಷ್ಠೆಯ ಎರಡು ಸಾವಿರ ಸೈನ್ಯದೊಂದಿಗೆ ಬ್ರಿಟಿಷರ ವಿರುದ್ಧ ಹೋರಾಟಕ್ಕಿಳಿಯುತ್ತಾನೆ. ಮಾರ್ಚ್ ೭ ರಿಂದ ೨೧ ರವರೆಗೆ ಅಂದರೆ ಸುಮಾರು ೧೫ ದಿನಗಳವರೆಗೆ ತನ್ನ

ಸೈನ್ಯದೊಂದಿಗೆ ಕಿಲ್ಲೇದಾರ ಬ್ರಿಟಿಷರ ವಿರುದ್ಧ ಹೋರಾಟ ನಡೆಸುತ್ತಾನೆ. ಎರಡು ವಾರಗಳ ಭೀಕರ ಯುದ್ಧದಲ್ಲಿ ಬ್ರಿಟಿಷರು ಕೋಟೆಯಲ್ಲಿದ್ದ ಕಿಲ್ಲೇದಾರ ಹಾಗೂ ಸೈನಿಕರಿಗೆ ಆಹಾರ ಹಾಗೂ ನೀರು ಪೇಟೆಯ ಅಥವಾ ಹೊರಗಡೆಯಿಂದ ಸರಬರಾಜು ಆಗದಂತೆ ತಡೆಯೊಡ್ಡುತ್ತಾರೆ. ಅಲ್ಲದೇ ಇದೇ ವೇಳೆಯಲ್ಲಿ ಪೇಟೆಯ ಆಯಕಟ್ಟಿನ ಸ್ಥಳಗಳಲ್ಲಿ ಫಿರಂಗಿಗಳನ್ನು ನೆಲೆಗೊಳಿಸಿ ಕೋಟೆಯ ಮುಖ್ಯದ್ವಾರವಾಗಿದ್ದ ದೆಹಲಿ ದ್ವಾರ (ಇಂದಿನ ಮಾರ್ಕೆಟ್ ಬಳಿಯ ಕೋಟೆ)ದ ಮೇಲೆ ತೀವ್ರ ಧಾಳಿಗಳನ್ನು ನಡೆಸುತ್ತಾರೆ. ಈ ವೇಳೆಯಲ್ಲಿ ಕಿಲ್ಲೇದಾರನ ಸೈನ್ಯ ಕೂಡ ಅತ್ಯಾಧುನಿಕ ಫಿರಂಗಿಗಳಾದ ಚಿಮ್ಮುವ ರಾಕೆಟ್ ಮದ್ದಿನ ಅಸ್ತ್ರಗಳನ್ನು[೧೧] ಬಳಸಿ ಕಂಪನಿ ಸೈನ್ಯದ ಮೇಲೆ ಪ್ರತಿಧಾಳಿ ಮಾಡುತ್ತಾರೆ. ಈ ಹೊಸ ಅಸ್ತ್ರಗಳಿಂದ ಕಂಪನಿ ಸೈನ್ಯ ಅಪಾರ ಪ್ರಮಾಣದಲ್ಲಿ ಹಾನಿಯನ್ನು ಅನುಭವಿಸುತ್ತದೆ. ಆದರೂ ಕಾರನ್‌ವಾಲೀಸನಿಗೆ ಆಯಕಟ್ಟಿನ ಸ್ಥಳವಾಗಿದ್ದ ಬೆಂಗಳೂರನ್ನು ತನ್ನ ಕೈವಶ ಮಾಡಿಕೊಳ್ಳುವುದು ಅತ್ಯಾವಶ್ಯಕವಾಗಿರುತ್ತದೆ. ಕಿಲ್ಲೇದಾರ ಬಹದ್ದೂರ್ ಖಾನ್‌ನ ತಂತ್ರಗಾರಿಕೆಗೆ ಕಂಪನಿ ಸೈನ್ಯ ಒಂದು ಹಂತದಲ್ಲಿ ಸೋಲಿನ ಅನುಭವವನ್ನು ಪಡೆಯುತ್ತದೆ. ಅಮೇರಿಕಾದ ಸೋಲಿನ ಅನುಭವ ಕಂಡಿದ್ದ ಕಾರನ್‌ವಾಲೀಸ್ ಟಿಪ್ಪುವಿನ ವಿರುದ್ಧದ ಹೋರಾಟ ಒಂದು ಪ್ರತಿಷ್ಠೆ ಹಾಗೂ ಅನಿವಾರ್ಯವಾಗಿರುತ್ತದೆ. ಟಿಪ್ಪುವಿನ ಸೈನ್ಯಾಧಿಕಾರಿಗಳಾದ ಬಹದ್ದೂರ್ ಖಾನ್ ಸಿಂಹಸ್ವಪ್ನವಾಗಿ ಕಾಡುತ್ತಾರೆ (ಅರುಣಿ ೨೦೧೧: ೪೧–೪೩).



ಬ್ರಿಟಿಷರು ಬೆಂಗಳೂರು ಕೋಟೆಗೆ ಮುತ್ತಿಗೆ ಹಾಕಿದ ಭಾಗದ ಗೋಡೆಯ ಮೇಲೆ ಹಾಕಿರುವ ಶಾಸನ

**ಹೋರಾಟದ ಕೊನೆಯ ದಿನ**

ಕುತಂತ್ರದಿಂದಾದರೂ ಕೋಟೆಯಲ್ಲಿದ್ದ ಕಿಲ್ಲೇದಾರ ಹಾಗೂ ಸೈನ್ಯವನ್ನು ಸೋಲಿಸುವುದಕ್ಕಾಗಿ ಮಾರ್ಚ್ ೨೦ರ ಮಧ್ಯರಾತ್ರಿಯಂದು ಕಂಪನಿ ಸೈನ್ಯಕ್ಕೆ ಕೋಟೆಯ ಗೋಡೆಯನ್ನು ಒಡೆದು ಒಳಪ್ರವೇಶಿಸುವಂತೆ ಸೂಚನೆ ನೀಡಲಾಗುತ್ತದೆ. ಫಿರಂಗಿಗಳ ಮೂಲಕ ದೆಹಲಿ ದ್ವಾರದ ಪಕ್ಕದ ಗೋಡೆಯನ್ನು ಧ್ವಂಸಗೊಳಿಸುತ್ತಾರೆ. ತಕ್ಷಣವೇ ಕಂಪನಿ ಸೈನ್ಯ ಕೋಟೆಯನ್ನು ಗೌಪ್ಯವಾಗಿ ಪ್ರವೇಶಿಸಿ ಕೋಟೆಯ ಒಳಗಡೆಯಲ್ಲಿದ್ದ ಬಹದ್ದೂರ್ ಖಾನ್‌ನ ಸೈನ್ಯದ ಮೇಲೆ ಧಾಳಿ ನಡೆಸುತ್ತದೆ. ಇದಕ್ಕೆ ಧೃತಿಗೆಡದೆ ಕಿಲ್ಲೇದಾರ ಹಾಗೂ ಸೈನಿಕರು ಕಂಪನಿ ಸೈನ್ಯದ ವಿರುದ್ಧ ಸತತವಾಗಿ ಹೋರಾಡುತ್ತಾರೆ. ಮಧ್ಯರಾತ್ರಿಯಿಂದ ಬೆಳಗಿನ ಜಾವದವರೆಗೂ ಹೋರಾಟ ನಡೆಯುತ್ತದೆ. ಆದರೆ ಅಪಾರ ಸಂಖ್ಯೆಯಲ್ಲಿದ್ದ ಕಂಪನಿ ಸೈನ್ಯದ ವಿರುದ್ಧ ಕಿಲ್ಲೇದಾರ ಹಾಗೂ ಆತನ ಸೈನ್ಯ ತಮ್ಮ ಜೀವಗಳನ್ನು ಪಣಕ್ಕಿಟ್ಟು ಹೋರಾಟ ಮಾಡುತ್ತಾರೆ. ಕೊನೆಯುಸಿರು ಇರುವವರೆಗೂ ಸೈನಿಕರು ಹಾಗೂ ಕಿಲ್ಲೇದಾರ ಬೆಂಗಳೂರು ಕೋಟೆಯನ್ನು ಬ್ರಿಟಿಷರ ವಶವಾಗದಂತೆ ಹೋರಾಡುತ್ತಾರೆ. ಒಳ ನುಗ್ಗಿದ ಕಂಪನಿ ಸೈನ್ಯದ ಮೇಲೆ ಬಹದ್ದೂರ್ ಖಾನ್ ಖಡ್ಗವನ್ನು ಹಿಡಿದು ಕಂಪನಿ ಸೈನ್ಯದ ಮೇಲೆ ಧಾಳಿ ನಡೆಸುತ್ತಾನೆ. ಆದರೆ ಕಂಪನಿ ಸೈನಿಕ ಲ್ಯಾಲಿ ಹಾಗೂ ಸಂಗಡಿಗರು ಬಹದ್ದೂರ್ ಖಾನ್ ಮೇಲೆ ಎರಗುತ್ತಾರೆ. ಬಹದ್ದೂರ್ ಖಾನ್‌ನ ಹಣೆಯ ಮೇಲೆ ವೈರಿಯ ಗುಂಡು ಸೀಳಿ ಹೋಗುತ್ತದೆ. ಇದರಿಂದ ಸ್ಥಳದಲ್ಲಿಯೇ ಬಹದ್ದೂರ್ ಖಾನ್ ಮೃತನಾಗುತ್ತಾನೆ. ಕಿಲ್ಲೇದಾರನು ಅಸುನೀಗಿದ ಸುದ್ದಿ ಹರಡುತ್ತಿದ್ದಂತೆ ಕಂಪನಿ ಸೈನ್ಯ ವಿಜಯೋತ್ಸವವನ್ನು ಆಚರಿಸುತ್ತದೆ. ಕಿಲ್ಲೇದಾರನ ಸಾಹಸ ಹಾಗೂ ಹೋರಾಟಗಳನ್ನು ತೀವ್ರವಾಗಿ ಎದುರಿಸಿದ್ದ ಬ್ರಿಟಿಷರ ಸೈನ್ಯದ ಸೇನಾಧಿಕಾರಿ ಕಾರನ್‌ವಾಲೀಸ್ ಖುದ್ದಾಗಿ ನೋಡಲು ಖಾನ್ ಅಸುನೀಗಿದ ಸ್ಥಳಕ್ಕೆ ಭೇಟಿ ನೀಡುತ್ತಾನೆ. ವೈರಿಗಳನ್ನು ಸದೆಬಡಿಯುತ್ತಲೇ ಗುಂಡಿಗೆ ಬಲಿಯಾದ ಕಿಲ್ಲೇದಾರ ಬಹದ್ದೂರ್ ಖಾನ್‌ನನ್ನು ಕಂಡು ಕಾರನ್‌ವಾಲೀಸ್ ಮಂತ್ರಮುಗ್ಧನಾಗುತ್ತಾನೆ. ಕೈಯಲ್ಲಿ ಖಡ್ಗ ಹಿಡಿದು ಅಸುನೀಗಿದ ಕಿಲ್ಲೇದಾರನನ್ನು ಕಂಡು ಕಾರ್ನ್‌ವಾಲೀಸ್‌ನಿಗೆ ಗೌರವ ಹೊರಹೊಮ್ಮುತ್ತದೆ. ತಕ್ಷಣವೇ ಕಿಲ್ಲೇದಾರನ ವೀರ ಮರಣದ ಸುದ್ದಿಯನ್ನು ಟಿಪ್ಪುಸುಲ್ತಾನನಿಗೆ ತಲುಪಿಸುತ್ತಾನೆ. ಕಂಪನಿ ಸೈನ್ಯ ಪಡೆಯ ಪ್ರತಿ ಸೈನಿಕರು ಕೂಡ ಕುತೂಹಲ ಹಾಗೂ ಗೌರವದಿಂದ ಬಹದ್ದೂರ್ ಖಾನ್‌ನನ್ನು[೨] ನೋಡಲು ಬರುತ್ತಾರೆ (ಅರುಣಿ ೨೦೧೧: ೪೩-೪೪; ವಿಲ್ಕ್ಸ್ ಸಂ.೨: ೧೧೬-೧೩೧).

ಮೂರನೇ ಆಂಗ್ಲೋ-ಮೈಸೂರು ಯುದ್ಧದ ಪ್ರಧಾನ ಧಾಳಿ ಬೆಂಗಳೂರು ಕೋಟೆಯಾಗಿತ್ತು. ಬೆಂಗಳೂರು ಆಕ್ರಮಣದವರೆಗೂ ಈ ಯುದ್ಧ ನಿರ್ಣಾಯಕ

ಸ್ವರೂಪ ಪಡೆದುಕೊಂಡಿರಲಿಲ್ಲ. ಬೆಂಗಳೂರನ್ನು ಬ್ರಿಟಿಷರು ಆಕ್ರಮಿಸುತ್ತಿದ್ದಂತೆ ಕಂಪನಿ ಸೈನಿಕರಲ್ಲಿ ಗೆಲ್ಲುವ ಆತ್ಮಸ್ಥೈರ್ಯ ಮೂಡುತ್ತದೆ. ಬೆಂಗಳೂರು ಯುದ್ಧದ ವೀರನಾದ ಬಹದ್ದೂರ್ ಖಾನನನ್ನು ಕುರಿತು ಅರುಣಿ ಅವರು ದಾಖಲಿಸಿರುವ ಮಾತುಗಳು ಇಲ್ಲಿ ಉಲ್ಲೇಖನೀಯ:

> *ಸಿಂಹಸ್ವಪ್ನದಂತೆ ಕಾಡಿದ ಬಹದ್ದೂರ್ ಖಾನ್ ತನ್ನ ಕೊನೆಯುಸಿರಿರುವವರೆಗೂ ಬೆಂಗಳೂರಿನ ರಕ್ಷಣೆಗೆ ಹೋರಾಡಿದ್ದು ಐತಿಹಾಸಿಕ ಘಟನೆ ಹಾಗೂ ಭಾರತೀಯರೆಲ್ಲರಿಗೂ ಒಂದು ಅಭಿಮಾನದ ವಿಷಯ. ಕೇವಲ ಎಂಟು ಸಾವಿರ ಸೈನಿಕರೊಂದಿಗೆ ಬ್ರಿಟಿಷರ ಅಪಾರ ಸೈನ್ಯದ ವಿರುದ್ಧ ಹೋರಾಡಿ ತನ್ನ ಜೀವವನ್ನು ಬಲಿದಾನ ಮಾಡಿದ್ದಾನೆ. ಬೆಂಗಳೂರು ಬ್ರಿಟಿಷರ ಕೈವಶವಾದರೂ ಕಿಲ್ಲೇದಾರ ಬಹದ್ದೂರ್ ಖಾನ್ ಯುದ್ಧದ ನಾಯಕನಾಗಿ ಹೊರಹೊಮ್ಮುತ್ತಾನೆ (ಅರುಣಿ ೨೦೧೧: ೪೪).*

ಶ್ರೀರಂಗಪಟ್ಟಣ ಒಪ್ಪಂದ ಏರ್ಪಡುವವರೆಗೆ ಬೆಂಗಳೂರನ್ನು ಕಂಪನಿ ಅಧಿಕಾರಿ ಕರ್ನಲ್ ರೀಡ್ ಒಂದು ವರ್ಷ ಎರಡು ತಿಂಗಳುಗಳ ಕಾಲ ಆಳಿದನು. ಬೆಂಗಳೂರು ಕೋಟೆಯು ಟಿಪ್ಪುವಿನ ನಿಯಂತ್ರಣಕ್ಕೆ ಬಂದ ನಂತರ ಬೆಂಗಳೂರು ಕೋಟೆಯು ಮತ್ತೆ ಶತ್ರುಗಳ ಕೈವಶವಾಗಿ ಅಪಾಯ ಎದುರಾಗಬಾರದೆಂದು ಅಲ್ಲಿದ್ದ ಅಂಡಾಕಾರದ ಕೋಟೆಯನ್ನು ನಾಶಪಡಿಸಿದನೆಂದು ಹೇಳಲಾಗುತ್ತದೆ. ಪ್ರಸ್ತುತ ಇರುವ ಕೋಟೆಯನ್ನು ಟಿಪ್ಪುವು ಮರಣ ಹೊಂದಿದ ನಂತರ ದಿವಾನ್ ಪೂರ್ಣಯ್ಯ ಕಟ್ಟಿಸಿದನೆಂದು ಸುರೇಶ್‌ಮೂನ ಅವರು ದಾಖಲಿಸಿದ್ದಾರೆ (ಸುರೇಶ್‌ಮೂನ ೨೦೦೯: ೧೦೫) ಆದರೆ ಈ ಬಗ್ಗೆ ಖಚಿತ ಆಧಾರಗಳ ಕೊರತೆ ಇದೆ. ಏಕೆಂದರೆ ಇದೇ ಕೋಟೆಯ ಮೇಲೆ ಬ್ರಿಟಿಷರು ಮಾರ್ಚ್ ೨೧, ೧೭೯೧ ರಂದು ಕೋಟೆಯನ್ನು ಮುತ್ತಿದ್ದ ಸ್ಥಳದಲ್ಲಿ ಹಾಕಿಸಿರುವ ಶಾಸನವಿರುವುದನ್ನು ಗಮನಿಸಿದಾಗ ಟಿಪ್ಪುವು ಪೂರ್ಣಕೋಟೆಯನ್ನು ನಾಶಪಡಿಸಿರಲಾರನು. ಯುದ್ಧದಲ್ಲಿ ಶಿಥಿಲಗೊಂಡಿದ್ದನ್ನು ಅಷ್ಟಕ್ಕೆ ಬಿಟ್ಟಿರಬೇಕು. ಅದನ್ನು ಪೂರ್ಣಯ್ಯ ಜೀರ್ಣೋದ್ಧಾರ ಮಾಡಿರಬಹುದು.

ಬೆಂಗಳೂರು ಟಿಪ್ಪುವಿನ ಎರಡನೇ ಬಹು ಮಹತ್ವದ ನಗರ. ಅದು ಕೈತಪ್ಪಿ ಹೋದದ್ದು ಅವನಿಗೆ ಬಹುದೊಡ್ಡ ಪೆಟ್ಟಾಯಿತು. ಬೆಂಗಳೂರನ್ನು ಹಿಡಿದ ಮೇಲೆ ಕಾರನ್‌ವಾಲೀಸನು ಉತ್ತರಕ್ಕೆ ನಿಜಾಮನು ಕೂಡಿಕೊಳ್ಳಲು ಹೊರಟನು. ಟಿಪ್ಪುವು ನಿಜಾಮನ ಸೈನ್ಯವನ್ನು ಭೇದಿಸಲು ನುಗ್ಗಿದನು. ಒಂದು ವಾರ ಒಂದೇ ಸಮನೆ ನಡೆದರೂ ಕಾರನ್‌ವಾಲೀಸನು ನಿಜಾಮನನ್ನು ಸಂಧಿಸಲು ಸಾಧ್ಯವಾಗಲಿಲ್ಲ. ಬೇರೆ ಬೇರೆ ದಿಕ್ಕುಗಳಲ್ಲಿ ಚೆದರಿದ್ದ ಟಿಪ್ಪುವಿನ ಸೇನೆಯು ಅವರನ್ನು ದಾರಿತಪ್ಪಿಸುತ್ತಿದ್ದಿತು. ಕೊನೆಗೆ ಏಪ್ರಿಲ್ ೧೩ ರಂದು ನಿಜಾಮನ ಸೈನ್ಯವು ಇಂಗ್ಲಿಷರನ್ನು ಕೂಡಿಕೊಂಡಿತು.

ಎರಡೂ ಸೇನೆಗಳು ಒಟ್ಟಾಗಿ ಸಾಕಷ್ಟು ಆಹಾರ ಸಾಮಗ್ರಿಗಳ ಪೂರೈಕೆಯೊಂದಿಗೆ ಬೆಂಗಳೂರಿಗೆ ಬಂದು ಸೇರಿದವು. ಅಲ್ಲಿಂದ ಶ್ರೀರಂಗಪಟ್ಟಣಕ್ಕೆ ಹೋಗುವುದು ಅವರ ಉದ್ದೇಶವಾಗಿತ್ತು.

ಇಂಗ್ಲಿಷರು ಕೊಯಮತ್ತೂರು, ಬಾರಾಮಹಲ್ ಮತ್ತು ಬೆಂಗಳೂರುಗಳಲ್ಲಿ ಯುದ್ಧನಿರತರಾಗಿದ್ದಾಗ ನಿಜಾಮ ಮತ್ತು ಮರಾಠರ ಸೈನ್ಯಗಳು ಟಿಪ್ಪುವಿನ ಸಾಮ್ರಾಜ್ಯದ ಬೇರೆ ಭಾಗಗಳಲ್ಲಿ ಕಾರ್ಯನಿರತವಾಗಿದ್ದುವು. ನಿಜಾಮನು ಏನನ್ನೂ ಸಾಧಿಸಿರಲಿಲ್ಲ. ಆದರೆ ಮರಾಠರು ಪುಣೆಯಲ್ಲಿ ಟಿಪ್ಪುವಿನ ವಕೀಲರಿಂದ ಹಣವನ್ನು ಸುಲಿದುಕೊಳ್ಳುವುದರಲ್ಲಿ ತೊಡಗಿದ್ದರು.

**ಕಾರನ್‌ವಾಲೀಸನು** ಮತ್ತೆ ಮತ್ತೆ ಆಕ್ಷೇಪಿಸುತ್ತಿದ್ದುದರಿಂದಲೂ ಬೆಂಗಳೂರಿನ ಪತನದಿಂದಲೂ ಕೊನೆಗೊಮ್ಮೆ ಮರಾಠರು ಚುರುಕುಗೊಂಡರು. ಆಗಲೂ ಸುಮ್ಮನಿದ್ದರೆ ತಾವು ಯುದ್ಧ ಪ್ರವೇಶ ಮಾಡುವುದಕ್ಕೆ ಮೊದಲೇ ಇಂಗ್ಲಿಷರು ಮುಗಿಸಿಬಿಟ್ಟಿರುತ್ತಾರೆ ಎಂಬ ವಿಚಾರವು ಅವರಿಗೆ ಬಂದಿತು. ೧೭೯೧ ಮಾರ್ಚ್ ತಿಂಗಳಲ್ಲಿ ಹರಿಪಂತನು ನಿಜಾಮನನ್ನು ಪಂಗಳದಲ್ಲಿ ಭೇಟಿ ಮಾಡಿದನು. ಟಿಪ್ಪುವನ್ನು ಸೋಲಿಸಬೇಕೇ ಹೊರತು ಅವನನ್ನು ನಾಶಮಾಡಬಾರದು. ಇಂಗ್ಲಿಷರು ಅಸಾಧ್ಯ ಬಲಿಷ್ಠರಾಗಿ ಬಿಡಲು ಅವಕಾಶ ಕಲ್ಪಿಸಬಾರದು ಎಂದು ಅವರು ಚರ್ಚಿಸಿದರು. ಇಂಗ್ಲಿಷರ ದುರಾಸೆಯ ಹಂಚಿಕೆಗಳಿಗೆ ನಿಜವಾದ ತಡೆಗೋಡೆ ಟಿಪ್ಪುವೇ ಎಂಬುದನ್ನು ಅವರು ಬಲ್ಲವರಾಗಿದ್ದರು.

ಮರಾಠರೂ ಮಂದಗತಿಯಲ್ಲೇ ಕಾರ್ಯೋನ್ಮುಖರಾದರು. ೧೭೯೦ ಮಾರ್ಚ್ ಕೊನೆಯ ವೇಳೆಗೆ ಪರಶುರಾಮ ಭಾವು ಸೇನಾನಾಯಕತ್ವವನ್ನು ವಹಿಸಿಕೊಂಡನು. ಯುದ್ಧಕ್ಕೆ ಹೊಸದಾಗಿ ಸೈನಿಕರನ್ನು ಕೂಡಿಸಿಕೊಳ್ಳಲು ಅವನಿಗೆ ಹಣವನ್ನು ಕೊಡಲಾಯಿತು. ೧೭೯೦ ಜೂನ್ ವೇಳೆಗೆ ಅವನು ಸಂಗ್ರಹಿಸಿದ್ದ ಸೈನಿಕರ ಸಂಖ್ಯೆ ನಾಲ್ಕರಿಂದ ಐದು ಸಾವಿರ ಅಷ್ಟೆ. ಮೊದಲೇ ಮಾತಾಗಿದ್ದಂತೆ ಕ್ಯಾಪ್ಟನ್ ಲಿಟ್ಲ್‌ನ ಕೈಕೆಳಗಿದ್ದ ಕಂಪನಿ ಸೇನಾ ತುಕಡಿಯು ಕುಮಟಾದಲ್ಲಿ ಭಾವುವನ್ನು ಸೇರಿಕೊಂಡಿತು. ಹುಬ್ಬಳ್ಳಿ, ಮಿಶ್ರೀಕೋಟೆ, ದೊಡವಾಡಗಳನ್ನು ಸೆಪ್ಟೆಂಬರ್ ವೇಳೆಗೆ ಹಿಡಿದು ಫೆಬ್ರವರಿ ಹೊತ್ತಿಗೆ ಗಜೇಂದ್ರಗಡ, ಸವಣೂರು ಮತ್ತು ಲಕ್ಷ್ಮೀಶ್ವರಗಳನ್ನು ವಶಪಡಿಸಿಕೊಂಡನು.

ಭಾವು ಬಲವಾದ **ಧಾರವಾಡ ಕೋಟೆ**ಗೆ ಮುತ್ತಿಗೆ ಹಾಕಿದನು. ಆ ಕೋಟೆ ಬದ್ರುಜ್-ಜಮಾನ್ ಖಾನ್‌ನ ವಶದಲ್ಲಿತ್ತು. ಆತ ಬಹು ಧೈರ್ಯಶಾಲಿಯಾದ ಅಧಿಕಾರಿ. ಮುತ್ತಿಗೆ ಬಹಳ ದೀರ್ಘಕಾಲ ಮುಂದುವರಿಯಿತು. ಮರಾಠರು ನಗರವನ್ನು ಪ್ರವೇಶಿಸಿದೊಡನೆಯೇ ಲೂಟಿಗೆ ತೊಡಗಿದರು. ಬದ್ರುಜ್ ಜಮಾನ್ ಈ ಕೋಲಾಹಲವನ್ನು

ಉಪಯೋಗಿಸಿಕೊಂಡು ಮರಾಠರ ಮೇಲೆ ಹೊರಧಾಳಿ ಮಾಡಿ ಅವರನ್ನು ನಗರದಿಂದ ಹೊರಗಟ್ಟಿದನು. ಸುಮಾರು ೫೦೦ ಜನರು ಹತರಾದರು. ಆದರೆ ಡಿಸೆಂಬರ್ ೧೮ ರಂದು ಮರಾಠರು ಮತ್ತೆ ನಗರವನ್ನು ಹಿಡಿದರು.

ನಗರವನ್ನು ವಶಪಡಿಸಿಕೊಂಡ ಮೇಲೆ ಕೋಟೆಗೆ ಲಗ್ಗೆ ಹಾಕಲಾಯಿತು. ಅದೆಷ್ಟು ಅವ್ಯವಸ್ಥಿತವಾಗಿ ಮಾಡಿದರೆಂದರೆ, ಆ ಸ್ಥಳದಲ್ಲಿ ಹಾಜರಿದ್ದ ಲೆಫ್ಟಿನೆಂಟ್ ಮೂರ್, ಈ ರೀತಿಯಲ್ಲಿ ಇಪ್ಪತ್ತು ವರ್ಷ ಕಳೆದರೂ ಮರಾಠರು ಕೋಟೆಯನ್ನು ಗೆಲ್ಲಲು ಸಾಧ್ಯವಿಲ್ಲ ಎಂದು ಭಾವಿಸಿದನು. ಮರಾಠರು ಈ ದುಸ್ಸಾಹಸಕ್ಕೆ ಕೈಹಾಕದೆ ಸುಮ್ಮನಿದ್ದರು. ಕೋಟೆಯನ್ನು ವಶಪಡಿಸಿಕೊಳ್ಳಲಾಗದೆ ಹೋದುದರಿಂದ ಎದೆಗುಂದಿ ಕರ್ನಲ್ ಫ್ರೆಡರಿಕ್ ೧೭೯೧ ಮಾರ್ಚ್ ೧೩ ರಂದು ಮರಣ ಹೊಂದಿದನು. ಕ್ಯಾಪ್ಟನ್ ಲಿಟ್ಲ್ ನಾಯಕತ್ವವನ್ನು ವಹಿಸಿಕೊಂಡನು. ಬದ್ರುಜ್-ಜಮಾನ್ ಹೀಗೆ ಮರಾಠರನ್ನು ಸುಮಾರು ಆರುವರೆ ತಿಂಗಳ ಕಾಲ ಧಾರವಾಡ ವಲಯದಲ್ಲಿ ಹಿಡಿದಿಟ್ಟಿದ್ದನು. ಟಿಪ್ಪುವಿನ ಸಂಸ್ಥಾನದ ಇತರ ಭಾಗಗಳಿಗೆ ಅವರಿಂದ ಯಾವುದೇ ಬಗೆಯ ಹಾನಿಯಾಗುವುದು ಇದರಿಂದ ನಿವಾರಣೆಯಾಗಿತ್ತು.

ಕಾರನ್‌ವಾಲೀಸ್‌ನು ಈ ಯುದ್ಧವನ್ನು ಸಾಧ್ಯವಾದಷ್ಟು ಬೇಗನೆ ಮುಗಿಸಿಬಿಡಬೇಕೆಂದು ಕಾತರನಾಗಿದ್ದನು. ಟಿಪ್ಪುವಿಗೆ ಫ್ರೆಂಚರ ನೆರವು ದೊರಕಿಬಿಡಬಹುದು ಇಲ್ಲವೆ, ಒಕ್ಕೂಟದ ಮಿತ್ರರು ಮನಸ್ಸು ಬದಲಾಯಿಸಿಬಿಡಬಹುದು ಎಂದು ಅವನಿಗೆ ಭೀತಿಯುಂಟಾಗಿತ್ತು. ಅವನು ೧೭೯೧ ಮೇ ೪ ರಂದು ಬೆಂಗಳೂರು ಬಿಟ್ಟು ಹೊರಟನು. ದಿನಸಿ, ಮೇವು, ಇತರ ವಸ್ತುಗಳ ಪೂರೈಕೆ, ಸಾರಿಗೆ ಇವೆಲ್ಲವೂ ಇಂಗ್ಲಿಷರಿಗೆ ಬಹಳ ತೊಂದರೆಯನ್ನುಂಟು ಮಾಡಿದವು. ಸೈನ್ಯದ ಚಲನೆಯನ್ನು ತಡೆಯೊಡ್ಡಲು ಮೈಸೂರಿನ ಕುದುರೆಗಳು ಸದಾ ಹಾಜರಿರುತ್ತಿದ್ದುವು. ಇಷ್ಟೆಲ್ಲ ಅಡಚಣೆಗಳಿದ್ದರೂ ಮೇ ೧೦ ರಂದು ಮಳವಳ್ಳಿ ಕೋಟೆಯನ್ನು ಹಿಡಿಯಲಾಯಿತು. ೧೭೯೧ ಮೇ ೧೩ ರಂದು ಶ್ರೀರಂಗಪಟ್ಟಣಕ್ಕೆ ಕೇವಲ ಒಂಬತ್ತು ಮೈಲು ದೂರದಲ್ಲಿದ್ದ ಅರಕೆರೆ ಎಂಬಲ್ಲಿಗೆ ಸೇನೆಯು ಬಂದು ನಿಂತಿತು. ಆಕ್ರಮಣಕಾರರಿಗೂ ಟಿಪ್ಪುವಿಗೂ ನಡುವೆ ಕಾವೇರಿ ಹರಿಯುತ್ತಿದ್ದಳು. ನದಿಯಲ್ಲಿ ಪ್ರವಾಹ ಬಂದಿದ್ದುದರಿಂದ ಕಾರನ್‌ವಾಲೀಸ್‌ನು ಕನ್ನಂಬಾಡಿಗೆ ಹೋದನು.

ನಿಜಾಮನ ಸೈನ್ಯವೂ ಇಂಗ್ಲಿಷರನ್ನು ಸೇರಿಕೊಂಡಿತು. ಆಕ್ರಮಣಕಾರರ ಇಡೀ ಬೃಹತ್ ಸೈನ್ಯವು ಟಿಪ್ಪುವಿನ ಒಂದು ತುಕಡಿಯ ಮೇಲೆ ಎರಗಿತು. ಶತ್ರುವಿನ ಆಘಾತದಿಂದಾಗಿ ಮೈಸೂರು ಸೈನ್ಯವು ರಾಜಧಾನಿಯ ಕಡೆಗೆ ಹಿಮ್ಮೆಟ್ಟಿತು. ಇಂಗ್ಲಿಷರು ಕರೀಘಟ್ಟ ಬೆಟ್ಟವನ್ನು ವಶಪಡಿಸಿಕೊಳ್ಳಲು ಬಯಸಿದ್ದರು. ಆದರೆ ದ್ವೀಪದ ಬತ್ತೇರಿಗಳು ಸಯ್ಯದ್ ಹಮೀದನ ನಾಯಕತ್ವದಲ್ಲಿ ಹೇಗೆ ಗುಂಡಿನ ಮಳೆಗರೆದುವೆಂದರೆ, ಇಂಗ್ಲಿಷರು

ಹಿಂದಿರುಗಿ ಓಡಬೇಕಾಯಿತು. ಇಂಗ್ಲಿಷರ ಹಂಚಿಕೆಯನ್ನು ಮುರಿದು ಅವರನ್ನು ಕಾಡಿ, ಅಂದು ಟಿಪ್ಪುವು ವಿಜಯ ಸಾಧಿಸಿದನು. ಮೇ ೧೮ ರಂದು ಕಾರನ್‌ವಾಲೀಸ್‌ನು ಕನ್ನಂಬಾಡಿಗೆ ಹಿಂದಿರುಗಿದನು. ಅಲ್ಲಿಂದ **ಶ್ರೀರಂಗಪಟ್ಟಣ**ವನ್ನು ಪ್ರವೇಶಿಸಲು ಅವನು ಉದ್ದೇಶಿಸಿದ್ದನು. ಆದರೆ ಅವನ ಸೈನ್ಯವು ಸರಕಿನ ಅಭಾವ, ಮೈಸೂರು ಸೈನ್ಯದಿಂದ ಕಿರುಕುಳಗಳಿಂದ ಎಷ್ಟು ಪೀಡೆಗೊಳಗಾಯಿತೆಂದರೆ ಕಾರ್ನ್‌ವಾಲಿಸ್ ತನ್ನ ಸೈನ್ಯವು ನಾಶವಾಗುವುದನ್ನು ತಪ್ಪಿಸಿಕೊಳ್ಳಲಿಕ್ಕಾಗಿ ಹಿನ್ನಡೆಯಲು ನಿರ್ಧರಿಸಿದನು. ಕಾರನ್‌ವಾಲೀಸನು ಮೇ ೨೦ನೆಯ ತಾರೀಖು ಶ್ರೀರಂಗಪಟ್ಟಣದಿಂದ "ಅತೀವ ಹೀನಾಯದ, ಆಹಾರ ವಿಷಣ್ಣತೆಯ" ಮರು ಯಾತ್ರೆಯನ್ನು ಪ್ರಾರಂಭಿಸಿದನು. ಮಲಬಾರಿಗೆ ಹಿಂದಕ್ಕೆ ಹೋಗುವಂತೆ ಅಬರ್‌ಕ್ರಾಂಬಿಗೆ ಆದೇಶಿಸಲಾಯಿತು.

ಕಾರನ್‌ವಾಲೀಸನು ಬೆಂಗಳೂರಿನ ಕಡೆಗೆ ಹಿಮ್ಮೆಟ್ಟುತ್ತಿದ್ದಾಗ ದಾರಿಯಲ್ಲಿ ಹರಿಪಂತ ಮತ್ತು ಭಾವು ಇವರ ನೇತೃತ್ವದ ಮರಾಠಾ ಸೇನೆಯು ಸಂಧಿಸಿತು. ಮರಾಠರು ಬಂದುದರಿಂದ ಕಂಪನಿ ಸೈನ್ಯವು ಬದುಕಿಕೊಂಡಿತು. ಇಲ್ಲವಾಗಿದ್ದರೆ ಆಹಾರಾಭಾವದಿಂದ ಅದು ನಾಶವಾಗಿ ಹೋಗುತ್ತಿದ್ದಿತು. ಕಾರನ್‌ವಾಲೀಸನನ್ನು ಹಿಂದಕ್ಕೆ ಹೋಗಬಾರದೆಂದೂ, ಮತ್ತೆ ಮುನ್ನುಗ್ಗಿ ಟಿಪ್ಪುವಿನ ರಾಜಧಾನಿಯನ್ನು ಆಕ್ರಮಿಸಬೇಕೆಂದೂ ಹರಿಪಂತನು ಒತ್ತಾಯಪಡಿಸಿದನು. ಅದಕ್ಕೆ ಕಾರ್ನ್‌ವಾಲಿಸ್ ಒಪ್ಪಲಿಲ್ಲ. ಆದರೆ ಈ ದಂಡಯಾತ್ರೆಯು ಕಾರನ್‌ವಾಲೀಸನ ಉತ್ಸಾಹವನ್ನು ಕುಗ್ಗಿಸಿತು. ಮರಾಠರೂ ತಾವು ಶಿಬಿರ ಹೂಡಿದ್ದ ಮೇಲುಕೋಟೆಯಿಂದ ೧೭೯೧ ಜೂನ್ ೬ ರಂದು ಬೆಂಗಳೂರಿನ ಕಡೆಗೆ ಹಿಮ್ಮೆಟ್ಟಿದ್ದರು. ದಾರಿಯಲ್ಲಿ **ಹುಲಿಯೂರುದುರ್ಗ**ವನ್ನು ಆಕ್ರಮಿಸಿದರು. ಅಲ್ಲಿ ಅವರಿಗೆ ಸಮೃದ್ಧವಾಗಿ ದವಸ ಧಾನ್ಯಗಳು ದೊರಕಿದವು. ಮಿತ್ರಸೇನೆಯು ೧೭೯೧ ಜುಲೈ ೧೧ ರಂದು ಬೆಂಗಳೂರಿನ ಸಮೀಪಕ್ಕೆ ಬಂದಿತು. ಭಾವುವಿನ ಕೈಕೆಳಗೆ ಮರಾಠಾ ಸೇನೆಯು ಶಿರಾದತ್ತ ನಡೆಯಿತು. ಹರಿಪಂತನು ಕಾರನ್‌ವಾಲೀಸ್‌ನೊಂದಿಗೆ ಉಳಿದನು.

ಹೀಗೆ ಯುದ್ಧದ ಎರಡನೆಯ ಹಂತದಲ್ಲಿಯೂ ಟಿಪ್ಪುವಿಗಿಂತ ಹೆಚ್ಚಾಗಿ ಇಂಗ್ಲಿಷರು ಹಾನಿಯನ್ನು ಅನುಭವಿಸಿದರು. ಇಂಗ್ಲಿಷರ ಕಷ್ಟಗಳು ವರ್ಣನೆಗೆ ಮೀರಿದವಾಗಿದ್ದವು. ಅವುಗಳಿಗೆ ಕಾರಣ ಯುದ್ಧರಂಗದಲ್ಲಿ ಅನುಭವಿಸಿದ ಪರಾಜಯವಲ್ಲ ಬದಲು, ಸೇನಾ ತುಕಡಿಗಳನ್ನು ಬೀಡು ಬಿಡಿಸುವ ಮತ್ತು ಸ್ಥಳಾಂತರಿಸುವ ಕಲೆ, ಟಿಪ್ಪುವಿನ ಜಾಗರೂಕತೆ, ದಿನಸಿಯ ಪೂರೈಕೆ ಸ್ಥಗಿತಗೊಂಡದ್ದು, ಮಿಂಚಿನ ಧಾಳಿಗಳು, ಆಹಾರ ಸಾಮಗ್ರಿಯ ಕೊರತೆ, ಪ್ರತಿಕೂಲ ಹವೆ, ಸೈನಿಕರ ಅನಾರೋಗ್ಯ, ಸಾರಿಗೆಯ ಅಭಾವ, ಅಸಮರ್ಪಕವಾದ ಬೇಹುಗಾರಿಕೆ ವ್ಯವಸ್ಥೆ ಇವುಗಳಿಂದ ಇಂಗ್ಲಿಷರು ತೊಂದರೆಗೀಡಾಗಬೇಕಾಯಿತು. ಮಿತ್ರರಾಜರಿಂದ ಇಂಗ್ಲಿಷರಿಗೆ ಯಾವ ಪ್ರಯೋಜನವೂ ಆಗಲಿಲ್ಲ. ಏಕೆಂದರೆ ಮರಾಠರೂ,

ನಿಜಾಮನೂ ಸಣ್ಣಪುಟ್ಟ ಕೋಟೆಗಳನ್ನು ಗೆಲ್ಲುವುದರಲ್ಲಿ, ಗೆದ್ದ ಕಡೆ ಲೂಟಿ ಮಾಡುವುದರಲ್ಲಿ ತಮ್ಮ ಸಮಯ, ಶಕ್ತಿ ಎಲ್ಲವನ್ನು ಪೋಲು ಮಾಡುತ್ತಿದ್ದರು. ಟಿಪ್ಪುವನ್ನು ಸೋಲಿಸಬೇಕೆಂಬ ದೃಢವಾದ ನಿರ್ಧಾರ ಅವರಿಗಿರಲಿಲ್ಲ.

ಯುದ್ಧವು ಪ್ರತಿಕೂಲಕರವಾಗಿ ಪರಿಣಮಿಸಿದುದರಿಂದ ಕಾರನ್‌ವಾಲೀಸ್‌ನು ಈಗ ಸಂಧಿ ಪ್ರಸ್ತಾಪವನ್ನು ಒಪ್ಪಬಹುದು ಎಂಬ ಭಾವನೆಯಿಂದ ಟಿಪ್ಪುವು ಮಾತುಕತೆಗಳನ್ನು ಪ್ರಾರಂಭಿಸಿದನು. ಕಾರನ್‌ವಾಲೀಸ್‌ನು ಸಂಧಿಯ ಷರತ್ತುಗಳನ್ನು ಬರಹದಲ್ಲಿ ಕಳುಹಿಸಬೇಕು ಎಂದು ಹಿಂದೆ ಹಾಕಿದ್ದ ನಿಯಮವನ್ನು ಸಡಿಲಗೊಳಿಸಿದನು. ಟಿಪ್ಪುವಿನ ಪ್ರತಿನಿಧಿಯನ್ನು ಬೆಂಗಳೂರಿನಲ್ಲಿ ಬರಮಾಡಿಕೊಳ್ಳುವುದಾಗಿಯೂ, ಅಲ್ಲಿ ತನ್ನ ಮಿತ್ರರೊಂದಿಗೆ ಮಾತನಾಡಿ ಅವರ ಸಲಹೆ ಪಡೆಯಲು ಕೂಡ ಸಾಧ್ಯವಾಗುವುದೆಂದೂ ಹೇಳಿಕಳಿಸಿದನು. ೧೭೯೧ ಮೇ ೨೭ನೆಯ ತಾರೀಖು ಟಿಪ್ಪುವು ಶಾಂತಿಧ್ವಜದೊಂದಿಗೆ ಹಣ್ಣುಗಳು ತುಂಬಿದ ಬುಟ್ಟಿಗಳನ್ನು ಉಡುಗೊರೆಯಾಗಿ ಕಳುಹಿಸಿದನು. ಆದರೆ ಉಡುಗೊರೆಯನ್ನು ತೆಗೆದುಕೊಳ್ಳಲು ನಿರಾಕರಿಸಿದ ಕಾರನ್‌ವಾಲೀಸ್ ಎಲ್ಲಕ್ಕಿಂತ ಮೊದಲು ಟಿಪ್ಪುವು ಯುದ್ಧದ ಸೆರೆಯಾಳುಗಳನ್ನು ಬಿಡುಗಡೆ ಮಾಡಿ ಆಮೇಲೆ ಕರಾರಿಗೆ ಒಪ್ಪಿಕೊಳ್ಳಬೇಕೆಂದು ಉತ್ತರಕೊಟ್ಟನು. ಮರಾಠರು ಸೇನಾ ಸಮೇತ ತನ್ನ ಜೊತೆ ಸೇರಿದುದರಿಂದ ಈಗ ಕಾರನ್‌ವಾಲೀಸ್‌ನ ಒಪ್ಪಂದದ ನಿಲುವಿನಲ್ಲಿ ಬದಲಾವಣೆಯಾಗಿತ್ತು.

ಟಿಪ್ಪುವಿನ ಶಾಂತಿ ಪ್ರಸ್ತಾವದ ಮುಂದಿನ ಹಂತ ಹರಿಪಂತನೊಂದಿಗೆ ನಡೆಯಿತು. ಅವನು ಮಧ್ಯಸ್ಥಿಕೆಗೆ ಪ್ರಯತ್ನಿಸಿದನು. ಒಲ್ಲದ ಹೇಳಿಕೆಯನ್ನು ಒತ್ತಾಯ ಮಾಡಬಾರದೆಂದು ಕಾರನ್‌ವಾಲೀಸನನ್ನು ಅವನು ಒಪ್ಪಿಸಿದನು. ಟಿಪ್ಪು ನಿಜವಾಗಿ ಸಂಧಿ ಪ್ರಸ್ತಾಪದಲ್ಲಿ ಪ್ರಾಮಾಣಿಕನಾಗಿದ್ದಾನೆಯೆ ಎಂಬುದನ್ನು ನೋಡಬೇಕು ಎಂದು ತಿಳಿಯ ಹೇಳಿದನು. ಟಿಪ್ಪುವಿನ ಪ್ರತಿನಿಧಿಗಳನ್ನು ಬರಮಾಡಿಕೊಳ್ಳುವುದರಲ್ಲಿ ಯಾವ ದೋಷವೂ ಹರಿಪಂತನಿಗೆ ಕಾಣಿಸಲಿಲ್ಲ. ಟಿಪ್ಪುವಿನ ಸಲಹೆಗಳು ಸ್ವೀಕಾರಾರ್ಹವಾಗಿದ್ದರೆ ಒಂದು ಸಭೆಯನ್ನು ಏರ್ಪಡಿಸಬಹುದು ಎಂದವನು ಭಾವಿಸಿದನು.

ಕಾರನ್‌ವಾಲೀಸನಿಗೆ ಮರಾಠರ ವರ್ತನೆಯಲ್ಲಿ ಸಂಶಯ ಕಾಣಿಸಿಕೊಂಡಿತು. "ವಕೀಲರ ವಿಚಾರದಲ್ಲಿ ನಾನು ಇದುವರೆಗೆ ಹರಿಪಂತನ ಹಂಚಿಕೆಗಳನ್ನು ವಿಫಲಗೊಳಿಸಿದ್ದೇನೆ. ಅವನು ಆ ವಕೀಲರಿಗೆ ರಕ್ಷಣೆ ಕೊಡುತ್ತಿರುವಂತೆ ತೋರುತ್ತಿದೆ. ಅಪ್ಪಾಜಿರಾಮನು ಬರೆದ ಅರಕ್ಷಿತ ಪತ್ರವೊಂದರಿಂದ ಅವರನ್ನು ಹರಿಪಂತನು ನನಗೆ ಪರಿಚಯ ಮಾಡಿಕೊಡುವ ಭರವಸೆ ನೀಡಿರುವಂತೆ ತೋರುತ್ತದೆ." ಹರಿಪಂತನೂ ಅಪ್ಪಾಜಿರಾಮನೂ ಖಾಸಗಿಯಾಗಿ ಮಾತುಕತೆಗಳನ್ನು ನಡೆಸಿದರು. ತನಗೆ ವಕೀಲನಾಗಿದ್ದು

ಬಹಳ ಹಿಂದಿನ ಪರಿಚಯವಾದುದರಿಂದ ಸಂಭಾಷಿಸಿದೆವು ಎಂದು ಮರಾಠಾ ದಳಪತಿಯು ತನ್ನ ವರ್ತನೆಯನ್ನು ಸಮರ್ಥಿಸಿಕೊಂಡನು. ಕಾರನ್‌ವಾಲೀಸ್‌ನಿಗೆ ಅದು ಸಮ್ಮತವಾಗಲಿಲ್ಲ.

ಒಕ್ಕೂಟವನ್ನು ಒಡೆಯಲು ಟಿಪ್ಪು ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾದುವು. ಏಕೆಂದರೆ ಈ ಯುದ್ಧದಲ್ಲಿ ಮರಾಠರಿಗಾಗಲಿ ನಿಜಾಮನಿಗಾಗಲಿ ಪರಿಣಾಮಕಾರಿಯಾಗಿ ಮಾತನಾಡುವ ತಮ್ಮ ಅಭಿಪ್ರಾಯವನ್ನು ಒತ್ತಾಯಿಸುವ ಅವಕಾಶವಿರಲಿಲ್ಲ. ಅದು ಮುಖ್ಯವಾಗಿ ಟಿಪ್ಪು ಮತ್ತು ಇಂಗ್ಲಿಷರ ನಡುವೆ ನಡೆದ ಯುದ್ಧ. ಟಿಪ್ಪುವು ಧಾರಾಳವಾಗಿ ಹಣ ಕೊಡುವುದರ ಮೂಲಕ ಒಕ್ಕೂಟವನ್ನು ಒಡೆಯಲು ಅಪೇಕ್ಷಿಸಿದನು. ಆದರೆ ಮರಾಠರಿಗೆ ಕಳೆದುಹೋಗಿದ್ದ ಭೂಪ್ರದೇಶಗಳನ್ನು ಮರಳಿ ಗಳಿಸುವಲ್ಲಿ ಹೆಚ್ಚಿನ ಆಸಕ್ತಿಯಿದ್ದಿತು. ಕೃಷ್ಣಾನದೀ ಪ್ರಾಂತದ ಕೆಲವು ಕೋಟೆಗಳನ್ನು ಕೊಡುವುದಾಗಿ ಅವನು ಹೇಳಿದ್ದಿದ್ದರೆ, ಟಿಪ್ಪು ತನ್ನ ಪ್ರಯತ್ನದಲ್ಲಿ ಯಶಸ್ವಿಯಾಗುತ್ತಿದ್ದನೇನೋ. ಹಾಗಾಗಿ ಟಿಪ್ಪುವನ್ನು ಸೋಲಿಸಲು ಇಂಗ್ಲಿಷರಿಗೆ ಒಂದು ಅವಕಾಶ ಕೊಡಲು ಅವನು ಬಹು ಉತ್ಸುಕನಾಗಿದ್ದನು.

ಮಿತ್ರರಾಜರ ಸರಕು ಪೂರೈಕೆ ವ್ಯವಸ್ಥೆಯನ್ನು ಉತ್ತಮಪಡಿಸಿದ ಹೊರತು ಟಿಪ್ಪುವನ್ನು ಸೋಲಿಸಲು ಸಾಧ್ಯವಿಲ್ಲ ಎಂದು ಕಾರ್ನ್‌ವಾಲಿಸ್ ಮನಗಂಡನು. ಅದು ಈಡೇರಬೇಕಾದರೆ ಸೈನ್ಯಕ್ಕೆ ಸಾಮಗ್ರಿಯು ಪೂರೈಕೆಯಾಗುವ ಮಾರ್ಗಗಳೆಲ್ಲವೂ ಅವರ ಹತೋಟಿಯಲ್ಲಿರಬೇಕಾಗಿತ್ತು. ಹೊಸೂರು ಒಂದು ಮುಖ್ಯವಾದ ಕೋಟೆ, ಬೆಂಗಳೂರಿಗೂ ಕಾರ್ನಾಟಿಕ ಕಣಿವೆಗೂ ನಡುವೆ ಇದ್ದ ಆಯಕಟ್ಟಿನ ಸ್ಥಳ. ಇತರ ಕೆಲವು ಕೋಟೆಗಳೊಂದಿಗೆ ಅದನ್ನೂ ೧೭೯೧ ಜುಲೈ ೧೫ ರಂದು ಇಂಗ್ಲಿಷರು ವಶಪಡಿಸಿಕೊಂಡರು.

ಈ ಮಧ್ಯೆ ಕಾರನ್‌ವಾಲೀಸ್‌ನು ಬೆಂಗಳೂರಿಗೂ ಶ್ರೀರಂಗಪಟ್ಟಣಕ್ಕೂ ನಡುವೆ ಇದ್ದ ಎಲ್ಲ ಕೋಟೆಗಳನ್ನು ಗೆದ್ದು ಪೂರೈಕೆಯ ಮಾರ್ಗವು ನಿಷ್ಕಂಟಕವಾಗುವಂತೆ ಮಾಡಲು ಪ್ರಯತ್ನಿಸಿದನು. ಸಾಮಗ್ರಿಯ ಅಭಾವದಿಂದಾಗಿ ಮತ್ತೊಮ್ಮೆ ಹಿಮ್ಮೆಟ್ಟುವ ಸ್ಥಿತಿ ಬರಲಾರದೆಂದು ಅವನು ಸಿದ್ಧತೆ ಮಾಡಿಕೊಳ್ಳುತ್ತಿದ್ದನು. ಸ್ಟುವರ್ಟನಿಗೆ ಬಹಳ ಬಲಿಷ್ಠವಾದ ದುರ್ಗವಾದ ಸಾವನದುರ್ಗವನ್ನು ವಶಪಡಿಸಿಕೊಳ್ಳಬೇಕೆಂದು ೧೭೯೧ರ ಡಿಸೆಂಬರಿನಲ್ಲಿ ಆಜ್ಞೆ ಮಾಡಲಾಯಿತು. ಕಾರನ್‌ವಾಲೀಸನೇ ಕೋಟೆಯಿಂದ ಐದು ಮೈಲುದೂರದಲ್ಲಿ ಶಿಬಿರ ಹಾಕಿ ನಿಂತನು; ಬಹು ಕಷ್ಟದಿಂದ ಡಿಸೆಂಬರ್ ೧೭ ರಂದು ಇಂಗ್ಲಿಷರು ದುರ್ಗವನ್ನು ವಶಪಡಿಸಿಕೊಂಡರು. ಆಮೇಲೆ ಕರ್ನಲ್ ಸ್ಟುವರ್ಟನು **ಹುತ್ತಿದುರ್ಗ, ಶಿವನಗಿರಿ** ಮತ್ತು ರಾಮಗಿರಿಗಳನ್ನು ಗೆದ್ದನು. ಈ ಗೆಲುವುಗಳ ಫಲವಾಗಿ ಶ್ರೀರಂಗಪಟ್ಟಣದ ಮುತ್ತಿಗೆಗಾಗಿ ಸಂಪರ್ಕ ಮಾರ್ಗವು ಸರಾಗವಾದಂತಾಯಿತು.

ವೈರಿ ಸೇನೆಗಳು ಫೆಬ್ರವರಿ ೫ ರಂದು ಮೇಲುಕೋಟೆಗೆ ಬಂದು ಅಲ್ಲಿಂದ ಆಗ ಫ್ರೆಂಚ್‌ರಾಕ್ಸ್ ಎಂದು ಕರೆಯುತ್ತಿದ್ದ ಪಾಂಡವಪುರದ ಸಮೀಪಕ್ಕೆ ಬಂದವು. ಕಂಪನಿ

ಸೈನ್ಯದಲ್ಲಿ ೨೨,೦೦೦ ಯೋಧರು, ೪೪ ಫೀಲ್ಡ್ ಗನ್ನುಗಳು, ೨೨ ಗೋಲಂದಾಜು ಘಟಕಗಳು ಇದ್ದವು.

ಟಿಪ್ಪುವಿದ್ದ ನೆಲೆ ಎಷ್ಟು ಬಲವಾಗಿದ್ದಿತೆಂದರೆ ಕಾರ್ನ್‌ವಾಲಿಸ್ ಹಗಲು ಹೊತ್ತಿನಲ್ಲಿ ಅವನನ್ನು ಆಕ್ರಮಣ ಮಾಡುವುದು ಸಾಧ್ಯವಿರಲಿಲ್ಲ. ಆದ್ದರಿಂದ ವಿಳಂಬ ಮಾಡದೆ ರಾತ್ರಿ ಮಿಂಚಿನ ಧಾಳಿ ಮಾಡಬೇಕೆಂದು ನಿರ್ಧರಿಸಿದನು. ಫೆಬ್ರವರಿ ೬ ನೆಯ ತಾರೀಖು ಬೆಳಗ್ಗೆ ಉತ್ತರ ಮತ್ತು ದಕ್ಷಿಣಗಳಲ್ಲಿ ಇಂಗ್ಲಿಷರು ಟಿಪ್ಪುವಿನ ಕೋಟೆಯ ಸ್ಥಳ ಪರಿಶೋಧನೆ ಮಾಡಿದರು. ಭಾವು ಮತ್ತು ಅಬರ್‌ಕ್ರಾಂಬಿ ಬರುವವರೆಗೂ ಕಾರನ್‌ವಾಲೀಸ್ ಮುಖ್ಯ ಕಾರ್ಯಾಚರಣೆ ಮಾಡುವುದಿಲ್ಲವೆಂದು ಟಿಪ್ಪು ಭಾವಿಸಿದ್ದನು. ಆದರೆ ಅಂದೇ ರಾತ್ರಿ ಅನಿರೀಕ್ಷಿತ ಧಾಳಿಗೆ ಕಾರ್ನ್‌ವಾಲಿಸ್ ಸಿದ್ಧತೆ ನಡೆಸಿದ್ದನು.

ಮೂರನೆಯ ಆಂಗ್ಲೋ ಮೈಸೂರು ಯುದ್ಧವು **ಶ್ರೀರಂಗಪಟ್ಟಣದ ಪತನ**ದೊಂದಿಗೆ ಅಂತ್ಯವಾಯಿತು. ದರಿಯಾದೌಲತ್ ಬಾಗ್ ಬಳಿ ಬೀಡುಬಿಟ್ಟಿದ್ದ ಕ್ಯಾಪ್ಟನ್ ಹಂಟರನ್ನು ಅಲ್ಲಿಂದ ಕದಲಿಸಲು ಟಿಪ್ಪುವಿನ ಸೈನ್ಯಗಳು ಪ್ರಯತ್ನಿಸಿದವು. ಬಲವಾದ ಹೋರಾಟ ನಡೆಸಿ ಹಂಟರನು ದ್ವೀಪವನ್ನೇ ತೊರೆದು ಹೋಗುವಂತೆ ಮಾಡಿದವು. ಅವನು ಹೋಗಿ ಕಾರನ್‌ವಾಲೀಸನ್ನನ್ನು ಸೇರಿಕೊಂಡನು. ಅದೂ ಆಯತವಾದ ಸಮಯವಾಗಿತ್ತು. ಬಹಳ ಭೀಕರವಾದ ಕಾಳಗ ನಡೆಯಿತು. ಎಷ್ಟೇ ಅಪ್ರತಿಮ ಸಾಹಸದಿಂದ ಕಾದಿದರೂ ಮೈಸೂರು ಸೇನೆಯು ಹಿಮ್ಮೆಟ್ಟಬೇಕಾಯಿತು. ಮ್ಯಾಕ್ಸ್‌ವೆಲ್ ಕೈ ಕೆಳಗಿನ ಎಡ ತುಕಡಿಯು ಕರೀಘಟ್ಟದ ಕಡೆಗೆ ನಡೆಯಿತು. ಅದು ಟಿಪ್ಪುವಿನ ಬಹುಮುಖ್ಯವಾದೊಂದು ಕಾವಲು ನೆಲೆ. ಸುಮಾರು ೧೧ ಗಂಟೆ ವೇಳೆಗೆ ಮ್ಯಾಕ್ಸ್‌ವೆಲ್ ಬೆಟ್ಟವನ್ನು ಹಿಡಿದನು, ಲೋಕಪಾವನಿ ನದಿಯನ್ನು ದಾಟಿ ಟಿಪ್ಪುವಿನ ಸೇನೆಯ ಬಲ ಪಕ್ಕದಿಂದ ನುಗ್ಗಿ ಬಂದು ಸ್ಟುವರ್ಟ್‌ನೊಂದಿಗೆ ಕೂಡಿಕೊಂಡನು. ಮ್ಯಾಕ್ಸ್‌ವೆಲ್, ಸ್ಟುವರ್ಟ್ ಇಬ್ಬರೂ ಕಾವೇರಿಯನ್ನು ದಾಟಿ ದ್ವೀಪವನ್ನು ಪ್ರವೇಶಿಸಿದರು.

ಶ್ರೀರಂಗಪಟ್ಟಣದ ಕೋಟೆ ಗೋಡೆಯನ್ನು ಒಡೆಯಲು ಇಂಗ್ಲಿಷರು ಗೋಲಂದಾಜು ಬತ್ತೇರಿಗಳನ್ನು ನಿರ್ಮಿಸುವಾಗ, ಟಿಪ್ಪುವಿಗೆ ಉಳಿದಿದ್ದುದು ಎರಡೇ ದಾರಿಗಳು: ಕೊನೆಯವರೆಗೂ ಹೋರಾಡುವುದು, ಇಲ್ಲವೆ ಸಂಧಿ ಮಾಡಿಕೊಳ್ಳುವುದು. ಮೊದಲನೆಯ ಮಾರ್ಗವು ಬಹು ಅಪಾಯಕಾರಿಯಾಗಿತ್ತು. ಎರಡನೆಯ ಮಾರ್ಗವನ್ನು ಹಿಡಿದರೆ ಮತ್ತೊಮ್ಮೆ ಹೋರಾಡಲು ಅವಕಾಶವಾಗುತ್ತಿತ್ತು. ಆದ್ದರಿಂದ ಮನಸ್ಸಿಗೆ ಎಷ್ಟೇ ಖೇದವಾಗಲಿ, ಅಭಿಮಾನಕ್ಕೆ ಎಷ್ಟೇ ಕುಂದಾಗಿರಲಿ, ಸಂಧಿಯನ್ನು ಮಾಡಿಕೊಳ್ಳಲು ತೀರ್ಮಾನಿಸಿದನು. ಫೆಬ್ರವರಿ ೮ ನೆಯು ತಾರೀಕು ತನ್ನ ಅಪೇಕ್ಷೆಯನ್ನು ವ್ಯಕ್ತಪಡಿಸಿ ಅವನು

ಕಾರನ್‌ವಾಲೀಸನಿಗೊಂದು ಪತ್ರವನ್ನು ಕೊಯಮತ್ತೂರಿನಲ್ಲಿ ಸೆರೆ ಹಿಡಿದಿದ್ದ ಲೆಫ್ಟಿನೆಂಟ್ ಚಾಮರ್ಸ್ ಮತ್ತಿತರ ಸೆರೆಯಾಳುಗಳ ಸಂಗಡ ಕೊಟ್ಟು ಕಳುಹಿಸಿದನು.

ಇಂಗ್ಲಿಷರು ಒಪ್ಪಂದ ಮಾಡಿಕೊಳ್ಳಲು ಉತ್ಸುಕರಾಗಿದ್ದರು. ಟಿಪ್ಪುವನ್ನು ಸಂಪೂರ್ಣವಾಗಿ ನಾಶ ಮಾಡುವುದಕ್ಕೆ ಇಬ್ಬರು ಮಿತ್ರರಾಜರೂ ತನಗೆ ಬೆಂಬಲ ನೀಡಲಾರರು ಎಂದು ಕಾರನ್‌ವಾಲೀಸನಿಗೆ ಭೀತಿಯಿದ್ದೇ ಇತ್ತು. "ನಮ್ಮ ಮಿತ್ರರು ನನ್ನನ್ನು ಅಲ್ಪ ಸ್ವಲ್ಪ ಕಾಡಿಸುತ್ತಿಲ್ಲ" ಎಂದು ಅವನು ಕಹಿಯಾಗಿ ಹೇಳಿದನು. ಹಾಗಾಗಿ ಅವನು ಟಿಪ್ಪುವಿನ ರಾಯಭಾರಿಗಳನ್ನು ಬರಮಾಡಿಕೊಳ್ಳಲು ಸಿದ್ಧನಿರುವುದಾಗಿ ಉತ್ತರ ಕೊಟ್ಟನು.

ಮೂರನೆಯ ಆಂಗ್ಲೋ ಮೈಸೂರು ಯುದ್ಧವು **ಶ್ರೀರಂಗಪಟ್ಟಣದ ಒಪ್ಪಂದ**ದೊಂದಿಗೆ ಅಂತ್ಯವಾಯಿತು. ಉಳಿದ ಸೆರೆಯಾಳುಗಳನ್ನು ಬಿಡುಗಡೆ ಮಾಡಿ ಟಿಪ್ಪುವು ಗುಲಾಂ ಅಲಿಖಾನ್ ಮತ್ತು ಅಬ್ದುಲ್ ರೆಜಾ ಎಂಬ ಇಬ್ಬರು ವಕೀಲರನ್ನು ೧೩ನೆಯ ತಾರೀಕು ಕಳಿಸಿಕೊಟ್ಟನು. ಈದ್ಗಾ ಮೈದಾನದ ಬಳಿ ಬಂದು ವಿಶೇಷವಾದ ಗುಡಾರವನ್ನು ಹಾಕಲಾಗಿದ್ದಿತು. ಅಲ್ಲಿ ಮಿತ್ರರಾಜರ ಪ್ರತಿನಿಧಿಗಳು ಗುಡಾರವನ್ನು ಟಿಪ್ಪುವಿನ ಸೂಚನೆಗಳನ್ನು ಆಲಿಸಲು ಸಿದ್ಧರಾಗಿದ್ದರು. ಕಾರನ್‌ವಾಲೀಸನ ಕಡೆಯಿಂದ ಕೆನ್ನವೇ ಹಾಗೂ ನಿಜಾಮನ ಕಡೆಯಿಂದ ಮೀರ್ ಆಲಂ, ಪೇಶ್ವೆಯ ಕಡೆಯಿಂದ ಗೋವಿಂದರಾವ್ ಕಾಳೆ ಮತ್ತು ಬಚಾಜಿ ಪಂಡಿತ್ ಮಾತುಕತೆಗಳನ್ನು ನಡೆಸಬೇಕಾಗಿದ್ದಿತು. ಯಾವ ಷರತ್ತುಗಳ ಮೇಲೆ ಒಕ್ಕೂಟದ ಮಿತ್ರರು ಸಂಧಿ ಮಾಡಿಕೊಳ್ಳಲು ಸಿದ್ಧರಾಗಿದ್ದಾರೆ ಎಂದು ತಿಳಿಯಲು ಬರೆದ ಟಿಪ್ಪುವಿನ ಪತ್ರವನ್ನು ಆ ಸಭೆಯಲ್ಲಿ ಇಡಲಾಯಿತು. ಕಾರನ್‌ವಾಲೀಸನ ಮೂರು ಷರತ್ತುಗಳಿದ್ದುವು.

**ಮೊದಲನೆಯದು** – ಮೂರುಕೋಟಿ ರೂಪಾಯಿ ವರಮಾನದಷ್ಟು ಸಂಸ್ಥಾನವನ್ನು ಒಪ್ಪಿಸಿಕೊಡುವುದು.

**ಎರಡನೆಯದು** – ಎಂಟು ಕೋಟಿ ರೂಪಾಯಿ ನಷ್ಟಭರ್ತಿ ಕಟ್ಟಿಕೊಡುವುದು.

**ಮೂರನೆಯದು** – ಅವನ ಇಬ್ಬರು ಮಕ್ಕಳನ್ನು ಒತ್ತೆಯಾಗಿ ಕಳುಹಿಸಿಕೊಡುವುದು.

ಅತಿಕ್ರೂರವಾದ ಮೇಲಿನ ಷರತ್ತುಗಳನ್ನು ಕೇಳಿ ವಕೀಲರು ದಿಕ್ಕೆಡುವಂತಾಯಿತು. ಟಿಪ್ಪುಸುಲ್ತಾನನು ಪೂರೈಸಲು ಸಾಧ್ಯವೇ ಇರದ ಷರತ್ತುಗಳು ಅವು ಎಂದು ಮನವಿ ಮಾಡಿಕೊಂಡರು. ತಮ್ಮ ಒಡೆಯನು ಪಟ್ಟಿರುವ ನಷ್ಟವನ್ನು ಯಾರು ತುಂಬಿಕೊಡುತ್ತಾರೆ ಎಂದು ಕೇಳಿದರು. ಟಿಪ್ಪುವು ಮರಾಠರು ಮತ್ತು ನಿಜಾಮನೊಂದಿಗೆ ಪ್ರತ್ಯೇಕವಾಗಿ ಷರತ್ತುಗಳನ್ನು ಇತ್ಯರ್ಥ ಮಾಡಿಕೊಳ್ಳುವುದಾಗಿಯೂ, ಕಂಪನಿಯೊಂದಿಗೆ ಸಂಧಿ

ಮಾಡಿಕೊಳ್ಳುವುದೀಗ ಮುಖ್ಯವಾದ ಉದ್ದೇಶವಾಗಿಯೂ ತಿಳಿಸಿದರು. ಆದರೆ ಸಹಜವಾಗಿಯೇ ಈ ನಿಲುವನ್ನು "ಮಿತ್ರ"ರು ಒಪ್ಪಲಿಲ್ಲ.

ಟಿಪ್ಪುವಿನ ಮೂವರು ಹಿರಿಯ ಗಂಡು ಮಕ್ಕಳಲ್ಲಿ ಯಾವ ಇಬ್ಬರನ್ನು ಬೇಕಾದರೂ ಕಳಿಸಬಹುದು. ಈ ಅಂಶಗಳಲ್ಲಿ ಕಾರನ್‌ವಾಲೀಸ್‌ನು ದೃಢನಾಗಿದ್ದುದರಿಂದ ಕೊನೆಗೆ ಟಿಪ್ಪುವು ಅವುಗಳನ್ನು ಒಪ್ಪಲೇಬೇಕಾಯಿತು. ಕರಡು ಪ್ರತಿಗಳಿಗೆ ಸಹಿಮಾಡಿ ಮೊಹರು ಹಾಕಿ, ವಿನಿಮಯ ಮಾಡಿಕೊಳ್ಳಲಾಯಿತು. ಫೆಬ್ರವರಿ ೨೪ ರಂದು ಯುದ್ಧ ಸ್ತಂಭನಕ್ಕೆ ಆದೇಶವಾಯಿತು. ಇಬ್ಬರಿಗೂ ಒಂದೊಂದು ಚಿನ್ನದ ವಾಚನ್ನು ಉಡುಗೊರೆಯಾಗಿ ಕೊಟ್ಟನು. ಅದೇ ದಿನ ಒಂದು ಕೋಟಿ ಒಂಬತ್ತುವರೆ ಲಕ್ಷ ರೂಪಾಯಿಗಳನ್ನು ಮಿತ್ರರಾಜರ ಕಡೆಗೆ ಕಳುಹಿಸಿಕೊಟ್ಟನು.



**ಶ್ರೀರಂಗಪಟ್ಟಣ ಒಪ್ಪಂದದಂತೆ ಟಿಪ್ಪುವು ತನ್ನ ಇಬ್ಬರು ಮಕ್ಕಳನ್ನು ಒತ್ತೆ ಇಡುತ್ತಿರುವ ದೃಶ್ಯ (ಚಿತ್ರಕೃಪೆ: ಬ್ರಿಟಿಷ್ ಲೈಬ್ರರಿ)**

ಕೊನೆಗೆ ಮಾರ್ಚ್ ೧೮ ರಂದು ಒಪ್ಪಂದಕ್ಕೆ ಟಿಪ್ಪುವು ಸಹಿ ಮಾಡಿದನು. ಅದನ್ನು ರಾಜಕುಮಾರರು ಕಾರನ್‌ವಾಲೀಸ್‌ನಿಗೆ ಮಾರ್ಚ್ ೧೯ ರಂದು ಕೊಟ್ಟರು. ಉಭಯ ಪಕ್ಷಗಳು ಸಹಿಮಾಡಿದ ಒಪ್ಪಂದವನ್ನು ಮಾರ್ಚ್ ೨೨ ರಂದು ವಿನಿಮಯ ಮಾಡಿಕೊಳ್ಳಲಾಯಿತು. ೨೬ ರಂದು ಸೇನೆಯು ಮರು ಪ್ರಯಾಣವನ್ನು ಪ್ರಾರಂಭಿಸಿತು. ಕಾರನ್‌ವಾಲೀಸನು ಕೊಡಗಿನ ವಿಷಯದಲ್ಲಿ ಹಾಗೆ ಪಟ್ಟು ಹಿಡಿದುದಕ್ಕೆ ಕಾರಣ ಅಲ್ಲಿಯ ರಾಜನೊಂದಿಗೆ ಒಪ್ಪಂದ ಮಾಡಿಕೊಂಡದ್ದೇನೂ ಅಲ್ಲ. ಆದರೆ "ಮಲಬಾರ್ ಕರಾವಳಿಯಲ್ಲಿ ನಾವು ಹೊಸದಾಗಿ ಸಂಪಾದಿಸಿರುವ ಭಾಗಕ್ಕೆ ಸುಭದ್ರವಾದ ಒಂದು

ಗಡಿಯನ್ನು ಹಾಕಿಕೊಳ್ಳಬೇಕಾಗುತ್ತದೆ. ಘಟ್ಟದ ಮೇಲಿನ ಯಾವುದೇ ಶಕ್ತಿಯಿಂದ ಅದನ್ನು ರಕ್ಷಿಸಬೇಕಾಗಿರುವುದರಿಂದ" ಅವನಿಗೆ ಕೊಡಗು ಅಗತ್ಯವಾಗಿತ್ತು.

ಹಾಗೆ ನೋಡಿದರೆ ಇಂಗ್ಲಿಷರ ಗಳಿಕೆಯೇ ತುಂಬಾ ಮೌಲಿಕವಾಗಿದ್ದುದು. ಅವು ಅಷ್ಟು ಫಲವತ್ತಾದವುಗಳಲ್ಲವಾದರೂ ಆಯಕಟ್ಟಿನ ಸ್ಥಳಗಳಾಗಿದ್ದವು. ಮೆಣಸು, ಏಲಕ್ಕಿ, ಶ್ರೀಗಂಧ, ತೇಗ ಮತ್ತಿತರ ಹಣ ತರುವ ವಾಣಿಜ್ಯ ಬೆಳೆ ಅಲ್ಲಿ ಸಮೃದ್ಧವಾಗಿದ್ದಿತು. ಅವರ ಪಾಲು ಮೂರು ಬೇರೆ ಬೇರೆ ಪ್ರದೇಶಗಳಲ್ಲಿ ಹಂಚಿದ್ದಿತು. ಮಲಬಾರ್, ಬಾರಾಮಹಲ್ ಮತ್ತು ದಿಂಡಿಗಲ್. ಟಿಪ್ಪುವಿನ ಸಂಸ್ಥಾನವನ್ನು ಉತ್ತರವೊಂದರ ಹೊರತು ಮೂರೂ ದಿಕ್ಕುಗಳಿಂದ ಸುತ್ತುವರಿದಿದ್ದವು. ಅಜೇಯನಾಗಿದ್ದ ಶತ್ರುವನ್ನು ಮಣಿಸಿದ್ದರಿಂದ ಇಂಗ್ಲಿಷರು ಹಿಗ್ಗಿನಿಂದ ಉಬ್ಬಿಹೋದರು. ಇನ್ನು ಮುಂದೆ ಅವರಿಗೆ ಟಿಪ್ಪುವಿನ ಕಿರುಕುಳ, ಕಾಟ ಇರಲಿಲ್ಲ. ಯುದ್ಧದ ಗಳಿಕೆಯ ಹಂಚಿಕೆಯಲ್ಲಿ ಒಕ್ಕೂಟದ ಇತರ ಸದಸ್ಯರಿಗಿಂತಲೂ ಹೆಚ್ಚಿನ ಪ್ರಯೋಜನ ಅವರಿಗಾಯಿತು.

ಒಪ್ಪಂದವು ಟಿಪ್ಪುವಿನ ಪಾಲಿಗೆ ಅತ್ಯಂತ ಅನರ್ಥಕಾರಿಯಾಗಿ ಪರಿಣಮಿಸಿತು. ಹೈದರನ ಕಾಲದಿಂದಲೂ ಮೈಸೂರು ಅಂತಹ ಭಾರೀ ಪೆಟ್ಟನ್ನು ಯಾವಾಗಲೂ ಅನುಭವಿಸಿರಲಿಲ್ಲ. ಟಿಪ್ಪುವಿನ ಅತ್ಯಂತ ಸುಂದರವಾಗಿದ್ದ ಸಾಮ್ರಾಜ್ಯದ ಅರ್ಧ ಭಾಗವನ್ನು ದರೋಡೆ ಮಾಡಲಾಯಿತು; ಅವನ ಭಂಡಾರವನ್ನು ಬರಿದು ಮಾಡಲಾಯಿತು; ಮಕ್ಕಳನ್ನು ಅವನಿಂದ ಅಗಲಿಸಲಾಯಿತು; ಅವನ ಗೌರವವನ್ನು ಹೀನಾಯಿಸಲಾಯಿತು. ಹೀಗೆ ಶ್ರೀರಂಗಪಟ್ಟಣದ ಒಪ್ಪಂದವು ಟಿಪ್ಪುವಿನ ಜೀವನದ ಮೊತ್ತಮೊದಲನೆಯ ಅತಿದೊಡ್ಡ ಆಘಾತವಾಯಿತು.

***

**ವೆಲ್ಲೆಸ್ಲಿಯನ್ನು** ೧೭೯೭ ಅಕ್ಟೋಬರ್ ತಿಂಗಳಲ್ಲಿ, ಗವರ್ನರ್ ಜನರಲ್ ಆಗಿ ನೇಮಕಗೊಂಡನು. ವೆಲ್ಲೆಸ್ಲಿಯ ನೇಮಕವನ್ನು ಸ್ವಾಗತಿಸಿ ಟಿಪ್ಪುವು ಅವನಿಗೊಂದು ಅಭಿನಂದನ ಪತ್ರವನ್ನು ಸಹ ಬರೆದು ಇಂಗ್ಲಿಷರಿಗೆ ತನ್ನ ಮೈತ್ರಿಯ ಭರವಸೆಯನ್ನು ನೀಡಿದ್ದನು. ಆದರೂ ಬಲು ಕಡಿಮೆ ಅವಧಿಯಲ್ಲಿ ಯುದ್ಧವು ಪ್ರಾರಂಭವಾಯಿತು. ಬ್ರಿಟಿಷರ ಹಿತಾಸಕ್ತಿಗಳನ್ನು ಕಾಪಾಡಲು ಟಿಪ್ಪುವನ್ನು ದಂಡಿಸುವ ಹಟತೊಟ್ಟು ವೆಲ್ಲೆಸ್ಲಿಯು ಭಾರತಕ್ಕೆ ಬಂದಿದ್ದನು. ಟಿಪ್ಪುವು ಕಂಪನಿ ಶಕ್ತಿಯನ್ನು ಬುಡಮೇಲು ಮಾಡಲು ಫ್ರೆಂಚ್ ನೆರವನ್ನು ಕೋರಿ ಮಾರಿಷಸ್ ದ್ವೀಪಕ್ಕೆ ರಾಯಭಾರಿಯನ್ನು ಕಳಿಹಿಸುದುದು ದಂಡನೆಗೆ ತತ್‌ಕ್ಷಣದ ಕಾರಣವಾಯಿತು. ಫ್ರೆಂಚರು ಅವನ ಕೋರಿಕೆಯನ್ನು ಪುರಸ್ಕರಿಸಿ, ಸಣ್ಣ ಸೇನೆಯನ್ನು ಕಳಿಸಿದರು. ಅವರನ್ನು ಟಿಪ್ಪುವಿನ ಸೈನ್ಯದಲ್ಲಿ ಸೇರಿಸಿಕೊಳ್ಳಲಾಯಿತು.

ಆದರೆ ಟಿಪ್ಪು ವಿರುದ್ಧದ ಯುದ್ಧ ಕುರಿತು ವೆಲ್ಲೆಸ್ಲಿಯ ನಿಲುವು ಏನಾಗಿತ್ತು ಎಂಬುದನ್ನು ಷೇಕ್‌ಅಲಿ ಅವರು ಹೀಗೆ ಹೇಳಿದ್ದಾರೆ:

> *ನಿಜವಾದ ಕಾರಣ ಮಾರಿಷಸ್‌ಗೆ ಟಿಪ್ಪುವು ನಿಯೋಗವನ್ನು ಕಳುಹಿಸಿದುದಲ್ಲ ಅಥವಾ ಮಲಾರ್ಟಿಕನ ಘೋಷಣೆಯಲ್ಲ ಅಥವಾ ನೆಪೋಲಿಯನನು ಈಜಿಪ್ಟಿನ ಮೇಲೆ ಆಕ್ರಮಣ ಮಾಡಿದ್ದಲ್ಲ ಅಥವಾ ಜಮಾನ್‌ಶಹನ ಧಾಳಿಯ ಬೆದರಿಕೆಯೂ ಅಲ್ಲ. ಅದು, ವೆಲ್ಲೆಸ್ಲಿಯ ಆಕ್ರಮಣಶೀಲ ಧೋರಣೆ. ಅವನು ಯುದ್ಧವನ್ನೇ ನಿರ್ಧರಿಸಿಕೊಂಡು ಬಂದಿದ್ದನು (ಷೇಕ್ ಅಲಿ ೧೯೯೭: ೩೯೭).*

ಯುದ್ಧಕ್ಕೆ ಮುಖ್ಯವಾದ ಕಾರಣ ಟಿಪ್ಪುವನ್ನು ಸೋಲಿಸಬೇಕೆಂಬ ವೆಲ್ಲೆಸ್ಲಿಯ ದೃಢವಾದ ನಿರ್ಧಾರ. ಯುದ್ಧವು ಯಶಸ್ವಿಯಾದರೆ ಕೊನೆಯೇ ಇಲ್ಲದಷ್ಟು ಅನುಕೂಲಗಳು ಲಭಿಸಲಿದ್ದವು.




೧೭೯೨ರ ಶ್ರೀರಂಗಪಟ್ಟಣ ಒಪ್ಪಂದದ ನಂತರ ಟಿಪ್ಪುವಿನ ಸಂಸ್ಥಾನ (ಕೃಪೆ: ಷೇಕ್‌ಅಲಿ ೧೯೯೭: ೪೦೧)



**ಟಿಪ್ಪು ಸುಲ್ತಾನನ ಅಂತಿಮ ಹೋರಾಟದ ದೃಶ್ಯ** **(ಚಿತ್ರಕೃಪೆ: ಬ್ರಿಟಿಷ್ ಲೈಬ್ರರಿ)**

ಮಾರಿಷಸ್‌ಗೆ ರಾಯಭಾರಿ ನಿಯೋಗವನ್ನು ಕಳುಹಿಸಿಕೊಟ್ಟಿದ್ದಕ್ಕೂ, ಅಲ್ಲಿಂದ ಸೈನ್ಯವನ್ನು ಪಡೆದುಕೊಂಡುದರ ಉದ್ದೇಶವೇನೆಂಬುದಕ್ಕೂ ವಿವರಣೆ ಸಲ್ಲಿಸಬೇಕೆಂದು ಟಿಪ್ಪುವನ್ನು ಕೇಳಲು ವೆಲ್ಲೆಸ್ಲಿ ಮೊದಲು ಬಯಸಿದನು. ಆದರೆ ಹಾಗೆ ಕೇಳಿದ್ದನ್ನೇ ಟಿಪ್ಪುವು ಯುದ್ಧಕ್ಕೆ ಕಾರಣವನ್ನಾಗಿ ಮಾಡಿಕೊಂಡು ಬಿಡುವುದೆಂಬ ಆಲೋಚನೆಯಿಂದ ಅದನ್ನು ಕೈಬಿಟ್ಟನು. ಆ ಸಮಯದಲ್ಲಿ ವೆಲ್ಲೆಸ್ಲಿಯ ಉದ್ದೇಶ ಟಿಪ್ಪುವನ್ನು ನಾಶ ಮಾಡುವುದಾಗಿರಲಿಲ್ಲ. ಟಿಪ್ಪುವು ಮಾರಿಷಸ್‌ಗೆ ರಾಯಭಾರವನ್ನು ಏಕೆ ಕಳಿಹಿಸಿದನೆಂಬುದರ ವಿವರಣೆಯನ್ನು ನೀಡದೆ ಹೋದರೆ; ಅಥವಾ ಅವನೇ ಯುದ್ಧವನ್ನು ಪ್ರಾರಂಭ ಮಾಡಿದರೆ ಮಾತ್ರ ಘೋಷಿಸಬಹುದು ಎಂದವನು ಭಾವಿಸಿದ್ದನು. ಹೀಗೆ ಕರ್ನಾಟಕದಲ್ಲಿ ಸಿದ್ಧತೆಗಳನ್ನು ಮಾಡುತ್ತಲೇ, ವೆಲ್ಲೆಸ್ಲಿಯು ನಿಜಾಮನೊಂದಿಗೂ ಮರಾಠರೊಂದಿಗೂ ಮೈತ್ರಿ ಒಪ್ಪಂದಗಳನ್ನು ಮಾಡಿಕೊಳ್ಳುವುದರಲ್ಲಿ ನಿರತನಾದನು.

ಇಂಗ್ಲಿಷರ ಒತ್ತಾಯವನ್ನು ಇನ್ನು ನಿವಾರಿಸುವುದು ವ್ಯರ್ಥವೆಂಬುದು ಟಿಪ್ಪುವಿಗೆ ಮನವರಿಕೆಯಾಯಿತು. ಇಂಗ್ಲಿಷರ ಪ್ರಸ್ತಾವನೆಯನ್ನು ಹೊತ್ತುತರುವ ಮೇಜರ್ ಡೋವ್‌ಟನ್ನನನ್ನು ಬರಮಾಡಿಕೊಳ್ಳಲು ಒಪ್ಪಿ ಟಿಪ್ಪುವು ಬರೆದ ಪತ್ರವು ಎಂಟುದಿನಗಳ ನಂತರ ತಲುಪಿತು. ಶಾಂತಿಯುತ ಪರಿಹಾರಕ್ಕಾಗಿ ಟಿಪ್ಪುವಿಗೆ ಒಂದು ಅವಕಾಶ ಕೊಡದಿರಲು ಅದಷ್ಟೇ ನೆಪವು ಸಾಕಾಯಿತು. ಫೆಬ್ರವರಿ ೨೨ರಂದು ಇನ್ನೊಂದು

ಪತ್ರದ ಮೂಲಕ, ಟಿಪ್ಪುವಿನ ಕೋರಿಕೆಯನ್ನು "ಅದು ಬಹಳ ತಡವಾಗಿ ಬಂದುದ್ದರಿಂದ" ತಿರಸ್ಕರಿಸಲಾಗಿದೆ ಎಂದು ತಿಳಿಸಲಾಯಿತು. ಆದರೂ "ಖಾಯಂ ಆಗಿ ಸುಭದ್ರವಾಗಿ ಶಾಂತಿಯನ್ನು ನೆಲೆಗೊಳಿಸುವ ದೃಷ್ಟಿಯಿಂದ ಅನಿವಾರ್ಯವೆಂದು ಮಿತ್ರರಾಜರಿಗೆ ತೋರುವ ಷರತ್ತುಗಳ ಮೇಲೆ" ಹೊಸದಾಗಿ ಸಂಧಿ ಮಾಡಿಕೊಳ್ಳಲು ಟಿಪ್ಪುವೇನಾದರೂ ಬಯಸಿ ಪ್ರತಿನಿಧಿಗಳನ್ನು ಕಳುಹಿಸಿದರೆ, ಅವರನ್ನು ಬರಮಾಡಿಕೊಳ್ಳಲು ಜನರಲ್ ಹ್ಯಾರಿಸ್‌ನಿಗೆ ಅಧಿಕಾರವನ್ನು ನೀಡಲಾಯಿತು.

ಇನ್ನು ಮುಂದೆ ಹ್ಯಾರಿಸನೊಂದಿಗೆ ಪತ್ರವ್ಯವಹಾರ ಮಾಡಬಹುದೆಂದು ವೆಲ್ಲೆಸ್ಲಿಯು ಹೇಳಿದ್ದ ಪ್ರಕಾರ ಟಿಪ್ಪುವು ಏಪ್ರಿಲ್ ೯ ರಂದು ಬ್ರಿಟಿಷರ ಈ ಆಕ್ರಮಣದ ಉದ್ದೇಶವಾದರೂ ಏನು ಎಂದು ಪ್ರಶ್ನಿಸಿ ಪತ್ರ ಬರೆದು ಕಳಿಸಿದನು. ಅದಕ್ಕೆ ಉತ್ತರವಾಗಿ ಆ ವಿಷಯದಲ್ಲಿ ಆಗಿದ್ದ ವೆಲ್ಲೆಸ್ಲಿಯ ಪತ್ರ ವ್ಯವಹಾರಗಳತ್ತ ಟಿಪ್ಪುವು ಗಮನ ಸೆಳೆದನು. ಏಪ್ರಿಲ್ ೨೦ ರಂದು ಟಿಪ್ಪುವು ಭಿನ್ನಾಭಿಪ್ರಾಯಗಳನ್ನು ಶಾಂತಿಯುತವಾಗಿ ಪರಿಹರಿಸಿಕೊಳ್ಳಲು ತನಗೆ ಇಚ್ಛೆಯಿದೆಯೆಂದೂ ಜವಾಬ್ದಾರಿಯುತರಾದ ವ್ಯಕ್ತಿಗಳನ್ನು **ಸಂಧಾನದ ಮಾತುಕತೆ**ಗಳಿಗಾಗಿ ನಿಯೋಜಿಸಬಹುದೆಂದೂ ತಿಳಿಸಿದನು. ಇದಕ್ಕೆ ಉತ್ತರವಾಗಿ ಹ್ಯಾರಿಸ್ ಬಿ–ಕರಡುಪ್ರತಿಯನ್ನು ಕಳುಹಿಸಿಕೊಟ್ಟನು.೧೩ ವಿಪರೀತ ನಿಷ್ಠುರವಾಗಿದ್ದ ಈ ಕರಾರುಗಳನ್ನು ಟಿಪ್ಪುವು ತಿರಸ್ಕರಿಸಿದನು (ಷೇಕ್‌ಅಲಿ ೧೯೯೭: ೪೧೨).

ಸಂಧಾನದ ಆಸೆಗಳೆಲ್ಲವೂ ಇಂಗಿಹೋಗಿ ಟಿಪ್ಪುವು ತನ್ನ ಅಂತಿಮ ಹೋರಾಟವನ್ನು ನಡೆಸಲು ಸಿದ್ಧನಾದನು. ಆದರೆ ಪರಿಸ್ಥಿತಿಯು ಅವನಿಗೆ ಪ್ರತಿಕೂಲವಾಗಿದ್ದವು. ಅಗಾಧವಾದ ಸೈನ್ಯವು ರಾಜಧಾನಿ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಲು ಸಮೀಪಿಸಿದ್ದವು. ಆದರೆ ಆಹಾರದ ಕೊರತೆ ಕಂಪನಿ ಸೈನ್ಯವನ್ನು ಬಾಧಿಸಲಾರಂಭಿಸಿತ್ತು. ಉಳಿದಿದ್ದ ಆಹಾರ ಧಾನ್ಯಗಳು ಆರು ದಿನಗಳಿಗಷ್ಟೆ ಸಾಕಾಗುತ್ತಿತ್ತು. ಆದ್ದರಿಂದ ಕೋಟೆಯನ್ನು ಬೇಗ ಮುತ್ತುವುದು ಅನಿವಾರ್ಯವಾಗಿತ್ತು. ವಾಸ್ತುಶಿಲ್ಪಿಗಳ ಸಲಹೆಯ ಪ್ರಕಾರ ವಾಯವ್ಯದ ಕೋಟೆ ಭಾಗವು ದುರ್ಬಲವಾದುದೆಂದು ತಿಳಿದು, ಮುತ್ತಿಗೆಗೆ ಆ ಸ್ಥಳವನ್ನು ಆಯ್ಕೆ ಮಾಡಿಕೊಳ್ಳಲಾಯಿತು. ಹ್ಯಾರಿಸನು ಈ ಭಾಗದಿಂದ ಏಪ್ರಿಲ್ ೨೬ರ ರಾತ್ರಿ ಪೂರ ಮುತ್ತಿಗೆ ಹಾಕಿ ಫಿರಂಗಿಯನ್ನು ಸ್ಥಾಪಿಸಲು ಬೇಕಾದ ನೆಲೆಗಳನ್ನು ತನ್ನ ನಿಯಂತ್ರಣಕ್ಕೆ ಪಡೆದನು. ೨೮ ರಂದು ಸ್ಥಾಪಿಸಲಾರಂಭಿಸಿದ ಫಿರಂಗಿಗಳಿಂದ ಕೋಟೆಯನ್ನೊಡೆಯಲು ಗುಂಡಿನ ಧಾಳಿಯನ್ನು ಆರಂಭಿಸಿದರು. ಮೇ, ೩ ರಂದು ಕೋಟೆಯ ಗೋಡೆಯಲ್ಲಿ ಬಿರುಕು ಉಂಟಾಯಿತು. ಆ ಹೊತ್ತಿಗೆ ಆಹಾರ ಧಾನ್ಯವೆಲ್ಲವೂ ಖಾಲಿಯಾಗಿ ಸೈನ್ಯವು ಉಪವಾಸ ಬಿದ್ದಿತ್ತು. ಕಂಪನಿ ಸೇನೆಯು ಶ್ರೀರಂಗಪಟ್ಟಣವನ್ನು ಈ ಕಾರಣಕ್ಕೆ

ತುರ್ತಾಗಿ ವಶಪಡಿಸಿಕೊಳ್ಳಬೇಕಾಗಿತ್ತು. ಅಂದು ರಾತ್ರಿ ಕೆಲವು ಅಧಿಕಾರಿಗಳು ಕೋಟೆಯ ಇಳುಕಲ್ಲನ್ನು ದಾಟಿಹೋಗಿ ಒಡಕಲನ್ನೂ ಮತ್ತು ಕೋಟೆಯನ್ನು ಹೇಗೆ ಮುತ್ತಬೇಕೆಂಬುದನ್ನೂ ಪರೀಕ್ಷಿಸಿದರು. ಈ ಸಂದರ್ಭದಲ್ಲಿಯೇ ಕಂಪನಿ ಅಧಿಕಾರಿಗಳು ಮತ್ತು ಮೀರ್‌ಸಾದಕನ ನಡುವೆ ಮಧ್ಯಾಹ್ನದಲ್ಲಿ ಲಗ್ಗೆ ಹತ್ತಬೇಕೆಂಬುದು ನಿಶ್ಚಯವಾದುದು. ಅದಕ್ಕಾಗಿ ಸಿದ್ಧತೆಗಳು ಮುಂದಿನ ಬೆಳಗಿನ ವೇಳೆಗೆ ಮುಗಿದವು. ೩/೫ ಭಾಗ ಜನರು ಐರೋಪ್ಯರೇ ಇದ್ದ ಸುಮಾರು ೫೦೦೦ ಪಡೆಗಳು ಲಗ್ಗೆಯಲ್ಲಿ ಭಾಗವಹಿಸಬೇಕೆಂದಿದ್ದು, ಅನುಮಾನಕ್ಕೆ ಎಡೆಗೊಡದಂತೆ ಬೆಳಗಿನ ವೇಳೆಗೆ ಎಲ್ಲರೂ ಕಂದಕಗಳಲ್ಲಿ ಸೇರಿಕೊಂಡರು. ಸಮಯವು ಹತ್ತಿರವಾದಾಗ **ಮೀರ್‌ಸಾದಕ**ನು ಒಡಕಿನ ಬಳಿಯಿದ್ದ ಸೈನ್ಯವನ್ನು ವೇತನ ಬಟವಾಡೆಯ ನೆಪದಿಂದ ಹಿಂತೆಗೆದುಕೊಂಡನು. ಟಿಪ್ಪುವಿನ ನಿಷ್ಠಾವಂತ ವ್ಯಕ್ತಿ ಸೈಯದ್ ಗಫಾರ್ ದುರಾದೃಷ್ಟಕ್ಕೆ ಫಿರಂಗಿಯ ಧಾಳಿಗೆ ಸಿಕ್ಕು ಸತ್ತನು. ಅವನು ಸತ್ತ ಕೂಡಲೆ ದ್ರೋಹಿಗಳು ಕಂದಕದಲ್ಲಿದ್ದ ಇಂಗ್ಲಿಷರನ್ನು ಸನ್ನೆ ಮಾಡಿ ಕರೆದರು. ಅಡಗಿದ್ದ ಅಷ್ಟೂ ಸೈನ್ಯ ೨೪೦ ಗಜಗಳ ನದಿಯನ್ನು ಮತ್ತು ೬೦ ಗಜಗಳ ಕಂದಕವನ್ನು ಹಾದು ಕೇವಲ ಏಳು ನಿಮಿಷಗಳಲ್ಲಿ ಕೋಟೆಯ ಬಿರುಕಿನ ತುದಿಯಲ್ಲಿ ಕಂಪನಿ ಬಾವುಟವನ್ನು ಹಾರಿಸುವಲ್ಲಿ ಯಶಸ್ವಿಯಾಯಿತು (ಮೊಹಿಬಲ್ ಹಸನ್ ೧೯೮೮: ೪೬೧-೬೨).



**ಕಂಪನಿ ಸೇನೆ ಮುತ್ತಿಗೆ ಹಾಕಿ ಮೇಲೇರಿದ ಭಾಗ, ಶ್ರೀರಂಗಪಟ್ಟಣ. (ಚಿತ್ರ: ಲೇಖಕರದು)**

ನಂತರ ಕಂಪನಿ ಸೈನ್ಯವು ಕರ್ನಲ್ ಷೇರ್‌ಬ್ರೂಕ್ ಮತ್ತು ಕರ್ನಲ್ ಡನ್‌ಲಪ್ ನೇತೃತ್ವದಲ್ಲಿ ಎರಡು ತಂಡಗಳಾಗಿ ದಕ್ಷಿಣ ಮತ್ತು ಉತ್ತರದ ಕೋಟೆಗಳ ಮೇಲೆ

ಪೂರ್ವದ ಕೋಟೆಯ ಮೇಲೆ ಸಂಧಿಸುವುದು ತಂಡಗಳ ಯೋಜನೆಯಾಗಿತ್ತು. ಉತ್ತರ ಭಾಗದಲ್ಲಿ ಯಾವುದೇ ಪ್ರತಿರೋಧವಿರಲಿಲ್ಲ. ದಕ್ಷಿಣದಲ್ಲಿ ಹೊರಟ ತಂಡಕ್ಕೆ ಅಶ್ವಪಡೆಗಳಿಂದ ತೀವ್ರ ಪ್ರತಿರೋಧವನ್ನು ಎದುರಿಸಬೇಕಾಯಿತು. ಲಗ್ಗೆಯ ವಿಷಯ ಕೇಳಿ ಸ್ವತಃ ಟಿಪ್ಪುವೆ ಬಂದು ನಿಂತು ಸೇನೆಯನ್ನು ಮುನ್ನಡೆಸುತ್ತಿದ್ದನು. ಕಂಪನಿಯ ದಳಪತಿಗಳಲ್ಲಿ ಕೆಲವರು ಅಂಗವಿಕಲರಾದರೆ, ಮತ್ತೆ ಕೆಲವರು ಕೊಲ್ಲಲ್ಪಟ್ಟರು. ಅಷ್ಟರಲ್ಲಿ ಹೊಸಪಡೆಗಳು ಇಂಗ್ಲಿಷರ ನೆರವಿಗೆ ಬಂದವು. ಇಲ್ಲವಾದರೆ, ಎಲ್ಲರೂ ಕೊಲ್ಲಲ್ಪಟ್ಟು, ಹಿಮ್ಮೆಟ್ಟಬೇಕಾಗಬಹುದಾಗಿತ್ತು (ಮೊಹಿಬಲ್ ಹಸನ್ ೧೯೮೮: ೪೬೩). ಮುಂದಿನ ಒಂದು ಗಂಟೆಯೊಳಗೆ ಎರಡೂ ದಿಕ್ಕಿನಿಂದ ಹೊರಟ ಕಂಪನಿ ಸೇನೆ ಹೊರ ಕೋಟೆಯನ್ನು ನಿಯಂತ್ರಣಕ್ಕೆ ಪಡೆದು ಪೂರ್ವದ ದ್ವಾರದ ಬಳಿ ಸಂಧಿಸಿದವು. ಕಂಪನಿ ಸೇನೆಯು ಹೊರ ಮತ್ತು ಒಳ ಆಳುವೇರಿಗಳ ಫಿರಂಗಿಗಳೆರಡರ ಹೊಡೆತಕ್ಕೆ ಸಿಕ್ಕಿದ ಮೈಸೂರು ಸೈನಿಕರಲ್ಲಿ ಕೋಲಾಹಲವುಂಟಾಗಿ ಪಲಾಯನ ಮಾಡಿದರು. ಅವರನ್ನು ಸಂಘಟಿಸುವ ಟಿಪ್ಪುವಿನ ಪ್ರಯತ್ನಗಳು ಯಶಸ್ವಿಯಾಗಲ್ಲಿಲ್ಲ. ಕಂಪನಿ ಸೇನೆಯ ಆರ್ಭಟ ಹೆಚ್ಚಾಗಿದಂತೆ ಮತ್ತು ತನ್ನವರೆ ತನಗೆ ಮೋಸ ಮಾಡುತ್ತಿರುವುದು ಅರಿವಾಗುತ್ತಿದ್ದಂತೆ ವಾಟರ್‌ಗೇಟ್ ಮೂಲಕ ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸಿದನು. ಅವಕಾಶವಾಗಲಿಲ್ಲ. ಅಲ್ಲಿಂದ ಮುಂದೆ ಹೊರಟ ಟಿಪ್ಪುವು ಮತ್ತೆ ಗಾಯಗೊಂಡನು. ಇದೇ ವೇಳೆ ತೀವ್ರ ಗಾಯಗೊಂಡಿದ್ದ ಟಿಪ್ಪುವಿನ ಎದೆಗೆ ಗುಂಡೊಂದು ತಗುಲಿತು. ಬೀಳುತ್ತಿದ್ದ ಹೆಣದ ರಾಶಿಗಳ ನಡುವೆ ಟಿಪ್ಪುವು ಕುಸಿದುಬಿದ್ದನು (ಮೊಹಿಬಲ್ ಹಸನ್ ೧೯೮೮: ೪೬೬).



ಟಿಪ್ಪುವಿನ ಮರಣಸ್ಥಳ, ಶ್ರೀರಂಗಪಟ್ಟಣ. (ಚಿತ್ರ: ಲೇಖಕರದು)

ಮೇಜರ್ ಅಲೆನ್‌ನನು ಶಾಂತಿಯ ಧ್ವಜದೊಂದಿಗೆ ಅರಮನೆಯನ್ನು ಪ್ರವೇಶಿಸಿ ಅರಮನೆಯ ಪ್ರತಿಯೊಬ್ಬರ ಪ್ರಾಣ ಮತ್ತು ಗೌರವಗಳಿಗೆಲ್ಲಕ್ಕೂ ರಕ್ಷಣೆ ನೀಡುವ ಭರವಸೆಯನ್ನು ಕೊಟ್ಟ ಮೇಲೆ ಅವನ ಸಲಹೆಗೆ ಒಪ್ಪಿ ರಾಜಕುಮಾರರು ಹೆಬ್ಬಾಗಿಲನ್ನು ತೆರೆಸಿದರು. ಹೀಗೆ ಟಿಪ್ಪು ಸುಲ್ತಾನನ ಶ್ರೀರಂಗಪಟ್ಟಣ ಅವನ ಅಂತ್ಯದೊಂದಿಗೆ ಶತ್ರುಗಳ ವಶವಾಯಿತು. ಒಟ್ಟಾರೆ, ಶ್ರೀರಂಗಪಟ್ಟಣ ಕೋಟೆಯ ಅವಸಾನವು ಟಿಪ್ಪು ಸುಲ್ತಾನನ ಅವಸಾನವಾಗಿ ಮಾರ್ಪಟ್ಟಿತು. ತನ್ನ ಸಂಸ್ಥಾನದ ರಕ್ಷಣೆಗಾಗಿ ಇನ್ನಿಲ್ಲದ ರೀತಿಯಲ್ಲಿ ತಾಂತ್ರಿಕವಾಗಿ ಉನ್ನತವಾದ ಕೋಟೆಗಳನ್ನು ಕಟ್ಟಿದ ಟಿಪ್ಪುವು ಅವುಗಳ ಸುಭದ್ರತೆಯಲ್ಲಿಯೇ ತನ್ನ ಸುಭದ್ರತೆಯನ್ನು ಕಂಡುಕೊಂಡಿದ್ದ. ಅಂತಹ ಕೋಟೆಗಳ ಅಂತ್ಯದೊಂದಿಗೆ ಅವನ ಅಂತ್ಯ ಕೂಡ ಏಕೀರ್‌ಭವಿಸಿದ್ದು ಚರಿತ್ರೆಯ ವೈಚಿತ್ರ್ಯವೆನ್ನದೆ ವಿಧಿ ಇಲ್ಲ.

***

**ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಮಹಾನ್ ಯೋಧರು** ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ, ಟಿಪ್ಪುವು ಹೈದರಾಲಿಯಂತೆ ಯಶಸ್ವಿ ಯುದ್ಧನಿಪುಣನಲ್ಲ ಎಂಬುದು ಈವರೆಗೆ ಅವಲೋಕಿಸಿದ ಐತಿಹಾಸಿಕ ಘಟನೆಗಳು ಮತ್ತು ಚಾರಿತ್ರಿಕ ಮಹತ್ವದ ಅಂಶಗಳಿಂದ ಸ್ಪಷ್ಟವಾಗುತ್ತದೆ. ಹೈದರಾಲಿ ಸ್ವಯಂಪ್ರತಿಭೆ. ಅನಕ್ಷರಸ್ಥನಾದರೂ ರಣತಂತ್ರದ ಎಲ್ಲಾ ಪಟ್ಟುಗಳನ್ನು ಕರಗತ ಮಾಡಿಕೊಂಡಿದ್ದನು. ಟಿಪ್ಪುವು ಓದಿಕೊಂಡವನು ಲೋಕಜ್ಞಾನ ಬಲ್ಲವನು. ಆದರೆ ತಂದೆಯಂತೆ ಸ್ವಯಂಪ್ರತಿಭೆಯಲ್ಲ ಬಾಹ್ಯಪ್ರತಿಭೆ. ಈ ಎರಡೂ ವ್ಯಕ್ತಿತ್ವಗಳ ನಡುವಿನ ವ್ಯತ್ಯಾಸವನ್ನು ಸೂಕ್ಷ್ಮವಾಗಿ ಪ್ರಸ್ತುತ ಅಧ್ಯಾಯದಲ್ಲಿ ಗಮನಿಸಬಹುದಾಗಿದೆ.

ಚಿತ್ರದುರ್ಗದ ಮುತ್ತಿಗೆಯ ಸಂದರ್ಭದಲ್ಲಿ ಹೈದರನ ತಾಳ್ಮೆ ಮತ್ತು ಶತ್ರು ಪಾಳಯದಲ್ಲಿರುವ ದೌರ್ಬಲ್ಯಗಳನ್ನು ಗುರುತಿಸಿ, ಅವುಗಳ ಲಾಭ ಪಡೆಯುವ ಛಾತಿ ಮೆಚ್ಚುವಂತಹದ್ದು. ಒಂದೂವರೆ ವರ್ಷಗಳ ಕಾಲ ಚಿತ್ರದುರ್ಗವನ್ನು ಮುತ್ತಿದ ಸಂದರ್ಭದಲ್ಲಿ ಕೋಟೆಯ ಒಳಗಿನ ಮುಸಲ್ಮಾನರನ್ನು ಮಾತ್ರವಲ್ಲ; ದೊಡ್ಡಮದಕರಿ ನಾಯಕನನ್ನು ಕೂಡ ತನ್ನ ಕಡೆಗೆ ಸೆಳೆದುಕೊಳ್ಳುವಲ್ಲಿ ಯಶಸ್ವಿಯಾದನು. ಶತ್ರು ಪಾಳೆಯದವರನ್ನು ಕೂಡ ಸಮ್ಮೋಹನಗೊಳಿಸಿ ಮಾಹಿತಿಯನ್ನು ತಿಳಿಯುವ ಕೌಶಲ್ಯ ಹೈದರಾಲಿಯಲ್ಲಿತ್ತು. ಇದನ್ನು ಗುತ್ತಿಯ ಆಕ್ರಮಣದ ಸಂದರ್ಭದಲ್ಲಿ ಕೂಡ ಗಮನಿಸಲಾಗಿದೆ.

ಆಕ್ರಮಣ ಮತ್ತು ಮುತ್ತಿಗೆಗಳ ಸಂದರ್ಭಗಳಲ್ಲಿ ಹೈದರಾಲಿಯು ಎಂತಹ ಯುದ್ಧತಂತ್ರ ನಿಪುಣನಾಗಿದ್ದನು ಎಂಬುದನ್ನು ಅರ್ಥ ಮಾಡಿಕೊಳ್ಳಬಹುದು. ಚಿತ್ರದುರ್ಗ, ಬಿದನೂರಿನಂತಹ ಅಭೇದ್ಯವಾದ ಕೋಟೆಗಳನ್ನು ಕೂಡ ಸಹನೆ ಮತ್ತು ಚಾಣಾಕ್ಷತೆಯಿಂದ

ಗೆದ್ದುಕೊಂಡನು. ಎರಡನೇ ಆಂಗ್ಲೋ-ಮೈಸೂರು ಯುದ್ಧಗಳಲ್ಲಿ ಕರ್ನಲ್ ಬೈಲಿ ಮತ್ತು ಐರ್‌ಕೂಟ್‌ನಂತಹ ಚತುರ ಕಂಪನಿ ಸೇನಾನಿಗಳಿಗೂ ಮಣ್ಣುಮುಕ್ಕಿಸುವಲ್ಲಿ ಯಶಸ್ವಿಯಾದನು. ಮೊಟ್ಟಮೊದಲ ಬಾರಿಗೆ ಯುದ್ಧದ ಸಂದರ್ಭದಲ್ಲಿ ರಾಕೆಟ್ ಉಡಾಯಿಸಿ ಶತ್ರುಗಳನ್ನು ಸದೆಬಡಿದ ಭಾರತೀಯ ಎಂಬ ಕೀರ್ತಿಗೆ ಹೈದರಾಲಿ ಪಾತ್ರನಾಗಿದ್ದಾನೆ. ಈ ಕಾರ್ಯದಲ್ಲಿ ಟಿಪ್ಪು ಕೂಡ ಪಾತ್ರನಾಗಿದ್ದಾನೆ. ಹೈದರಾಲಿಯು ತನ್ನ ಸೈನಿಕರನ್ನು ವಿಶೇಷವಾಗಿ ಕಾಳಜಿ ಮಾಡುವ ಮೂಲಕ ಅವರ ವಿಶ್ವಾಸವನ್ನು ಗಳಿಸಿದ್ದನು. ಉದಾ. ದೊರೆತ ಲೂಟಿಯಲ್ಲಿ ನಿಗದಿತ ಪಾಲನ್ನು ಸೈನಿಕರಿಗೆ ಹಂಚುತ್ತಿದ್ದನು, ಅವರ ಊಟೋಪಚಾರಗಳ ಬಗೆಗೆ ವಿಚಾರಿಸುತ್ತಿದ್ದನು. ಅಲ್ಲದೆ, ಸೈನಿಕರನ್ನು ಒಳ್ಳೆಯ ಮಾತುಗಳ ಮೂಲಕ ಉತ್ತೇಜಿಸುವಂತಹ ಕಲೆ ಹೈದರಾಲಿಗೆ ಒಲಿದುಬಂದಿತ್ತು. ಸಮರ ಸಾಹಸಿಯಾದ ಹೈದರಾಲಿಯು ೧೭೮೨ರ ಡಿಸೆಂಬರ್‌ನಲ್ಲಿ ಬೆನ್ನುಫಣಿ ರೋಗದಿಂದ ಬಳಲುತ್ತಿದ್ದರೂ ಯುದ್ಧವನ್ನು ಮೊಟಕುಗೊಳಿಸಿ ಅರಮನೆಗೆ ಮರಳಲಿಲ್ಲ. ತನ್ನ ಅಂತ್ಯವನ್ನು ಕೂಡ ಯುದ್ಧ ಬಿಡಾರದಲ್ಲಿಯೇ ಕಂಡುಕೊಂಡನು. ಇದು ಹೈದರನ ಯುದ್ಧ ಪ್ರೀತಿಗೆ ಸಾಕ್ಷಿಯಾಗಿದೆ.

ಆದರೆ, ಸದಾ ಆಧುನಿಕತೆಯ ಕಡೆಗೆ ಮನಸ್ಸು ಮಾಡಿರುತ್ತಿದ್ದ ಟಿಪ್ಪುವಿನ ವ್ಯಕ್ತಿತ್ವ ಭಿನ್ನವಾದುದಾಗಿತ್ತು. ಆದ್ದರಿಂದ ಕೆಲವು ಸಂದರ್ಭಗಳಲ್ಲಿ ತಪ್ಪು ತೀರ್ಮಾನಗಳನ್ನು ಕೈಗೊಂಡು ದಂಡವನ್ನು ತೆತ್ತಿರುವುದುಂಟು. ಮೂರನೆಯ ಆಂಗ್ಲೋ-ಮೈಸೂರು ಯುದ್ಧದ ಸಂದರ್ಭದಲ್ಲಿ ಟಿಪ್ಪುವಿನ ಯುದ್ಧತಂತ್ರದ ತಪ್ಪು ಲೆಕ್ಕಾಚಾರದಿಂದಾಗಿ ಶತ್ರು ಸೈನ್ಯಕ್ಕೆ ಎಲ್ಲಿಯೂ ತುಪಾಕಿಯನ್ನು ಹಾರಿಸುವಂತಹ ಪ್ರಮೇಯವೇ ಸೃಷ್ಟಿಯಾಗದೆ ನಿರಾತಂಕವಾಗಿ ಶ್ರೀರಂಗಪಟ್ಟಣದತ್ತ ಸಾಗಿಬಂದಿತು. ಹೀಗೆ ಸಾಗಿಬರುವುದನ್ನು ಯಾವುದೇ ರೀತಿಯಲ್ಲಿ ನಿರ್ಬಂಧಿಸುವ ಪ್ರಯತ್ನವನ್ನು ಟಿಪ್ಪುವು ಮಾಡಲೇ ಇಲ್ಲ. ಬದಲಿಗೆ, ಶ್ರೀರಂಗಪಟ್ಟಣದ ಕೋಟೆಯನ್ನು ಭದ್ರಪಡಿಸುವ ಕಡೆಗೆ ಗಮನವಿತ್ತಿದ್ದು ಅವನ ತಪ್ಪು ನಿರ್ಧಾರವಾಗಿತ್ತು. ಇಂಥದೇ ಕಠಿಣ ಸಂದರ್ಭವೊಂದು ಒದಗಿ ಬಂದಿದ್ದಾಗ ಹೈದರಾಲಿಯು ಮರಾಠರ ಸೈನ್ಯ ಶ್ರೀರಂಗಪಟ್ಟಣದತ್ತ ಸಾಗದಂತೆ ಮದ್ದೂರು ಮತ್ತು ಚನ್ನಪಟ್ಟಣಗಳ ಸಮೀಪವೇ ಮರಸು ಯುದ್ಧದ ಮೂಲಕ ಇರುಳಿನಲ್ಲಿ ತೀವ್ರವಾಗಿ ಕಾಡಿ ಓಮ್ಮೆಟ್ಟಿಸಿದನು. ಯಾವುದೇ ಶತ್ರುಸೈನ್ಯ ರಾಜಧಾನಿಯವರೆಗೂ ಬರುವುದಕ್ಕೆ ಬಿಟ್ಟುಕೊಡದೆ ತಡೆಹಾಕುವ ನಿಟ್ಟಿನಲ್ಲಿ ಎಲ್ಲಾ ಬಗೆಯ ಯುದ್ಧತಂತ್ರಗಳನ್ನು ಹೈದರ್ ಪ್ರಯೋಗಿಸುತ್ತಿದ್ದನು. ಆದರೆ, ಟಿಪ್ಪು ಆ ರೀತಿಯ ಚತುರತೆಯನ್ನು ಎಂದೂ ಮೈಗೂಡಿಸಿಕೊಳ್ಳಲಿಲ್ಲ ಮತ್ತು ಪ್ರದರ್ಶಿಸಲಿಲ್ಲ.

೧೭೯೨ರಲ್ಲಿ ಮದ್ರಾಸಿನಿಂದ ಸೇನೆ ಸಮೇತ ಬೆಂಗಳೂರಿನ ಕಡೆಗೆ ಹೊರಟಿದ್ದ ಕಾರನ್‌ವಾಲೀಸನನ್ನು ತಡೆಯಲು ಟಿಪ್ಪುವು ಅಂಬೂರಿನ ಕಣಿವೆಯ ದ್ವಾರದಲ್ಲಿ

ಕಾದುಕುಳಿತನು. ಆದರೆ, ಕಾರನ್‌ವಾಲೀಸನು ಮಾರ್ಗ ಬದಲಿಸಿ, ಬೆಂಗಳೂರಿನ ಸಮೀಪ ಬಂದು ಬೀಡುಬಿಟ್ಟನು. ಇಲ್ಲಿ ಟಿಪ್ಪುವಿನ ಗೂಢಾಚಾರಿಕೆಯ ವೈಫಲ್ಯವಿದೆ. ನಂತರ ಅಲ್ಲಿಂದ ಟಿಪ್ಪುವ ತನ್ನ ಸೈನ್ಯದೊಂದಿಗೆ ಬೆಂಗಳೂರಿನತ್ತ ಬಂದನು. ಆ ಸಮಯದಲ್ಲಿ ಬೆಂಗಳೂರನ್ನು ಮುತ್ತುವ ಸನ್ನಾಹದಲ್ಲಿ ಕಾರನ್‌ವಾಲೀಸ್ ಇದ್ದರೂ, ಅವನನ್ನು ಎದುರುಗೊಳ್ಳದೆ ಟಿಪ್ಪುವು ಕೆಂಗೇರಿಯ ಬಳಿಯ ಬೀಡುಬಿಟ್ಟದ್ದು ಅವನ ತಪ್ಪು ನಿರ್ಧಾರಗಳಲ್ಲಿ ಒಂದಾಗಿತ್ತು. ಸುಮಾರು ೧೫ ದಿವಸಗಳ ಕಾಲ ಬಹದ್ದೂರ್ ಖಾನ್ ಎಂಬ ವೃದ್ಧ ಬೆಂಗಳೂರು ಕೋಟೆಯ ಕಿಲ್ಲೇದಾರನಾಗಿ ಕಾರನ್‌ವಾಲೀಸನ ಮುತ್ತಿಗೆಯನ್ನು ತಡೆದು ನಿಲ್ಲಿಸಿದ್ದ ಸಂದರ್ಭದಲ್ಲಿಯೂ ಟಿಪ್ಪು ಖಾನನ ಸಹಾಯಕ್ಕೆ ಬಾರದೆ ತಪ್ಪು ಮಾಡಿದನು. ಇದು ಅವನ ಯುದ್ಧತಂತ್ರದ ಅಪ್ರಬುದ್ಧತೆಗೆ ಸಾಕ್ಷಿ ಎಂಬಂತೆ ಈ ಘಟನೆ ತೋರುತ್ತದೆ.

**ಟಿಪ್ಪು ಸುಲ್ತಾನನು ಕೋಟೆ**ಗಳು ಶತ್ರುಗಳ ವಶವಾಗುವುದರಿಂದ ಉಂಟಾಗುವ ತೊಂದರೆಯನ್ನರಿತು ಹಲವು ಕೋಟೆಗಳನ್ನು ಸ್ವತಃ ನಾಶಪಡಿಸುತ್ತಾನೆ. ಉದಾ. ಮಂಗಳೂರು ಕೋಟೆ, ಪಿರಿಯಾಪಟ್ಟಣದ ಕೋಟೆ, ಬೆಂಗಳೂರಿನ ಕೋಟೆ, ಗಂಜಾಮಿನ ಸುತ್ತಲೂ ಇದ್ದ ಕೋಟೆ ಮುಂತಾದವುಗಳನ್ನು ಹೆಸರಿಸಬಹುದು. ಪ್ರಸ್ತುತ ಮಹಾಪ್ರಬಂಧದ ಅಧ್ಯಯನವನ್ನು ಕೈಗೊಳ್ಳುವ ಮೊದಲು ಟಿಪ್ಪುವಿನ ಮರಣ ನಂತರ ಬ್ರಿಟಿಷರು ಎಲ್ಲ ಮುಖ್ಯವಾದ ಕೋಟೆಗಳನ್ನು ನಾಶಪಡಿಸಿದರು ಎಂದು ಊಹಿಸಲಾಗಿತ್ತು. ಆದರೆ ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ ನಡೆಸಿದ ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ಮುಖ್ಯವಾದ ಅಂಶವೆಂದರೆ, ಕೋಟೆಗಳನ್ನು ಟಿಪ್ಪುವೇ ನಾಶಪಡಿಸಲು ಪ್ರಯತ್ನಿಸಿದನೇ ಹೊರತು ಬ್ರಿಟಿಷರು ಅಲ್ಲ. ಟಿಪ್ಪು ಸತ್ತ ನಂತರ ಹಲವು ಕೋಟೆಗಳಲ್ಲಿ ಆಡಳಿತ ಅಧಿಕಾರದ ಕೇಂದ್ರಗಳನ್ನು ಸ್ಥಾಪಿಸಿ ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಂಡಿರುವುದನ್ನು ಕಾಣಬಹುದು. ಉದಾಹರಣೆಗೆ: ಶ್ರೀರಂಗಪಟ್ಟಣ, ಮಧುಗಿರಿ, ಮಡಿಕೇರಿ, ವೆಲ್ಲೂರು, ಪೆನುಗೊಂಡಾ ಮುಂತಾದ ಕಡೆಗಳಲ್ಲಿ ಜಿಲ್ಲಾ ಮತ್ತು ತಾಲ್ಲೂಕು ಕಚೇರಿಗಳು ಕಾರ್ಯನಿರ್ವಹಿಸುತ್ತಿವೆ. ಬೆಂಗಳೂರಿನ ಕೋಟೆಯ ಎದುರಿನ ಟಿಪ್ಪು ಅರಮನೆಯಲ್ಲಿ ೧೮೩೪ ರಿಂದ ಅಠಾರ ಕಚೇರಿ ಕಾರ್ಯನಿರ್ವಹಿಸುತ್ತಿತ್ತು. ಹೈಕೋರ್ಟ್ ಕಟ್ಟಡ ನಿರ್ಮಾಣಗೊಂಡ ನಂತರ ಅಲ್ಲಿಗೆ ಸ್ಥಳಾಂತರಗೊಂಡಿತು. ಇಂತಹ ನಿದರ್ಶನಗಳು ಬೇರೆ ಕಡೆಗಳಲ್ಲಿಯೂ ಇರುವ ಸಾಧ್ಯತೆಗಳಿವೆ.

ದಕ್ಷಿಣ ಭಾರತದ ಸಂದರ್ಭದಲ್ಲಿ ತಾಂತ್ರಿಕ ಮತ್ತು ಭದ್ರತೆಯ ದೃಷ್ಟಿಯಿಂದ ಟಿಪ್ಪು ಸುಲ್ತಾನನ ಕಾಲದ ಕೋಟೆಗಳು ಉತ್ಕೃಷ್ಟವಾದ ಗುಣಮಟ್ಟವನ್ನು ಹೊಂದಿದ್ದವು. ಅದಕ್ಕಾಗಿ ಟಿಪ್ಪುವು ಫ್ರೆಂಚ್ ತಂತ್ರಜ್ಞರ ನೆರವನ್ನು ಪಡೆದುಕೊಂಡಿದ್ದನು. ಅಲ್ಲದೆ,

ಕೋಟೆಗಳನ್ನು ರಕ್ಷಣೆ ಮತ್ತು ಆಕ್ರಮಣದ ದೃಷ್ಟಿಯಿಂದ ಪ್ರಯೋಗಶೀಲತೆಗೆ ಒಳಪಡಿಸುತ್ತಲೂ ಇದ್ದಂತೆ ಕಂಡುಬರುತ್ತದೆ. ಪ್ರತಿ ಕೋಟೆಗಳನ್ನು ಕೈವಶ ಮಾಡಿಕೊಂಡ ನಂತರ ಅವುಗಳನ್ನು ದುರಸ್ತಿ ಮಾಡಿಸಲು ಮತ್ತು ಪುನರ್ರಚಿಸಲು ಅಧಿಕಾರಿಗಳನ್ನು ನೇಮಿಸುತ್ತಿದ್ದ ನಿದರ್ಶನಗಳನ್ನು ಹೈದರ್ ಮತ್ತು ಟಿಪ್ಪು ಕಾಲಗಳಲ್ಲಿ ಕಾಣಬಹುದಾಗಿದೆ. ಇದು ಅವರು ಕೋಟೆಗೆ ಕೊಟ್ಟ ಮಹತ್ವವನ್ನು ತೋರ್ಪಡಿಸುತ್ತದೆ. ಬಲಿಷ್ಠ ಮತ್ತು ಬೃಹತ್ ಸಂಸ್ಥಾನವನ್ನು ಕಟ್ಟಬೇಕಾದರೆ ಬಲಿಷ್ಠವಾದ ಕೋಟೆಗಳು ಅತ್ಯವಶ್ಯಕ ಎಂಬುದನ್ನು ಅವರಿಬ್ಬರೂ ಮನಗಂಡಿದ್ದರು ಮತ್ತು ಆ ನಿಟ್ಟಿನಲ್ಲಿ ಕ್ರಿಯಾಶೀಲರಾಗಿದ್ದರೆಂದು ಅಧ್ಯಯನವು ತೋರ್ಪಡಿಸುತ್ತದೆ.

**ಕೊನೆಯದಾಗಿ,** ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಇಬ್ಬರ ವ್ಯಕ್ತಿತ್ವಗಳು ಮೇಲ್ನೋಟಕ್ಕೆ ಒಂದೇ ಎಂಬಂತೆ ಕಂಡರೂ, ಹೋಲಿಕೆಗಳಿಗಿಂತ ವ್ಯತ್ಯಾಸಗಳಿವೆ. ಹೈದರಾಲಿ ಅನಕ್ಷರಸ್ಥ. ಆದರೆ, ಸೇನೆಯನ್ನು ಸಂಘಟಿಸುವಲ್ಲಿ ಮತ್ತು ಯುದ್ಧತಂತ್ರ ಹೆಣೆಯುವಲ್ಲಿ ನಿಪುಣನಾಗಿದ್ದನು. ಟಿಪ್ಪುವು ವಿದ್ಯಾವಂತ, ಲೋಕಜ್ಞಾನ ತಿಳಿದವನು. ರಕ್ಷಣೆಯ ಸಾಧನಗಳಾದ ಕೋಟೆಗಳನ್ನು ತಾಂತ್ರಿಕವಾಗಿ ಅಭಿವೃದ್ಧಿ ಪಡಿಸುವ ನಿಟ್ಟಿನಲ್ಲಿ ಆಲೋಚಿಸುತ್ತಿದ್ದನು. ಹೈದರಾಲಿಯು ಸದಾ ಸೇನೆಯೊಂದಿಗೆ ಯುದ್ಧ ಮತ್ತು ಆಕ್ರಮಣಗಳಲ್ಲಿಯೇ ತನ್ನ ಬದುಕಿನ ಬಹುಕಾಲವನ್ನು ಕಳೆದನು. ಟಿಪ್ಪು ಕೂಡ ತನ್ನ ತಂದೆಯಂತೆಯೇ ಪರಾಕ್ರಮಿಯಾದರೂ, ಅವನ ವ್ಯಕ್ತಿತ್ವ ತುಸು ಭಿನ್ನವಾದುದು. ಅವನು ಹೈದರನಂತೆ ಸೈನಿಕ ಕಾರ್ಯಾಚರಣೆ ನಡೆಸಿ ಯಶಸ್ವಿಯಾಗಲಿಲ್ಲವಾದರೂ, ರಕ್ಷಣೆಯ ಸಾಧನಗಳಾದ ಕೋಟೆಗಳನ್ನು ಪುನರ್ರಚಿಸಿ ಬಲಗೊಳಿಸಿದನು. ಒಟ್ಟಾರೆಯಾಗಿ ನೋಡಿದಾಗ ಹೈದರನು ಸೇನೆಯ ಪ್ರತೀಕವಾಗಿ ಕಂಡರೆ, ಟಿಪ್ಪುವು ಕೋಟೆಯ ಪ್ರತೀಕವಾಗಿ ಕಾಣುತ್ತಾನೆ. ಸೇನೆಯ ಪ್ರತೀಕನಾದ ಹೈದರನು ಸೇನಾ ಬಿಡಾರದಲ್ಲಿಯೇ ಕೊನೆಯುಸಿರೆಳೆದರೆ, ಕೋಟೆಯ ಪ್ರತೀಕನಾದ ಟಿಪ್ಪುವು ತನ್ನ ಕೋಟೆಯ ಆವರಣದಲ್ಲಿಯೇ ಕೊನೆಯುಸಿರೆಳೆದನು. ಆದ್ದರಿಂದ ಹೈದರ್ ಮತ್ತು ಟಿಪ್ಪು ಎಂಬ ಈ ಇಬ್ಬರ ವ್ಯಕ್ತಿತ್ವಗಳು ಆಕ್ರಮಣ ಮತ್ತು ರಕ್ಷಣಾ ಸಾಧನಗಳಾದ ಸೇನೆ ಮತ್ತು ಕೋಟೆಯ ಪ್ರತೀಕಗಳಾಗಿ ಕಾಣುತ್ತಾರೆ.

***

## ಟಿಪ್ಪಣಿಗಳು

೧. ಗೆಲುವು ಕಾಣದೆ ಹೈರಾಣಾದ ಹೈದರಾಲಿಯು ಭೇದೋಪಾಯವನ್ನು ಅನುಸರಿಸಿದನು. ಚಿತ್ರದುರ್ಗ ಕೆಲವು ನಿಷ್ಠಾವಂತ ಮುಸಲ್ಮಾನ ಸರದಾರರನ್ನು ಖಾಜಿ ಸಾಹೇಬರ ಮೂಲಕ ಸಂಪರ್ಕಿಸಿ ಅವರನ್ನು ಪುಸಲಾಯಿಸುವಲ್ಲಿ ಯಶಸ್ವಿಯಾದನು. ಅದೇ ರೀತಿಯಲ್ಲಿ ಕೆಲವು ಬ್ರಾಹ್ಮಣ ಅಧಿಕಾರಿಗಳು ಲಂಚ ಮತ್ತು ರುಷುವತ್ತಿಗೆ ಬಲಿಯಾದರು. ಪರಿಣಾಮವಾಗಿ ಮೊಹರಂ ಹಬ್ಬದ ಹೊತ್ತಿಗೆ ಮದ್ದಿಗೆ ಎಣ್ಣೆ ಹಾಕಿದರು. ತಮ್ಮ ತಮ್ಮ ಕತ್ತಿಯನ್ನು ಮುರಿದುಕೊಂಡರು, ಕೋವಿ ಮತ್ತು ತೋಪುಗಳನ್ನು ಕೆಡಿಸಿದರು. ಬಾಣದ ತುದಿಗೆ ಸಿಕ್ಕಿಸಿದ್ದ ಗುಳಗಳನ್ನು ಮುರಿದರು. ಯುದ್ಧ ಮಾಡುವ ನೆಪದಲ್ಲಿ ಕೋಟೆ ಇಳಿದು ಹೊರಗೆ ಹೋದವರು ಹಿಂದಿರುಗಿ ಬರಲಿಲ್ಲ. ಹೀಗೆ ಹೈದರಾಲಿಯ ಸೈನ್ಯಕ್ಕೆ ಮದಕರಿನಾಯಕನ ಕಡೆಯವರೇ ಅನುಕೂಲ ಕಲ್ಪಿಸಿದರು.

೨. ದೊಡ್ಡಮದಕರಿ ನಾಯಕನು ರಾಜಾ ಮದಕರಿನಾಯಕನ ಸಾಕು ತಂದೆಯಾದ ಕಸ್ತೂರಿ ರಂಗಪ್ಪನ ಅಣ್ಣನ ಮಗ. ಹೈದರಾಲಿಯು ಚಿತ್ರದುರ್ಗವನ್ನು ಮುತ್ತಿದಾಗ ರಾಜಾ ಮದಕರಿಗೂ ಯಾವುದೋ ವಿಚಾರವಾಗಿ ವೈಮನಸ್ಸುಂಟಾಯಿತು. ಇದನ್ನು ಅರಿತ ಹೈದರಾಲಿಯು ತನ್ನ ಕಡೆಗೆ ದೊಡ್ಡಮದಕರಿ ನಾಯಕನನ್ನು ಒಲಿಸಿಕೊಳ್ಳುವಲ್ಲಿ ಯಶಸ್ವಿಯಾದನು. ದೊಡ್ಡಮದಕರಿಯು ಹೈದರನ ಸೈನ್ಯದಲ್ಲಿ ಸಾವಿರ ಸೇನೆಯ ಸರದಾರನಾಗಿ ನೇಮಕಗೊಂಡನು. ಅವನು ಮುಂದೆ ಕರ್ನಲ್ ಬೈಲಿಯ ವಿರುದ್ಧದ ಕದನದಲ್ಲಿ, ನಂತರ ತಿರುಚನಾಪಳ್ಳಿ, ಕಡಪ ಮತ್ತು ವೆಲ್ಲೂರುಗಳಲ್ಲಿ ನಡೆದ ಕದನಗಳಲ್ಲಿ ಧೀರತನವನ್ನು ತೋರಿ ಹೈದರನಿಗೆ ಗೆಲುವನ್ನು ತಂದು ಕೊಟ್ಟನು. ಇದರಿಂದ ಸಂತುಷ್ಟನಾದ ಹೈದರನು ಅವನ ಸಂಬಳವನ್ನು ೩೦೦ ರಿಂದ ೫೦೦ ರೂಗೆ ಹೆಚ್ಚಿಸಿದನು. ಎರಡನೆಯ ಮೈಸೂರು ಯುದ್ಧದ ವೇಳೆ ಮಲಬಾರಿನಲ್ಲಿ ಟಿಪ್ಪುವು ಸೆಣೆಸುತ್ತಿದ್ದಾಗ ಬ್ರಿಟಿಷರ ಧಾಳಿಯನ್ನು ಎದುರಿಸಲಾಗದೆ ಟಿಪ್ಪುವಿನ ಸೇನೆ ಫಿರಂಗಿ ಮತ್ತು ಮದ್ದುಗುಂಡುಗಳನ್ನು ತೊರೆದು ಪಲಾಯನ ಗೈಯುತ್ತಿದ್ದ ಸಂದರ್ಭದಲ್ಲಿ ಬೆನ್ನಟ್ಟಿ ಬರುತ್ತಿದ್ದ ಕಂಪನಿ ಸೇನೆಯನ್ನು ತಡೆದು ಸೋಲಿಸಿ ಹಿಮ್ಮೆಟ್ಟಿಸಿದ ದೊಡ್ಡ ಮದಕರಿನಾಯಕನ ಸಾಹಸವನ್ನು ಮೆಚ್ಚಿದ ಟಿಪ್ಪುವು ಚಿತ್ರದುರ್ಗದ ಒಡೆತನವನ್ನು ಮರಳಿ ಕೊಡುವ ವಾಗ್ದಾನವನ್ನು ಅವನಿಗೆ ನೀಡಿದನು. ಆದರೆ ನಂತರ ನಡೆದ ಅನಿರೀಕ್ಷಿತ ಘಟನೆಗಳಲ್ಲಿ ಟಿಪ್ಪುವಿನ ಶತ್ರುವಾಗಿ ಮಾರ್ಪಟ್ಟು ತಿರುವಾಂಕೂರಿನ ರಾಜನಲ್ಲಿ ನೆಲೆನಿಂತನು. ಟಿಪ್ಪು ಸತ್ತ ನಂತರ ತನ್ನ ಸಂಸ್ಥಾನವನ್ನು ಪಡೆಯುವ ಸಲುವಾಗಿ ಬ್ರಿಟಿಷರ ಮೂಲಕ ನಿರಂತರ ಪ್ರಯತ್ನಿಸಿದನು. ಕೊನೆಯವರೆಗೂ ಅದು ಮರೀಚಿಕೆಯಾಗಿಯೇ ಉಳಿಯಿತು (ಶ್ರೀನಿವಾಸ ಜೋಯಿಸ್ ೧೯೭೬: ೧೧೭-೨೮).

೩. ಮದಕರಿಯ ಬೇಡ ಸೈನಿಕರನ್ನು ಶ್ರೀರಂಗಪಟ್ಟಣಕ್ಕೆ ಸಾಗಿಸಿ, ಪಟ್ಟಣದ ಸಮೀಪದಲ್ಲಿ ಬೇಡರಹಳ್ಳಿ ಎಂಬ ನೆಲೆಯನ್ನು ಹೊಸದಾಗಿ ನಿರ್ಮಿಸಿ ಅಲ್ಲಿ ಅವರು ನೆಲೆಸಲು ವ್ಯವಸ್ಥೆ ಮಾಡಿದನು. ಹುಚ್ಚಪ್ಪನಾಯಕ, ಗೌಡಿನಾಗಿ ಮತ್ತು ಕಂಡೂರಿಯನ್ನು ಹೈದರಾಲಿಯು ಚಿತ್ರದುರ್ಗಕ್ಕೆ ಕಳುಹಿಸಿದನು.

ಪರಶುರಾಮಪ್ಪನಾಯಕ ಮತ್ತು ಭರಮಪ್ಪನಾಯಕನನ್ನು ಶ್ರೀರಂಗಪಟ್ಟಣದ ಸೆರೆಮನೆಯಿಂದ ಕಬ್ಬಾಳುದುರ್ಗದ ಸೆರೆಮನೆಗೆ ಸ್ಥಳಾಂತರಿಸಲಾಯಿತು. ಸೋದರರಿಬ್ಬರೂ ಒಂದು ರಾತ್ರಿ ಸೆರೆಮನೆಯಿಂದ ತಪ್ಪಿಸಿಕೊಂಡು ಹೋಗಲು ವಿಫಲ ಪ್ರಯತ್ನ ನಡೆಸಿದರು. ಪಹರೆಯವರಿಂದ ಈ ವಿಷಯ ತಿಳಿದ ಹೈದರನು ಮದಕರಿನಾಯಕನಿಗೆ ತಿಳಿಯದಂತೆ ಅವರಿಬ್ಬರನ್ನು ಚನ್ನಪಟ್ಟಣ ಮತ್ತು ಮದ್ದೂರು ಬಳಿಯ ಆಲದಮರಗಳಿಗೆ ಜಿಗಿದು ನೇಣು ಹಾಕಿಸಿದನು. ಶ್ರೀರಂಗಪಟ್ಟಣದ ಸೆರೆಮನೆಯಲ್ಲಿಯೇ ಮೃತನಾದ ಮದಕರಿನಾಯಕನನ್ನು ಅನೇಕ ದಾನಧರ್ಮ ಮತ್ತು ಮಾನಮರ್ಯಾದೆಗಳೊಡನೆ ಅವನ ದೇಹವನ್ನು ಪಶ್ಚಿಮ ವಾಹಿನಿಯ ದಂಡೆಯಲ್ಲಿ ದಹನ ಮಾಡಿಸಿದನು (ಶ್ರೀನಿವಾಸ ಜೋಯಿಸ್ ೧೯೭೬: ೧೧೫-೧೬).

೪. ಷೇಕ್ ಅಯಾಜನು ಹೈದರಾಲಿಯು ಮಲಬಾರಿನ ಮೇಲೆ ಆಕ್ರಮಣ ನಡೆಸಿದಾಗ ಸಿಕ್ಕಿದ ಸ್ಫುರದ್ರೂಪಿಯೂ, ಸೂಕ್ಷ್ಮಮತಿಯೂ ಆದ ಹಿಂದೂ ಬಾಲಕ. ಅವನನ್ನು ತನ್ನ ಮತಕ್ಕೆ ಸೇರಿಸಿಕೊಂಡು ಷೇಕ್ ಅಯಾಜ್ ಎಂದು ಕರೆದನು. ಅವನನ್ನು ತನ್ನ ದತ್ತುಪತ್ರನಂತೆ ಸಾಕಿದನು. ಅವನ ಸದ್ಗುಣಗಳನ್ನು ತನ್ನ ಮಗ ಟಿಪ್ಪು ಸುಲ್ತಾನನಿಗೆ ತೋರಿಸಿ ಅವನನ್ನು ಪ್ರಶಂಸಿಸುತ್ತಿದ್ದನಲ್ಲದೆ ಟಿಪ್ಪುವನ್ನು ನಿಂದಿಸುತ್ತಿದ್ದನು. ಇದು ಸಹಜವಾಗಿ ಟಿಪ್ಪುವಿನಲ್ಲಿ ಅಯಾಜನ ಬಗೆಗೆ ಮಾತ್ಸರ್ಯವನ್ನು ಮೊಳೆಸಿತು. ಹೈದರನು ಪ್ರಾಪ್ತ ವಯಸ್ಕನಾಗಿದ್ದ ಷೇಕ್ ಅಯಾಜನಿಗೆ ಚಿತ್ರದುರ್ಗದ ಫೌಜುದಾರಿ ಅಧಿಕಾರವನ್ನು ವಹಿಸಿಕೊಟ್ಟನು. ಮುಂದೆ ಇವನು ಬಿದನೂರಿನ ಫೌಜುದಾರನಾಗಿಯೂ ನೇಮಕಗೊಂಡಿದ್ದನು.

೫. ಹೈದರನ ಶವವನ್ನು ಒಂದು ಭಾರೀ ಪೆಟ್ಟಿಗೆಯಲ್ಲಿಟ್ಟು, ಭಾರೀ ನಿಧಿಯನ್ನು ಕಳುಹಿಸುತ್ತಿರುವ ಹಾಗೆ ಕಟ್ಟೆಚ್ಚರವಹಿಸಿ ಸಮರ್ಥ ಬೆಂಗಾವಲಿನಲ್ಲಿ ಕೋಲಾರಕ್ಕೆ ಕಳುಹಿಸಲಾಯಿತು. ಅಲ್ಲಿ ತಾತ್ಕಾಲಿಕವಾಗಿ ಇರಿಸಿ, ನಂತರ ಶ್ರೀರಂಗಪಟ್ಟಣದ ಗಂಜಾಂನಲ್ಲಿ ವೈಭವೋಪೇತವಾದ ಸಮಾಧಿಯನ್ನು ಕಟ್ಟಿಸಿ ಅಲ್ಲಿಗೆ ಸ್ಥಳಾಂತರಿಸಿದರು.

೬ ಪಿರಿಯಾಪಟ್ಟಣದಲ್ಲಿ ಸಿಡುಬು ರೋಗ ಹರಡಿ ವೀರರಾಜನ ತಾಯಿ ದೇವಾಂಬಿಕೆ ಜೊತೆಗೆ ಕೆಲವು ಮಕ್ಕಳು ಮೃತರಾದರು.

೭ ಟಿಪ್ಪುವು ಮಡಿಕೇರಿಗೆ ಇಟ್ಟ ಹೆಸರು 'ಜಾಫರ್‌ಬಾದ್' ಎಂದು ಡಿ.ಎನ್.ಕೃಷ್ಣಯ್ಯ (ಕೃಷ್ಣಯ್ಯ ೧೯೯೫(೧೯೭೪): ೧೫೧) ಮತ್ತು ಟಿ.ಪಿ. ವಿಜಯ್ (ತಂಬಂಡ ೨೦೦೧: ೩೨೧) ಅವರು ದಾಖಲಿಸಿದ್ದಾರೆ. ಆದರೆ **ರಾಜೇಂದ್ರನಾಮೆ**ಯಲ್ಲಿ 'ಜಹೀರಾಬಾದ್' ಎಂದು ಕರೆದಿದೆ (**ರಾಜೇಂದ್ರನಾಮೆ**: ೨೪೯).

೮. ವೀರರಾಜೇಂದ್ರನ ಪರಿವಾರದಲ್ಲಿ ವೀರರಾಜೇಂದ್ರನ ಪತ್ನಿ ನಂಜಮ್ಮಾಜಿ, ಅವನ ಎಂಟು ತಿಂಗಳ ಮಗು ರಾಜಮ್ಮಾಜಿ ಮತ್ತು ಅವನ ತಮ್ಮಂದಿರಾದ ಅಪ್ಪಾಜಿರಾಜ ಮತ್ತು ಲಿಂಗರಾಜ ಇದ್ದರು.

೯. ಖಾದರ್‌ಖಾನನನ್ನು ಕೊಲ್ಲದಿರಲು ಪ್ರಬಲ ಕಾರಣವಿತ್ತು. ಟಿಪ್ಪುವು ವೀರರಾಜನ ಕುಟುಂಬದವರನ್ನು ಗೊರೂರಿನಿಂದ ಪಿರಿಯಾಪಟ್ಟಣ ಕೋಟೆಗೆ ಸಾಗಿಸುವ ಸಂದರ್ಭದಲ್ಲಿ ವೀರರಾಜನ ಮೂರವರು ಸಹೋದರಿಯರನ್ನು ತನ್ನ ಜನಾನಕ್ಕೆ ಕಳಿಸುವನು. ಅವರಲ್ಲಿ ದೇವಮ್ಮಾಜಿಗೆ ಮೆಹ್ತಾಬ್ ಎಂದೂ ಹಾಗೂ ನೀಲಮ್ಮಾಜಿಗೆ ಅಫ್ತಾಬ್ ಎಂದೂ ನಾಮಕರಣ ಮಾಡಿದನು. ಮೂರನೆಯವಳನ್ನು ತನ್ನ ಆಪ್ತನಾದ ಖಾದರ್‌ಖಾನನಿಗೆ ಉಡುಗೊರೆಯಗಿ ನೀಡಿದನು. ಆದರೆ ಖಾದರ್‌ಖಾನನು ಅವಳನ್ನು ಬಹಳ ಗೌರವದಿಂದ ಕಂಡು ಅವಳ ಜಾತಿಯವಳನ್ನೇ ಪರಿಚಾರಿಕೆಯನ್ನಾಗಿ ನೇಮಿಸಿದನು. ವೀರರಾಜೇಂದ್ರನು ಪಿರಯಾಪಟ್ಟಣದಿಂದ ತಪ್ಪಿಸಿಕೊಂಡು ಹೋಗುವಾಗ ಖಾದರ್‌ಖಾನನು ರಹಸ್ಯವಾಗಿ ವೀರರಾಜೇಂದ್ರನ ತಂಗಿಯನ್ನು ಜೊತೆಗೆ ಕಳುಹಿಸಿಕೊಡುವನು. ಹೀಗೆ ತನ್ನ ತಂಗಿಯ ಮಾನ ಉಳಿಸಿದ ಖಾದರ್‌ಖಾನನಿಗೆ ವೀರರಾಜೇಂದ್ರನು ಜೀವದಾನ ನೀಡಿದನು.

೧೦. ಬೆಂಗಳೂರಿನ ಮೇಲೆ ಆಕ್ರಮಣ ನಡೆದಿದ್ದು ಮಾರ್ಚ್ ೪ ರಂದು ಎಂದು ಅರುಣಿಯವರು ದಾಖಲಿಸಿದರೆ ಬ.ನ. ಸುಂದರ ರಾವ್ ಅವರು ೧೭೯೧ನೆಯ ಮಾರ್ಚ್ ೨೧ರ ಹುಣ್ಣಿಮೆಯ ರಾತ್ರಿ ಕಾರನ್‌ವಾಲೀಸನು ಬೆಂಗಳೂರು ಕೋಟೆಯ ಮುತ್ತಿಗೆಯನ್ನು ಆರಂಭಿಸಿದನು ಎಂದು ದಾಖಲಿಸಿದ್ದಾರೆ (ಸುಂದರ್ ರಾವ್ ೨೦೧೧(೧೯೮೫): ೨೩೨). ಅರುಣಿ ಅವರು ವಿಲ್ಕ್ಸ್ ದಾಖಲಿಸಿರುವ ದಿನಾಂಕಗಳನ್ನೆ ಪರಿಗಣಿಸಿರುವಂತೆ ತೋರುತ್ತದೆ.

೧೧. ಅರುಣಿ ಅವರು ವಿಶ್ವದಲ್ಲಿಯೇ ಪ್ರಪ್ರಥಮಬಾರಿಗೆ ರಾಕೆಟ್ ಮದ್ದಿನ ಅಸ್ತ್ರಗಳ ಪ್ರಯೋಗ ಬೆಂಗಳೂರಿನಲ್ಲಿಯೇ ಎಂಬುದು ಐತಿಹಾಸಿಕ ದಾಖಲೆಯಾಗಿದೆ ಎಂದು ರಾಕೆಟ್ ಬಳಕೆಯನ್ನು ಕುರಿತು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಚಿಲ್ಲಂ ಬ್ರಾಮ್‌ನಲ್ಲಿದ್ದ ಹೈದರಾಲಿಯ ಕೋಟೆಯ ಮೇಲೆ ಸರ್ ಐರ್ ಕೂಟನು ರಾತ್ರಿಯ ವೇಳೆ ಮುತ್ತಿಗೆ ಹಾಕಿದಾಗ ಖಿಲ್ಲೇದಾರ ಯೂಸೂಫ್ ಖಾನ್ ಕಂಪನಿ ಸೇನೆಯ ಮೇಲೆ ಮೊದಲು ರಾಕೆಟ್ ಧಾಳಿ ನಡೆಸಿದನೆಂದು ಎಸ್.ಕೆ. ದಾಸ್ ದಾಖಲಿಸಿದ್ದಾರೆ (ದಾಸ್ ೨೦೧೧: ೭).

೧೨. ಬಹದ್ದೂರ್ ಖಾನ್‌ನನ್ನು ಟಿಪ್ಪುಸುಲ್ತಾನ್ ಆರ್ಕಾಟ್ ಪ್ರದೇಶದಲ್ಲಿ ಸೈನಿಕ ಕಾರ್ಯಾಚರಣೆ ಮಾಡುವ ಸಂದರ್ಭದಲ್ಲಿ ಕೃಷ್ಣಗಿರಿಯಿಂದ ಕರೆತರುತ್ತಾನೆ. ವಿರೋಧಿಗಳು ಯುದ್ಧದ ಸಂಚನ್ನು ರೂಪಿಸುತ್ತಿದ್ದಂತೆ ಹಳೆಯ ಕಿಲ್ಲೇದಾರನಾದ ಸಯ್ಯೆದ್ ಪೀರ್‌ನನ್ನು ಬದಲಿಸಿ ಬಹದ್ದೂರ್ ಖಾನನನ್ನು ಬೆಂಗಳೂರಿನ ಕಿಲ್ಲೇದಾರನನ್ನಾಗಿ ಟಿಪ್ಪುಸುಲ್ತಾನ್ ನೇಮಿಸುತ್ತಾನೆ.

೧೩. ಟಿಪ್ಪುವೇನಾದರೂ ಶರಣಾಗತನಾದರೆ, ಶಾಂತಿಸ್ಥಾಪನೆಯ ವಿಧಾನ ಹೇಗಿರಬೇಕು ಎನ್ನುವುದರ ಬಗೆಗೆ ರಹಸ್ಯವಾದ ಆಜ್ಞೆಗಳೂ ಇದ್ದವು. ಹೊಸತೊಂದು ಸಂಧಿಯ ಪ್ರಾಥಮಿಕ ಸ್ವರೂಪದ ಅನುಚ್ಛೇದಗಳನ್ನುಳ್ಳ ಕರಡು ಒಪ್ಪಂದ ಎರಡು ಬೇರೆ ಬೇರೆ ಆವೃತ್ತಿಗಳಿದ್ದವು. ಎ–ಕರಡು ಮತ್ತು ಬಿ–ಕರಡು. ತುಂಬಾ ಉಗ್ರವಾಗಿರುವ ಎ–ಕರಡು ಪ್ರತಿಯನ್ನು ಶ್ರೀರಂಗಪಟ್ಟಣದ ಮೇಲೆ ಫಿರಂಗಿಗಳನ್ನು

ಉಪಾಯಿಸುವುದಕ್ಕಿಂತ ಮೊದಲು ಟಿಪ್ಪುವು ಸಂಧಿಗೆ ಬಂದರೆ ಉಪಯೋಗಿಸತಕ್ಕದ್ದು; ಅದಾದ ನಂತರ ಶರಣು ಬಂದರೆ ಬಿ–ಕರಡನ್ನು ಉಪಯೋಗಿಸತಕ್ಕದ್ದು. ಎ–ಕರಡಿನಲ್ಲಿ ಹೀಗೆ ಹೇಳಿತ್ತು:

ಮೊದಲನೆಯದಾಗಿ, ಉಭಯ ಪಕ್ಷಗಳಲ್ಲೂ ಒಬ್ಬೊಬ್ಬ ರಾಯಭಾರಿ ಇರತಕ್ಕದ್ದು.

ಎರಡನೆಯದಾಗಿ, ಟಿಪ್ಪುವು ತನ್ನ ಸೈನ್ಯದಲ್ಲಿರುವ ಎಲ್ಲ ಫ್ರೆಂಚರನ್ನೂ ಇತರ ಯೂರೋಪಿಯನ್ನರನ್ನೂ ತೆಗೆದುಹಾಕಬೇಕು.

ಮೂರನೆಯದಾಗಿ, ಇನ್ನು ಮುಂದೆ ಫ್ರೆಂಚರೊಂದಿಗೆ ಯಾವುದೇ ಬಗೆಯ ಸಂಪರ್ಕಗಳ ಪರಿತ್ಯಾಗ.

ನಾಲ್ಕನೆಯದಾಗಿ, ಇಡೀ ಮಲಬಾರ್ ಕರಾವಳಿಯನ್ನು ಇಂಗ್ಲಿಷರಿಗೆ ವಹಿಸಿಕೊಡತಕ್ಕದ್ದು.

ಐದನೆಯದಾಗಿ, ಅಮರಸುಳ್ಯ, ಈಶ್ವರಸೀಮೆ ಮತ್ತು ತಂಬಚೇರಿ ಕಣಿವೆ ಇವುಗಳ ಮೇಲಿನ ತನ್ನ ಹಕ್ಕುಗಳನ್ನು ಪೂರ್ತಿಯಾಗಿ ಬಿಟ್ಟುಕೊಡತಕ್ಕದ್ದು.

ಆರನೆಯದಾಗಿ, ಒಂದೂವರೆ ಕೋಟಿ ರೂಪಾಯಿಗಳ ನಷ್ಟಭರ್ತಿ ತುಂಬಿ ಕೊಡತಕ್ಕದ್ದು, ಅದರಲ್ಲಿ ಅರ್ಧವನ್ನು ತಕ್ಷಣವೇ, ಹಾಗೂ ಉಳಿಕೆಯನ್ನು ಆರುತಿಂಗಳ ಒಳಗಾಗಿ ಸಲ್ಲಿಸಬೇಕು.

ಏಳನೆಯದಾಗಿ, ಎಲ್ಲ ಯುದ್ಧಖೈದಿಗಳನ್ನು ಬಿಡುಗಡೆ ಮಾಡುವುದು.

ಎಂಟನೆಯದಾಗಿ, ಶ್ರೀರಂಗಪಟ್ಟಣವಲ್ಲದೆ ಬೇರೆ ಕೆಲವು ಕೋಟೆಗಳನ್ನು ಕೊಡುವುದು ಹಾಗೂ ಹಿರಿಯ ಗಂಡುಮಕ್ಕಳಲ್ಲಿ ಮೂವರನ್ನು ಒತ್ತೆಯಾಗಿ ಕೊಡುವುದು.

ಬಿ–ಕರಡಿನಲ್ಲಿ ೧,೨,೩ ಮತ್ತು ೫ನೆಯ ನಿಯಮಗಳು ಎ–ಕರಡಿನಂತೆಯೇ ಇದ್ದವು. ಸಂಸ್ಥಾನಭಾಗಗಳನ್ನು ನಷ್ಟ ಭರ್ತಿ ಹಣವನ್ನು ಒಪ್ಪಿಸುವುದನ್ನು ಕುರಿತ ೪ ಮತ್ತು ೬ನೆಯ ಕರಾರುಗಳು ಇನ್ನು ಕಠೋರವಾಗಿದ್ದವು. ನಾಲ್ಕನೆಯ ಒಂದು ಪಾಲಿಗೆ ಬದಲು ಟಿಪ್ಪುವಿಗುಳಿದಿದ್ದ ಸಂಸ್ಥಾನದ ಅರ್ಧಭಾಗವನ್ನು ಕೊಡಲು ಒತ್ತಾಯಿಸಲಾಗಿತ್ತು. ನಷ್ಟಭರ್ತಿ ಹಣವನ್ನು ಎರಡು ಕೋಟಿಗೆ ಏರಿಸಲಾಗಿತ್ತು. ಟಿಪ್ಪುವಿನ ಒಟ್ಟು ಆಸ್ತಿ ಪಾಸ್ತಿ ೩೯ ೧/೨ ಲಕ್ಷ ಪಗೋಡಗಳೆಂದು ಅಂದಾಜು ಮಾಡಲಾಗಿತ್ತು. ಅದರಲ್ಲಿ ಒಟ್ಟು ೧೯ ೩/೪ ಲಕ್ಷ ವರಮಾನದ ಭಾಗಗಳನ್ನು (ಮಿತ್ರರು ಒಬ್ಬೊಬ್ಬರಿಗೂ ೬ ೧/೨ ಲಕ್ಷ) ವಹಿಸಿಕೊಡಬೇಕಾಗಿತ್ತು. ಈ ಒಪ್ಪಂದದ ಕರಡುಗಳನ್ನು ಉಪಯೋಗಿಸುವ ವಿಧಾನದ ಬಗೆಗೆ ಹ್ಯಾರಿಸನಿಗೆ ವಿವರವಾಗಿ ತಿಳಿಸಿಕೊಡಲಾಗಿತ್ತು (ಷೇಕ್‌ಅಲಿ ೧೯೯೭: ೪೧೦–೪೧೧).

***

# ಅಧ್ಯಾಯ–೫

# ಮೌಖಿಕ ಕಥನಗಳಲ್ಲಿ ಕೋಟೆಗಳು

ಪ್ರಸ್ತುತ ಅಧ್ಯಾಯದಲ್ಲಿ ಕೋಟೆಗಳಿಗೆ ಸಂಬಂಧಿಸಿದ ಮೌಖಿಕ ಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.[೧] ಮೌಖಿಕ ಸಾಹಿತ್ಯದಲ್ಲಿ ದೊರಕುವ ವಿವರಗಳನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ನಿರೂಪಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಕೋಟೆ ಮತ್ತು ಜನಸಾಮಾನ್ಯರ ನಡುವಿನ ಬಾಂಧವ್ಯ ಮತ್ತು ನಂಬಿಕೆಗಳ ಜೊತೆಗೆ ಹೆಣೆದುಕೊಂಡಿರುವ ವೃತ್ತಾಂತಗಳನ್ನು ಐತಿಹಾಸಿಕ ದೃಷ್ಟಿಯಿಂದ ವಿಮರ್ಶಿಸಿ, ಅವುಗಳ ಆಶಯಗಳನ್ನು ಗುರುತಿಸುವ ಪ್ರಯತ್ನವನ್ನು ನಡೆಸಲಾಗಿದೆ. ಕೋಟೆಗೆ ಸಂಬಂಧಿಸಿದ ಮೌಖಿಕ ಕಥನಗಳಲ್ಲಿನ ವೃತ್ತಾಂತಗಳನ್ನು ಮೌಖಿಕ ಆಕರಗಳ ಹಿನ್ನೆಲೆಯಲ್ಲಿ ನಾಲ್ಕು ಭಾಗಗಳಾಗಿ ವರ್ಗೀಕರಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅವುಗಳನ್ನು ಐತಿಹ್ಯಗಳು, ಲಾವಣಿಗಳು, ನಂಬಿಕೆ ಮತ್ತು ಆಚರಣೆಗಳು ಹಾಗೂ ನಿರೂಪಣಾ ಸಾಹಿತ್ಯಗಳು ಎಂದು ವರ್ಗೀಕರಿಸಿ ಅವುಗಳ ಮೂಲಕ ಕೋಟೆಗಳ ಬಗೆಗಿನ ಮೌಖಿಕ ಚರಿತ್ರೆಯನ್ನು ನಿರೂಪಿಸಲು ಯತ್ನಿಸಲಾಗಿದೆ.

ಮೊದಲ ಭಾಗವಾದ ಐತಿಹ್ಯಗಳಲ್ಲಿ, ಹೈದರಾಲಿ, ಟಿಪ್ಪು ಸುಲ್ತಾನ್ ಮತ್ತು ಇತರ ಐತಿಹಾಸಿಕ ವ್ಯಕ್ತಿಗಳ ಕಾಲಕ್ಕೆ ಸಂಬಂಧಿಸಿದ ವಿವರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮುಖ್ಯವಾಗಿ ಕೇರಳದ ಕರಾವಳಿಯಲ್ಲಿರುವ ಬೇಕಲ್ ಕೋಟೆಯಲ್ಲಿನ ಕೊಳವೊಂದಕ್ಕೆ ಸಂಬಂಧಿಸಿರುವ ಹೈದರಾಲಿ ಆಕ್ರಮಣ ಕಾಲದ ಸಂಗತಿಯಿಂದ ಆರಂಭಿಸಿ ಟಿಪ್ಪುವಿನ

ರಾಜಧಾನಿ ಶ್ರೀರಂಗಪಟ್ಟಣದ ಬಿದ್ದಗೋಡೆಯ ವರೆಗಿನ ಐತಿಹ್ಯಗಳನ್ನು ಪರಿಶೀಲಿಸಲಾಗಿದೆ. ಇವಲ್ಲದೆ, ಮಡಿಕೇರಿ, ಬಿಜ್ಜಾವರ, ಮಧುಗಿರಿ, ಚಿಕ್ಕನಾಯಕನಹಳ್ಳಿ, ಶಿರಾ, ಚಿತ್ರದುರ್ಗ ಮೊದಲಾದ ಕೋಟೆಗಳಿಗೆ ಸಂಬಂಧಿಸಿದಂತೆ ಸ್ಥಳ ಆಯ್ಕೆ, ನಿರ್ಮಾಣದ ಕುರಿತಾದ ಜನಪ್ರಿಯವಾದ ಐತಿಹ್ಯಗಳನ್ನು ಚರ್ಚಿಸಲಾಗಿದೆ.

ಎರಡನೆಯ ಭಾಗವಾದ ಲಾವಣಿಗಳಲ್ಲಿ, ಟಿಪ್ಪುವಿಗೆ ಸಂಬಂಧಿಸಿದ ಲಾವಣಿಗಳ ಜೊತೆಗೆ, ಇತರ ಕೋಟೆಗಳ ಬಗೆಗಿನ ಲಾವಣಿಗಳನ್ನು ಕಾಣಬಹುದು. ಇಲ್ಲಿನ ಅಧ್ಯಯನಗಳು ಕೇವಲ ಟಿಪ್ಪು ಸುಲ್ತಾನನ ಕಾಲಕ್ಕೆ ಮಾತ್ರ ಸೀಮಿತಗೊಂಡಿಲ್ಲ. ಅವನಿಗೂ ಪೂರ್ವ ಕಾಲಘಟ್ಟಕ್ಕೆ ಸಂಬಂಧಿಸಿದ ವಿವರಗಳನ್ನೂ ಅಧ್ಯಯನದ ವ್ಯಾಪ್ತಿಯೊಳಗೆ ತರಲಾಗಿದೆ. ಅಲ್ಲದೆ, ಟಿಪ್ಪುವು ಹೊಸದಾಗಿ ನಿರ್ಮಿಸಿದ ಕೋಟೆಗಳು ಬೆರಳೆಣಿಕೆಯಷ್ಟು. ಈಗಾಗಲೆ ಚರ್ಚಿಸಿದಂತೆ ಅವನು ತನ್ನ ಹಿಂದಿನ ಕಾಲಘಟ್ಟದ ಕೋಟೆಗಳನ್ನು ಸಮಕಾಲೀನ ಸಂದರ್ಭಕ್ಕೆ ಅನುಗುಣವಾಗಿ ಪರಿವರ್ತನೆಗೊಳಿಸಿಕೊಂಡಿರುವ ಕಾರಣ ಟಿಪ್ಪುವಿಗೂ ಪೂರ್ವದಲ್ಲಿ ಆ ಕೋಟೆಗಳ ಬಗೆಗೆ ಇರುವ ಲಾವಣಿಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಮುಖ್ಯವಾಗಿ ಕೋಟೆಯ ಹೆಬ್ಬಾಗಿಲು, ಕೊತ್ತಲ ಮತ್ತು ಬತೇರಿಗಳಿಗೆ ನೀಡುವ ಗರ್ಭಿಣಿಯರ ಬಲಿಗಳ ಬಗ್ಗೆ ಇರುವ ವಿವರಗಳನ್ನು ಚರ್ಚಿಸಲಾಗಿದೆ.

ಮೂರನೆಯ ಭಾಗವಾದ ನಂಬಿಕೆ ಮತ್ತು ಆಚರಣೆಗಳು ಕೋಟೆಯ ಜೊತೆಗೆ ಬೆಸೆದುಕೊಂಡಿವೆ. ಇವು ಮುಖ್ಯವಾಗಿ ಧಾರ್ಮಿಕ ಮಹತ್ವವನ್ನು ಹೊಂದಿದ್ದು, ಪೌರಾಣಿಕ ವ್ಯಕ್ತಿಗಳು ಮತ್ತು ಋಷಿ ಮುನಿಗಳ ಜೊತೆಗೆ ಸಂಬಂಧವನ್ನು ಕಲ್ಪಿಸಲಾಗಿರುತ್ತದೆ. ನಾಲ್ಕನೆಯ ಭಾಗವಾದ ನಿರೂಪಣಾ ಸಾಹಿತ್ಯಗಳು ಕಟ್ಟಿಕೊಡುವ ವಿವರಗಳು ಕೈಫಿಯತ್ತು, ಬಖೈರು ಮೊದಲಾದ ದಾಖಲೆಗಳಿಂದ ಲಭ್ಯವಾಗುವಂತಹದ್ದಾಗಿರುತ್ತದೆ. ಬೆಂಗಳೂರಿನ ಐತಿಹಾಸಿಕ ವಿವರಗಳನ್ನು ಬಖೈರುಗಳಲ್ಲಿ ದೊರಕುತ್ತವೆ. ಇವೆಲ್ಲವು ಅಪರೂಪದ ವಿವರಗಳಾಗಿದ್ದು, ಕೋಟೆಯ ಚರಿತ್ರೆಯನ್ನು ನಿರ್ವಚಿಸುವಲ್ಲಿ ಮಹತ್ವದ ಪಾತ್ರವಹಿಸುತ್ತವೆ. ಇವೆಲ್ಲವುಗಳ ಬಗೆಗೆ ಪ್ರಸ್ತುತ ಅಧ್ಯಾಯದಲ್ಲಿ ಅಭ್ಯಸಿಸಲಾಗಿದೆ. ಈ ರೀತಿಯಲ್ಲಿ ಶಿಷ್ಟ ಚರಿತ್ರೆಯ ಜೊತೆಜೊತೆಗೆ ಮೌಖಿಕ ಚರಿತ್ರೆಯ ವಿವಿಧ ಆಯಾಮಗಳನ್ನು ಅಭ್ಯಾಸಿಸುವ ಇರಾದೆ ಈ ಅಧ್ಯಯನಕ್ಕಿರುವುದು.

***

**ಮೌಖಿಕ ಇತಿಹಾಸದ ಅರ್ಥ**

ಜನಮಾರ್ಗದಲ್ಲಿ ಉಳಿದು ಬಂದ ಅನೇಕ ಚಾರಿತ್ರಿಕ ಸಂಗತಿಗಳ ನಿರೂಪಣೆಯೇ 'ಮೌಖಿಕ ಕಥನ'. ಈ ಮೌಖಿಕ ಕಥನಗಳನ್ನು ಇತಿಹಾಸವಾಗಿ ರೂಪಾಂತರಗೊಳಿಸುವ

ನಡುವಿನ ಪ್ರಕ್ರಿಯೆಯೇ 'ಮೌಖಿಕ ಇತಿಹಾಸ'. ಆದ್ದರಿಂದ "ಮೌಖಿಕ ಇತಿಹಾಸವು ಚರಿತ್ರೆಯ ಒಂದು ಪ್ರಕಾರವಾಗದೆ, ಆಧಾರಗಳಲ್ಲಿನ ಒಂದು ಬಗೆಯಾಗುತ್ತದೆ" ಎಂದು ವಸು ಎಂ.ವಿ. ಅವರು ಅಭಿಪ್ರಾಯಪಡುತ್ತಾರೆ (ವಸು ೨೦೦೪: ೯). ಮೌಖಿಕ ಇತಿಹಾಸ ತನ್ನದೇ ಆದ ವಿಶೇಷತೆಯನ್ನು ಹೊಂದಿದೆ. ಉಳಿದ ಬಗೆಗಳಂತಲ್ಲದೆ ಅದು ಬದುಕಿರುವ ವ್ಯಕ್ತಿಗಳೊಡನೆ ವ್ಯವಹರಿಸುತ್ತದೆ. ಮೌಖಿಕ ಇತಿಹಾಸದ ಆಕರಗಳು ವ್ಯಕ್ತಿಯಿಂದ ವ್ಯಕ್ತಿಗೆ, ಕಾಲದಿಂದ ಕಾಲಕ್ಕೆ, ಸ್ಥಳದಿಂದ ಸ್ಥಳಕ್ಕೆ ರೂಪಾಂತರಗೊಳ್ಳಬಲ್ಲದ್ದಾಗಿದೆ. ಆದ್ದರಿಂದ ಮೌಖಿಕ ಆಕರಗಳಲ್ಲಿ ಐತಿಹಾಸಿಕ ಮೂಲ ತಥ್ಯಗಳನ್ನು ಅನ್ವೇಷಿಸುವುದು ಬಹಳ ಕ್ಲಿಷ್ಟದ ಕೆಲಸ. ಅದಕ್ಕಾಗಿ ವಿವಿಧ ಆಯಾಮಗಳಿಂದ ಮೌಖಿಕ ಆಕರಗಳಿಂದ ಐತಿಹಾಸಿಕ ಅಂಶಗಳನ್ನು ಭಟ್ಟಿ ಇಳಿಸಬೇಕು. ಈ ನಿಟ್ಟಿನಲ್ಲಿ ಹೊಸ ಹೊಸ ಮಾರ್ಗೋಪಾಯಗಳನ್ನು ಹುಡುಕಿಕೊಳ್ಳಬೇಕು.

ಮೌಖಿಕ ಸಾಹಿತ್ಯ ನಾಡಿನ ರಾಜಕೀಯ ಚರಿತ್ರೆಯ ಜೊತೆ ಜೊತೆಗೆ ಸಾಂಸ್ಕೃತಿಕ ಇತಿಹಾಸಕ್ಕೆ ಹೆಚ್ಚಿನ ಕೊಡುಗೆಯನ್ನು ನೀಡಬಲ್ಲದು. ಚರಿತ್ರೆಯಲ್ಲಿ ವಿಶೇಷವಾಗಿ, ಸ್ಥಳೀಯ ಚರಿತ್ರೆಯಲ್ಲಿ ಮೌಖಿಕ ಪರಂಪರೆಗೂ ವಿಶಿಷ್ಟ ಸ್ಥಾನವಿದೆ ಎನ್ನಬಹುದು. ಈ ನಿಟ್ಟಿನಲ್ಲಿ ಧ್ವನಿಯಿಲ್ಲದ ವರ್ಗಗಳ ಧ್ವನಿಯಾಗಿ ಜನಪದ ಸಾಹಿತ್ಯ ಕಾಣಬರುತ್ತದೆ. ಅಂತೆಯೇ ಟಿಪ್ಪುವಿನ ವಿಚಾರದಲ್ಲೂ ಇತಿಹಾಸದ ಇನ್ನೊಂದು ಮುಖ ವಾಕ್ ಪರಂಪರೆಯಲ್ಲಿ ನಿಚ್ಚಳವಾಗಿದೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಟಿಪ್ಪುವನ್ನು ಕೆಲವು ಇತಿಹಾಸಕಾರರು ವೈರಿಯಂತೆ ಚಿತ್ರಿಸಿದ್ದರು. ಆತನು ಹಿಂದೂ ವಿರೋಧಿಯಾಗಿದ್ದ, ಹಿಂದೂಗಳನ್ನು ಬಲಾತ್ಕಾರವಾಗಿ ಮತಾಂತರ ಮಾಡಿಸಿದ ಮುಂತಾಗಿ ಆಪಾದನೆಗಳನ್ನು ಹೊರಿಸಿದರು. ವಾಸ್ತವದ ಚಾರಿತ್ರಿಕ ಅಂಶಗಳನ್ನು ಮರೆಮಾಚಿ ಈ ಇತಿಹಾಸಕಾರರು ಪೊಳ್ಳು ಚರಿತ್ರೆಯನ್ನು ಕಟ್ಟಲು ತೊಡಗಿದರು. ಬ್ರಿಟಿಷರು ತಮ್ಮ ಆಜನ್ಮ ವೈರಿಯಾದ ಟಿಪ್ಪುವಿನ ಬಗ್ಗೆ ಭಾರತದ ದುಷ್ಟ ರಾಜನೆಂದು ಬರೆಯತೊಡಗಿದ್ದರು. ಬ್ರಿಟಿಷರು ಎಲ್ಲೆಲ್ಲಿ ಸಾಮ್ರಾಜ್ಯ ವಿಸ್ತರಣೆಗಾಗಿ ಹೋರಾಡುತ್ತಿದ್ದರೂ ಅಲ್ಲೆಲ್ಲ ಜೊತೆಗೆ ಕಾರಕೂನರನ್ನು ಕರೆದುಕೊಂಡು ಹೋಗುತ್ತಿದ್ದರು. ಈ ಕಾರಕೂನರು ತಮ್ಮ ಧಣಿಗಳ ಇಷ್ಟದಂತೆಯೇ ಕಂಡದ್ದನ್ನು ಕಾಣದ್ದನ್ನು ಬರೆಯತೊಡಗಿದ್ದರು. ಕಾರಕೂನರು ಇಲ್ಲದ ಕಡೆ ಕರ್ನಲ್‌ಗಳೇ ಆ ಕೆಲಸ ಮಾಡುತ್ತಿದ್ದರು. ಟಿಪ್ಪುವಿನ ಬಗೆಗೆ ಬರೆದ ಬೀಟ್‌ಸನ್, ಕಿರ್ಕ್‌ಪ್ಯಾಟ್ರಿಕ್‌ಸನ್, ಕರ್ನಲ್ ಮೆಕೆಂಜಿ, ಕರ್ನಲ್ ಮಾರ್ಕ್ಸ್ ವಿಲ್ಕ್ಸ್ ಮುಂತಾದವರೆಲ್ಲ ಅಂಥ ಇತಿಹಾಸಕಾರರು. ಇವರು ಬರೆದಿದ್ದೆ ಮುಖ್ಯ ದಾಖಲೆಗಳಾಗಿ ಉಳಿದವು. ಇವರೆಲ್ಲ ಟಿಪ್ಪುವನ್ನು ಕುರಿತು "ಅಸಹಿಷ್ಣುತೆಯ ಮತದ್ವೇಷಿ" ಎಂದು ಚರಿತ್ರೆ ನಿರ್ಮಿಸಿಬಿಟ್ಟಿದ್ದರು. ಇವರ ಅಭಿಪ್ರಾಯಗಳನ್ನು ಆಧಾರವಾಗಿಟ್ಟುಕೊಂಡು ಟಿಪ್ಪುವನ್ನು ಮತಾಂಧನೆಂದು

ಚಿತ್ರಿಸುವ ಕೆಲಸವನ್ನು ಭಾರತೀಯ ಇತಿಹಾಸಕಾರರು ಮಾಡಿದ್ದಾರೆ. ಅವರಲ್ಲಿ ಸರ್ದೇಸಾಯಿ, ಕೆ.ಎಂ. ಪಣಿಕ್ಕರ್, ಐ.ಮಾ. ಮುತ್ತಣ್ಣ, ಸೀತಾರಾಮ್ ಗೋಯೆಲ್ ಮುಂತಾದವರು ಇದ್ದಾರೆ. ಇವರ್‍ಯಾರು ಟಿಪ್ಪುವಿನ ಸಮಗ್ರ ದೃಷ್ಟಿಯನ್ನು ಲಕ್ಷಿಸಿ ಅಧ್ಯಯನ ಮಾಡದೇ ಹೋದರು (ಲಿಂಗದೇವರು ೨೦೦೩: ೫-೧೨).

ಕೆಲವು ಇತಿಹಾಸಕಾರರು ಟಿಪ್ಪುವಿನ ವ್ಯಕ್ತಿತ್ವ ಮತ್ತು ಸಾಧನೆಗಳ ಬಗ್ಗೆ ತಪ್ಪುಕಲ್ಪನೆಗಳನ್ನು ಜನಮಾನಸದಲ್ಲಿ ಬಿತ್ತುವ ಕೆಲಸ ಮಾಡಿದರೆ, ಅದೇ ಜನಸಮುದಾಯದ ಜನಪದರು ಸೃಷ್ಟಿಸಿದ ಸಾಹಿತ್ಯವು ಟಿಪ್ಪುವನ್ನು ಚಾರಿತ್ರಿಕ ನಾಯಕನನ್ನಾಗಿ ಚಿತ್ರಿಸುವ ಮೂಲಕ ಅವನ ವ್ಯಕ್ತಿತ್ವವನ್ನು ಎತ್ತಿಹಿಡಿಯುತ್ತವೆ. ಇಂಥ ಜನಪದ ನಿರೂಪಣೆಗಳು ಟಿಪ್ಪುವನ್ನು ಕಂಡ ರೀತಿಯೇ ಕುತೂಹಲಕಾರಿಯಾದುದು. ಟಿಪ್ಪುವಿನ ಸಮಕಾಲೀನವಾಗಿಯೇ ಅಥವಾ ಅನಂತರದಲ್ಲೇ ಕಟ್ಟಿದ ಅನೇಕ ಲಾವಣಿಗಳು, ಕಥೆಗಳು, ಮೈಸೂರು ಮತ್ತು ಶ್ರೀರಂಗಪಟ್ಟಣದ ಆಸುಪಾಸಿನಲ್ಲಿ ದೀರ್ಘಕಾಲದಿಂದ ಜನಪ್ರಿಯವಾಗಿದ್ದವು. ಅವುಗಳಲ್ಲಿ ಟಿಪ್ಪುವನ್ನು ಕಳೆದುಕೊಂಡ ಜನರಲ್ಲಿ ಮಡುಗಟ್ಟಿದ್ದ ದುಃಖ ಮತ್ತು ಹತಾಶೆಯು ಕಾಣುತ್ತದೆ.

*...ದೊರೆಪೋದ ಮೇಲೆ ಇರಲು ಬಾರದೆಂದು*

*ಏರಿ ಮರವನು ಬೀಳುತಿಹರು*

*ಪ್ರಜೆಗಳ ದುಃಖ ಪರಶಿವ ಬಲ್ಲಾ*

*ಕಾವೇರಿಯೊಳು ಧುಮುಕಿದರು*

*ನುಡಿಯೊಳು ಧರ್ಮಜ ನಮ್ಮ ಒಡೆಯಗೆ*

*ಮೃತ್ಯು ಯಾರಿಂದ ಎಂದು ನೋಡಿಹರು*

*ಪುರಾತನ ಮುದುಕ ಮೀರಸಾದಕನಿಗೆ*

*ಮೂಳೆಯ ಮುರಿದು ಕೊಂದಾರು*

ಸ್ವಾಮಿದ್ರೋಹಿ ಮೀರಸಾದಕನನ್ನು ಜನರು ಕೊಚ್ಚಿ ಕೊಂದರು. ಅವರ ಆಕ್ರೋಶ ಎಷ್ಟಿತ್ತೆಂದರೆ ಅವನನ್ನು ಹೂಳಿದ ಮೇಲೆಯೂ ಅವನ ದೇಹವನ್ನು ಹೊರತೆಗೆದು ಎರಡು ವಾರಗಳಿಗಿಂತಲೂ ಹೆಚ್ಚಾಗಿ ನೆರೆದ ಗಂಡಸರು, ಹೆಂಗಸರು, ಮಕ್ಕಳು ಶವದ ಮೇಲೆ ಹೇಸಿಗೆ ಎಸೆದು ಅವಮಾನ ಮಾಡಿದರು. ಅದನ್ನೆಲ್ಲಾ ನೋಡುತ್ತಿದ್ದ ಹ್ಯಾರಿಸ್ 'ಓ ಮೈಗಾಡ್' ಎಂದು ತಾನೂ ಅಳುತ್ತಾ ತನ್ನ ಕರವಸ್ತ್ರದಿಂದ ಕಂಬನಿ ಒರೆಸಿಕೊಂಡನೆಂದು ಲಿಂಗದೇವರು ಹಳೆಮನೆ ಅವರು ದಾಖಲಿಸಿದ್ದಾರೆ (ಲಿಂಗದೇವರು ೨೦೦೩: ೧೩-೨೭).

ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಬಳಸಿಕೊಳ್ಳಲಾದ ಆಕರಗಳಲ್ಲಿ ಮುಖ್ಯವಾದವುಗಳೆಂದರೆ, ಕ್ಯಾತನಹಳ್ಳಿ ರಾಮಣ್ಣ ಅವರು ಸಂಪಾದಿಸಿರುವ **ಫ್ಲೀಟರು ಸಂಗ್ರಹಿಸಿದ ಲಾವಣಿಗಳು** (೧೯೯೧), ಎಂ.ಎಂ. ಕಲಬುರ್ಗಿ ಅವರು ಸಂಪಾದಿಸಿರುವ **ಕರ್ನಾಟಕದ ಕೈಫಿಯತ್ತುಗಳು** (೧೯೯೪), ಕೆ. ಅನಂತರಾಮು ಅವರ **ಸಕ್ಕರೆ ಸೀಮೆ** (೨೦೦೪ (೧೯೮೨)), ವಸು ಎಂ.ವಿ. ಅವರ **ಮೌಖಿಕ ಇತಿಹಾಸ** (೨೦೦೪), ವಿಜಯ್ ಪೂಣಚ್ಚ ತಂಬಂಡ ಅವರ **ಪಳಮೆ – ಮೌಖಿಕ ಆಕರಗಳು ಕಟ್ಟಿಕೊಡುವ ಕನ್ನಡ–ಕೊಡಗು–ತುಳುನಾಡಿನ ಅಧ್ಯಯನ** (೨೦೦೪), ವೃಷಭಕುಮಾರ್ ಅವರ **ಮೈಸೂರು ಜಿಲ್ಲೆಯ ಐತಿಹ್ಯಗಳು ಒಂದು ಅಧ್ಯಯನ** (೨೦೧೦), ಲಕ್ಷ್ಮಣ ತೆಲಗಾವಿ ಅವರ **ಚಿತ್ರದುರ್ಗದ ಒನಕೆ ಓಬವ್ವೆ: ಚಾರಿತ್ರಿಕ ಅಧ್ಯಯನಗಳು** (೨೦೧೦), ಮುದ್ದುವೀರಪ್ಪ ಅವರ **ತುಮಕೂರು ಜಿಲ್ಲೆಯ ಕೋಟೆಗಳ ಸಾಂಸ್ಕೃತಿಕ ಒಳನೋಟಗಳು** (೨೦೧೧), ಬಿ.ಎಸ್. ಪುಟ್ಟಸ್ವಾಮಿ ಅವರ **ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು** (೨೦೧೨), ತಲಕಾಡು ಚಿಕ್ಕರಂಗೇಗೌಡರ **ಟಿಪ್ಪು ಸುಲ್ತಾನ್ ಕಾಲದ ಪ್ರಸಂಗಗಳು** (೨೦೧೩), ಚಿನ್ನಸ್ವಾಮಿ ಸೋಸಲೆ ಅವರ **ಒನಕೆ ಓಬವ್ವೆ** (೨೦೧೬) ಮೊದಲಾದ ಕೃತಿಗಳಲ್ಲಿನ ಮೌಖಿಕ ಕಥನದ ದಾಖಲು ಸಾಹಿತ್ಯವನ್ನು ಎರವಲು ಪಡೆದು ಬಳಸಿಕೊಳ್ಳಲಾಗಿದೆ. ವಿಶೇಷವಾಗಿ ಕೋಟೆಯ ಜೊತೆಗೆ ತಳಕು ಹಾಕಿಕೊಂಡಿರುವ ಲಾವಣಿಗಳು, ಐತಿಹ್ಯಗಳು, ವೃತ್ತಾಂತಗಳ ನಿರೂಪಣೆಯನ್ನು ವಿಮರ್ಶಿಸಿ ಮತ್ತು ವಿಶ್ಲೇಷಿಸಿ ತೆಗೆದುಕೊಳ್ಳಲಾಗಿದೆ. ಇವುಗಳ ಜೊತೆಗೆ **ಹೈದರ್ ನಾಮ, ಜಂಗ್‌ನಾಮ** ಮತ್ತು **ರಾಜೇಂದ್ರನಾಮೆ** ಗಳಲ್ಲಿನ ಸಂಗತಿಗಳನ್ನು ಕೂಡ ಸಾಂದರ್ಭಿಕವಾಗಿ ಬಳಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನಕ್ಕಾಗಿ ಸಂಶೋಧನಾ ಮಹಾಪ್ರಬಂಧಗಳನ್ನು ಕೂಡ ಅವಲೋಕಿಸಲಾಗಿದೆ. ಮುಖ್ಯವಾಗಿ ಬೇಜಿ ಅವರ **ಬೀದರ್ ಕೋಟೆಯ ಐತಿಹ್ಯಗಳು,** ಬಸವರಾಜ ಸಿ. ಅವರ **ಚಿತ್ರದುರ್ಗ ಕೋಟೆಯ ಐತಿಹ್ಯಗಳು** (೨೦೧೦), ಉಜಿರಾ ಬಾನು ಅವರ **ಟಿಪ್ಪು ಜನಪದ ಕಥನ** (೨೦೧೬) ಮೊದಲಾದ ಎಂ.ಫಿಲ್ ಮತ್ತು ಪಿಎಚ್‌ಡಿ ಮಹಾಪ್ರಬಂಧಗಳನ್ನು ಕೂಡ ಅಧ್ಯಯನದ ಸಂದರ್ಭದಲ್ಲಿ ಬಳಸಿಕೊಳ್ಳಲಾಗಿದೆ.

### ೫.೧ ಐತಿಹ್ಯಗಳು

ಮೌಖಿಕ ಆಕರಗಳಲ್ಲಿ ಐತಿಹ್ಯಗಳು ಪ್ರಧಾನ ಭಾಗವಾಗಿದೆ. ಐತಿಹ್ಯಗಳೆಂದರೆ: "ಅಸ್ತಿತ್ವದಲ್ಲಿದ್ದ ಅಥವಾ ಇರುವ ಸ್ಥಳ ಅಥವಾ ವ್ಯಕ್ತಿಯನ್ನು ಕುರಿತ ಹೇಳಿಕೆಗಳಾಗಿವೆ" ಈ ಬಗೆಗೆ ಐತಿಹ್ಯಗಳನ್ನು ಕುರಿತು ಕ್ಷೇತ್ರಕಾರ್ಯಾಧಾರಿತ ಸಂಶೋಧನೆ ನಡೆಸಿದ ಮೊದಲ ಆಧುನಿಕ ವಿದ್ವಾಂಸನೆಂಬ ಕೀರ್ತಿಗೆ ಪಾತ್ರನಾದ ಫ್ರೆಡ್ರಿಕ್ ರಾಂಕೆ ಅವರು ಹೀಗೆ ವ್ಯಾಖ್ಯಾನಿಸುತ್ತಾರೆ.: "ಐತಿಹ್ಯವು ತಾನು ಸತ್ಯವೆಂದು ಹೇಳಿಕೊಂಡರೂ ವಸ್ತುನಿಷ್ಠ

ದೃಷ್ಟಿಯಿಂದ ಅದು ಅಸತ್ಯ"ವಾಗಿರುವ ವಿಚಾರಗಳೆಂದು ವ್ಯಾಖ್ಯಾನಿಸಿದ್ದಾರೆ (ವೃಷಭಕುಮಾರ್ ೨೦೧೦: ೨೨). ಆದರೆ ಐತಿಹ್ಯಗಳೆಲ್ಲ ಅಸತ್ಯಗಳಾಗಿರಬೇಕೆಂದೇನೂ ಇಲ್ಲ. ಒಂದು ಚಾರಿತ್ರಿಕ ಎಳೆಯ ಸುತ್ತ ಕೌತುಕದ ಸಂಗತಿಗಳು ಹೆಣೆದುಕೊಂಡಿರುತ್ತವೆ. ಮೊದಲು ಹೇಳಿದಂತೆ ಐತಿಹ್ಯಗಳು ಸ್ಥಳ ಮತ್ತು ವ್ಯಕ್ತಿಗಷ್ಟೇ ಅಲ್ಲ ಘಟನೆಯೊಂದನ್ನು ಕುರಿತಂತೆ ಸಾಂಪ್ರದಾಯಿಕ ಮೂಲವಸ್ತುಗಳೊಡನೆ ನಿಜಾಂಶವೊಂದರ ಮೇಲೆ ಆಧಾರವಾಗಿದೆಯೆಂದು ಭಾವಿಸುವ ಕಥೆ ಎಂದು **ಕನ್ನಡ ವಿಶ್ವಕೋಶ** ಹೇಳುತ್ತದೆ (ಕ.ವಿ. ಸಂ.–೩). ಈ ಐತಿಹ್ಯಗಳು ಹೇಳುವ ಕೋಟೆಗಳ ಬಗೆಗಿನ ಸಂಗತಿಗಳನ್ನು ಮುಂದಿನ ಭಾಗದಲ್ಲಿ ನಿರೂಪಿಸಲಾಗಿದೆ.

ಕೋಟೆಗಳ ಹಿನ್ನೆಲೆಯಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನನಿಗೆ ಸಂಬಂಧಿಸಿದ ಕೆಲವು ಐತಿಹ್ಯಗಳನ್ನು ಗಮನಿಸಬಹುದು. ಬೇಕಲ್ ಕೋಟೆಯಲ್ಲಿ ಒಂದು 'ರಕ್ತದ ಕೊಳ' ಎಂಬ ಕೊಳವಿದೆ. ಈ ಕೊಳಕ್ಕೆ ಈ ಹೆಸರು ಬಂದ ಬಗೆಗೆ ಸ್ಥಳೀಯರು ಹೀಗೆ ಹೇಳುತ್ತಾರೆ: "ಹೈದರಾಲಿಯು ಬೇಕಲ್ ಕೋಟೆಯನ್ನು ಮುತ್ತಿದಾಗ ಕೆಳದಿಯ ಹೆಣ್ಣು ಮಕ್ಕಳು ಇಲ್ಲಿನ ಕೊಳಕ್ಕೆ ಹಾರಿ ಪ್ರಾಣ ಕಳೆದು ಕೊಂಡರಂತೆ. ಆನಂತರ ಕೊಳವನ್ನು ಶೋಧಿಸಿದಾಗ ಎರಡುವರೆ ಆಣೆಯಷ್ಟು (ಅಳತೆ ಮಾಪಕ) ಮೂಗುತಿಗಳು ದೊರೆತವು." ಈ ಕೊಳದಲ್ಲಿ ದೊರೆತ ಮೂಗುತಿಯ ಪ್ರಮಾಣವು ಕೊಳಕ್ಕೆ ಹಾರಿ ಪ್ರಾಣ ಕಳೆದುಕೊಂಡ ಹೆಣ್ಣುಮಕ್ಕಳ ಸಂಖ್ಯೆಯನ್ನು ಸೂಚಿಸುತ್ತದೆ (ಶಿವರಾಮ್ ಸಂದರ್ಶನ).



ರಕ್ತದ ಕೊಳ (ಬೇಕಲ್, ಕಾಸರಗೂಡು ಜಿಲ್ಲೆ, ಕೇರಳ) (ಚಿತ್ರಕೃಪೆ: ಹಂ.ಗು. ರಾಜೇಶ್)

ಚಿತ್ರದುರ್ಗದ ಕೋಟೆಯನ್ನು ಮುತ್ತಿದಾಗ ಹೈದರಾಲಿಯ ಸೈನ್ಯದಲ್ಲಿ ಫ್ರೆಂಚ್ ಸರದಾರನಾಗಿದ್ದ ಲಾಲಿಯು ಈ ಕೋಟೆಯ ವಿಷಯದಲ್ಲಿ ತಾರೀಫ್ ಮಾಡಿ. ನವಾಬ ಹೈದರಾಲಿಗೆ ಈ ರೀತಿ ಹೇಳಿರುವನು:

*"ಜಹಪನಾ ಸಲಾಮು; ನಾವು ಇಷ್ಟು ದಿವಸ ಬಹಳೆ ಖಿಲ್ಲೆಗಳನ್ನು ನೋಡಿದೆವು; ನಾವು ಶಿಸ್ತು ಕಟ್ಟಿ ಹೊಡೆದದ್ದೆಲ್ಲಾ ವ್ಯರ್ಥವಾಯಿತು; ಕಿಲ್ಲೆಯ ತಾರೀಫು ಬಹಳ ಇದೆ; ತಗ್ಗಿಸಿ ಹೊಡೆದರೆ ಗುಂಡುಗಳು ಕಂದಕದಲ್ಲಿ ಬೀಳುತ್ತವೆ. ಫಿರಂಗಿಗಳನ್ನು ಸ್ವಲ್ಪ ಎತ್ತರಿಸಿ ಹೊಡೆದರೆ ಗುಂಡುಗಳು ಬಂಡೆಗಳಿಗೆ ತಗಲುತ್ತವೆಯೆ ಹೊರತು ಖಿಲ್ಲೆಗೆ ತಗಲಲಿಲ್ಲ; ಖಿಲ್ಲೆ ಸಿಗಸ್ತು ಆಗಲಿಲ್ಲ" ಎಂದು ಹೇಳಿದ್ದರಿಂದ ಎಲ್ಲರೂ ಖಿಲ್ಲೆಯನ್ನು ತಾರೀಫು ಮಾಡಿದರು. ಇಂಥ ಬಲವಾದ ಕೋಟೆಯ ಸಹಾಯವಿದ್ದುದರಿಂದಲೇ ಚಿತ್ರದುರ್ಗದ ಪಾಳೆಯಗಾರರು ಅಪಾರ ಸೇನಾನ್ವಿತನಾದ ಹೈದರಾಲಿಯನ್ನೂ, ಮರಾಠರನ್ನೂ, ಹೈದರಾಬಾದಿನ ನಿಜಾಮನನ್ನು ಎದುರಿಸಿ ನಿಂತರು (ಲಕ್ಷ್ಮಣ್ ತೆಲಗಾವಿ ಮತ್ತಿತರರು ೧೯೭೬: ೩೩).*

ಶ್ರೀರಂಗಪಟ್ಟಣ ಕೋಟೆಯ ಒಳಭಾಗದಲ್ಲಿ ಬಿದ್ದ ಕೋಟೆ ಎಂಬ ಸ್ಥಳವಿದೆ. ಇದರ ಹಿಂದೆ ಒಂದು ಸ್ವಾರಸ್ಯಕರವಾದ ಕಥೆ ಇದೆ: ಟಿಪ್ಪುವಿಗೆ ಜ್ಯೋತಿಷ್ಯದ ಬಗೆಗೆ ಅಪಾರ ನಂಬಿಕೆ ಇತ್ತಂತೆ. ಒಮ್ಮೆ ಅದನ್ನು ಪರೀಕ್ಷಿಸಬೇಕೆಂದು ನಿರ್ಧರಿಸಿದನಂತೆ. ಆದ್ದರಿಂದ ಒಂದು ದಿನ ಟಿಪ್ಪು ಸುಲ್ತಾನನು ಜ್ಯೋಯಿಸನನ್ನು 'ನಾನು ಈ ದಿನ ಕೋಟೆಯ ಯಾವ ದಿಕ್ಕಿನ ಬಾಗಿಲಿನಿಂದ ಹೊರಕ್ಕೆ ಹೋಗುತ್ತೇನೆ ಎಂಬುದನ್ನು ಲೆಕ್ಕಾಚಾರ ಹಾಕಿ ಹೇಳಿ' ಎಂದು ಸವಾಲು ಹಾಕಿದನಂತೆ. ಜೋಯಿಸನು ಎಲ್ಲವನ್ನು ಗುಣಿಸಿ ಫಲಿತಾಂಶವನ್ನು ಒಂದು ಪತ್ರದಲ್ಲಿ ಬರೆದು ಅದನ್ನು ಮೊಹರು ಮಾಡಿ ಟಿಪ್ಪುವಿನ ಮುಂದೆ ಇಟ್ಟನು. ಟಿಪ್ಪು ಯಾವ ಬಾಗಿಲುಗಳಿಂದಲೂ ಹೊರಕ್ಕೆ ಹೋಗದೆ ಕೋಟೆಯ ಬಿದ್ದ ಕೋಟೆಯ ಭಾಗವನ್ನು ಒಡೆಸಿ ಅದನ್ನೇರಿ ಹೊರಕ್ಕೆ ಹಾರಿದನು. ಅನಂತರ ಜೋಯಿಸನ ಫಲಿತಾಂಶ ಏನೇಳುತ್ತದೆ ಎಂದು ಫಲಿತಾಂಶ ಪತ್ರದ ಮೊಹರನ್ನು ಒಡೆದು ನೋಡಿದಾಗ ಟಿಪ್ಪುವಿಗೆ ಪರಮಾಶ್ಚರ್ಯ. ಏಕೆಂದರೆ ತಾನು ಹೇಗೆ ಹೊರಗೆ ಹೋದನೋ ಅದನ್ನೇ ಆ ಪತ್ರದಲ್ಲಿ ಬರೆಯಲಾಗಿತ್ತು. ಇದರಿಂದ ಜೋಯಿಸನನ್ನು ಮೆಚ್ಚಿಕೊಂಡ ಟಿಪ್ಪುವು ಅವನನ್ನು ಗೌರವಿಸಿ ಕಳುಹಿಸಿದನಂತೆ. ಈಗ ಬೇರೆ ಬೇರೆ ಭಾಗಗಳಲ್ಲಿ ಕೋಟೆಯು ಶಿಥಿಲಗೊಂಡು ಬಿದ್ದಿದ್ದರೂ, ಈ ಭಾಗವನ್ನು ಮಾತ್ರ ಬಿದ್ದಕೋಟೆ ಎಂದು ಹೆಸರಿನಿಂದಲೇ ಕರೆಯುವುದು ವಿಶೇಷ (ಪುಟ್ಟರಾಜು, ಸಂದರ್ಶನ ದಿ: ೩೦.೦೫.೨೦೧೭)

ಇಂತಹ ಮೌಖಿಕ ಕಥೆಗಳು ನಿಜವೇ ಎಂಬುದು ಪ್ರಶ್ನಾರ್ಹ. ಏಕೆಂದರೆ, ಈ ರೀತಿಯ ಕಥೆಗಳು ಜ್ಯೋತಿಷ್ಯವನ್ನು ಜನಮನ್ನಣೆಗೊಳಿಸುವುದಕ್ಕಾಗಿ ಹುಟ್ಟಿಕೊಂಡಿರುವಂತೆ

ತೋರುತ್ತದೆಯಾದರೂ, ಮೊಹಿಬ್ಬುಲ್ ಹಸನ್ ಅವರು ದಾಖಲಿಸಿರುವಂತೆ ಟಿಪ್ಪುವು ಪ್ರತಿದಿನ ಬೆಳಗ್ಗೆ ಹಿಂದೂ ಮತ್ತು ಮುಸಲ್ಮಾನ ಜ್ಯೋತಿಷಿಗಳನ್ನು ಕರೆಸಿ ದಿನಭವಿಷ್ಯವನ್ನು ಕೇಳುತ್ತಿದ್ದನೆಂದು ತಿಳಿದು ಬರುತ್ತದೆ (ಮೊಹಿಬ್ಬುಲ್ ಹಸನ್ ೧೯೮೮: ೪೬೪-೬೫).



**ಬಿದ್ದಕೋಟೆಯ ಭಾಗ (ಶ್ರೀರಂಗಪಟ್ಟಣ)          (ಚಿತ್ರಕೃಪೆ: ಹಂ.ಗು. ರಾಜೇಶ್)**

ಕುಶಾಲನಗರ ಕೋಟೆಯ ಐತಿಹ್ಯ ಹೀಗಿದೆ. ಹೈದರಾಲಿಯು ಲಿಂಗರಾಜನ ಮರಣ ನಂತರ ಕೊಡಗನ್ನು ತನ್ನ ಅಂಕೆಯಲ್ಲಿಟ್ಟುಕೊಳ್ಳಲು ಅಲ್ಲಲ್ಲಿ ತನ್ನ ಸೈನ್ಯದ ಠಾಣ್ಯಗಳನ್ನು ನಿರ್ಮಿಸಿದ್ದನು. ಇಂಥ ಒಂದು ಠಾಣ್ಯವನ್ನು ಇಂದಿನ ಕುಶಾಲನಗರವಿದ್ದ ಸ್ಥಳದಲ್ಲಿ ಇಡಲಾಗಿತ್ತು. ಈ ಸ್ಥಳಕ್ಕೆ ಮೊದಲು ಮುಳ್ಳುಸೋಗೆ ಗ್ರಾಮವೆಂದು ಕರೆಯುತ್ತಿದ್ದರು. ಪಿರಿಯಾಪಟ್ಟಣದ ಕಡೆಯಿಂದ ಕೊಡಗಿಗೆ ಸೈನ್ಯ ಮತ್ತು ಸರಕು ಸರಂಜಾಮುಗಳನ್ನು ಸಾಗಿಸಲು ಅನುಕೂಲವಾಗಿತ್ತು. ಹೈದರಾಲಿಯು ಈ ಊರಿನಲ್ಲಿ ಉಳಿದುಕೊಂಡಿದ್ದ ಸಮಯದಲ್ಲಿ ಅವನ ಹಿರಿಯ ಮಗನಾದ ಟಿಪ್ಪು ಸುಲ್ತಾನನು ಶತ್ರುಗಳ ಮೇಲೆ ಜಯವನ್ನು ಸಾಧಿಸಿದ ಸುದ್ದಿಯನ್ನು ಕೇಳಿ ಸಂತೋಷಗೊಂಡನು. ಆ ಸುದ್ದಿಯ ನೆನಪಿಗಾಗಿ ಹೈದರಾಲಿಯು ಈ ಊರಲ್ಲಿ ಮರದ ಕೋಟೆಯನ್ನು ಕಟ್ಟಿಸಿ ತನ್ನ ಠಾಣ್ಯವಿರಿಸಿ, ಊರಿಗೆ 'ಕುಶಾಲನಗರ' (ಸಂತೋಷದ ನಗರ) ವೆಂದು ಹೆಸರಿಟ್ಟನು.

ಮತ್ತೊಂದು ಆವೃತ್ತಿಯ ಪ್ರಕಾರ ಹೈದರಾಲಿಯು ತನ್ನ ಮಗ ಟಿಪ್ಪು ಜನಿಸಿದ ವರ್ತಮಾನವನ್ನು ಈ ಸ್ಥಳದಲ್ಲಿದ್ದ ಸಮಯದಲ್ಲಿ ಕೇಳಿದ್ದರಿಂದ ಈ ಸ್ಥಳಕ್ಕೆ ಕುಶಾಲನಗರ ಎಂದು ಹೆಸರಿಟ್ಟನೆಂದು ಹೇಳುತ್ತಾರೆ. ಆದರೆ ಚಾರಿತ್ರಿಕವಾಗಿ ಈ ಅಂಶ ಅವಾಸ್ತವವಾಗಿದೆ. ಏಕೆಂದರೆ, ಟಿಪ್ಪುವು ಜನಿಸಿದ್ದಾಗ (೧೭೫೦) ಹೈದರಾಲಿಯು ಕೊಡಗಿನ ಪ್ರದೇಶಗಳಿಗೆ ಬಂದ ಬಗೆಗೆ ಯಾವುದೇ ಆಧಾರಗಳಿಲ್ಲ. ಮಿಗಿಲಾಗಿ ಆ ಹೊತ್ತಿಗೆ ಹೈದರಾಲಿಯು

ಒಬ್ಬ ಸಾಮಾನ್ಯ ಸೈನ್ಯಾಧಿಕಾರಿಯಾಗಿದ್ದನು. ಆದ್ದರಿಂದ ಈ ಸಂಗತಿಯನ್ನು ಒಪ್ಪಲಾಗದು (ಕೃಷ್ಣಯ್ಯ ೧೯೯೫(೧೯೭೪): ೧೫೨-೫೩).

***

ಬಿಜ್ಜಾವರದ ಕೋಟೆಯನ್ನು ಸ್ಥಾಪಿಸುವ ಮೊದಲು ಮೊಲ ನಾಯಿಯ ಕಥೆ ಜನಪದರಲ್ಲಿ ಪ್ರಚಲಿತದಲ್ಲಿದೆ. ಮಹಾನಾಡ ಪ್ರಭುಗಳು ಏಳುಜನ ಸಹೋದರರು. ಅವರಲ್ಲಿ ಆರು ಜನ ವಿವಿಧ ಊರುಗಳನ್ನು ಸ್ಥಾಪಿಸಿ ನೆಲೆ ನಿಲ್ಲುತ್ತಾರೆ. ಅವರಲ್ಲಿ ಹಿರಿಯನಾದ ವೀರಪ್ಪಗೌಡನು ರಾಜ್ಯವನ್ನು ಸ್ಥಾಪಿಸಲು ಸೂಕ್ತ ಸ್ಥಳವನ್ನು ಹುಡುಕುತ್ತಾ ಬರುತ್ತಾನೆ. ಮಧುಗಿರಿಯ ಪೂರ್ವದಲ್ಲಿ ಹರಿಯುವ 'ಜಯಮಂಗಲಿ' ನದಿ ತೀರವು ಅವನ ಮನಸ್ಸಿಗೆ ಒಪ್ಪುತ್ತದೆ. ಅಲ್ಲಿಯೇ ನಗರಕ್ಕೆ ಅಸ್ತಿಭಾರ ಹಾಕಿ 'ಮುಮ್ಮಡಿ ಪಟ್ಟಣ' ಎಂದು ಕರೆದನು. ರಾಮನಬೋವಿ ಮತ್ತು ಅವನ ಮಗ ತಿರುಮಲಬೋವಿಗಳು ನಗರವನ್ನು ನಿರ್ಮಿಸಿದ್ದರಿಂದ ಅವರಿಗೆ ಭೂಮಾನ್ಯ ನೀಡಿದನು. ರಾಜಧಾನಿ 'ಮುಮ್ಮಡಿ ಪಟ್ಟಣ'ದ ರಕ್ಷಣೆಗಾಗಿ ಊರಿನ ಸುತ್ತಲೂ ಕೋಟೆಯನ್ನು ನಿರ್ಮಿಸಿ ಕೋಟೆಯ ದ್ವಾರಕ್ಕೆ ಕಂಚಿನ ಹೆಬ್ಬಾಗಿಲನ್ನು ಇಡಿಸಿದ್ದನೆಂದು ಹೇಳುತ್ತಾರೆ. ಮುಂದೆ ದೊಡ್ಡೇಗೌಡನ ಕಾಲದಲ್ಲಿ ಮುಸ್ಲಿಂ ನಾಯಕರಿಂದ ಪಟ್ಟಣವು ನಾಶ ಹೊಂದುತ್ತದೆ. ಈ ಸಂದರ್ಭದಲ್ಲಿ ದೊಡ್ಡೇಗೌಡನ ಮಗ ಹಿರೀ ಚಿಕ್ಕಪ್ಪಗೌಡನನ್ನು ತುಂಗದಟಿಯಲ್ಲಿ ಯುದ್ಧದ ಸಮಯದಲ್ಲಿ ಅಡಗಿಸಲಾಗಿತ್ತಂತೆ. ಆತನು ಯುವಕನಾದ ಮೇಲೆ ತಮ್ಮ 'ಮುಮ್ಮಡಿ ಪಟ್ಟಣ'ವನ್ನು ಮತ್ತೆ ಪುನರ್‌ನಿರ್ಮಿಸಿ, ಮುಂದೆ ರಾಜ್ಯವನ್ನು ವಿಸ್ತರಿಸಿ, ಭದ್ರವಾದ ಕೋಟೆಕೊತ್ತಳಗಳನ್ನು ಸ್ಥಾಪಿಸುವ ಅವಶ್ಯಕತೆ ಉಂಟಾಗುತ್ತದೆ. ಅದಕ್ಕಾಗಿ ಸೂಕ್ತ ಪ್ರದೇಶವನ್ನು ಹುಡುಕಲು ಕುದುರೆಯೇರಿ ಸಂಚಾರಕ್ಕೆ ಹೊರಟಾಗ ಮಾರ್ಗಮಧ್ಯೆ ಮೊಲವು ನಾಯಿಯನ್ನು ಅಟ್ಟಿಸಿಕೊಂಡು ಹೋದ ದೃಶ್ಯ ನೋಡಿ ಆಶ್ಚರ್ಯಗೊಂಡನು. ಈ ಘಟನೆ ನಡೆದ ಸ್ಥಳವು ಗಂಡುಭೂಮಿಯೆಂದು ಭಾವಿಸಿ ಬಿಜ್ಜಾವರದಲ್ಲಿ ಈಗಿರುವ ಕೋಟೆಯನ್ನು ನಿರ್ಮಾಣ ಮಾಡಿದನು (ಮುದ್ದುವೀರಪ್ಪ ೨೦೧೧: ೨೫೮-೨೫೯).

ಚಿಕ್ಕನಾಯಕನಹಳ್ಳಿ ಕೋಟೆಯನ್ನು ನಿರ್ಮಿಸುವ ಮೊದಲು ಭೈರಪ್ಪನಾಯಕನು ಒಮ್ಮೆ ರಾಜ್ಯವಿಸ್ತರಣೆ ಮಾಡಬೇಕೆಂದು ಸೆಟ್ಟಿಕೆರೆಯನ್ನು ಬಿಟ್ಟು ಪ್ರಯಾಣ ಬೆಳೆಸುತ್ತಾನೆ. ಈ ರೀತಿ ಪ್ರಯಾಣ ಮಾಡುವಾಗ ಈಗಿನ ಚಿಕ್ಕನಾಯಕನಹಳ್ಳಿಯ ಪ್ರದೇಶದಲ್ಲಿ ಮೊಲವು ನಾಯಿಯನ್ನು ಓಡಿಸಿಕೊಂಡು ಹೋಗುವ ಸನ್ನಿವೇಶವನ್ನು ಕೇಳುತ್ತಾನೆ. ಅದು ಶುಭ ಸೂಚನೆ ಎಂದು ಕೂಡಲೇ ಕೋಟೆಕಟ್ಟಲು ಅನುವಾಗುತ್ತಾನೆ. ಕುಂದುರ್ಪಿಯಿಂದ ಯುಗಾದಿ ಹಬ್ಬಕ್ಕೆಂದು ಯಲ್ಲಪ್ಪನಾಯಕನು ತಮ್ಮ ಸಂಬಂಧಿಕರ ಮನೆಗೆ ಬರುವನು. ಈಗಿನ ವೈ.ಎನ್. ಹೊಸಕೋಟೆಯ ಸಮೀಪದಲ್ಲಿ ಬಂದಾಗ ಅಲ್ಲಿ

ಮೊಲಗಳು ನಾಯಿಯ ಮೇಲೆ ಸವಾರಿ ಮಾಡುತ್ತಿದ್ದ ಪ್ರಸಂಗವನ್ನು ನೋಡುತ್ತಾನೆ. ಅದನ್ನು ವೀರಭೂಮಿಯೆಂದು ತಿಳಿದು ಇಲ್ಲಿಯೇ ಹೊಸದಾಗಿ ಕೋಟೆಕೊತ್ತಳಗಳನ್ನು ನಿರ್ಮಾಣ ಮಾಡುತ್ತಾನೆ. ರತ್ನಗಿರಿಯ ರಂಗಪ್ಪನಾಯಕನು ಬೇಟೆಗೆಂದು ಈಗಿನ ಶಿರಾ ಕೋಟೆಯ ಪ್ರದೇಶಕ್ಕೆ ಆಗಮಿಸುತ್ತಾನೆ. ನಾಯಕನು ಬೇಟೆಯಾಡಿದ ನಂತರ ಮರದಡಿಯಲ್ಲಿ ವಿಶ್ರಮಿಸುತ್ತಾನೆ. ಅದೇ ವೇಳೆಗೆ ಅವರದೇ ಬೇಟೆನಾಯಿಯ ಮೇಲೆ ಮೊಲವು ಸವಾರಿ ಮಾಡುತ್ತದೆ. ಇದನ್ನು ನೋಡಿದ ಪಾಳೇಗಾರನು ಈ ಪ್ರದೇಶವು ವೀರಭೂಮಿಯೆಂದು ತಿಳಿದು ಇಲ್ಲಿ ಕೋಟೆಕೊತ್ತಲಗಳನ್ನು ಕಟ್ಟುವನು (ಮುದ್ದುವೀರಪ್ಪ ೨೦೧೧:೨೬೦-೨೬೨).

ಇನ್ನೊಂದು ಐತಿಹ್ಯವನ್ನು ಗಮನಿಸಬಹುದು: ಹಾಗಲವಾಡಿಯ ಕೋಟೆಯನ್ನು ಕಟ್ಟುವ ಮುನ್ನ ಹಿರಿಯ ಮುದಿಯಪ್ಪ ನಾಯಕನು ರಾಜ್ಯ ವಿಸ್ತರಣೆ ಮಾಡಬೇಕೆಂದು ಸೈನ್ಯದೊಂದಿಗೆ ಕುದುರೆ ಏರಿ ಹೊರಡುತ್ತಾನೆ. ಈಗಿನ ಹಾಗಲವಾಡಿ ಪ್ರದೇಶದಲ್ಲಿ ಪ್ರಯಾಣದ ಆಯಾಸದಿಂದ ದಣಿವಾರಿಸಿಕೊಳ್ಳಲೆಂದು ಮರದ ನರಳಿನಲ್ಲಿ ಕೂರುತ್ತಾನೆ. ಇದೇ ವೇಳೆ ಮೊಲವೊಂದು ನರಿಯನ್ನು ಹಾಗಲಗಿಡದ ಬಳ್ಳಿಯಡಿಯಲ್ಲಿ ಓಡಿಸಿಕೊಂಡು ಹೋಗುವುದನ್ನು ಕಂಡು ಮುದಿಯಪ್ಪ ನಾಯಕ ಆಶ್ಚರ್ಯಪಡುತ್ತಾನೆ. ಇದರಿಂದ ಅವನು ಈ ಪ್ರದೇಶವು ವೀರಭೂಮಿಯೆಂದು ನಿಶ್ಚಯಿಸಿ ಹಾಗಲವಾಡಿಯಲ್ಲಿಯೇ ಕೋಟೆಕೊತ್ತಳಗಳನ್ನು ನಿರ್ಮಿಸಿದನು. ಶತ್ರುಗಳಿಂದ ತನ್ನ ರಾಜ್ಯ ರಕ್ಷಿಸಿಕೊಳ್ಳುವ ಸಲುವಾಗಿ ಮುದಿಯಪ್ಪ ನಾಯಕನು ಶಸ್ತ್ರಾಸ್ತ್ರ ಸಂಗ್ರಹಿಸಿದನು. ಅಲ್ಲದೆ 'ಹುಚ್ಚರಾಮಲಿಂಗ' ಎಂಬ ದೊಡ್ಡ ಫಿರಂಗಿ ಮಾಡಿಸಿದನು (ಯೋಗೀಶ್ವರಪ್ಪ ಅವರ ಸಂದರ್ಶನ).

ಮಡಿಕೇರಿಯ ಕೋಟೆಯ ಹಿನ್ನೆಲೆಯಲ್ಲಿಯೂ ಕೇಳಿಬರುತ್ತದೆ. ಮುದ್ದುರಾಜನು ಈಗಿನ ಮಡಿಕೇರಿ ಇರುವ ಜಾಗದಲ್ಲಿ ದಟ್ಟ ಅರಣ್ಯಗಳ ಮಧ್ಯೆ ತನ್ನ ಬೇಟೆ ನಾಯಿಗಳನ್ನು ಕಾಡು ಪ್ರಾಣಿಗಳ ಮೇಲೆ ಛೂ ಬಿಟ್ಟನು. ಆದರೆ ಒಂದು ಗಂಡು ಮೊಲವು ಬೇಟೆ ನಾಯಿಯನ್ನು ಬೆದರಿಸಿಕೊಂಡು ಬಂದಿತು. ಇದನ್ನು ಆಶ್ಚರ್ಯಚಕಿತನಾಗಿ ನೋಡಿದ ಮುದ್ದುರಾಜನು ಇದು 'ಗಂಡು' ನೆಲವೆಂದು ಇಲ್ಲಿಯೇ ಕೋಟೆ ಮತ್ತು ಅರಮನೆಯನ್ನು ಕಟ್ಟಿಸುವನು. ಗುಡ್ಡದ ಮೇಲ್ಭಾಗವನ್ನು ಸಮತಟ್ಟು ಮಾಡಿ ಕಲಿಸಂದ ೪೭೮೩ನೇ ದುರ್ಮತಿ ಸಂವತ್ಸರದಲ್ಲಿ ಎಂದರೆ ಕ್ರಿ.ಶ. ೧೬೮೧ರಲ್ಲಿ ಮಣ್ಣಿನಿಂದ ಕೋಟೆಯನ್ನು ಕಟ್ಟಿಸಿ ಅದರ ಸುತ್ತಲು ಕಂದಕ ತೆಗೆಸಿ ಒಳಗೆ ಅರಮನೆಯನ್ನು ಕಟ್ಟಿಸಿದನು. ಈ ಪ್ರದೇಶವನ್ನು ಜನರು ಮುದ್ದುರಾಜಕೇರಿ ಎಂದು ಕರೆದರು (ತಂಬಂಡ ೨೦೦೧: ೩೧೩).

ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿಯೂ ಒಂದೇ ಮಾದರಿಯ ಕಥೆಗಳು ಜನಜನಿತವಾಗಿರುವುದನ್ನು ಗಮನಿಸಬಹುದು. ಸ್ಥಳ ಮಹಿಮೆಯನ್ನು ಸಾರುವ ಈ ರೀತಿಯ ಐತಿಹ್ಯಗಳ ಹಿಂದಿನ ತರ್ಕಗಳನ್ನು ನಿರ್ವಚಿಸಬೇಕಿದೆ.

ಗಿರಿದುರ್ಗಗಳ ಸ್ಥಳದ ಆಯ್ಕೆಯ ಹಿನ್ನೆಲೆಯಲ್ಲಿಯೂ ಕೆಲವು ಐತಿಹ್ಯಗಳಿವೆ. ಅವುಗಳು ಈ ರೀತಿ ನಿರೂಪಣೆಗೊಂಡಿವೆ.

ಮಧುಗಿರಿ ಕೋಟೆಯ ನಿರ್ಮಾಣಕ್ಕೆ ಸಂಬಂಧಿಸಿದ ಐತಿಹ್ಯ ಇದಾಗಿದೆ. ಈಗಿನ ಸಿದ್ಧಾಪುರವಿರುವ (ತುಮಕೂರು ಜಿಲ್ಲೆ) ಸ್ಥಳದಲ್ಲಿ ಹಿಂದೆ ಒಬ್ಬ ಗೌಡನು ದನಕಾಯುತ್ತಾ ಜೀವನ ಸಾಗಿಸುತ್ತಿದ್ದನು. ಇಲ್ಲಿಯೇ ಹಲವು ದೊಡ್ಡ ಮನೆಗಳನ್ನು ಕಟ್ಟಲು ಪ್ರಯತ್ನಿಸಿ ವಿಫಲನಾಗಿದ್ದನು. ಹೀಗೆ ಒಮ್ಮೆ ದನಕಾಯುತ್ತ ಈ ವಿಷಯದ ಬಗ್ಗೆ ಚಿಂತಿಸುತ್ತಿರಬೇಕಾದರೆ ದನಗಳ ಹಿಂಡನ್ನು ಬಿಟ್ಟು ಒಂದು ಹಸು ಹೊರಹೋಗುವುದನ್ನು ನೋಡಿ ಅದನ್ನು ಹಿಂಬಾಲಿಸಿದನು. ಆ ಹಸು ಒಂದು ಬಂಡೆಯ ಮೇಲೆ ನಿಂತು ಹಾಲೆರೆಯಲು ಪ್ರಾರಂಭಿಸಿತು. ಹಾಲು ಬಂಡೆಯಿಂದ ಕೆಳಗೆ ಜಾರಿ ಋಷಿಯ ಬಾಯಿಲ್ಲಿ ಬೀಳುತ್ತಿತ್ತು. ಇದನ್ನು ನೋಡಿದ ಗೌಡನು ಆಶ್ಚರ್ಯದಿಂದ ಋಷಿಯ ಬಳಿಗೆ ಬಂದು ಇವರು ಮಹಿಮಾನ್ವಿತರೆಂದು ಭಾವಿಸಿ ಅವರಲ್ಲಿ ತನ್ನ ತೊಂದರೆಯನ್ನು ಹೇಳಿಕೊಂಡನು. ಆಗ ಋಷಿಯು "ನೀನು ಕೆಲವು ಕಾಲ ಸುಮ್ಮನಿರು, ಮುಂದೆ ಮಹಾನಾಡ ಪ್ರಭುವಾದ ಇಮ್ಮಡಿ ಚಿಕ್ಕಪ್ಪಗೌಡನು ಊರನ್ನು ಸ್ಥಾಪಿಸಿ, ಕೋಟೆಕೊತ್ತಳಗಳನ್ನು ನಿರ್ಮಾಣ ಮಾಡುತ್ತಾನೆ. ಆಗ ಎಲ್ಲವು ಸರಿಹೋಗುತ್ತದೆ ಎಂದು ಹೇಳುತ್ತಾನೆ." ಈ ಘಟನೆಯ ತರುವಾಯ ಆ ಋಷಿ ಹೇಳಿದಂತೆಯೇ ಆಯಿತಂತೆ. ಇಮ್ಮಡಿ ಚಿಕ್ಕಪ್ಪಗೌಡನು ಕೋಟೆಯನ್ನು ಕಟ್ಟಲು ಸೂಕ್ತವಾದ ಸ್ಥಳವನ್ನು ಹುಡುಕುತ್ತಾ ಬಂದಾಗ ಈಗಿನ ಮಧುಗಿರಿ ಬೆಟ್ಟದಿಂದ ಕುರಿಗಳು ಮೇಯ್ದು ಕೆಳಕ್ಕೆ ಇಳಿದು ಬರುತ್ತಿರುತ್ತವೆ. ಈ ಕುರಿಗಳು ಬೇಸಿಗೆಯಲ್ಲಿ ನೀರಿನಿಂದ ಮೈಯನ್ನು ತೋಯಿಸಿಕೊಂಡು ಬರುವುದನ್ನು ಕಂಡು ಇಮ್ಮಡಿ ಚಿಕ್ಕಪ್ಪಗೌಡನು ಈ ಬೆಟ್ಟದಲ್ಲಿ ನೀರಿನ ಸೌಲಭ್ಯವಿದೆ. ಜೊತೆಗೆ ಕಡಿದಾದ ಬೆಟ್ಟವಾಗಿರುವುದರಿಂದ ರಕ್ಷಣೆಯಿಂದಲೂ ಮಹತ್ವದ್ದಾಗಿದೆ ಎಂದು ಅಲ್ಲಿಯೇ ಕೋಟೆಯನ್ನು ಕಟ್ಟಿ ಮದ್ದಗಿರಿ ಎಂದು ನಾಮಕರಣ ಮಾಡಿದನು.

ಮತ್ತೊಂದು ಪ್ರಕರಣದಲ್ಲಿ ಕೋಟೆ ಕಟ್ಟಲು ಸೂಕ್ತ ಸ್ಥಳವನ್ನು ತೋರಿಸಿದವರಿಗೆ ಬಹುಮಾನ ಕೊಡುವುದಾಗಿ ಚಿಕ್ಕಪ್ಪಗೌಡನು ಡಂಗೂರ ಹೊಡಿಸುತ್ತಾನೆ. ಗೊಲ್ಲರ ಬೋಸನಾಯಕನು ಮೇಕೆಗಳನ್ನು ಮೇಯಿಸಲು ಚನ್ನರಾಯದುರ್ಗಕ್ಕೆ ಹೋಗಿರುತ್ತಾನೆ. ಒಂದು ಮೇಕೆಯು ಮೇಯುವ ಹಿಂಡನ್ನು ಬಿಟ್ಟು ಒಂಟಿಯಾಗಿ ಹೋಗುವುದನ್ನು ಗಮನಿಸುತ್ತಾನೆ. ಆ ಮೇಕೆ ಬೆಟ್ಟದ ಕಣಿವೆಯಲ್ಲಿ ತೂರಿ ನೀರು ಕುಡಿದು ಬರುತ್ತದೆ.

ಆಗ ಬೋಸನಾಯಕ ತನ್ನ ಮೇಕೆಯು ಶೋಧಿಸಿದ ನೀರಿನ ಸೌಲಭ್ಯವಿರುವ ಬೆಟ್ಟದ ಬಗ್ಗೆ ತಿಳಿಸುತ್ತಾನೆ. ಇದನ್ನು ಕೇಳಿದ ನಂತರ ಚಿಕ್ಕಪ್ಪಗೌಡನು ಆ ಬೆಟ್ಟದ ಭೌಗೋಳಿಕ ಅಂಶಗಳನ್ನು ಗಮನಿಸಿ ಕೋಟೆಕಟ್ಟಲು ನಿರ್ಧರಿಸುತ್ತಾನೆ. ಬೋಸನಾಯಕನಿಗೆ ಇನಾಮು ಕೊಡುತ್ತಾನೆ.

***

ಬಿಜ್ಜಾವರದ ಕೋಟೆಯನ್ನು ಕಟ್ಟುವ ಪೂರ್ವದಲ್ಲಿ ಹಿರೇ ಚಿಕ್ಕಪ್ಪಗೌಡನು ಮುಮ್ಮಡಿ ಪಟ್ಟಣವನ್ನು ಪುನರ್ ಸ್ಥಾಪಿಸಬೇಕೆಂದು ಪ್ರಯತ್ನಿಸಿದಾಗ ರಾತ್ರಿ ಕನಸಿನಲ್ಲಿ ಬಿಜ್ಜಾಮಹಾದೇವಿ ಎನ್ನುವ ದೇವತೆಯು ಕಾಣಿಸಿಕೊಂಡು, ನೀನು ಮುಂದೆ ರಾಜ್ಯವನ್ನು ಕಟ್ಟುವ ಆಕಾಂಕ್ಷೆಯನ್ನು ಹೊಂದಿದ್ದೀಯಾ, ಆದ್ದರಿಂದ ಒಂದು ಸೂಕ್ತವಾದ ನಿರ್ದಿಷ್ಟ ಜಾಗ ತೋರಿಸುತ್ತೇನೆ. ನೀನು ಆ ಸ್ಥಳದಲ್ಲಿ ಕೋಟೆ ಕೊತ್ತಳಗಳನ್ನು ನಿರ್ಮಿಸಿದರೆ ನಿನ್ನ ರಾಜ್ಯವು ಚಿರಾಯುವಾಗುತ್ತದೆ ಎಂದು ಹೇಳಿ ಮಾಯವಾದಳು. ಮುಂಜಾನೆ ಎಚ್ಚರಗೊಂಡ ಹಿರೇ ಚಿಕ್ಕಪ್ಪಗೌಡನು ಸ್ಥಳವನ್ನು ಹುಡುಕತ್ತ ಹೊರಡುತ್ತಾನೆ. ಆದ್ದರಿಂದ ದೇವಿಯು ಹೆಸರನ್ನೇ ತನ್ನ ಕೋಟೆಗೆ ಇಟ್ಟು 'ಬಿಜ್ಜಾವರದ ಕೋಟೆ' ಎಂದು ಕರೆಯತೊಡಗುತ್ತಾನೆ.

ಮಿಡಿಗೇಶಿ ಕೋಟೆಯ ಹಿನ್ನೆಲೆಯ ಐತಿಹ್ಯವೊಂದು ಈ ರೀತಿ ಇದೆ. ಪಾಕನಾಟಿ ಒಕ್ಕಲಿಗ ಜಾತಿಗೆ ಸೇರಿದ ನಾಗಿರೆಡ್ಡಿಯು ತಿರುಪತಿ ಕಡೆಯಿಂದ ಹೊರಟು ಸಂಚರಿಸುತ್ತಿರುತ್ತಾನೆ. ಮಾರ್ಗ ಮಧ್ಯೆ ಒಂದು ರಾತ್ರಿ ನಿದ್ರಾವಸ್ಥೆಯಲ್ಲಿದ್ದಾಗ ಕನಸಿನಲ್ಲಿ ಆತನ ಆರಾಧ್ಯ ದೈವ ಶ್ರೀ ವೆಂಕಟರಮಣ ಸ್ವಾಮಿಯು ಕಾಣಿಸಿಕೊಂಡು, "ನಿನಗೆ ಅಪಾರವಾದ ದ್ರವ್ಯವು ಸಿಗುವುದೆಂದೂ ಆ ದ್ರವ್ಯದಿಂದ ನೀನು ಪಶ್ಚಿಮದ ಕಡೆಯಲ್ಲಿ ನಾನು ಸೂಚಿಸಿದ ಸ್ಥಳದಲ್ಲಿ ರಾಜ್ಯವನ್ನು ಸ್ಥಾಪಿಸಿ ಕೋಟೆ ಕಟ್ಟಿಕೊಂಡು ರಾಜ್ಯವಾಳು" ಎಂದು ಹೇಳುತ್ತಾನೆ. ಅದರಂತೆಯೇ ನಾಗಿರೆಡ್ಡಿಗೆ ಪಯಣದ ಹಾದಿಯಲ್ಲಿ ದ್ರವ್ಯವು ದೊರೆತು ಈಗಿನ ಮಿಡಿಗೇಶಿ ಪ್ರದೇಶದಲ್ಲಿ ಅರಮನೆಯನ್ನು, ಕೋಟೆಯನ್ನು ನಿರ್ಮಿಸಿ ಅಲ್ಲಿ ವೆಂಕಟರಮಣ ಸ್ವಾಮಿಯನ್ನು ಪ್ರತಿಷ್ಠಾಪಿಸಿ ಆರಾಧಿಸುತ್ತಾನೆ.

ಹೊಳವನಹಳ್ಳಿ ಪಾಳೆಯಗಾರನಾದ ಸಣ್ಣ ಭೈರೇಗೌಡನಿಗೆ ರಾತ್ರಿ ಕನಸಿನಲ್ಲಿ ಅಶರೀರ ವಾಣಿಯೊಂದು ನುಡಿಯುತ್ತದೆ. "ನೀನು ನಿನ್ನ ರಾಜ್ಯದ ಪಶ್ಚಿಮ ದಿಕ್ಕಿನಿಂದ ಸ್ವಲ್ಪ ದೂರದಲ್ಲಿ ಗಂಗಾಧರೇಶ್ವರ ಸ್ವಾಮಿಯ ಉದ್ಭವ ಲಿಂಗವಿದೆ. ಅಲ್ಲಿ ನೀನು ಕೋಟೆಯನ್ನು ಕಟ್ಟು ಊರನ್ನು ನಿರ್ಮಿಸು" ಎಂದು ಹೇಳಿದಾಗ ಸಣ್ಣಭೈರೇಗೌಡನು ಅದರಂತೆಯೇ ಆ ಸ್ಥಳ ಹುಡುಕಿ ಹೋದಾಗ ಉದ್ಭವಲಿಂಗಕ್ಕೆ ಬೆಟ್ಟದ ಮೇಲಿಂದ ನೀರು ತೊಟ್ಟಿಕ್ಕುತ್ತಿತ್ತು. ಇದನ್ನು ನೋಡಿದ ಪಾಳೇಗಾರನು ಇದು ಅಪೂರ್ವವಾದ ವಿಚಾರವೆಂದು ತಿಳಿದು ಇಲ್ಲಿಯೇ ಊರು-ಕೋಟೆ-ಕೊತ್ತಳಗಳನ್ನು ನಿರ್ಮಿಸುತ್ತಾನೆ.

ಜೊತೆಗೆ ಗಂಗಾಧರೇಶ್ವರ ದೇಗುಲವನ್ನು ನಿರ್ಮಿಸುತ್ತಾನೆ. ಈ ಬಗೆಯ ಕಥನಗಳು ಕೋಟೆಯ ನಿರ್ಮಾಣ ಅಥವಾ ರಾಜ್ಯಸ್ಥಾಪನೆಗೆ ದೈವದ ಬೆಂಬಲವನ್ನು ಪಡೆದುದನ್ನು ಉತ್ಪ್ರೇಕ್ಷಿಸಿವೆ (ಮುದ್ದುವೀರಪ್ಪ ೨೦೧೧: ೨೬೪).

ಹಾಗಲವಾಡಿ ಕೋಟೆಯ ನಿರ್ಮಾಣಕ್ಕೆ ಸಂಬಂಧಿಸಿದಂತೆ ದೈವಿಕ ಶಕ್ತಿಯ ಹಿನ್ನೆಲೆಯಲ್ಲಿ ಮತ್ತೊಂದು ಐತಿಹ್ಯವಿದೆ. ಅದರ ಪ್ರಕಾರ: ಕೋಟೆಯನ್ನು ಕಟ್ಟಲು ಮುದಿಯಪ್ಪ ನಾಯಕನ ಬಳಿ ಸಾಕಷ್ಟು ಹಣವಿರಲಿಲ್ಲ. ಆಗ ಸಮೀಪದ ಗ್ರಾಮವಾದ ಗಡ್ಡೇಹಳ್ಳಿಯ ಅಜ್ಜಪ್ಪಸ್ವಾಮಿಯ ಸಹಾಯವನ್ನು ಕೇಳುತ್ತಾನೆ. ಸಹಾಯ ಮಾಡಲು ಒಪ್ಪಿದ ಅಜ್ಜಪ್ಪಸ್ವಾಮಿಯು ಕೋಟೆ ನಿರ್ಮಾಣ ಕಾರ್ಯವನ್ನು ಆರಂಭಿಸುವಂತೆಯೂ, ಕೂಲಿಕಾರರನ್ನು ಕೆಲಸದ ನಂತರ ತನ್ನ ಬಳಿ ಕಳುಹಿಸಿ ಕೊಡುವಂತೆಯೂ ಕೋರುತ್ತಾನೆ. ಕೆಲಸ ಮುಗಿಸಿ ಬಂದ ಕೂಲಿಕಾರರಿಗೆ ಹಳ್ಳದ ಬಳಿ ಹೋಗಿ ಮರಳನ್ನು ಗುಡ್ಡೆ ಮಾಡಿ ಎಂದು ಹೇಳುತ್ತಾನೆ. ಅದರಂತೆ ಮರಳನ್ನು ಗುಡ್ಡೆ ಮಾಡುತ್ತಾರೆ. ಅಜ್ಜಪ್ಪಸ್ವಾಮಿಯು ತನ್ನ ಮಂತ್ರದಂಡದಿಂದ ಅವುಗಳನ್ನು ಮುಟ್ಟಿದಾಗ ಅವರವರ ಶ್ರಮಕ್ಕೆ ತಕ್ಕನಾದ ಕೂಲಿಯು ಸಿಗುತ್ತದೆ. ಹೀಗೆ ದಿನವೂ ಕೂಲಿಯನ್ನು ಕೊಡುವ ಮೂಲಕ ಕೋಟೆಯ ನಿರ್ಮಾಣಕ್ಕೆ ಅಜ್ಜಪ್ಪಸ್ವಾಮಿಯು ಕಾರಣನಾದನು. ಅಂದಿನಿಂದ ಅಜ್ಜಪಸ್ವಾಮಿಯನ್ನು ತನ್ನ ಆಸ್ಥಾನದ ಗುರುವಾಗಿ ಮಾಡಿಕೊಂಡನು (ಯೋಗೀಶ್ವರಪ್ಪನವರ ಸಂದರ್ಶನ).

ಈ ಕಥೆಗಳ ಹಿಂದಿನ ತರ್ಕವೇನೆಂದರೆ ದೇವರ ಕೃಪೆಯಿಂದ ನಿರ್ಮಿಸಿದ ಈ ಕೋಟೆಗಳಿಗೆ ದೈವಿಕ ಶಕ್ತಿ ಇದೆ. ಆದ್ದರಿಂದ ಅಂತಹ ಕೋಟೆಗಳನ್ನು ಮುತ್ತಬಾರದು ಎಂಬ ಭಯವನ್ನು ಶತ್ರುಗಳ ಮನದಲ್ಲಿ ಬಿತ್ತುವುದು ಈ ಕಥೆಗಳ ಉದ್ದೇಶವಾಗಿದೆ.

ನಂದಿದುರ್ಗದ ಕೋಟೆಗೆ ಸಂಬಂಧಿಸಿದಂತೆ ಅಲ್ಲಿನ ಯೋಗನಂದೀಶ್ವರ ದೇವಾಲಯದ ಅರ್ಚಕರಾದ ಟಿ.ಎನ್. ನಾಗರಾಜ ಅವರು ಹೇಳುವಂತೆ: ಆವತಿ ನಾಡಪ್ರಭುಗಳು ಇಲ್ಲಿನ (ನಂದಿಬೆಟ್ಟದ) ಕೋಟೆಯನ್ನು ಗಾರೆಯಲ್ಲಿ ನಿರ್ಮಿಸಿದರು. ಒಂದು ಮಣ ಬೆಲ್ಲಕ್ಕೆ ಅಷ್ಟೇ ಪ್ರಮಾಣದ ಸುಣ್ಣ ಮತ್ತು ಕೋಳಿಮೊಟ್ಟೆ ಹಾಕಿ ಕೋಟೆ ನಿರ್ಮಿಸಿದ್ದಾರೆ. ಹೀಗೆ ಕೋಟೆಯನ್ನು ಕಟ್ಟುವಾಗ ನಾಡಪ್ರಭುಗಳ ಬೇಟೆ ನಾಯಿಯು ಪೂರ್ವದ ಕೋಟೆಯ ಮೇಲೆ ಹತ್ತಿ ಓಡಾಡಿತು. ಆದ್ದರಿಂದ ಅದರ ಹೆಜ್ಜೆ ಗುರುತುಗಳು ಈಗಲೂ ಇವೆ ಎಂದು ಹೇಳುತ್ತಾರೆ (ಸಂದರ್ಶನ ದಿ:೩೦.೦೫.೨೦೧೭).

ಈ ರೀತಿಯ ಐತಿಹ್ಯಗಳು ಕೂಡ ಕೋಟೆ ಅಭೇದ್ಯವಾದುದು ಎಂಬುದನ್ನು ಪರೋಕ್ಷವಾಗಿ ಹೇಳುವಂತಿವೆ. ಗಾರೆ ಮತ್ತು ಕಲ್ಲಿನಿಂದ ನಿರ್ಮಿಸಿರುವುದರಿಂದ ಕೋಟೆ ಅಭೇದ್ಯ ಎಂಬುದು ಶತ್ರುಗಳಿಗೆ ಮನದಟ್ಟಾಗಬೇಕು ಎಂಬುದು ಈ ರೀತಿಯ

ನಿರೂಪಣೆಗಳ ಹಿಂದಿರುವ ಆಶಯಗಳಾಗಿವೆ. ಬೇಟೆ ನಾಯಿಯು ಕೂಡ ಸಹಜವಾಗಿ ಎಚ್ಚರಿಕೆಯ ಸಂಕೇತವಾಗಿ ಈ ಕಥನದಲ್ಲಿ ಬಂದಿದೆ.

ಕೋಟೆಯ ನಿರ್ಮಾಣಕ್ಕೆ ಸಂಬಂಧಿಸಿದಂತೆ ಇನ್ನೂ ವಿಭಿನ್ನ ಮಾದರಿಯ ನಿರೂಪಣೆಗಳಿವೆ. ಅವುಗಳಲ್ಲಿ ಮುಖ್ಯವಾದವುಗಳು ಈ ರೀತಿ ನೋಡಬಹುದು.

ಭಸ್ಮಾಂಗಿ ಕೋಟೆಯನ್ನು ಕಟ್ಟಲು ಬೂದಿಬಸಪ್ಪನಾಯಕನು ನಿಶ್ಚಯಿಸುತ್ತಾನೆ. ಅದಕ್ಕಾಗಿ ರಾಜನು ಜನರಲ್ಲಿ ಸಹಾಯವನ್ನು ಯಾಚಿಸುತ್ತಾನೆ. ಸಾರ್ವಜನಿಕರಲ್ಲಿ ತಂದೆ–ಮಗ ಇಬ್ಬರು ತಾವು ಕೋಟೆ ಕಟ್ಟಿಕೊಡುತ್ತೇವೆಂದು ಮುಂದೆ ಬರುತ್ತಾರೆ. ಅದಕ್ಕೆ ನಾಯಕನು ನಿಮಗೆ ಇನ್ನಷ್ಟು ಜನರು ಬೇಕಾದರೆ ಬಳಸಿಕೊಳ್ಳಲು ಸೂಚಿಸುತ್ತಾನಾದರೂ ತಾವಿಬ್ಬರೇ ಇನ್ನು ಮೂರು ತಿಂಗಳಲ್ಲಿ ಕೋಟೆ ನಿರ್ಮಿಸುತ್ತೇವೆಂದು ವಚನವೀಯುತ್ತಾರೆ. ಇದಕ್ಕೆ ಒಂದು ನಿಬಂಧನೆಯನ್ನು ಮುಂದಿಡುತ್ತಾರೆ. ಅದೇನೆಂದರೆ: "ನಾವು ಕೋಟೆಯನ್ನು ಪೂರ್ಣವಾಗಿ ಕಟ್ಟಿ ಮುಗಿಸುವವರೆಗೂ ಹೆಣ್ಣು ಸುಳಿಯಬಾರದು" ಎಂದು. ಈ ಷರತ್ತಿಗೆ ಪಾಳೇಗಾರ ಸಮ್ಮತಿಸುತ್ತಾನೆ. ಮರುದಿನ ಕೋಟೆಯನ್ನು ಕಟ್ಟಲು ಪ್ರಾರಂಭಿಸುತ್ತಾರೆ. ಇನ್ನೇನು ಕೋಟೆಯು ಮುಗಿಯುವ ಹಂತ ತಲುಪಿದಾಗ ಸ್ತ್ರೀಯೊಬ್ಬಳು ಕೋಟೆ ಕಟ್ಟುವ ಮಗನಿಗೆ ಕಾಣುವಂತೆ ಮೂತ್ರ ಮಾಡುತ್ತಾಳೆ. ಅದನ್ನು ನೋಡಿ ಯೌವ್ವನಾವಸ್ಥೆಯಲ್ಲಿದ್ದ ಮಗನು ಭಾವೋದ್ವೇಶದಿಂದ ವೀರ್ಯಸ್ಖಲಿಸುತ್ತಾನೆ. ಈ ರೀತಿಯಲ್ಲಿ ವೀರ್ಯಸ್ಖಲನವಾದಾಗ ತಂದೆಯು ನೆಲಕ್ಕೆ ಬೀಳದಂತೆ ಮಣ್ಣಿನ ಗಡಿಗೆಯಲ್ಲಿ ತುಂಬಿಸಿ, ಮತ್ತೆ ಕುರಿಯ ಮಾಂಸದಡಿಗೆಯನ್ನು ಮಾಡಿ, ಅದಕ್ಕೆ ವೀರ್ಯವನ್ನು ಸುರಿದು ಬೆರೆಸಿ ಮಗನಿಗೆ ಊಟ ಮಾಡಲು ಬಡಿಸುತ್ತಾನೆ. ಇದನ್ನು ತಿಂದ ಮಗನು ಶಕ್ತಿವಂತನಾಗಿ ಮತ್ತೆ ಕೋಟೆಯನ್ನು ಕಟ್ಟಲು ನೆರವಾಗಿ, ಹಿಂದೆ ಅರಸನಿಗೆ ವಚನವಿತ್ತಂತೆ ನಿರ್ದಿಷ್ಟ ಸಮಯಕ್ಕೆ ಕೋಟೆಯನ್ನು ನಿರ್ಮಿಸುತ್ತಾರೆ. ಈ ಘಟನೆಯ ಸ್ಮರಣೆಗಾಗಿ ಭಸ್ಮಾಂಗಿ ದುರ್ಗದಲ್ಲಿ ತಂದೆ–ಮಗನ ಪಾದಗಳನ್ನು ನಿರ್ಮಿಸಿದ್ದಾರೆ. ಈ ಪಾದಗಳಿಗೆ ಈಗಲೂ ಪೂಜಾಕಾರ್ಯ ನೆರವೇರಿಸುತ್ತಾರೆ. ರತ್ನಗಿರಿಯ ಕೋಟೆಯನ್ನು ಸಹ ತಂದೆ–ಮಗ ಇಬ್ಬರೇ ಕಟ್ಟಿದರೆಂದು ಸಹ ಜನಪದರು ಹೇಳುತ್ತಾರೆ. ಇದೇ ರೀತಿಯ ಕಥನಗಳನ್ನು ನಿಡುಗಲ್ಲುದುರ್ಗ, ಚನ್ನರಾಯನದುರ್ಗ, ಮಧುಗಿರಿ ಕೋಟೆ, ಹುತ್ರಿದುರ್ಗ ಕೋಟೆಗಳ ನಿರ್ಮಾಣಕ್ಕೂ ಹೇಳುತ್ತಾರೆ (ಮುದ್ದುವೀರಪ್ಪ ೨೦೧೧: ೨೭೦–೭೨).

ಚಿಕ್ಕಬಳ್ಳಾಪುರ ಸಮೀಪವಿರುವ ಕಳವಾರಬೆಟ್ಟದ (ಸ್ಕಂದಗಿರಿ) ಕೋಟೆಯನ್ನು ತಂದೆ ಮಕ್ಕಳಿಬ್ಬರೆ ನಿರ್ಮಿಸಿದರೆಂದು ಹಳ್ಳಿಗರು ಹೇಳುತ್ತಾರೆ. ಅವರ ಪ್ರಕಾರ ಪಾಳೇಗಾರನೊಬ್ಬ ತನ್ನ ಮಗನ ಜೊತೆಗೆ ಸೇರಿಕೊಂಡು ಕೋಟೆಯನ್ನು ನಿರ್ಮಿಸಿದನು. ಮಗನು ಬೆಟ್ಟದ ಕೆಳಗೆ ನಿಂತು ಎಸೆದ ಕಲ್ಲನ್ನು ಮೇಲೆ ನಿಂತಿದ್ದ ತಂದೆ ಹಿಡಿದುಕೊಂಡು

ಕೋಟೆಯನ್ನು ನಿರ್ಮಿಸಿದ. ಆಗಿನ ಜನ ಅಷ್ಟು ಗಟ್ಟಿಮುಟ್ಟಾದ ಹಾಳುಗಳು ಎಂದು ಮುನಿವೆಂಕಟಪ್ಪ ಹೇಳುತ್ತಾರೆ (ಸಂದರ್ಶನ ೧೫.೦೮.೨೦೧೪).

ಕೋಟೆಗಳನ್ನು ನಿರ್ಮಿಸುವಾಗ ಹುಟ್ಟಿಕೊಂಡ ಕಥನಗಳಲ್ಲಿ ಹೆಣ್ಣು ಮನವನ್ನು ಚಂಚಲಗೊಳಿಸುವವಳು ಎಂಬಂತೆ ತೋರಿಸಿರುವಂತಿದೆ. ಇನ್ನೂ ಕೋಟೆಯ ನಿರ್ಮಾಣ ಎನ್ನುವುದು ಶತ್ರುಗಳಿಂದ ಯುದ್ಧದಲ್ಲಿ ಸಂರಕ್ಷಿಸಿಕೊಳ್ಳಲು ಕಟ್ಟಿಕೊಂಡುದಾಗಿದೆ. ಕೋಟೆ ನಿರ್ಮಾಣವು ಶತ್ರುಗಳನ್ನು ಸೋಲಿಸುವುದು, ಯುದ್ಧ ಮಾಡುವುದು ಇವೆಲ್ಲ ಶೌರ್ಯದ ಸಂಕೇತಗಳಾಗಿದ್ದು ಸ್ತ್ರೀಯರಿಗಿಂತ ಪುರುಷ ಪ್ರಾಧಾನ್ಯತೆಯುಳ್ಳದ್ದಾಗಿದೆ. ಪುರುಷ ಪ್ರಾಧಾನ್ಯವಾದ ಈ ಅಂಶಗಳಿಂದಾಗಿಯೂ ಇಂತಹವುಗಳ ಬಗೆಗೆ ರಚಿತವಾಗಿರುವ ಕಥನಗಳಲ್ಲಿ ಸ್ತ್ರೀಯರನ್ನು ಶೌರ್ಯದ ವಿರೋಧಿ ಎನ್ನುವಂತೆ ಚಿತ್ರಿಸಲಾಗಿದೆ. ಅಲ್ಲದೆ ನಿಗ್ರಹವು ಸ್ವಸಾಮರ್ಥ್ಯವನ್ನು ಹೆಚ್ಚಿಸಿಕೊಂಡು ಕೆಲಸ ಕಾರ್ಯಗಳಲ್ಲಿ ಸಮುದಾಯವನ್ನು ತೊಡಗಿಸುವಲ್ಲಿ ಪ್ರೇರೇಪಿಸಲು ಈ ತರಹದ ಕಥನ ಮಾದರಿಗಳು ಹುಟ್ಟಿಕೊಂಡಿರುತ್ತವೆ. ಆದರೆ, ಚಿತ್ರದುರ್ಗದ ಕೋಟೆಯೊಳಕ್ಕೆ ನುಸುಳಿ ಬರುತ್ತಿದ್ದ ಶತ್ರುಗಳನ್ನು ಬಡಿದು ಹಾಕಿದ ಓಬವ್ವೆ ಇಂತಹ ನಂಬಿಕೆ ಮತ್ತು ಭ್ರಮೆಗಳನ್ನು ಒಡೆದು ಹಾಕಿದ್ದಾಳೆ. ಅದರ ಚಾರಿತ್ರಿಕ ನಿರೂಪಣೆ ಹೀಗಿದೆ:

ಓಬವ್ವೆ ಚಿತ್ರದುರ್ಗದ ಕೋಟೆಯೊಳಗೆ ಕಹಳೆಯ ಸೇವೆಗೆ ಸೇರಿದ್ದ ಮದ್ದ ಹನುಮನ ಮಡದಿ. ಹೈದರಾಲಿಯು ೧೭೭೮ರಲ್ಲಿ ಚಿತ್ರದುರ್ಗದ ಕೋಟೆಗೆ ಮುತ್ತಿಗೆ ಹಾಕಿದನು. ಆದರೆ ಕೋಟೆಯನ್ನು ಮುತ್ತಲಾಗದೆ ದೀರ್ಘಕಾಲ ಠಾಣ್ಯ ಹೂಡಿದನು. ತಿಂಗಳುನುಗಟ್ಟಲೆ ಕಳೆದರು ಕೋಟೆಯ ಜನ ಶರಣಾಗಲಿಲ್ಲ. ಆಗ ಮೈಸೂರಿನ ಸೈನಿಕರು ಪರ್ಯಾಯ ಆಲೋಚನೆಯಲ್ಲಿ ಮುಳುಗಿದರು. ಕೋಟೆಗೆ ಇರುವ ಕಳ್ಳದಾರಿಯನ್ನು ಹುಡುಕಿ ಒಳನುಸುಳುವ ಅಭಿಪ್ರಾಯಕ್ಕೆ ಬಂದರು. ಅದರಂತೆ ಕಳ್ಳದಾರಿಯನ್ನು ಹುಡುಕಾಡಿದಾಗ ವಾಯವ್ಯ ದಿಕ್ಕಿನಲ್ಲಿ ಒಳನುಸುಳುವ ಕಂಡಿಯೊಂದು ಗೋಚರಿಸಿತು. ಆದರ ಮೂಲಕ ಹೈದರನ ಸಿಪಾಯಿಗಳನ್ನು ಕೋಟೆಯೊಳಕ್ಕೆ ನುಗ್ಗಿಸಲಾಯಿತು.



ಓಬವ್ವನ ಕಿಂಡಿ, ಚಿತ್ರದುರ್ಗದ ಕೋಟೆ. (ಚಿತ್ರ: ಲೇಖಕರದು)

ಅತ್ತ ಇದೇ ಸಮಯಕ್ಕೆ ಕಹಳೆಯ ಬತೇರಿಯಲ್ಲಿ ಚಾಕರಿ ಮಾಡುತ್ತಿದ್ದ ಮದ್ದಹನುಮನು ಊಟಕ್ಕ ಸಮೀಪದ ಗುಡಿಸಲಿಗೆ ಹೋದನು. ಊಟ ಬಡಿಸಿದ ಅವನ ಮಡದಿ ಓಬವ್ವೆ, ನೀರು ತರಲು ಕಳ್ಳಗಂಡಿ ಸಮೀಪದ ಸಿಹಿನೀರಿನ ಕೊಳದ ಹತ್ತಿರಕ್ಕೆ ಹೋದಳು. ಈ ವೇಳೆ ಕಳ್ಳಗಂಡಿಯ ಸಮೀಪದಲ್ಲಿ ಕತ್ತಿ ಗುರಾಣಿಗಳ ಸಪ್ಪಳವಾಗುತ್ತಿತ್ತು. ಶತ್ರುಗಳು ಕೋಟೆಯೊಳಗೆ ನುಸುಳುತ್ತಿರುವುದಾಗಿ ಅರಿತ ಓಬವ್ವ ತನ್ನ ಗುಡಿಸಲಿಗೆ ಓಡಿಹೋಗಿ ಒಂದು ಒನಕೆಯನ್ನು ತೆಗೆದುಕೊಂಡು ಬಂದು ಕತ್ತಲೆಯಾಗಿದ್ದ ಆ ಕಳ್ಳಗಂಡಿಯ ಪಕ್ಕದಲ್ಲಿ ನಿಂತಳು ಆ ಕಂಡಿಯಿಂದ ನುಸುಳಿ ಬರುತ್ತಿದ್ದ ಹೈದರಾಲಿಯ ಒಬ್ಬೊಬ್ಬನೇ ಸೈನಿಕನ ತಲೆಯ ಮೇಲೆ ಒನಕೆಯಿಂದ ಬಾರಿಸಿದಳು. ಬಿದ್ದ ಸೈನಿಕರನ್ನು ಎಳೆದು ಪಕ್ಕದ ಹಳ್ಳಕ್ಕೆ ಹಾಕಿದಳು. ಒಬ್ಬನ ಹಿಂದೆ ಒಬ್ಬ ಮತ್ತೊಬ್ಬ ಹೀಗೆ ಬರುತ್ತಿದ್ದ ಹೈದರಾಲಿಯ ಸೈನಿಕರನ್ನು ಕೊಲ್ಲುತ್ತಾ ಹೋದಳು. ಹೀಗೆ ೨೦೦-೩೦೦ ಜನರವರೆಗೆ ಒಬ್ಬೊಬ್ಬರಾಗಿ ಬಂದರು. ಹೆಣದ ರಾಶಿಯೇ ಆಯಿತು. ಕಳ್ಳಗಂಡಿಯ ಮೂಲಕ ಕೋಟೆಯ ಒಳಗೆ ಹೋದವನು ಏನಾದನೆಂಬುದು ಹೊರಗಿನವರಿಗೆ ತಿಳಿಯಲಿಲ್ಲ. ಹೆಂಡತಿಯು ಹೋದವಳು ಬಾರದಿದ್ದುದರಿಂದ ಬಹಳ ಸಮಯವಾದ್ದರಿಂದ ಮದ್ದಹನುಮನು ಕರ್ತವ್ಯಕ್ಕೆ ಮರಳಿದನು. ಆ ವೇಳೆ ಹೆಂಡತಿಯ ವೀರಾವೇಶವನ್ನು ಕಂಡು ಅಚ್ಚರಿಗೊಂಡನು. ಬಸವಳಿದಿದ್ದ ಓಬವ್ವ ಕಂಡು ತಕ್ಷಣವೇ ಕಹಳೆಯನ್ನು ಮೊಳಗಿಸಿ ಶತ್ರು ಸೈನ್ಯವು ಕೋಟೆಯನ್ನು ಮುತ್ತಿರುವ ಎಚ್ಚರಿಕೆಯನ್ನು ನೀಡಿದನು. ಕೂಡಲೇ ಚಿತ್ರದುರ್ಗದ ಸೈನ್ಯ ಕೋಟೆಯ ರಕ್ಷಣೆಗೆ ಮುಂದಾಯಿತು. ಅಷ್ಟರಲ್ಲಿ ಶತ್ರುಪಾಳಯದ ಸೈನಿಕನೊಬ್ಬ ಓಬವ್ವಳನ್ನು ಕಡಿದು ಹಾಕಿದನು. ಈ ಸಂಗತಿಯನ್ನು ತಿಳಿದ ಮದಕರಿ ನಾಯಕನು ಬಂದು ನೋಡಿದನು. ಓಬವ್ವಳ ಶೌರ್ಯ ಮತ್ತು ತ್ಯಾಗವನ್ನು ಕೊಂಡಾಡಿದನು. ಹೈದರಾಲಿಯ ಸೈನ್ಯ ಹಿಮ್ಮೆಟ್ಟಿ ಓಡಿ ಹೋಯಿತು. ಹೀಗೆ ತನ್ನ ಕೋಟೆಯನ್ನು ರಕ್ಷಿಸಲು ಓಬವ್ವಳು ಹೋರಾಡುತ್ತಲೇ ಮಡಿದಳು (ಪುಟ್ಟಣ್ಣ ೧೯೨೪:೯೨-೯೪).

ವೀರ ಮದಕರಿನಾಯಕನ ರಕ್ತಸಂಬಂಧಿ ಬಿಚ್ಚುಗತ್ತಿ ದೊಡ್ಡ ಮದಕರಿ ನಾಯಕನು ಛಲವಾದಿಗಳಿಗೆ ನೀಡಿದ ರಹದಾರಿ ಪತ್ರದಲ್ಲಿ ಓಬವ್ವೆ ಕುರಿತು ಸ್ವಲ್ಪ ಭಿನ್ನವಾದ ವಿವರಗಳಿದ್ದು, ಅದನ್ನು ತೆಲಗಾವಿಯವರು ಹೀಗೆ ಉದ್ಧೃತಗೊಳಿಸಿದ್ದಾರೆ.

*...ಶತ್ರುಗಳು ದುರ್ಗಕ್ಕೆ ಪಶ್ಚಿಮ ದಿಕ್ಕಿನ ಕಡೆ ಮೋಕ್ಕಾಂ ಮಾಡಿ ವಂದಾನೊಂದು ರಾತ್ರಿ ಸರುವತ್ತಿನಲ್ಲಿ ಹುಚ್ಚಂಗಮ್ಮನ ಹೊಂಡದ ವೋಣಿಪಿಡಿದು ದಿಡ್ಡಿಯಲ್ಲಿ ಒಬ್ಬೊಬ್ಬರಾಗಿ ಹೋಗಬೇಕಂತ ಯತ್ನಿಸುತ್ತಿರುವಲ್ಲಿ ಆ ದಿಡ್ಡಿ ಬಾಗಿಲ ಪಹರೆಗೆ ನೇಮಿಸಿದ ಹೊಲೆಯರವನು ಪಹರೆಗೆ ಹೋಗಬೇಕು. ಜಾಗ್ರತೆ ಊಟಕ್ಕೆ ಬಡಿಸೆನಲಾಗಿ ಆ ಸಮಯದಲ್ಲಿ ಯಿದ್ದ ಅನ್ನ*

*ಮೊಸರಿಟ್ಟು ಉಣ್ಣುತ್ತಿರಲಾಗಿ ಜನರು ಬರುವಂತೆ ಶಬ್ದವು ಅವನ ಹೆಂಡತಿಗೆ ಕೇಳಿಸಿ ಬರುವಲ್ಲಿ ಆಗ ಆಕೆಯು ಹೊರಗೆ ಹೋಗಿ ಚೆನ್ನಾಗಿ ನೋಡುವಲ್ಲಿ ಶತ್ರುಪಕ್ಷದವರು ಒಳಗೆ ಬರಬೇಕೆಂದು ಪ್ರಯತ್ನಿಸುತ್ತಿರುವುದನ್ನು ಅರಿತು. ಗಂಡನಿಗೆ ಹೇಳಿದ ಕೂಡ್ಲೆ ಅನ್ನ ಬಿಟ್ಟು ಬರುವನು. ಅವರ ಪಾಪವು ನನಗೆ ಬರುವುದು. ಸುಮ್ಮನೆ ಯಿದ್ದರೆ ರಾಜದ್ರೋಹ ಮಾಡಿದಂತೆ ಆಗುವುದೆಂದು ಯೋಚಿಸಿ ತನ್ನ ಸಾಹಸ ಯಿದ್ದಷ್ಟು ಪ್ರಯತ್ನಿಸುವಳು. ಅಷ್ಟರಲ್ಲಿ ಗಂಡನೆ ಬರುವನೆಂದು ಒಮದು ಒನಕೆ ಹಸ್ತದಲ್ಲಿ ಹಿಡಿದು ದಿಡ್ಡಿಬಾಗಿಲಿಗೆ ಮೋರೆಯಾಗಿ ನಿಂತು ವೀರಗಚ್ಚೆ ಹಾಕಿ ಆ ಬಾಗಿಲು ಒಬ್ಬೊಬ್ಬ ಬರುವಷ್ಟು ಇತ್ತು. ಹೀಗಿರಲಾಗಿ ಒಬ್ಬನು ತಲೆ ತೂರಿಸಿದ ಕೂಡಲೇ ಮುಸಲದಿಂದ ತಲೆಗೆ ಹೊಡೆದು ಸಾಯುವನು. ಆ ಶವವನ್ನು ಕಾಲುಹಿಡಿದು ತನ್ನ ಕಡೆ ಎಳೆದು ಹಾಕುವುದು. ಈ ರೀತಿ ತಲೆಯಿಟ್ಟವರನ್ನೆಲ್ಲಾ ಕೊಲ್ಲುತ್ತಾ ನೂರಾರು ಮಂದಿಯನ್ನು ರಾಶಿ ಹಾಕಿದಳು. ಈ ಕಡೆ ಶತ್ರುಪಕ್ಷದವರಿಗೆ ಅನುಮಾನ ತೋರಿ ಒಳಗೆ ಹೊಕ್ಕವರೆಲ್ಲ ಒಬ್ಬರೂ ಹಿಂದಿರುಗಲಿಲ್ಲ. ಒಳಗಿನ ಮರ್ಮ ತಿಳಿಯದಂತಾಯ್ತು. ಇದು ಏನೋ ಮೋಸವಿರುತ್ತೆಂದು ಸೂಕ್ಷ್ಮತೆಯಿಂದ ಒಳಗಿನ ಕೃತ್ಯವನ್ನರಿತು ಪಲಾಯನ ವಾಗುವಷ್ಟಕ್ಕೆ ಈಕೆಯ ಗಂಡನು ಊಟಮಾಡಿ ತನ್ನ ಸ್ತ್ರೀಯರಿಗೆ ಬಾಗಿಲು ಭದ್ರ ಹಾಕು. ಶತ್ರುಗಳು ಬರುವರಾಗಿದ್ದಾರೆಂತ ಹೇಳಿದ್ದಕ್ಕೆ ಪ್ರತಿ ಜವಾಬು ಇಲ್ಲದ್ದನ್ನು ಕಂಡು ಹೊರಗೆಲ್ಲಾ ಹುಡುಕಿ ಯೀನಿಶಿಯಲ್ಲಿ ಎಲ್ಲಿಗೆ ಹೋದಳೋ ಇದರ ನಿಜಸ್ಥಿತಿ ನಾಳೆ ತಿಳಿ ಕೊಂಡರೆ ಬಂದೀತು. ಇದು ಸಮಯವಲ್ಲ. ಪಹರೆಗೆ ಹೋಗಬೇಕಂತ ಜಾಗ್ರತೆಯಲ್ಲಿ ದಿಡ್ಡಿಬಾಗಿಲ ಬಳಿ ಬರುತ್ತಾ ಹೆಣದ ರಾಶಿಗಳನ್ನು ಮುಸಲದ ಶಬ್ದವನ್ನು ಕೇಳಿ ಗಾಬರಿಯಾಗಿ ತನ್ನ ಭಾರ್ಯಳು ಇರುವ ಸ್ಥಿತಿಯನ್ನು ನೋಡಿ ಭಯ ಪಟ್ಟು ಗದ್ದಲ ಮಾಡಲಾಗಿ ಶತ್ರುಗಳೆಲ್ಲಾ ಓಡಿ ಹೋದರು. ನಂತರ ನಡೆದ ವರ್ತಮಾನ ಗಂಡನಿಗೆ ಹೇಳಿ ತನ್ನ ತಪ್ಪು ಕ್ಷಮಿಸೆಂದು ಬೇಡಿಕೊಳ್ಳಲಾಗಿ ಪರಮಾನಂದದಿಂದ ಅದೇ ಸ್ಥಿತಿಯಲ್ಲಿಯೇ ಗಂಡಹೆಂಡಿರು ದೊರೆಯ ಬಳಿಗೆ ಹೋಗಿ ನಡೆದ ಸಮಾಚಾರ ಅರಿಕೆ ಮಾಡಿಕೊಳ್ಳಲಾಗಿ ರಾಜನು ಸ್ತ್ರೀಯಳ ಸಾಹಸಕ್ಕೆ ಆನಂದ ಭರಿತನಾಗಿ ವಸ್ತ್ರಾಭ್ಯಾಭರಣಗಳನ್ನು ತರಿಸಿ ಮುಂದಿಡಲು ಇವುಗಳು ಅಶಾಶ್ವತವಾದವು. ನನ್ನ ಹೆಸರಿನ ಮೇಲೆ ಆ ಸ್ಥಳದಲ್ಲಿ ದೊಡ್ಡದಾಗಿ ಬಾಗಿಲು ಕಟ್ಟಿಸಿ ವರ್ಷಕ್ಕೊಮ್ಮೆ ತನ್ನವರಿಂದ ಪೂಜೆಮಾಡಿಸುತ್ತಾ ಬರಬೇಕಂತ ಪ್ರಾರ್ಥಿಸಲಾಗಿ ಅರಸು ಸಂತೋಷಪಟ್ಟು ಬಾಗಿಲುಕೋಟೆ ಸಹ ಕಟ್ಟಿಸಿ ವನಕೆಗಂಡಿಬಾಗಲೆಂತ ಹೆಸರಿಡಿಸಿ ಅಲ್ಲಿ ಆ ಸ್ತ್ರೀಯಳ ರೂಪ ಕೆತ್ತಿಸಿ ಗಂಡಹೆಂಡರಿಗೆ ಯಿನಾಮು ಕಿಲ್ಲತ್ತು ಕೊಡಿಸಿದನು... (ತೆಲಗಾವಿ ೨೦೧೦: ೩).*

ಪುಟ್ಟಣ್ಣ ಅವರ ಪ್ರಕಾರ ಓಬವ್ವೆ ಹೋರಾಡಿ ಅಂತಿಮವಾಗಿ ಮರಣ ಹೊಂದಿದರೆ, ಲಕ್ಷ್ಮಣ್ ತೆಲಗಾವಿ, ಚಿನ್ನಸ್ವಾಮಿ ಸೋಸಲೆ ಅವರ ಪ್ರಕಾರ ಈ ಘಟನೆಯು ಕೇವಲ ಐತಿಹ್ಯವಲ್ಲ; ಐತಿಹಾಸಿಕವಾಗಿದೆ ಮತ್ತು ಈ ಘಟನೆಯ ನಂತರವೂ ಓಬವ್ವೆ ಬದುಕಿದ್ದಳು.

ಇವೆಲ್ಲಕ್ಕೂ ಮಿಗಿಲಾಗಿ ಹೆಣ್ಣು ಚಂಚಲೆ, ಅಬಲೆಯಲ್ಲ; ಕೋಟೆಯು ಗಂಡಿನ ಸ್ವತ್ತೂ ಅಲ್ಲ, ಕಲಿತನಕ್ಕೆ ಸ್ಪೃಶ್ಯ – ಅಸ್ಪೃಶ್ಯ ಎಂಬುದಿಲ್ಲ ಎಂಬುದನ್ನು ಓಬವ್ವೆಯ ಪ್ರಕರಣ ನಿರೂಪಿಸುತ್ತದೆ (ತೆಲಗಾವಿ ೨೦೧೦; ಸೋಸಲೆ ೨೦೧೬).

ಆಲೂರು ಕೋಟೆ ಕೋಟೆಯನ್ನು ಕಟ್ಟುವಾಗ ಹರಪನಹಳ್ಳಿಯವರು ಸೇನೆಯನ್ನು ಮುಂದಿಟ್ಟುಕೊಂಡು ಕೋಟೆಯನ್ನು ನಿರ್ಮಿಸದಂತೆ ತಡೆಯುತ್ತಾರೆ. ಪರಿಣಾಮವಾಗಿ ಯುದ್ಧ ನಡೆಯುತ್ತದೆ. ಯುದ್ಧ ಮುಗಿದ ಮೇಲೆ ರಣರಂಗದಲ್ಲಿದ್ದ ರಕ್ತದ ಕೆಸರನ್ನೆ ಕಲಸಿ ತರಕ್ಕೆ ಹಾಕಿ ಕೋಟೆ ಕಟ್ಟುತ್ತಾರೆ. ಪ್ರತಿದಿನ ಇದೇ ಪ್ರಕಾರ ಯುದ್ಧ ಮಾಡಿ ರಕ್ತದ ಕೆಸರಲ್ಲಿ ಕೋಟೆ ಕಟ್ಟುತ್ತಾರೆ. ಒಂದು ದಿವಸ ಯುದ್ಧ ಆಗಲಾಗಿ ಅವರ ಸೇನೆ ಮುರಿದು ಮೇಗಳಗೆರೆ ಬಳಿ ಬೀಡುಬಿಟ್ಟಿತು. ಆಲೂರು ಕೋಟೆಯನ್ನು ಸಮಗ್ರವಾಗಿ ಕಟ್ಟಿಸಿ, ಬಾವಿ ತೆಗೆಸಿ, ಗ್ರಾಮಕ್ಕೆ ಹುಗ್ಗಿ ಹೊಯಿಸಿ, ಜನರನ್ನು ಇಟ್ಟುಕೊಂಡು ದುರ್ಗಕ್ಕೆ ಬಂದರೆಂದನ್ನು ಬಿ. ರಾಜಶೇಖರಪ್ಪ ಅವರು ಸಂಪಾದಿಸಿರುವ **ಚಿತ್ರದುರ್ಗ ಪಾಳೇಗಾರರ ದಾಖಲೆಗಳು** ಎನ್ನುವ ಕೃತಿಯಲ್ಲಿ ಕಾಣಬಹುದು (ರಾಜಶೇಖರಪ್ಪ ೨೦೦೭: ೧೯–೨೦). ಮನುಷ್ಯರ ನೆತ್ತರನ್ನೆ ಕಲಸಿ ಕೋಟೆ ಕಟ್ಟಿದ ಅಪರೂಪದ ಐತಿಹ್ಯ ಇದಾಗಿದೆ. ಇಂತಹ ಕೋಟೆಗಳನ್ನು ಘನತೆ ಮತ್ತು ಸ್ವಾಭಿಮಾನದ ಪ್ರತೀಕವೆಂಬಂತೆ ಬಿಂಬಿಸುವಲ್ಲಿ ಈ ರೀತಿಯ ಐತಿಹ್ಯಗಳು ಮುಖ್ಯಪಾತ್ರವನ್ನು ವಹಿಸುತ್ತದೆ.

***

### ೫.೨ ಲಾವಣಿಗಳು

ಲಾವಣಿಗಳು ಮೌಖಿಕ ಸಾಹಿತ್ಯದ ಮತ್ತೊಂದು ಪ್ರಕಾರ. "ಲಾವಣಿಗಳೆಂದರೆ ಅವು ಹೆಣ್ಣು – ಗಂಡು ಇಲ್ಲವೆ ಪ್ರಕೃತಿ ಪುರುಷ ಶಕ್ತಿಗಳ ಹೆಚ್ಚುಗಾರಿಕೆಯನ್ನು ಕುರಿತು ಸ್ವಾರಸ್ಯಪೂರ್ಣ ಶೃಂಗಾರ ಗೀತೆಗಳ ಸಂವಾದಗಳು ಮಾತ್ರ" ಈ ಸಂವಾದದ ಹಾಡುಗಳು ಆದಿಯಿಂದ – ಆಧುನಿಕತೆಯವರೆಗೂ ಪಾರಂಪರಿಕವಾಗಿ ಸಾಗಿ ಬರುತ್ತಿವೆ (ದಿಗ್ಸಂಗಿಕರ್ ೨೦೦೫: ೩). ಲಾವಣಿಕಾರರು ಸ್ಥಳೀಯ ವೀರರ ಕಥಾನಕವನ್ನು ಹಾಡುಕಟ್ಟಿ ಹಾಡುತ್ತಾರೆ. ಅಂತಹ ಕಥನ ಗೀತೆಗಳೇ ಲಾವಣಿಗಳು.

ಪ್ರಸ್ತುತ ಭಾಗದಲ್ಲಿ ಲಾವಣಿಗಳಲ್ಲಿ ಅಭಿವ್ಯಕ್ತವಾಗಿರುವ ಕೋಟೆಯ ಸಂಗತಿಗಳನ್ನು ಸಂಗ್ರಹಿಸಲಾಗಿದೆ. ಇಲ್ಲಿ ಟಿಪ್ಪು ಮತ್ತು ಅವನ ಕೋಟೆಗಳನ್ನು ಕುರಿತಾಗಿ ಇರುವ ಲಾವಣಿಗಳು ಸಂಖ್ಯಾ ದೃಷ್ಟಿಯಿಂದ ಕಡಿಮೆ ಇವೆ. ಕಾರಣ, ಟಿಪ್ಪುವಿನ ಕುರಿತು ಸಂಗ್ರಹಿಸಿರುವ ಲಾವಣಿಗಳ ಸಂಖ್ಯೆ ಅತ್ಯಲ್ಪ. ದೇವುಡು, ಎಲ್.ಗುಂಡಪ್ಪ ಮತ್ತಿತರ ಕೆಲವು ತಜ್ಞರ ಸಂಗ್ರಹದಲ್ಲಿ ಒಂದೆರಡು ಲಾವಣಿಗಳು ಟಿಪ್ಪುವಿನ ಕುರಿತು ದೊರಕುತ್ತವೆ.

ವಿಶೇಷವಾಗಿ ಟಿಪ್ಪುವಿಗೆ ಸಂಬಂಧಿಸಿದ ಲಾವಣಿಗಳನ್ನು ಸಂಗ್ರಹಿಸಿದವರು ಲಿಂಗದೇವರು ಹಳೆಮನೆ ಮಾತ್ರ. ಹಳೆಮನೆ ಅವರ **ಧೀರ ಟಿಪ್ಪುವಿನ ಲಾವಣಿಗಳು** (೨೦೦೩) ಕೃತಿಯನ್ನು ಪ್ರಧಾನವಾಗಿ ಬಳಸಿಕೊಳ್ಳಲಾಗಿದೆ. ಅಲ್ಲದೆ, ಕೋಟೆಗಳನ್ನು ಕುರಿತು ಮಾಹಿತಿಕೊಡುವ ಇತರ ಪ್ರಮುಖ ಲಾವಣಿಗಳನ್ನು ಕೂಡ ಇಲ್ಲಿ ಚರ್ಚಿಸಲಾಗಿದೆ. ಮುಖ್ಯವಾಗಿ ಶಿರಾ ಕೋಟೆ, ಚಿತ್ರದುರ್ಗದ ಕೋಟೆ, ಬೆಂಗಳೂರು ಕೋಟೆ ಮೊದಲಾದ ಕೋಟೆಗಳ ನಿರ್ಮಾಣಕ್ಕೆ ಸಂಬಂಧಿಸಿದ ವಿವರಗಳ ಜೊತೆಗೆ ಕೋಟೆಗಳು ನಿಲ್ಲದೆ ಹೋದಾಗ ನಡೆದ ನರಬಲಿಯ ಬಗೆಗೂ ಲಾವಣಿಗಳು ತಿಳಿಸಿಕೊಡುವ ಸಂಗತಿಗಳನ್ನು ಚರ್ಚಿಸಲಾಗಿದೆ.

ಟಿಪ್ಪುವು ಬ್ರಿಟಿಷರ ವಿರುದ್ಧ ತೀವ್ರ ಹೋರಾಟವನ್ನು ನಡೆಸುತ್ತಾ, ಪ್ರತಿರೋಧಿಸುತ್ತಿರವ ಸಂದರ್ಭದಲ್ಲಿ ಅವನ ಹಿತಶತೃಗಳ ಗುಂಪೊಂದು ಬ್ರಿಟಿಷರ ಜೊತೆಗೆ ಶಾಮೀಲಾಗಿ, ಶ್ರೀರಂಗಪಟ್ಟಣ ಕೋಟೆಯೊಳಗಿನ ಮದ್ದಿನ ಮನೆಗಳಿಗೆ ಬೆಂಕಿ ಹಾಕಿದರು. ಫಿರಂಗಿಗಳನ್ನು ಕೊತ್ತಳಗಳಿಂದ ಕೆಳಕ್ಕಿಳಿಸಿ ಟಿಪ್ಪುವಿಗೆ ಅಪಾಯ ತಂದೊಡ್ಡಿದರು. ಅಲ್ಲದೆ, ಬ್ರಿಟಿಷರ ಆಕ್ರಮಣದ ವಿವರಗಳನ್ನು ಕೂಡ ಗಮನಿಸಬಹುದು. ಒಟ್ಟಾರೆ, ಟಿಪ್ಪುವಿನ ವಿರುದ್ಧದ ಪಿತೂರಿ ಮತ್ತು ರಾಜಕರಣಗಳನ್ನು ಬಹಳ ಸೂಕ್ಷ್ಮವಾಗಿ ಜನಪದರು ತಮ್ಮ ಲಾವಣಿಗಳಲ್ಲಿ ಅಭಿವ್ಯಕ್ತಿಸಿರುವುದನ್ನು ಕಾಣಬಹುದು.:

*ಫಡ ಫಡಲ್ ಗುಂಡೊಹೆದರು ಕೋಟೆಗೆ*
*ಗಡಬಿಡಿಯು ಹತ್ತಿತ್ತು ಶ್ರೀರಂಗಪಟ್ಣದೊಳಗೆ*
*ಕಡುದ್ರೋಹಿಗಳಾಟ ಮದ್ದಿನ ಮನೆ ಉರಿದೋಗೆ*
*ಇಡಿಸಿದ್ದ ಫಿರಂಗಿಯು ಇಳಿದೋಯ್ತು ಮಣ್ಣೊಳಗೆ*

(ಲಿಂಗದೇವರು *೨೦೦೩: ೩೪).*

*ಸುತ್ತಾ ಕಲ್ಲಿನ ಕೋಟೆ ನಡುವೆ ಸುಲ್ತಾನ್‌ಪೇಟೆ ನೋಡಲು ಆನಂದವಾಗಿತ್ತು*
*ತಯಾರು ಆಗಿ ಹದಿನಾರು ಸಾವಿರ ಹೈದರಾಬಾದಿನಿಂದ ಪವಜು ಬಂತು॥*
*ಮರಾಠೆರಾಜಗೆ ಮೂಲೆಗಾಕಿದ್ದ ಇದೇವತ್ ಎಂದೆ ಎದುರಾಯ್ತು*
*ನಡುವೆ ರಂಗನಗುಡಿ ಎರಡು ಸುತ್ತಿನ ಕೋಟೆ ಕೋಟೆಯೊಳ್ ಮದ್ದು ಗುಂಡಿತ್ತು॥*
*ಸಮಯ ಕಾಯುವ ಸೋಜರ್ ಪವುಜ ಸುತ್ತಮುತ್ತ ಗೇರಾಯಿಸಿತ್ತು*
*ಪಶ್ಚಿಮ ದಿಕ್ಕಿನಿಂತ ಬಿಟ್ಟಿತು ಗುಂಡು ಕಟ್ಟಿದ ಫಿರಂಗಿ ಕೆಳಗಾಯಿತು॥*

*ಏನೇಳಲಿ ಅಣ್ಣ ಬಿತ್ತು ಗುಂಡು ಕೋಟೆಗೆ*
*ನಮ್ಮರಾಜನ ದಂಡೂ ಇಲ್ಲವಲ್ಲಾ ಊರೊಳಗೆ*
*ಫೇರಾಯಿಸಿ ಕೋಟೆಮೇಗೆ ಹತ್ತಿದರು ಕ್ಷಣದಾಗೆ*
*ಸಟ್ಟ ಶನಿವಾರ ಮಧ್ಯಾಹ್ನ ಸುಟ್ಟರು ಮದ್ದಿನ ಮನೆಗೆ*
*ಹಸರೂ ಛತ್ರಿ ನಿಗಾದಿಂದ ಕೊಂದರು ಸೈದ್‌ಗಫೂರಿಗೆ॥*

(ಲಿಂಗದೇವರು *೨೦೦೩: ೩೬-೩೭).*

*ಇರಲಿಲ್ಲಾ ಪಟ್ಟಣದಲೀ ಟಿಪ್ಪುವಿನ ಬೆಂಬಲ ದಂಡು*
*ಬರುವುದರೊಳಗೆ ಚಂದ್ರಾವನದಿಂದ ಬಿದ್ದಿತು ಗುಂಡು*
*ಏರಿ ಕೋಟೆಯ ಮೇಲೆ ತೂರಿ ಬರುತಿದೆ ಸೋಲ್ಜರ್ ದಂಡು*
*ದಾರಿ ಅಡ್ಡವಗಟ್ಟಿ ಪುರದೊಳು ಆಗಿತು ಪುಂಡು*
*ಸೆರೆಯಿಡಿಸಿದರ್ ಮಕ್ಕಳ ಟಿಪ್ಪುವಿನ ಅನ್ನವನುಂಡು*
*ಕೊತ್ತಳು ಕೋಟೆ ಮೇಲೆ ಹತ್ತಿದರ್*
*ವೈರಿಗಳ್ ಸುತ್ತಮುತ್ತ ಬಲವಾಗಿತ್ತು॥*
*ಅಜಪ್ ತಮಾಷ ಈಸ್ಟ್ ಇಂಡಿಯಾ ಕಂಪನಿ ಇಂಗ್ಲಿಷರ ನೆಲೆ ಆದೀತು*
*ಸುತ್ತ ಕಾವೇರಿ ನಡುವೆ ಶ್ರೀರಂಗಪಟ್ಟ ಸುಲ್ತಾನ್ ದವಲತ್ತು ಹೋದಿತ್ತು ॥*

(ಲಿಂಗದೇವರು *೨೦೦೩: ೪೪).*

ಟಿಪ್ಪುವನ್ನು ಮೋಸದಿಂದ ಸೋಲಿಸಿ ಕೊಂದ ಬಗೆಗೂ ಜನಪದರು ಲಾವಣಿಗಳನ್ನು ಕಟ್ಟಿ ಹಾಡಿದ್ದಾರೆ.

*ಏನು ಮೋಸವಾಯಿತೋ- ಸುಲ್ತಾನ ದೌಲತ್*
*ಯಾರ ಪಾಲಿಗೆ ಸೇರಿತೋ*
*ಸುತ್ಮುತ್ ಕಾವೇರಿ ಹೊಳೆ*
*ನಡುವೆ ಶ್ರೀರಂಗನ ಪಟ್ನ*
*ಪಟ್ಟಣದೊಳಗೆಲ್ಲ*
*ನೀನೆಂಬೊ ರಂಗಸ್ವಾಮಿ- ಏನು ಮೋಸ ॥*

*ಕೋಟೇ ಮೇಲೆ ನಿಂತುಕೊಂಡು*

*ಹಸ್ತ್ರ ಕೊಡೇನ್ ಹಿಡಿದುಕೊಂಡು*

*ಹೋಗೋ ಪಂಡಿsಗೆಲ್ಲಿ*

*ವಸ್ತ್ರsವ ಜೀಸಿದಾ*

*ರಾಜನ್ ದೌಲತ್ – ಏನು ಮೋಸ ॥*

*ಮಟಮಟ್ ಮಂಗ್ಳಾರದ್ ದಿವ್ಸ*

*ಮಧ್ಯಾನ್ದ ಹೊತ್ತಿನಲ್ಲಿ*

*ಹದ್ದುs ಹಾರಿದ್ಹಂಗೆ ಹಾರಿತಲ್ಲೋ*

*ರಾಜನ್ ದೌಲತ್ – ಏನು ಮೋಸ ॥*

*ಸುಲ್ತಾನನ್ ದೌಲತ್ ಹೋಯ್ತು*

*ಕುಂಪ್ಲೀಗ್ ದೌಲತ್ತು ಬಂತು*

*ಹೆಂಗsಸರಿsಗೆಲ್ಲ*

*ಹೆಚ್ಚಿನ ಕಾರ್‌ಬಾರು ಬಂತು– ಏನು ಮೋಸ ॥*

(ಗುಂಡಪ್ಪ *೧೯೪೩: ೨೫)*

ಶ್ರೀರಂಗಪಟ್ಟಣದ ಕೊನೆಯ ಮುತ್ತಿಗೆಯ ಸಂದರ್ಭದಲ್ಲಿ (೧೭೯೯) ಟಿಪ್ಪುವು ಬ್ರಿಟಿಷರೊಡನೆ ಹೋರಾಡುತ್ತಾ ಮರಣ ಹೊಂದುತ್ತಾನೆ. ಆ ನಂತರ 'ಹೆಂಗಸರಿಗೆಲ್ಲ ಹೆಚ್ಚಿನ ಕಾರುಬಾರು ಬಂತು' ಎಂಬುದು ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ್ ಬಾಲಕನಾದ್ದರಿಂದ ಅವನ ಪರವಾಗಿ ಮಹಾರಾಣಿಯು ಆಳ್ವಿಕೆ ನಡೆಸುತ್ತಿದ್ದರಿಂದ ಹೀಗೆ ಹೇಳುತ್ತಿರುವಂತೆ ತೋರುತ್ತದೆ.

*ಕಾವೇರಿಯ ಹೊಳೆ ಮಂಗಳಜಲದಲಿ ಸುತ್ತಲು ಸುತ್ತಿರಲು*

*ಮೂರು ಸುತ್ತಿನ ಕೋಟೆಯ ಗೋಡೆ ಹೊರಹೊರ ಬಳಸಿರಲು*

*ಕೋಟೆಗಳೆರಡರ ನಡುವೆಡೆಯಲ್ಲಿ ಕಪ್ಪನೆ ಕಳೆಬೀರಿ*

*ಆಳದ ಅಗಳು ಹಬ್ಬಿತು ಹರಡಿ ಮನಸಿಗೆ ಭಯದೋರಿ*

*ದಿಡ್ಡೀಬಾಗಿಲ ಮೇಲೆತ್ತರದಲಿ ಬಿರುದನಿ ಬೀರುತ್ತ*

*ದಿಗಿಲೆರಚುತ ಬಲ್ ಬುರುಜುಗಳಿದ್ದವು ಸಜ್ಜನು ತೋರುತ್ತ*

ಗೋಪುರವಿದ್ದವು ಮರ್ತ್ಯರ ಶಕ್ತಿಗೆ ಮೀರಿದವೆನೆ ಸುತ್ತ
ಎಲ್ಲಾ ಒಂದೇ ಒಂದು ಕ್ಷಣದಲಿ ಹಾಳಾಗಿ ಹೋಯ್ತತ್ತ ।

(ಲಿಂಗದೇವರು ೨೦೦೩: ೪೯).



**ಗಂಜಾಂ ದ್ವಾರ (ಶ್ರೀರಂಗಪಟ್ಟಣದ ಕೋಟೆ)**

ಪರಂಗೇರ ಚೇಂಡೆ ಆಗ ನೆಡಸ್ಯಾಣ ಕಿಲ್ಲೆದಮ್ಯಾಗ
ಬರದೆ ಪ್ರಾರಬ್ಧ ಮೊಳಗ
ಬರಿಯದು ತಪ್ಪಿತುಹ್ಯಾಂಗ
ತೋಡಿಪದಾ ಹೀಂಗ ಮಾಡಿ ಹಾಡುವೆ ದೈವದ ಒಳಗ
ಹೊಡೆದ ನಿನ್ನ ಮಾರಿಮ್ಯಾಗ ಮುರದ ಹಲ್ಲಾ ।

(ಲಿಂಗದೇವರು ೨೦೦೩: ೬೦).

ಕಡಿದ ಕಲ್ಲಿನ ಕೋಟೆ
ಗುಡುಗುಡಿಸುವ ಗುಂಡು
ಬಿಡದ ಬಾಲ್ಯಗಳ್ಹತ್ತು ಸಾವಿರವು
ಒಡನೆ ಬಲ್ಲಾಳರಾಯ
ದಂಡೆತ್ತಿ ಬರುವಾಗ
ಸಡಗರ ಸಂತತ್ತು
ಕ್ಷಣದಲ್ಲಿ ಹಾರಿಹೋಯಿತಲ್ಲ
ಮದ್ದುಗುಂಡುಗಳ...

ಸಿರಿ ರಂಗಪಟ್ಟಣ ಗಳಿಗೇಲಿ

ಸೂರೆಹೋಯಿತು...

ಬಡಗಲ ಬತೇರಿ ಒಳಗೆ

ಬೆಂಕಿನವಾಬ ಬಿದ್ದ

ತೆಂಕಲ ಬತೇರಿ ಒಳಗೆ

ಸೈದುಗಪೂರ ಬಿದ್ದ

ಹಾ ! ಹಾರಿ ಕಡಿವ ನಮ್ಮ ಬೆಂಕಿನವಾಬ ಇದ್ದ

(ಲಿಂಗದೇವರು ೨೦೦೩: ೬೧).

ಶ್ರೀರಂಗಪಟ್ಟಣವನ್ನು ೧೭೯೯ರಲ್ಲಿ ಬ್ರಿಟಿಷರು ಮುತ್ತಿಗೆ ಹಾಕಿದ ನಂತರ ಅವರ ವಿರುದ್ಧ ಟಿಪ್ಪುವು ತನ್ನ ಕೊನೆಯ ಹೋರಾಟವನ್ನು ನಡೆಸುತ್ತಲೇ ಮರಣ ಹೊಂದಿದ ಸನ್ನಿವೇಶವನ್ನು ಜನಪದರು ಲಾವಣಿಯ ರೂಪದಲ್ಲಿ ಕಟ್ಟಿ ಹಾಡುತ್ತಾ ಟಿಪ್ಪುವನ್ನು ಸ್ಮರಿಸುತ್ತಿದ್ದಾರೆ. ಮೇಲಿನ ಲಾವಣಿಯ ಸಾಲುಗಳಲ್ಲಿ ಆಕ್ರಮಣದ ತೀವ್ರತೆಯನ್ನು, ಶತ್ರುಗಳ ಸಂಚನ್ನು, ಕೋಟೆ–ಪಟ್ಟಣಗಳು ಬಲಿಯಾದ ಪರಿಯನ್ನು ಜಾನಪದ ಕವಿ ಅತ್ಯಂತ ಹೃದಯಂಗಮವಾಗಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. ಇಲ್ಲಿ ಒಂದು ಐತಿಹಾಸಿಕ ವಿವರದ ಬಗೆಗೆ ಸೂಕ್ಷ್ಮವಾದ ಮಾಹಿತಿಯೊಂದನ್ನು ಗುರುತಿಸಬಹುದು. ಟಿಪ್ಪುವು ಶ್ರೀರಂಗಪಟ್ಟಣದ ಅಂತಿಮ ಯುದ್ಧದಲ್ಲಿ ಅಸುನೀಗಿದ ದಿನ ಮಂಗಳವಾರ. ಅದಕ್ಕೆ ಮೂರು ದಿನ ಮೊದಲು ಮದ್ದಿನ ಮನೆಗೆ ಬೆಂಕಿಬಿದ್ದು ಅಪಾರ ಶಸ್ತ್ರಾಸ್ತ್ರ ಮತ್ತು ರಾಕೆಟ್‌ಗಳು ಸುಟ್ಟುಹೋದವೆಂದು ಕೆಲವು ದಾಖಲೆಗಳು ವಿವರ ನೀಡುತ್ತವೆ. ಅದು ಲಾವಣಿಗಳಲ್ಲಿಯೂ ಅಭಿವ್ಯಕ್ತಗೊಂಡಿದೆ. ಶನಿವಾರ ಮಧ್ಯಾಹ್ನದಂದು ಮದ್ದಿನ ಮನೆಯನ್ನು ಸುಟ್ಟ ಬಗ್ಗೆ ಲಾವಣಿ ತಿಳಿಸುತ್ತಿದ್ದು, ಘಟನೆಯನ್ನು ಖಾತ್ರಿಪಡಿಸುತ್ತಿದೆ. ಹೀಗೆ ಲಾವಣಿಗಳು ಚರಿತ್ರೆಯ ಕಟ್ಟುವಿಕೆಯ ಪ್ರಕ್ರಿಯೆಯಲ್ಲಿ ನೆರವಾಗುತ್ತವೆ.

***

ಮೇಲಿನ ಭಾಗದಲ್ಲಿ ಕೋಟೆಗಳಿಗೆ ಸಂಬಂಧಿಸಿದಂತೆ ಟಿಪ್ಪುವನ್ನು ಕುರಿತಾದ ಲಾವಣಿಗಳನ್ನು ಗಮನಿಸಲಾಗಿದೆ. ಟಿಪ್ಪುವನ್ನು ಹೊರತಾದ ಕೆಲವು ಲಾವಣಿಗಳಲ್ಲಿಯೂ ಕೋಟೆಗಳ ಬಗೆಗೆ ಕೆಲವು ಸ್ವಾರಸ್ಯಕರವಾದ ವಿವರಗಳಿವೆ. ಮುಖ್ಯವಾಗಿ ಕುಮ್ಮಟದುರ್ಗ, ಶಿರಾ, ಚಿತ್ರದುರ್ಗ ಮೊದಲಾದ ಕೋಟೆಗಳಿಗೆ ಸಂಬಂಧಿಸಿವೆ. ಕ್ರಮವಾಗಿ, ಕೋಟೆಗಳ ನಿರ್ಮಾಣಕ್ಕೆ ಸ್ಥಳದ ಆಯ್ಕೆ, ಕೋಟೆಗಳ ನಿರ್ಮಾಣ ಮತ್ತು ಕೋಟೆಯ ವಿಶೇಷತೆಗಳ ವರ್ಣನೆ ಕುರಿತಾದ ಲಾವಣಿಗಳಾಗಿವೆ. ಅವುಗಳನ್ನು ಈ ಮುಂದೆ ಚರ್ಚಿಸಲಾಗಿದೆ.

ಮುದ್ದು ಮುಖದ ರಾಮ ಬೆನ್ನಟ್ಟಿ ಬರಲಾಗ
ಎದ್ದಿತು ಮೊಲವು ಕುಮ್ಮಟದಿ
ಇದ್ದಂತ ನಾಯಿಗಳ ಹಾಸವ ಬ(ಹ)ಳ ಬಲು
ಗುದ್ದಿತು ನಾಯಿ ಮೇಲ್ಬಂದು
ದಿಟ್ಟ ಚೆನ್ನಿಗರಾಮ ಅದಕಂಡು ಕೋಯೆನೆ
ಅಟ್ಟಿತು ಜುಣಗಿಯೆಲ್ಲರನು
ಬಿಟ್ಟಲ್ಲಿ ಬಿಡದೆ ಹುಯ್ಯಲ ಕುಮ್ಮಟತಾಗಿ
ನೆಟ್ಟಣೆ ಬೆನ್ನಟ್ಟಿ ನಡೆಯೆ
ಮಂಡಲೇಶ್ವರ ರಾಮಕಂಡನು ದುರ್ಗ(ವ)
ಕಂಡು ಬೆರಗು ಪಟ್ಟನಾಗ
ತಂಡತಂಡದ ಪರಿವಾರವು ಸಹವಾಗಿ
ಹಿಂಡು ಮಾವಿನ ತೋಪಿನಡಿಯ
ಜೈನರು ಕುಮ್ಮಟ ದುರ್ಗದಿಂದಲಿ ಮತ್ತೆ
ಚೆನ್ನರಾಮನ ಬಳಿಗೈದಿ
ಚೆನ್ನಾಗಿ ಉಲುಪಿಯ ತಂದು ಕಾಣಿಕೆಯಿಟ್ಟು
ಇನ್ನು ರಾಯನ ಕರೆದೊಯಿದು
ಉನ್ನತ ಹರುಷದಿ ಕುಮ್ಮಟವನು ಹತ್ತಿ
ಚೆನ್ನಾಗಿ ದುರ್ಗ ನೋಡಿದನು
ಮನೆಯ ರಾಮನು ನುಡಿದ ಮತ್ತೆಯು
ಇನ್ನು ರಾಯರಿಗಳವಲ್ಲ
ಗಂಡು ಭೂಮಿಯುಯಿದು ನಾಯಿ ಕಚ್ಚಿತು ಮೊಲ
ತಂಡ ತಂಡದ ಜನನೋಡೆ
ಮಂಡಲದೊಳು ಕಮ್ಮಟ ನೋಡಿ ರಾಮಯ್ಯ
ಕಂಡು ಹಿಗ್ಗಿದ ಮನದೊಳಗೆ
ಬಿಟ್ಟರು ಕಮ್ಮಟವನು ಕೊಪ್ಪಳಕಾಗ
ನೆಟ್ಟನೆ ಕಟ್ಟಿ ಪಟ್ಟಣದ

*ಕೋಟೆ ಕುಮ್ಮಟದಲ್ಲಿ ಚೆನ್ನಿಗರಾಮ*

*ದಿಟ್ಟ ಕಾಮಾಟಗರ ಕರೆಸಿ.*

(ಮುದ್ದುವೀರಪ್ಪ *೨೦೧೧: ೨೩-೨೪*).

ಈ ಲಾವಣಿಯಲ್ಲಿ ಮುದ್ದುಮುಖದ ಕುಮಾರರಾಮನು ಮೊಲವನ್ನು ಬೆನ್ನಟ್ಟಿ ಬರುತ್ತಿದ್ದನು. ಆಗ ಆ ಮೊಲವು ಕುಮ್ಮಟದ ಕಡೆಗೆ ಓಡಿತು. ಅಲ್ಲಿ ಅಟ್ಟಹಾಸ ತೋರುತ್ತಿದ್ದ ನಾಯಿಗಳ ಬಣದೊಂದಿಗೆ ಸೆಣೆಸಾಡಿ ಗೆದ್ದಿತು. ಅದನ್ನು ಕಂಡ ಕುಮಾರರಾಮ ಕೋ ಎಂದು ಕರೆದಾಗ ಅದು ಬರದೆ ಆ ನಾಯಿಗಳು ಚೀರುವಂತೆ ಬೆಂಬತ್ತಿ ಅಟ್ಟಿಸಿಕೊಂಡು ಹೋಯಿತು. ಆ ನಾಯಿಗಳು ಕುಮ್ಮಟದಲ್ಲೆಲ್ಲಾ ಕೇಳಿಸುವಂತೆ ಹುಯ್ಯಲಿಡುತ್ತಿದ್ದವು. ಇದನ್ನು ಕಂಡು ಕುಮಾರ ರಾಮನಿಗೆ ಆಶ್ಚರ್ಯವಾಯಿತು. ಜೈನರು ಬಂದು ಕುಮಾರರಾಮನಿಗೆ ಕಾಣಿಕೆ ಇತ್ತರು. ರಾಮನು ಕುಮ್ಮಟವನ್ನೆಲ್ಲ ಒಮ್ಮೆ ಪರಿಶೀಲಿಸಿದ ತರುವಾಯ ರಾಜನಾದ ತನಗೆ ಮಾತ್ರವಲ್ಲದೆ ಎಲ್ಲಾ ಜನರಿಗೂ ವೇದ್ಯವಾದಂತೆ ಇದು ಗಂಡುಭೂಮಿ ಎಂದು ಅರಿತನು; ಅಲ್ಲಿ ಕೋಟೆ ಕಟ್ಟುವ ವ್ಯವಸ್ಥೆ ಮಾಡಿದನು.

ಕೋಟೆಯ ನಿರ್ಮಾಣಕ್ಕೆ ಸಂಬಂಧಿಸಿದಂತೆ ಇನ್ನೂ ಕೆಲವು ಕುತೂಹಲಕರ ವಿವರಗಳು ಲಾವಣಿಗಳಲ್ಲಿ ಉಲ್ಲೇಖಗೊಂಡಿವೆ. ಅವುಗಳ ಸಾಲುಗಳನ್ನು ಈ ಮುಂದಿನಂತೆ ಗಮನಿಸಬಹುದು:

*ಆನೆಯ ಕೈಲಿ ಅದಿಯ ತುಳ್ಸಿಯದರು*

*ದಳವಾಯಿಯವರು*

*ಏಳು ಸುತ್ತಿನ ಕೋಟೆ ಕಟ್ಟಿದರು*

*ಕ್ವಾಟೆ ಸುತ್ತ ಕಾವಲ ಮಡಗಿದರು*

*ದಳವಾಯಿಯವರು*

*ಠಾಣ್ಯವೆಲ್ಲ ಒಕ್ಕಡೆ ನಿಲ್ಸಿದರು.*

ದಳವಾಯಿತು ಕೋಟೆಯನ್ನು ಕಟ್ಟಲು ಹಾಕಿದ ತಳಪಾಯದ ಕಲ್ಲುಗಳನ್ನು ಆನೆಯ ಸಹಾಯದಿಂದ ತುಳಿಸಿ ಭದ್ರಪಡಿಸಿದನು. ಹೀಗೆ ಏಳು ಸುತ್ತಿನ ಕೋಟೆಯನ್ನು ಕಟ್ಟಿ ಸುತ್ತಲು ಕಾವಲು ಇಟ್ಟನೆಂದು ಈ ಸಾಲುಗಳು ಸರಳವೂ ನೇರವಾದ ನುಡಿಗಳಲ್ಲಿ ಅಭಿವ್ಯಕ್ತಿಸಿವೆ.

ಮತ್ತೊಂದು ಲಾವಣಿಯಲ್ಲಿ ಶಿರಾ ಕೋಟೆಯನ್ನು ಕಟ್ಟಿದ ಬಗೆಯನ್ನು ಕಾಣಬಹುದು.

*ಹುಟ್ಟಿತು ಹುಟ್ಟಿತು ಕೋಟೆ*

*ಹುಟ್ಟೀತು ಸೀರ್ಯಾದ ಪೇಟೆ*

*ಅಕ್ಕಿ ಇಟ್ಟೀಲಿ ನೆಲಗಾರೆ। ಕೊಟ್ಟಯಿತೆ*

*ಸಿಕ್ಕ ಸೀರ್ಯಾದ ಕೊನೆ ಪೇಟ್ಗೆ ॥*

*ಮೂಡಿತು ಮೂಡಿತು ಕೋಟೆ*

*ಮೂಡೀತು ಸೀರ್ಯಾದ ಪೇಟೆ*

*ಗೋದಿ ಇಟ್ಟೀಲಿ ನೆಲಗಾರೆ ಕೊಟ್ಟಯಿತೆ*

*ರಾಯ ಸೀರ್ಯಾದ ಕೊನೆ ಪೇಟ್ಗೆ॥*

(ಬಸವರಾಜ ೨೦೧೦: ೬೨)

ಶಿರಾ ಕೋಟೆಯ ನಿರ್ಮಾಣದ ಸಮಯದಲ್ಲಿ ಆ ಕೋಟೆಗೆ ಅಕ್ಕಿ, ಗೋಧಿಯ ಹಿಟ್ಟನ್ನು ಬಳಸಿ ಕಲ್ಲುಗಳ ಸಂಧಿಗೆ ಗಿಲಾವ್ ಮಾಡಿದ್ದನ್ನು ಹಾಗೂ ಕೋಟೆಯ ಜೊತೆಗೆ ಪೇಟೆ ಕೂಡ ಶೀಘ್ರದಲ್ಲಿ ನಿರ್ಮಾಣಗೊಂಡಿದ್ದನ್ನು, ಲಾವಣಿಯ ಸಾಲುಗಳಲ್ಲಿ ಗಮನಿಸಬಹುದು. ಈ ಮೇಲೆ ನಂದಿದುರ್ಗದ ಕೋಟೆಯನ್ನು ಕಟ್ಟಲು ಬೇಕಾದ ಗಾರೆಯನ್ನು ತಯಾರಿಸಲು ಸುಣ್ಣದಕಲ್ಲಿನ ಜೊತೆಗೆ ಬೆಲ್ಲ, ಕೋಳಿ ಮೊಟ್ಟೆಗಳನ್ನು ಬಳಸುತ್ತಿದ್ದ ಬಗ್ಗೆ ನೋಡಿದ್ದೇವೆ. ಈ ಮಾತನ್ನು ಲಿಖಿತ ಸಾಹಿತ್ಯಗಳಲ್ಲಿಯೂ ಕಾಣಬಹುದು. ಆದರೆ, ಗಾರೆಯನ್ನು ಮಾಡಲು ಗೋಧಿ ಮತ್ತು ಅಕ್ಕಿ ಹಿಟ್ಟನ್ನು ಬಳಸುತ್ತಾರೆ ಎಂಬುದನ್ನು ಮೌಖಿಕ ಸಾಹಿತ್ಯದಲ್ಲಿ ಮಾತ್ರ ತಿಳಿಯಲು ಸಾಧ್ಯ.

ಕೋಟೆಗಳ ರಚನೆಯು ಶತ್ರುಗಳು ಒಳನುಸುಳಲು ಸುಲಭವಾಗದಂತೆ ಅಭೇದ್ಯವಾಗಿ ರೂಪುಗೊಳ್ಳುತ್ತಿತ್ತು. ಇದಕ್ಕೆ ಈ ಸಂಬಂಧಿಸಿದ ಲಾವಣೆಯ ಸಾಲು ಇಂತಿವೆ:

*ಹಕ್ಕಿ ಹಾರದ ಕೋಟೆ ಪಕ್ಷಿ ತೂರದ ಕೋಟೆ*

*ರಕ್ಕಸನ ಕೋಟೆ ರಣಕೋಟೆ। ರನ್ನಾದ ಕೋಲನ್ನಾ ಕೋಟೆ।*

*ರಕ್ಕಸನ ಕೋಟೆ ರಣಕೋಟೆ ನಿಡುಗಲ್ಲು*

*ಒಕ್ಕು ಹೋಗೋನ ಹೆಸರೇಗೆ॥ ರನ್ನಾದ॥*

*ಕಾಗೆ ತೂರದ ಕೋಟೆ ಗೂಬೆ ಕೂರದ ಕೋಟೆ*

*ರಾವಳನ ಕೋಟೆ ರಣಕೋಟೆ ॥ ರನ್ನಾದ ॥*

*ರಾವಳನ ಕೋಟೆ ರಣಕೋಟೆ ನಿಡುಗಲ್ಲು*

*ಗಡಿ ಹೋಗೋನ ಹೆಸರೇನೆ॥ ರನ್ನಾದ ॥*

*ಕೋಟೆ ಆರಾಳುದ್ದ ಕೊತ್ತಳ ಮಾರಾಳುದ್ದ*

*ಕೋಟೆಯ ಹೆಸರೇ ಗಡಿಯಂಕ ॥ ರನ್ನಾದ ॥*

*ಕೋಟೆಯ ಹೆಸರೇ ಗಡಿಯಂಕ ಮುಮ್ಮಡಣ್ಣನ*

*ಅಂಗೀಯ ಹೆಸರೇ ಲಿಂಗವಂತ ॥ ರನ್ನಾದ ॥*

(ಮುದ್ದುವೀರಪ್ಪ ೨೦೧೧: ೩೪)

ರಾವಣನ ಕೋಟೆ ಅಭೇದ್ಯವಾದುದು ಎಂಬುದು ಕವಿ ಸಮಯ. ನಿಡುಗಲ್ಲಿನ ಕೋಟೆ ಕೂಡ ಅಂತೆಯೇ ಅಭೇದ್ಯತೆಯನ್ನು ಹೊಂದಿದೆ. ಇದು ಬೃಹತ್ತಾದ ಗೋಡೆ ಮತ್ತು ಆರು ಮಂದಿ ಎತ್ತರದ ಕೊತ್ತಳಗಳನ್ನು ಹೊಂದಿದ್ದು, ಪಕ್ಷಿಗಳು ಕೂಡ ನುಸುಳಿ ಒಳಗೆ ಹೋಗಲು ಸಾಧ್ಯವಿಲ್ಲದಂತೆ ಬಲಿಷ್ಠವಾಗಿದೆ ಎಂಬುದನ್ನು ಈ ಲಾವಣಿಯ ಸಾಲುಗಳು ಅಭಿವ್ಯಕ್ತಿಸುತ್ತವೆ.

ಅದೇ ರೀತಿ ಮತ್ತೊಂದು ಲಾವಣಿಯಲ್ಲಿ ಹಣವ ಕಿತ್ತು ಜಗಲಿಕಟ್ಟಿ, ನೆಣವ ಕಿತ್ತು ಕೋಟೆ ಕಟ್ಟಿದನೆಂಬ ವಿಶಿಷ್ಟ ಪ್ರಸ್ತಾಪವನ್ನು ಕಾಣಬಹುದು.

*ಅಪ್ಪನ ಮಾತ ಕೇಳದಲೆ*

*ಇಪ್ಪತ್ ಸಾವಿರದಂಡ ಕಡಿದು*

*ನೋಡಬೇಕೆಂದ ಮೈಸೂರ್ ಗಾಜಿನ ಕಿಲ್ಯಾವ–ಜೈ*

*ಅಣ್ಣನ ಮಾತ ಕೇಳದಲೆ*

*ಹನ್ನೆಳ್ಡ್ ಸಾವಿರ ದಂಡ ಕಡಿದು*

*ತಕ್ಕೋಬೇಕೆಂದ ಜಾಟಂಗಿ ದುರ್ಗವ–ಜೈ*

*ಸಾಬ್ರನೆಲ್ಲ ಬಲ್ಲೀರೆಂದು*

*ಮೆದಕೇರಪ್ಪನ್ ಕಾವೇರೆಂದು*

*ಜಾಡಿಸ್ತುಳ್ಳೀ ಮಾಡಾರಣ್ಣ ಜಗಳೂರು ಪೇಟೇಲಿ –ಜೈ*

*ಹಣವ ಕಿತ್ತು ಜಗಲೀ ಕಟ್ಟಿ*

*ನೆಣವ ಕಿತ್ತು ಕೋಟೇ ಕಟ್ಟಿ*

*ಕೋಟೆ ಒಳಗೆ ನುಲ್ ನುಲ್ದಾಡಿ ಸಂವರ ಮಾಡಿದ–ಜೈ*

(ಗುಂಡಪ್ಪ ೧೯೪೩: ೨೪)

ಮದಕರಿನಾಯಕನು ಪರಾಕ್ರಮವನ್ನು ಈ ಗೀತೆಯು ವರ್ಣಿಸುವಂತೆ ತೋರುತ್ತದೆ. ಅಲ್ಲದೆ, ಯಾವುದೋ ಒಂದು ಚಾರಿತ್ರಿಕ ಪ್ರಸಂಗವನ್ನು ಈ ಸಾಲುಗಳು ನಿರೂಪಿಸುತ್ತಿವೆ. ಕೊನೆಯ ಪದ್ಯದಲ್ಲಿ ಹಣವ ಕಿತ್ತು ಎಂಬುದರ ಬದಲು ಅದು ಪೆಣವ ಕಿತ್ತು ಎಂದು ಇರಬಹುದು. ಜಗಲಿಯನ್ನು ಕಟ್ಟಲು ಸಮಾಧಿಯ ಕಲ್ಲುಗಳನ್ನು ಬಳಸಿದಂತೆಯೂ, ಮೈಮುರಿದು, ಕೊಬ್ಬು ಕರಗಿಸಿ ಕೋಟೆಯನ್ನು ಕಟ್ಟಿದಂತೆ ಈ ಸಾಲುಗಳು ಧ್ವನಿಸುತ್ತವೆ.

ಕೆಂಪೇಗೌಡನು ಬೆಂಗಳೂರಿನ ಕೋಟೆ ನಿರ್ಮಿಸುವಾಗ ಕೋಟೆ ಬಾಗಿಲು ನಿರ್ಮಿಸಿದಂತೆ ಅಂದಿನ ರಾತ್ರಿಯೇ ಬಿದ್ದು ಹೋಗುತ್ತಿತ್ತು. ಅದಕ್ಕೆ ಶಾಸ್ತ್ರ ಕೇಳಿಸಿದಾಗ ಗರ್ಭಿಣಿ ಸ್ತ್ರೀಯಾದ ಅವನ ಸೊಸೆ ಬಲಿಯಾದರೆ ಕೋಟೆಯ ಬಾಗಿಲು ನಿಲ್ಲುತ್ತದೆ ಎಂದು ಪರಿಹಾರ ದೊರೆಯುತ್ತದೆ. ಈ ವಿಚಾರವನ್ನು ಕೇಳಿ ಕೆಂಪೇಗೌಡನು ಚಿಂತಾಕ್ರಾಂತನಾಗುತ್ತಾನೆ. ವಿಷಯ ಅರಿತ ಸೊಸೆ ಲಕ್ಷ್ಮಮ್ಮ ತಾನೇ ಬಲಿಯಾಗುತ್ತಾಳೆ. ಇದಕ್ಕೆ ಸಂಬಂಧಿಸಿದ ಲಾವಣಿಯಿಂತಿದೆ:

*ಒಳ್ಳೆ ಐದು ಜನ ಪಾಳೇಗಾರರ*
*ಮಡಗಿಕೊಂಡ ಕೆಂಪೇಗೌಡ*
*ಒಳ್ಳೆ ಬೆಂಗಳೂರು ಕಟ್ಟಸ್ಯಾನು*
*ಕೋಟೆ ಊರು ಬಾಗಿಲು ನಿಲ್ಲಲಿಲ್ಲಾ*
*ಒಳ್ಳೆ ಎಷ್ಟುಸಲ ಕಟ್ಟಿಸಿದರೂ*
*ನಿಲ್ಲದ್ಹೀಗ ಹೋದಿತಲ್ಲೋ*
*ಒಳ್ಳೆ ಮನೆಗಾದರೀಗಾ ಬಂದನ್ಹೀಗ*
*ಚಿಂತೆಯಿಂದ ಮನಗಿಕೊಂಡ*
*ಒಳ್ಳೆ ಕೆಂಪೇಗೌಡ್ನ ಕೇಳಿತಲ್ಲೋ*
*ಕೋಟೆ ಬಾಗಿಲು*
*ಒಳ್ಳೆ ಸೊಸೆ ಲಕ್ಷ್ಮಮ್ಮ ತಾಯಿ*
*ಏನಂತಾಗ ಹೇಳುತಾಳೆ*
*ಮಾವಯ್ಯ ನೀನು ಚಿಂತೆ ಮಾಡಬೇಡ*
*ನಾನು ಹೋಗೆ ಕಟ್ಟಿಬರುವೆ*
*ನನ್ನ ಹೆಸರು ಜಗದಲ್ಲಿ*
*ಹರಡಾಲಿ ಮಾವಯ್ಯ ಕೆಂಪೇಗೌಡರೇ*

*ಒಳ್ಳೇ ಬೇಗದಿಂದ ಬರುತಾಳೆ*

*ಸೊಸೆ ತಾಯಿ ಲಕ್ಷ್ಮಮ್ಮದೇವಿ*

*ಒಳ್ಳೆ ಕೋಟೆ ಬಾಗಿಲಲ್ಲಿ ನಿಂತಳಲ್ಲೋ*

*ಬೆಂದಕಾಳೂರು ಬಾಗಿಲಲ್ಲಿ*

*ರಂಗಧಾಮನ ಪೂಜೆಯನ್ನು*

*ಮಾಡಿದಾಳು ಬೇಗದಿಂದ*

*ಶಾಂತಿಗಾಗಿ ತನ್ನ ದೇಹ*

*ಸೀಳಿಕೊಂಡಳು ತಾಯಮ್ಮ*

*ಒಳ್ಳೆ ಊರ ಬಾಗಿಲಲ್ಲಿ ನಿಂತಳಲ್ಲೋ*

(ಕೃಷ್ಣಸ್ವಾಮಿ *೧೯೮೪: ೪೦-೪೨).*

ಸರಳವಾಗಿರುವ ಈ ಲಾವಣಿಯ ಸಾಲುಗಳಲ್ಲಿ ಗರ್ಭಿಣಿ ಹೆಣ್ಣುಮಗಳೊಬ್ಬಳು ಕೋಟೆಯ ಬಾಗಿಲಿಗೆ ತನ್ನನ್ನು ತಾನೇ ಆತ್ಮಾರ್ಪಣೆ ಮಾಡಿಕೊಂಡು ಅಸುನೀಗುತ್ತಾಳೆ. ಈ ಹೆಣ್ಣು ಮಗಳು ರಾಜಪರಿವಾರಕ್ಕೆ ಸೇರಿದವಳು ಎಂಬುದು ಅಚ್ಚರಿಯ ವಿಚಾರ. ಸಾಮಾನ್ಯವಾಗಿ ತಳವರ್ಗದ ಹೆಣ್ಣುಮಕ್ಕಳನ್ನು ಬಲಿ ನೀಡುವ ಪ್ರಕರಣಗಳೇ ಕಂಡುಬರುವ ಸಂದರ್ಭದಲ್ಲಿ ಇಂತಹ ನಿದರ್ಶನಗಳು ಕೂಡ ಅಂದಿನ ಸಮಾಜದಲ್ಲಿ ಹೆಣ್ಣಿನ ಸ್ಥಾನದ ಬಗೆಗೆ ಮರುವಿಶ್ಲೇಷಣೆ ಮಾಡುವಂತೆ ಮಾಡುತ್ತದೆ. ಆದರೆ, ಜನಪದ ತಜ್ಞರು ಇಂತಹ ಪ್ರಕರಣಗಳನ್ನು ಫಲವಂತಿಕೆಯ ಸಂಕೇತವೆಂದು ಸಾಗಿಹಾಕುತ್ತಾರೆಯಾದರೂ, ಇದರ ಹಿಂದಿನ ಸಾಮಾಜಿಕ ಮನೋವಿಕಲ್ಪಗಳನ್ನು ಗ್ರಹಿಸದೇ ಹೋಗುವುದು ಅಥವಾ ಜಾನಪದ ಸಾಹಿತ್ಯ ಶ್ರೇಷ್ಠವೆಂಬ ಮಡಿವಂತಿಕೆಯನ್ನೆ ಪೋಷಿಸುವುದು ಸಂಶೋಧನೆಯ ಧೋರಣೆಗೆ ಅಪಚಾರ ಮಾಡಿದಂತೆ.

ಕೊತ್ತಳಗಳು ಕೋಟೆಯ ಬಹುಮುಖ್ಯವಾದ ಅಂಗ. ಆದ್ದರಿಂದ ಕೋಟೆಯ ಜೊತೆಗೆ ಕೊತ್ತಳ ಕೂಡ ತಳಕು ಹಾಕಿಕೊಂಡಿರುತ್ತದೆ. ಕೋಟೆಯ ಗೋಡೆಗಳಿಗೆ ಹೊಂದಿಕೊಂಡಂತೆ ಕೊತ್ತಳಗಳನ್ನು ನಿರ್ಮಿಸುತ್ತಾರೆ. ಈ ಕೊತ್ತಳಗಳಲ್ಲಿ ಫಿರಂಗಿಗಳನ್ನು ಇಟ್ಟು ಆಕ್ರಮಣಕ್ಕೆ ಬಂದ ಶತ್ರುಗಳ ಮೇಲೆ ರಕ್ಷಣಾ ದೃಷ್ಟಿಯಿಂದ ಪ್ರಯೋಗಿಸಲಾಗುತ್ತದೆ. ಮೇಲಿನ ಲಾವಣಿಯಲ್ಲಿ ಕೋಟೆಯ ಹೆಬ್ಬಾಗಿಲಿಗೆ ಬಲಿ ಹೋದ ಪ್ರಸಂಗವನ್ನು ನೋಡಿದೆವು. ಮುಂದಿನ ಲಾವಣಿಯಲ್ಲಿ ಬಾಲೆಯೊಬ್ಬಳು ಕೊತ್ತಳಕ್ಕೆ ಆತ್ಮಾಹುತಿಯಾದ ಪ್ರಸಂಗವನ್ನು ಕಾಣಬಹುದು.

*ಸುತ್ತ ಕೋಟೆಯು ಇರಲು ಕೊತ್ತಳವು ಸುತ್ತಿರಲು*
*ಹತ್ತಿರಕೆ ಗುಡ್ಡ ಎದ್ದಿರಲು। ಊರಿಂಗೆ*
*ಅತ್ತಿತ್ತ ದಾರಿ ಬಂದಿರಲು॥*
*ಹತ್ತಿರದ ಕೊತ್ತಳವ ಹತ್ತ್ಯಾಳ ಆ ಬಾಲಿ*
*ಕೊತ್ತಳದ ಮ್ಯಾಲ ನಿಂತಾಳ। ಹರನೆಂದು*
*ಕೊತ್ತಳದಿಂ ಬಿದ್ದು ಸತ್ತಾಳ*
*ಎತ್ತಿತು ಕೊತ್ತಳ ಗಗನವ ತುಳುಕಲು*
*ಸುತ್ತಲಿ ಆಳ್ವೇರಿಗಳು*
*ಮೊತ್ತದಿ ಹುಲಿಮುಖಗಳು ಸಂಭ್ರಮಿಸೆ*
*ಸುತ್ತಲಿದುರ್ಗ ರಂಜಿಸಲು*

ಬಾಲೆಯೊಬ್ಬಳು ಆತ್ಮಾರ್ಪಣೆ ಮಾಡಿಕೊಂಡ ನಂತರ ಕೊತ್ತಲಗಳು, ಆಳ್ವೇರಿಗಳು (ವೀಕ್ಷಣಾಗೋಪುರ) ಮುಗಿಲೆತ್ತರಕ್ಕೆ ನಿಂತವು. ಹುಲಿಮುಖ ಎಂದರೆ ಕೋಟೆಯ ಹೆಬ್ಬಾಗಿಲು ಸಂಭ್ರಮಿಸಿತು ಎಂದು ಹೇಳುತ್ತಿದೆ. ಅಂದರೆ ಆಹುತಿಯನ್ನು ಕೋಟೆಯು ಬಯಸುತ್ತದೆ ಎಂಬುದು ಜನಪದರ ನಂಬಿಕೆ. ಆ ನಂಬಿಕೆಯಂತೆ ಬಲಿಯ ಆಚರಣೆಗಳು ಕೋಟೆಯ ಸುತ್ತ ಹೆಣೆದುಕೊಂಡಿವೆ. ಈ ಎಲ್ಲಾ ಸಂದರ್ಭಗಳಲ್ಲಿ ಬಲಿ ತೆಗೆದುಕೊಳ್ಳುವುದು ಮಾತ್ರ ಹೆಣ್ಣನ್ನು, ಕೆಲವು ಸಂದರ್ಭಗಳಲ್ಲಿ ಗರ್ಭಿಣಿಯನ್ನು ಎಂಬುದು ತರ್ಕಕ್ಕೆ ನಿಲುಕದ ಜೀವವಿರೋಧಿ ಮತ್ತು ಲಿಂಗವಿರೋಧಿ ನಿಲುವಾಗಿದೆ.

ಕೋಟೆಗಳು ಕಾಲಾನಂತರದಲ್ಲಿ ಮತ್ತು ಕಾರಣಾಂತರಗಳಿಂದ ಶತ್ರುಗಳ ಆಕ್ರಮಣಕ್ಕೆ ಒಳಗಾದ ಸಂದರ್ಭಗಳುಂಟು. ಇಂತಹ ಸಂದರ್ಭಗಳಲ್ಲಿ ಕೋಟೆಗಳು ನಾಶ ಹೊಂದಿರುವುದನ್ನು ಕುರಿತು ಜನಪದ ಸಾಹಿತ್ಯ ನಮಗೆ ಮಾಹಿತಿ ಒದಗಿಸುತ್ತದೆ.

*ಆರುಸುತ್ತಿನ ಅರಮನೆ ಹಾಗೆ ಹಾಳಾಗೊಯ್ತು*
*ಏಳುಸುತ್ತಿನ ಕಲ್ಲಿನ ಕೋಟೆ ಜರುಕು ಬಿದ್ದೇ ಹೋಯ್ತು*
*ಇನ್ನು ಕೆಟ್ಟಿತ್ತು ನನ್ನ ಬಗತಾನ*
*ಎಂಟು ಸುತ್ತಿನ ಕೋಟೆಯು*
*ಎಂಟು ದಿನಕ್ಕೆ ಲಯವಾಯ್ತು*
*ಹತ್ತು ಸುತ್ತಿನ ಕೋಟೆ ಮತ್ತೆ ಪಾರಿಬೇಲಿ*
*ದಕ್ಕದೆಂದಿದ್ದೆ ನೋಡು ದುರುಗಾವ ॥ಕೋಟೆ॥* (ಕೃಷ್ಣಸ್ವಾಮಿ ೧೯೮೪: ೩೭)

ಈ ಸಾಲುಗಳಲ್ಲಿ ಕೋಟೆಗಳು ಒಳಗೊಂಡಿದ್ದ ಸುತ್ತುಗಳನ್ನು ಕೋಟೆಯ ನಾಶ ಹೊಂದಿದ ರೀತಿಯನ್ನು ಕಾಣಬಹುದು.

ಪಾಳೆಯಗಾರರು ವಿಕೇಂದ್ರೀಕರಣ ವ್ಯವಸ್ಥೆಯಿಂದ ಜನಸಾಮಾನ್ಯರ ಹಿತವನ್ನು ಕಾಪಾಡಿಕೊಂಡು ಅವರಿಗೆ ತೀರ ಹತ್ತಿರದವರಾದ್ದರಿಂದ ಜನಪದರಲ್ಲಿ ಪಾಳೇಗಾರರ ಆಳ್ವಿಕೆ, ಅವರ ಕಾಲದಲ್ಲಿ ನಿರ್ಮಿಸಿದ ಸ್ಮಾರಕಗಳಂತೆ ಕೋಟೆಗಳು ಸಹ ಅವರ ಸಾಹಿತ್ಯ ಸೃಷ್ಟಿಯಲ್ಲಿ ಆವಿರ್ಭವಿಸಿವೆ.

***

ಕೋಟೆಯನ್ನು ಸಂರಕ್ಷಣೆಯ ಆಧುನಿಕ ಸಾಧನಗಳಾಗಿ ಫಿರಂಗಿ–ಕೋವಿಗಳು ಪಾಶ್ಚಿಮಾತ್ಯರ ರಕ್ಷಣಾ ವ್ಯವಸ್ಥೆಯ ಪ್ರಭಾವದಿಂದ ಬಳಕೆಯಾಗತೊಡಗಿದವು. ಇವುಗಳ ಬಗೆಗೂ ಕೂಡ ಜನಪದ ಸಾಹಿತ್ಯದಲ್ಲಿ ಉಲ್ಲೇಖಗಳು ಸಿಗುತ್ತವೆ.

*ಒಡ್ಡರನು ಕರೆಸಿದ ದಿಬ್ಬವ ಹಗೆಸಿದ*

*ದೊಡ್ಡ ಫಿರಂಗಿ ನಿಲಿಸೀದ । ಮೆದಕೇರಿ*

*ದಿಬ್ಬಕೆ ಟೇಪ ಟೇಪನೆ ನೆಡಸೀದ*

*ಕೋಮಟಿಗರ ಕರೆಸಿದ ಕಾಲುವೆ ತೆಗೆಸಿದ*

*ಜೋಡ ಫಿರಂಗಿ ನಿಲಿಸೀದ ಮಡಿಕೇರಿ*

*ದುರುಗಾಕೆ ಟೇಪಟೇಪನೆ ನೆಡೆಸೀದ ॥*

*ಇನ್ನೊಂದು ಲಾವಣಿಯು ಈ ಬಗ್ಗೆ ಮಾಹಿತಿ ನೀಡುತ್ತದೆ:*

*ಗುದ್ದಲಿಯ ತರಿಸಿದ ದಿಬ್ಬವ ಸರಿ ಮಾಡಿಸಿದ*

*ದೊಡ್ಡ ಫಿರಂಗಿಯ ನಿಲಿಸಂದ ॥ ರನ್ನಾದ॥*

*ದೊಡ್ಡ ಫಿರಂಗಿಯ ನಿಲಿಸಂದ ಹೊಸಕೋಟೆ*

*ದಿಡ್ಡಿ ಬಾಗಿಲ ನೋಡಿ ಹೊಡೆಯೆಂದ ॥ ರನ್ನಾದ॥*

*ಹಾರೆಯ ತರಿಸಿದ ಹಾದಿಯ ಸಮ ಮಾಡಿಸಿದ*

*ಘೋರ ಫಿರಂಗಿಯ ನಿಲಿಸಂದ ಗೊಂಡೆ*

*ಘೋರ್ ಬಾಗಿಲ ನೋಡಿ ಹೊಡೆಯೆಂದ ॥ ರನ್ನಾದ॥*

ಫಿರಂಗಿಗಳನ್ನು ಯುಕ್ತ ಸ್ಥಳದಲ್ಲಿ ಸ್ಥಾಪಿಸುತ್ತಿದ್ದುದನ್ನು, ಅವುಗಳ ಬಳಕೆಯ ಬಹುಳ್ಯವನ್ನು ಅಗತ್ಯತೆಯನ್ನು ಈ ಸಾಲುಗಳು ಧ್ವನಿಸುತ್ತವೆ. ಮುಂದೆ ಜನಪದ ಕವಿಯು ಫಿರಂಗಿಯ ವಿಶೇಷತೆಯನ್ನು ಮನಗಾಣಿಸುತ್ತಿರುವುದನ್ನು ಕಾಣಬಹುದು:

*ಮಾರನು ಮನೆಬೋದು ಮೀರಿದ ಫಿರಂಗಿ*

*ಹುಚ್ಚನು ಮನೆಂಬೋದು ಹೆಚ್ಚೀದ ಫಿರಂಗಿ*

*ಎತ್ತಿರಿ ಮೇಲೆ ಬಂಡ್ಯಾಕೆಂದ*

*ಫಿರಂಗಿಯಾ ದಿಡ್ಡಿ ಹೊಸಕೋಟೆ ಬಾಗಿಲು*

*ಪಾಗೊಂಡೆ ಗಾರೆದಿಡ್ಡೀಲಿ ದೊಡ್ಡ ಫಿರಂಗಿ ಹೊಡಿ*

*ಕರಿಯಮದ್ದನು ಸುರಿಸೆ ಸಾವು ಹತ್ತು ಸಾವಿರ*

ಈ ಉಲ್ಲೇಖಗಳು ಫಿರಂಗಿಗಳ ಮಹತ್ವ ಮತ್ತು ಅವುಗಳನ್ನು ಉಡಾಯಿಸುವಾಗ ಕರಿಯಮದ್ದನು ತುಂಬಿ ಬೆಂಕಿಯನ್ನು ಹಚ್ಚುತ್ತಿದ್ದ ಕ್ರಮವನ್ನು ತಿಳಿಸುತ್ತವೆ. ಬಹುತೇಕ ಸಂದರ್ಭಗಳಲ್ಲಿ ಕೋಟೆಯ ಬಾಗಿಲನ್ನು ಫಿರಂಗಿಯಿಂದ ಉಡಾಯಿಸುತ್ತಿದ್ದರೆಂಬ ವಿಚಾರ ಸೊಗಸಾದ ಕಾವ್ಯಚಿತ್ರವನ್ನೊಳಗೊಂಡಿದೆ.

ಶಿರಾದ ಕೋಟೆಯ ಬಗೆಗೆ ಲಾವಣಿಯೊಂದರ ಸಾಲುಗಳು ಹೀಗಿವೆ.

*...ತುರುಕರ ಬುದ್ಧಿ ತಿಳಿಯಾದು ರನ್ನದ*

*ಹರಿವ ನೀರಿನಾಗೆ ಹರಳಿನುಂಗುರ ಹಾಕಿ।*

*ಹರ್ತಿರಂಗಾಗೆ ಬುದ್ಧಿ ತಿಳಿಯಾದು ರನ್ನದ॥*

*ಹತ್ತಲಾರದ ಕೋಟೆ ಹತ್ಯಾರೊ ತುರುಕರು*

*ಹತ್ತಿ ಮತ್ತಿಳಿಯದರಿಯಾರು ರನ್ನದ*

*ಹತ್ತಿ ಮತ್ತಿಳಿಯದರಿಯಾರು ತುರುಕರು।*

*ರೊಟ್ಟಿಗೆ ಬಾಯಿಬಿಡುತ್ತಾರೊ ರನ್ನದ॥*

*ರೊಟ್ಟಿಗೆ ಬಾಯಿಬಿಡುತಾರೊ ರನ್ನದ*

(ಮುದ್ದುವೀರಪ್ಪ *೨೦೧೧: ೧೧೪*)

ಶಿರಾದ ಕೋಟೆಯು ನೆಲದುರ್ಗವಾಗಿದ್ದರೂ ಬಹಳ ಭದ್ರವಾಗಿ ನಿರ್ಮಿಸಲಾಗಿತ್ತು. ಈ ಕೋಟೆಯನ್ನು ಆಕ್ರಮಿಸಲು ನಡೆದ ಪಿತೂರಿಯು ಅಮಾನವೀಯ. ಇಂತಹ ಕೋಟೆಯನ್ನು ಯಾವ ಕಡೆಯಿಂದಲೂ ಹತ್ತಲು ಸ್ಥಳವಿಲ್ಲ. ಆದರೂ ಕಂದಕದ ಮೇಲೆ ಬಂಡಿಚಕ್ರಗಳನ್ನು ತೇಲಿಬಿಟ್ಟು ಅದರ ಮೇಲಕ್ಕೆ ಹತ್ತಿ ಶ್ರಮದಿಂದ ಕೋಟೆಯ ಮೇಲ್ಭಾಗ ತಲುಪಿದರೂ ಒಳಗೆ ಇಳಿಯುವ ದಾರಿ ಕಾಣಲಿಲ್ಲ ಎಂಬ ವಿವರಗಳು ಸಣ್ಣ ಕೋಟೆಯ ಭದ್ರ ರಚನೆಯನ್ನು ತಿಳಿಸುತ್ತದೆ. ಶಿರಾದ ಕೋಟೆಯನ್ನು ಹೈದರ್–ಟಿಪ್ಪು ವಶಪಡಿಸಿಕೊಂಡಾಗ ಇಂತಹ ಅಭೇದ್ಯ ಕೋಟೆಯನ್ನೆ ಬೆಂಗಳೂರಿನಲ್ಲಿ

ನಿರ್ಮಿಸಬೇಕೆಂಬುದು ಅವರ ಬಯಕೆಯಾಗಿತ್ತು. ಅದರಂತೆ ಶಿರಾದ ಅರಮನೆ, ಖಾನಬಾಗ್‌ಗಳ ಮಾದರಿಯಲ್ಲಿಯೇ ಬೆಂಗಳೂರು ನಗರದಲ್ಲಿರುವ ಕೋಟೆ, ಅರಮನೆ, ಲಾಲ್‌ಬಾಗ್‌ಗಳು ಪ್ರೇರಣೆ ಪಡೆದು ನಿರ್ಮಿಸಿರಬಹುದೆಂದು ಹೇಳಲಾಗುತ್ತದೆ.

ಮೌಖಿಕ ಸಾಹಿತ್ಯದಲ್ಲಾಗಲೀ ಶಿಷ್ಟ ಸಾಹಿತ್ಯದಲ್ಲಾಗಲೀ ಕೋಟೆ ಕಟ್ಟಿಸಿದ ವ್ಯಕ್ತಿಯ ಹೆಸರಿನ ಉಲ್ಲೇಖಗಳನ್ನು ಕಾಣಬಹುದು. ಮೌಖಿಕ ಸಾಹಿತ್ಯವು ಚರಿತ್ರೆಯ ನಿರ್ಮಾಣದ ಸಂದರ್ಭದಲ್ಲಿ ಒಂದು ಆಕರವಾಗಿ ನಿಲ್ಲುವುದಾದ್ದರಿಂದ ಕೆಲವು ಲಾವಣಿಗಳಲ್ಲಿ ಕೋಟೆಯನ್ನು ನಿರ್ಮಿಸಿದ ಪಾಳೇಗಾರನ ಅಥವಾ ರಾಜನ ಹೆಸರನ್ನು ಕಾಣಬಹುದಾಗಿದೆ. ಉದಾಹರಣೆಗೆ:

*ಚಿತ್ರದುರುಗಾದ ವತ್ತಿ ಆಳುವಾಗ*

*ನೀನು ಒಪ್ಪಿ ಕಟ್ಟಿಸಯ್ಯ ಕೋಟೆಗಳ । ಮದಕೇರಪ್ಪ*

*ನೀನು ಒಪ್ಪಿ ಕಟ್ಟಿಸಯ್ಯ ಕೋಟೆಗಳ*

*ಏಳೆ ಕಲ್ಪೇಣಿ ಎದ್ದೀತು ಈ ಕೋಟೆ*

*ರಾಯ ಮದಕೇರಿ ನಾಯ್ಕನ ಬಲದಲ್ಲಿ । ಚಿತ್ರದುರುಗ*

*ಏಳು ಕಲ್ಲೇಲಿ ಎದ್ದೀತು ॥*

*ಚಿತ್ರದುರುಗದ ನಾಡವತ್ತಿ ಆಳೋನಯ್ಯ*

*ಹೇಳಿ ಕಟ್ಟಿಸಿದ ಮೆದಕೇರಪ್ಪ । ಅವುನು*

*ಏಳು ಸುತ್ತಿನ ಕೋಟೆ ಒಳಗವ್ನೆ.*

*(ಬಸವರಾಜ ೨೦೧೦: ೪೫–೪೬).*

ಅದೇ ರೀತಿ ಮತ್ತೊಂದು ಲಾವಣಿಯಲ್ಲಿ ಚಿತ್ರದುರ್ಗದ ಕೋಟೆಯ ನಿರ್ಮಾಣದ ಬಗ್ಗೆ ಹೀಗಿದೆ:

*ಮೇಲುದುರುಗವು ನೋಡೆ ಗಾರೆ ಬಾಗಿಲ ನೋಡೆ*

*ಹೋಗಿ ಮಾತಾಡೋ ಗಿಣಿ ನೋಡೆ। ಮದಕೇರ್ಹಣ್ಣನ*

*ಭಾರಿ ನಡುಗಾರ ಮನಿ ನೋಡೆ*

*ಏಳುಸುತ್ತಿನ ಕ್ವಾಟೆ ಹೇಳಿ ಕಟ್ಟಿಸಿದನಯ್ಯ*

*ಚಿತ್ರಕಲ್ಲು ದುರುಗದ ನಾಡ । ಮೆದಕೇರಪ್ಪ*

*ಅವನು ಏಳು ಸುತ್ತಿನ ಕೋಟೆ ಒಳಗವುನೆ*

*(ಬಸವರಾಜ ೨೦೧೦: ೫೩).*

ಗಾರೆಯಿಂದ ಏಳುಸುತ್ತಿನ ಕೋಟೆಯನ್ನು ಮದಕರಿಯು ಕಟ್ಟಿಸಿದನೆಂಬುದನ್ನು ತಿಳಿಸುತ್ತದೆ.



**ಬಲಿಷ್ಠ ಕೋಟೆಯ ರಚನೆ, ಚಿತ್ರದುರ್ಗ. (ಚಿತ್ರ: ಲೇಖಕರದು)**

ಈ ಪಂಕ್ತಿಗಳು ಚಿತ್ರದುರ್ಗದ ಕೋಟೆಯನ್ನು ಕಟ್ಟಿಸಿದವನು ಮೆದಕೇರಿ ಎಂಬ ಉಲ್ಲೇಖವಿದೆ. ಈತನು ಇನ್ನೊಬ್ಬರಿಗೆ ಒಪ್ಪಿಸಿ ಹೇಳಿ ಕಟ್ಟಿಸಿದನೆಂದು ಗೊತ್ತಾಗುತ್ತದೆ. ಈ ಕೋಟೆಯ ನಿರ್ಮಾಣದ ಜೊತೆಗೆ ಇದೇ ಮೆದಕೇರಿ ಪಾಳೇಗಾರನು ನಿಡುಗಲ್ಲು, ಕುಂದಿರ್ಪಿಯ ಕೋಟೆಗಳನ್ನು ಕಟ್ಟಿಸಿದ್ದಾನೆನ್ನುವುದು ಉಲ್ಲೇಖಗೊಂಡಿದೆ. ಇದಲ್ಲದೆ ಇನ್ನು ಏಳು ಕೋಟೆಗಳನ್ನು ಕಟ್ಟಿಸಿದ್ದಾನೆನ್ನುವ ವಿಚಾರ ಹೊರಬೀಳುತ್ತದೆ:

*ನಿಂತು ನಿಡುಗಲ್ಲು ಕಟ್ಟಿಸಿದ ಕುಂತು ಕುಂದಿರ್ಪಿ ಕಟ್ಟಿಸಿದ*

*ವತ್ತಿ ಆಳೋನು ಮೆದಕೇರಿ। ದುರುಗದ*

*ಮೇಲೆ ಏಳು ಕೋಟೆಗಳ ಕಟ್ಟಿಸಿದ*

*(ಬಸವರಾಜ ೨೦೧೦: ೪೭).*

ಈ ಮೌಖಿಕ ಸಾಹಿತ್ಯದ ಸಂಗತಿಗಳಿಗೂ, ಶಿಷ್ಟ ಸಾಹಿತ್ಯ ಮತ್ತು ಶಾಸನಗಳಿಗೂ ಮಾಹಿತಿಯಲ್ಲಿ ಭಿನ್ನತೆಗಳಿರಬಹುದು. ಆದರೆ ಇತಿಹಾಸದ ಮರುನಿರ್ಮಾಣದ ಸಂದರ್ಭದಲ್ಲಿ ಲಿಖಿತವಾಗಿ ದಾಖಲಾಗದ ಎಷ್ಟೋ ವಿಷಯಗಳನ್ನು ಮೌಖಿಕ ಸಾಹಿತ್ಯ ಸೂಕ್ಷ್ಮವಾದ ಆಕರ ಸಾಮಗ್ರಿಯನ್ನೊದಗಿಸಬಹುದು.

### ೫.೩. ನಂಬಿಕೆ ಮತ್ತು ಆಚರಣೆಗಳು

ಜನಪದರ ಜೀವನದಲ್ಲಿ ಹಲವು ನಂಬಿಕೆ ಆಚರಣೆಗಳು ರೂಢಿಯಲ್ಲಿವೆ. ಅವುಗಳ ಹಿನ್ನೆಲೆಯಲ್ಲಿ ಪೂಜೆ, ಉತ್ಸವ, ಬಲಿ ಇತ್ಯಾದಿ ಪದ್ಧತಿಗಳು ರೂಪುಗೊಂಡಿವೆ.

ಅದರಲ್ಲಿಯೂ ಮುಖ್ಯವಾಗಿ ಬಲಿ (ವಿಶೇಷವಾಗಿ ನರಬಲಿ) ನೀಡುವ ಆಚರಣೆಯು ಕೋಟೆಯನ್ನು ನಿರ್ಮಿಸುವ ಹಂತದಲ್ಲಿ ಬಳಕೆಯಲ್ಲಿತ್ತು ಎಂಬುದನ್ನು ಗಮನಿಸಬಹುದು. ಲಾವಣಿಗಳಲ್ಲಿಯೂ ಬಲಿಯ ಆಚರಣೆಗಳು ವ್ಯಕ್ತಗೊಂಡಿರುವುದನ್ನು ಈ ಮೊದಲು ನೋಡಲಾಗಿದೆ. ಈ ಕುರಿತು ಮಾಹಿತಿ ನೀಡುವ ಕೆಲವು ವೃತ್ತಾಂತಗಳು ಇವೆ.

ಪಾವಗಡ ಕೋಟೆಯ ಮೊದಲ ಎರಡು ಸುತ್ತಿನ ಕೋಟೆಗಳಿಗೆ ಮೂವರು ಗರ್ಭಿಣಿ ಸ್ತ್ರೀಯರನ್ನು ಬಲಿ ನೀಡಿರುವುದು ಕಂಡುಬರುತ್ತದೆ. ಈ ಸ್ತ್ರೀಯರಲ್ಲಿ ಇಬ್ಬರು ಕೆಳವರ್ಗದ ಸ್ತ್ರೀಯರಾಗಿದ್ದರೆ (ಒಬ್ಬಳು ಭೋವಿ ಜನಾಂಗಕ್ಕೆ ಸೇರಿದವಳು; ಮತ್ತೊಬ್ಬಳು ಕೊರಚ ಜನಾಂಗಕ್ಕೆ ಸೇರಿದವಳು), ಇನ್ನೊಬ್ಬಳು ಬ್ರಾಹ್ಮಣ ವರ್ಗದವಳಾಗಿದ್ದಾಳೆ.

ಪಾವಗಡದ ಕೋಟೆಯ ಬಾಗಿಲಿಗೆ ಬ್ರಾಹ್ಮಣ ಹೆಣ್ಣುಮಗಳನ್ನು ಬಲಿಕೊಟ್ಟ ಅಪರೂಪದ ಸಂಗತಿಯೊಂದು ಕಂಡುಬರುತ್ತದೆ. ಪಾಳೇಗಾರನು ಕೋಟೆಯನ್ನು ಕಟ್ಟುವುದಕ್ಕೆ ಜನರ ಸಹಾಯ ಕೇಳುತ್ತಾನೆ. ಅದರಂತೆ ಕೆಲಸಗಾರರು ಕೋಟೆ ಕಟ್ಟಲು ಒಪ್ಪಿ ಕಾರ್ಯವನ್ನು ಆರಂಭಿಸುತ್ತಾರೆ. ಪ್ರಾರಂಭದಲ್ಲಿ ಊರಿನ ಪೂರ್ವದಿಕ್ಕಿಗೆ ಹೆಬ್ಬಾಗಿಲನ್ನು ಇಡುತ್ತಾರೆ. ಈ ಬಾಗಿಲು ಅದೇ ರಾತ್ರಿ ಬಿದ್ದುಹೋಗುತ್ತದೆ. ಈ ಬಾಗಿಲು ಆಯಾತಪ್ಪಿ ಬಿದ್ದಿರಬಹುದೆಂದು ಅಲ್ಲಿನ ಜನರು ಭಾವಿಸಿ ನಿಲ್ಲಿಸುತ್ತಾರೆ. ಅದು ಮತ್ತೆ ಬಿದ್ದು ಹೋಗುತ್ತದೆ. ಹೀಗೆ ಹಲವು ಬಾರಿ ಘಟಿಸಿದಾಗ ಈ ವಿಷಯವನ್ನು ಪಾಳೆಯಗಾರನಿಗೆ ನಿವೇದಿಸಲಾಗುತ್ತದೆ. ಆತನು ಊರಿನ ಗುರು–ಹಿರಿಯರಲ್ಲಿ, ಪುರೋಹಿತರಲ್ಲಿ ಇದಕ್ಕೆ ಪರಿಹಾರವನ್ನು ಕೇಳುತ್ತಾನೆ. ಅದಕ್ಕೆ ಪುರೋಹಿತರು ಗರ್ಭಿಣಿ ಸ್ತ್ರೀಯನ್ನು ಬಲಿಕೊಟ್ಟರೆ ಕೋಟೆ ಬಾಗಿಲು ಬೀಳದೆ ಭದ್ರವಾಗಿ ನಿಲ್ಲುತ್ತದೆ ಎಂದು ಸೂಚಿಸುತ್ತಾನೆ. ಆಗ ಪಾಳೇಗಾರನು ಮಂತ್ರಿ ಸುಬ್ಬರಾಯಪ್ಪನಿಗೆ ಗರ್ಭಿಣಿ ಹೆಣ್ಣನ್ನು ಹುಡುಕಿ ಕೋಟೆಯ ಬಾಗಿಲಿಗೆ ಬಲಿ ಕೊಡಬೇಕೆಂದು ಆದೇಶಿಸುತ್ತಾನೆ. ಈ ಮಂತ್ರಿ ಸುಬ್ಬರಾಯಪ್ಪನು ಬ್ರಾಹ್ಮಣ ಜಾತಿಗೆ ಸೇರಿದವನು. ಈತನಿಗೆ ಒಬ್ಬಳೇ ಮಗಳಿರುತ್ತಾಳೆ. ಈಕೆಯ ಹೆಸರು ಸರಸ್ವತಿ, ಪೆನುಗೊಂಡೆಗೆ ಈಕೆಯನ್ನು ಮದುವೆ ಮಾಡಿಕೊಡಲಾಗಿದ್ದು ತನ್ನ ಮೊದಲ ಹೆರಿಗೆಗಾಗಿ ತವರು ಮನೆಯಲ್ಲಿ ಉಳಿದುಕೊಂಡಿರುತ್ತಾಳೆ. ಪಾಳೇಗಾರನು ಆಜ್ಞೆಯನ್ನು ಪಾಲಿಸುವ ಚಿಂತೆಯಲ್ಲಿದ್ದ ತನ್ನ ತಂದೆಯನ್ನು ನೋಡಿ ಅದಕ್ಕೆ ಕಾರಣವನ್ನು ಕೇಳುತ್ತಾಳೆ. ಆಗ ಮಂತ್ರಿಯು "ಊರಿನ ಕೋಟೆಯ ಬಾಗಿಲು ಎಷ್ಟು ನಿಲ್ಲಿಸಿದರೂ ಬಿದ್ದು ಹೋಗುತ್ತದೆ. ಅದಕ್ಕೆ ಪುರೋಹಿತರು ಗರ್ಭಿಣಿ ಸ್ತ್ರೀಯನ್ನು ಬಲಿಕೊಡಬೇಕೆಂದು ಪರಿಹಾರ ಹೇಳಿದ್ದಾರೆ. ಆ ಗರ್ಭಿಣಿಯನ್ನು ಹುಡುಕುವ ಕಾರ್ಯವನ್ನು ಪಾಳೇಗಾರ ನನಗೆ ವಹಿಸಿದ್ದಾನೆ" ಎಂದು ಪ್ರತಿಕ್ರಿಯಿಸುತ್ತಾನೆ. ಈ ವಿಚಾರವು ಸರಸ್ವತಿಯ ಮನಸಿನಲ್ಲಿ ಹಗಲಿರುಳು ಕಾಡತೊಡಗುತ್ತದೆ. ಈ ಜವಾಬ್ದಾರಿಯನ್ನು ಅರಿತು "ನಾನೇ ಈ ಕೋಟೆಗೆ ಬಲಿಯಾದರೆ ತನ್ನ ತಂದೆ

ಘನತೆ–ಗೌರವಗಳು ಹೆಚ್ಚುತ್ತವೆ. ನನಗೂ ಕೀರ್ತಿ ದೊರೆಯುತ್ತದೆ" ಎಂದು ಯೋಚಿಸಿ ನಿರ್ಧರಿಸುತ್ತಾಳೆ. ಅದರಂತೆ ರಾತ್ರಿ ಕೋಟೆಯ ಹೆಬ್ಬಾಗಿಲು ಬಳಿಗೆ ಬಂದು ತನ್ನನು ಆಹುತಿ ಕೊಟ್ಟುಕೊಳ್ಳುತ್ತಾಳೆ. ಮುಂಜಾನೆ ಆಕೆಯ ಶವವನ್ನು ಕಂಡು ಸ್ಥಳೀಯರು ಸುಬ್ಬರಾಯಪ್ಪನಿಗೆ ಸುದ್ದಿ ತಿಳಿಸುತ್ತಾರೆ. ಸರಸ್ವತಿಯ ತ್ಯಾಗ, ಬಲಿದಾನಗಳನ್ನು ಕಂಡು ಮಂತ್ರಿಯು ಬಹುವಾಗಿ ದು:ಖಿಸುತ್ತಾನೆ. ಪಾಳೇಗಾರನು ಬಂದು ಈತನನ್ನು ಸಂತೈಸುತ್ತಾನೆ. ಅದೇ ದಿನ ಕೋಟೆಯ ಬಾಗಿಲನ್ನು ನಿಲ್ಲಿಸುತ್ತಾರೆ. ಅಂದಿನಿಂದ ಕೋಟೆ ಬಾಗಿಲು ಮತ್ತೆ ಬೀಳಲಿಲ್ಲ. ಈಕೆಯ ಸ್ಮರಣೆಗಾಗಿ ಇದೇ ಬಾಗಿಲ ಮೇಲೆ ಈಕೆಯ ಮೂರ್ತಿಯನ್ನು ಪಾಳೇಗಾರ ಕೆತ್ತಿಸುತ್ತಾನೆ. ಆರಂಭದಲ್ಲಿ ಈ ಮೂರ್ತಿಗೆ ಪೂಜೆಗಳು ನಡೆಯುತ್ತಿದ್ದುದಾಗಿಯೂ ಕಾಲಾಂತರದಲ್ಲಿ ಪೂಜಾಕೈಂಕರ್ಯಗಳು ನಿಂತು ಹೋಗಿರುವುದಾಗಿ ಸ್ಥಳೀಯರು ಹೇಳುತ್ತಾರೆ (ಮುದ್ದುವೀರಪ್ಪ ೨೦೧೧: ೨೮೧–೮೩).

ಪಾವಗಡದ ಹೊರಸುತ್ತಿದ ಕೋಟೆಯ ಬುರುಜುಗೆ ಕೊರಚರ ಮುತ್ಯಾಲಮ್ಮನನ್ನು ಬಲಿ ಕೊಟ್ಟ ಸಂಗತಿ ಹೀಗಿದೆ:

ಪಾಳೇಗಾರನು ಹೊರಸುತ್ತಿನ ಕೋಟೆಗೆ ಒಂದು ಬುರುಜನ್ನು ಸ್ಥಾಪಿಸಬೇಕೆಂದು ನಿಶ್ಚಯಿಸುತ್ತಾನೆ. ಅದರಂತೆ ಅಲ್ಲಿನ ಕೆಲಸಗಾರರಿಗೆ ಬುರುಜನ್ನು ನಿರ್ಮಿಸಲು ತಿಳಿಸುತ್ತಾನೆ. ಕೋಟೆಗೆ ಹೊಂದಿಕೊಂಡಂತೆ ಈಗಿನ ಪೆನುಗೊಂಡೆ ಬಾಗಿಲ ಬಲಭಾಗದಲ್ಲಿ ಬುರುಜನ್ನು ನಿರ್ಮಿಸುತ್ತಿರುವಾಗ ಅದು ನಿಲ್ಲದೆ ಕುಸಿಯುತ್ತದೆ. ಈ ವಿಷಯವನ್ನು ಪಾಳೇಗಾರನಿಗೆ ತಿಳಿಸುತ್ತಾನೆ. ಪಾಳೇಗಾರನು ಇದಕ್ಕೆ ಪರಿಹಾರ ಕಂಡುಕೊಳ್ಳಲು ಜೋಯಿಸರಲ್ಲಿ ಕೇಳಿದಾಗ, ನೀವು ಕಟ್ಟಿದ ಬುರುಜು ನಿಲ್ಲಬೇಕೆಂದರೆ ಗರ್ಭಿಣಿ ಹೆಣ್ಣನ್ನು ಬಲಿ ಕೊಡಬೇಕು. ಆಗ ಮಾತ್ರ ಬುರುಜು ಕುಸಿಯದಂತೆ ನಿಲ್ಲುತ್ತದೆಂದು ಹೇಳುತ್ತಾನೆ. ಜೋಯಿಸರ ಮಾತಿನಂತೆಯೆ ಪಾಳೇಗಾರನು ಗರ್ಭಿಣಿ ಹೆಣ್ಣನ್ನು ಊರಿನಲ್ಲಿ ಹುಡುಕಿಸುತ್ತಾನೆ. ಆದರೆ ಯಾವ ಗರ್ಭಿಣಿ ಸ್ತ್ರೀಯು ಊರಿನೊಳಗಡೆ ಸಿಗುವುದಿಲ್ಲ. ಆಗ ಪಾಳೇಗಾರನು ಊರ ಹೊರಗಿರುವ ಕೊರಚ ಜನಾಂಗದಲ್ಲಿ ಗರ್ಭಿಣಿಯನ್ನು ಹುಡುಕಿಸುತ್ತಾನೆ. ಅಲ್ಲಿನ ಮುಖಂಡನ ಸೊಸೆಯು ಗರ್ಭಿಣಿ ಆಗಿದ್ದಾಳೆಂಬುದು ಪಾಳೇಗಾರನಿಗೆ ತಿಳಿಯುತ್ತದೆ. ಪಾಳೇಗಾರನು ಆ ಮುಖಂಡನನ್ನು ಕರೆಸಿ, ಪರಿಸ್ಥಿತಿಯನ್ನು ಆತನಿಗೆ ವಿವರಿಸಿ, ಆತನ ಸೊಸೆ ಗರ್ಭಿಣಿಯನ್ನು ಕೋಟೆಗೆ ಬಲಿ ಕೊಡಲು ಕಳುಹಿಸಬೇಕೆಂದು ಆಜ್ಞಾಪಿಸುತ್ತಾನೆ. ಇದಕ್ಕೆ ಮುಖಂಡನು ಮರುಮಾತಾನಾಡದೆ ಒಪ್ಪಿಗೆ ಸೂಚಿಸುತ್ತಾನೆ. ಪಾಳೇಗಾರನ ಅಪ್ಪಣೆಯ ಮೇರೆಗೆ ಮರುದಿನವೇ ಶಾಸ್ತ್ರೋಕ್ತವಾಗಿ ಕೊರಚು ಮುತ್ಯಾಲಮ್ಮಳನ್ನು ಕೋಟೆಯ ಬುರುಜಿಗೆ ಬಲಿ ಕೊಡುತ್ತಾರೆ. ಈ ಬಲಿಯಿಂದ ಮತ್ತೆ ಕಟ್ಟಿದ ಬುರುಜು ಕುಸಿಯದೇ ಭದ್ರವಾಗಿ ನಿಲ್ಲುತ್ತದೆ. ಈ ಕೊರಚ ಹೆಣ್ಣುಮಗಳ ನೆನಪಿಗಾಗಿ ಈ

ಬುರುಜಿಗೆ ಪಾಳೇಗಾರನು "ಕೊರಚು ಮುತ್ಯಾಲಮ್ಮನ ಬುರುಜು" ಎಂದು ಕರೆಯುವುದು ರೂಢಿಗೆ ಬಂದಿತು (ಮುದ್ದುವೀರಪ್ಪ ೨೦೧೧: ೨೮೪).

ಪಾವಗಡದ ಎರಡನೆಯ ಕೋಟೆಯ ಸುತ್ತಿನಲ್ಲಿರುವ ಬುರುಜಿಗೆ ಭೋವಿ ಜನಾಂಗದ ಕೋಟಮ್ಮನನ್ನು ಬಲಿ ಕೊಟ್ಟ ಜಾನಪದ ಕಥೆ ಇಂತಿದೆ:

ಪಾಳೇಗಾರನು ಎರಡನೆಯ ಕೋಟೆಯಲ್ಲಿ ಬೃಹತ್ ಬುರುಜನ್ನು ನಿರ್ಮಿಸಲು ನಿಶ್ಚಯಿಸುತ್ತಾನೆ. ಈ ಕಾರ್ಯಾಭಾರವನ್ನು ಭೋವಿಜನಾಂಗಕ್ಕೆ ಒಪ್ಪಿಸುತ್ತಾನೆ. ಪಾಳೇಗಾರನ ಆಣತಿಯಂತೆ ಭೋವಿ ಜನಾಂಗದವರು ಬುರುಜನ್ನು ನಿರ್ಮಿಸವಾಗ ಅಂತಿಮ ಹಂತದಲ್ಲಿದ್ದ ಬುರುಜು ಇದ್ದಕ್ಕಿದ್ದಂತೆ ಕುಸಿಯುತ್ತದೆ. ಅದು ಎಷ್ಟು ಸರಿಪಡಿಸಿದರೂ ಭದ್ರವಾಗಿ ನಿಲ್ಲದೇ ಹೋಗುತ್ತದೆ. ಈ ಸಂಗತಿಯನ್ನು ಪಾಳೇಗಾರನಿಗೆ ಅರುಹಲಾಗುತ್ತದೆ. ಇದರಿಂದ ಆತನಿಗೆ ಚಿಂತೆ ಆವರಿಸುತ್ತದೆ. ಇದೇ ಚಿಂತೆಯಲ್ಲಿ ಪಾಳೇಗಾರನು ರಾತ್ರಿ ಮಲಗಿರಲು ಕನಸಿನಲ್ಲಿ ಮಾರಿದೇವತೆಯು ಬಂದು, "ಈಗ ಕುಸಿದು ಬೀಳುತ್ತಿರುವ ಕೋಟೆಯ ಬುರುಜು ನಿಲ್ಲಬೇಕೆಂದರೆ, ಆ ಬುರುಜಿನಲ್ಲಿ ಒಂದು ಕೊಠಡಿಯನ್ನು ನಿರ್ಮಿಸಿ ಅದರೊಳಗೆ ಮೊದಲ ಬಾರಿಗೆ ಗರ್ಭಧರಿಸಿದ ಹೆಣ್ಣನ್ನು ಬಿಟ್ಟು ಆಕೆಗೆ ಬೇಕಾಗುವ ವಸ್ತುಗಳನ್ನು ಹಾಕಿ ಭದ್ರದಾಗಿ ಕೊಠಡಿಯನ್ನು ಮುಚ್ಚಿ ಬುರುಜು ನಿರ್ಮಿಸು, ಆಗ ಅದು ಕುಸಿಯುವುದಿಲ್ಲ" ಎಂದು ಹೇಳುತ್ತದೆ. ನಿದ್ದೆಯಿಂದ ಎಚ್ಚೆತ್ತ ಪಾಳೇಗಾರನು ತನ್ನ ಮನೆದೇವತೆ ಮಾರಮ್ಮನು ಕನಸಿನಲ್ಲಿ ಬಂದು ಹೇಳಿದ ಈ ವಿಷಯವನ್ನು ಕುರಿತು ಆಲೋಚಿಸಿ ಮಾರಮ್ಮ ದೇವತೆಯ ಆಜ್ಞೆಯನ್ನು ಮೀರದಿರಲು ನಿರ್ಧರಿಸುತ್ತಾನೆ. ಅದರಂತೆ ಕೋಟೆಯ ಬುರುಜಿನ ಕೊಠಡಿಯಲ್ಲಿ ಜೀವಂತ ಸಮಾಧಿ ಮಾಡಲು ಗರ್ಭಿಣಿಯನ್ನು ಹುಡುಕಿಸುತ್ತಾನೆ. ಊರಿನಲ್ಲಿ ಯಾರೂ ಗರ್ಭಿಣಿಯರು ದೊರೆಯದ ಕಾರಣ ಊರ ಹೊರಗಿದ್ದ ಭೋವಿ ಜನಾಂಗದ ಮುಖಂಡನ ನಾಲ್ಕನೆಯ ಮಗನ ಹೆಂಡತಿಯನ್ನು ಕರೆಸಿ ಆಕೆಯನ್ನು ಜೀವಂತವಾಗಿ ಸಮಾಧಿ ಮಾಡಿ ಬುರುಜು ಕಟ್ಟಿಸುತ್ತಾನೆ. ಈ ಘಟನೆಯ ತರುವಾಯ ಬುರುಜು ಕುಸಿಯದೆ ಹಾಗೆಯೇ ನಿಲ್ಲುತ್ತದೆ. ಆದರೆ ಸ್ವಲ್ಪದಿನಗಳ ತರುವಾಯ ಆ ಬುರುಜಿನಿಂದ ಮಗು ಅಳುವುದು ಕೇಳಿಬರುತ್ತದೆ. ಊರಿನ ಜನರು ಇದನ್ನು ಕೇಳಿ ಮುಖಂಡನ ನಾಲ್ಕನೆಯ ಸೊಸೆ ಬುರುಜಿನ ಕೊಠಡಿಯಲ್ಲಿ ಸತ್ತಿಲ್ಲವೆಂದೂ, ಆಕೆಗೆ ಅಲ್ಲಿಯೆ ಮಗುವಾಗಿದೆಯೆಂದು ಭಾವಿಸುತ್ತಾರೆ. ಕೆಲಕಾಲಾನಂತರ ಆ ಕೊಠಡಿಗೆ ಒಂದು ಕಿಂಡಿ ಇದ್ದಕ್ಕಿದ್ದಂತೆ ಕಾಣಿಸಿಕೊಳ್ಳುತ್ತದೆ. ಇದನ್ನು ಆಶ್ಚರ್ಯದಿಂದ ಸುತ್ತಮುತ್ತಲ ಜನರು ನೋಡಲು ಬರುತ್ತಾರೆ. ಆ ಕಿಂಡಿಯಿಂದ ತಮಗೆ ಬೇಕಾದ ವಸ್ತುಗಳನ್ನು ಪಡೆಯತೊಡಗುತ್ತಾರೆ. ಕೆಲಕಾಲದಲ್ಲಿಯೇ ಆ ಕಿಂಡಿಯು ಮುಚ್ಚಿಹೋಗುತ್ತದೆ. ಈ ಪವಾಡಗಳನ್ನು ನೋಡಿದ ಪಾಳೇಗಾರನು ಆಕೆಯು ಮಹಾಸಾಧ್ವಿ

ಶಿರೋಮಣಿ ಎಂದು ಭಾವಿಸಿ ಆಕೆಯನ್ನು ಎಲ್ಲರೂ ಪೂಜಿಸಬೇಕೆಂದು ಆಜ್ಞಾಪಿಸಿ ಡಂಗೂರ ಹೊಡೆಸುತ್ತಾನೆ. ಅಂದಿನಿಂದ ಈಕೆಯನ್ನು 'ಕೋಟಮ್ಮ' ಎಂತಲೂ ಆ ಬುರುಜನ್ನು 'ಕೋಟಮ್ಮನ ಬುರುಜು' ಎಂತಲೂ ಕರೆಯಲಾಗುತ್ತದೆ. ಊರಿನ ವೇಣುಗೋಪಾಲ ಸ್ವಾಮಿಯ ರಥೋತ್ಸವವು ಪ್ರತಿವರ್ಷ ನಡೆಯುವ ಸಂದರ್ಭದಲ್ಲಿ ರಥವು ಕೋಟಮ್ಮ ಬುರುಜಿನವರೆಗೂ ಬರಬೇಕೆಂದೂ, ಕೋಟಮ್ಮನಿಗೆ ಹಸಿರು ಸೀರೆ, ಕುಪ್ಪಸ, ಹಸಿರು ಬಳೆ ಮತ್ತು ಮಡಿಲಕ್ಕಿಗಳನ್ನು ಕೊಡಬೇಕೆಂದೂ ಪಾಳೇಗಾರನು ಆಜ್ಞೆ ಮಾಡಿದನಂತೆ. ಈ ಆಚರಣೆಯು ಪ್ರತಿವರ್ಷ ಈಗಲೂ ನಡೆಯುತ್ತಿದೆ (ಮುದ್ದುವೀರಪ್ಪ ೨೦೧೧: ೨೮೫-೮೬).

ಈ ಮೂರು ಕಥೆಗಳಲ್ಲಿ ಕೋಟೆಗೆ ಬಲಿಯಾದವರು ಸ್ತ್ರೀಯರು. ಅದರಲ್ಲೂ ಗರ್ಭಿಣಿಯರು. ಹೀಗೆ ಗರ್ಭಿಣಿಯರನ್ನು ಬಲಿ ಕೊಡಲು ಮುಖ್ಯವಾಗಿ ಅವರನ್ನು ಫಲವತ್ತತೆಯ, ಸೃಷ್ಟಿಯ ಸಂಕೇತವೆಂದು ಭಾವಿಸಿರುವುದೇ ಕಾರಣವಾಗಿದೆ ಎಂದು ಜಾನಪದ ತಜ್ಞರು ಅಭಿಪ್ರಾಯಪಡುತ್ತಾರೆ. ಹೀಗೆ ಬಲಿಯಾಗುವ ವಿಚಾರವನ್ನು ಒಂದು ಮೌಲ್ಯವೆಂದು ಸಮಾಜವು ಸ್ವೀಕರಿಸಿಬಿಟ್ಟಿದೆ. ಗರ್ಭಿಣಿಯರು ಸಹ ಇಂತಹ ಕಾರ್ಯಕ್ಕಾಗಿ ಮುಂದೆ ಬರುವುದನ್ನು ಗಮನಿಸಿದರೆ ಅವರು ಇದನ್ನು ಪರಮ ಪವಿತ್ರ ಕಾರ್ಯವೆಂದು ಭಾವಿಸಿದ್ದಿರಬೇಕು.

***

ಏಳುಮಂದಿ ಅಕ್ಕಮ್ಮಂದಿರ ದೊಣೆಯು ಭಸ್ಮಾಂಗಿ ಕೋಟೆಯ ಶಿಖರದ ನೈಋತ್ಯ ದಿಕ್ಕಿನಲ್ಲಿದೆ. ಎರಡು ಬೃಹತ್ ಬಂಡೆಯ ಮಧ್ಯದಲ್ಲಿ ನಾವಿದನ್ನು ಕಾಣಬಹುದು. ಉತ್ತರ-ದಕ್ಷಿಣಕ್ಕೆ ಈ ದೊಣೆಯು ನಿರ್ಮಾಣಗೊಂಡಿದೆ. ದೊಣೆಯು ಉತ್ತರಕ್ಕೆ ಇಟ್ಟಿಗೆ ಮತ್ತು ಗಾರೆಯಿಂದ ಅಡ್ಡಕಟ್ಟೆ ಕಟ್ಟಲಾಗಿದೆ. ಈ ದೊಣೆಯ ಬಗೆಗಿನ ಜನಪದರ ನಂಬಿಕೆಯೊಂದು ಹೀಗಿದೆ: ದೇವಲೋಕದ ಏಳು ಮಂದಿ ಅಕ್ಕತಂಗಿಯರು ಲೋಕ ಸಂಚಾರ ಮಾಡುತ್ತಿರುವಾಗ ಈ ಭಸ್ಮಾಂಗಿ ಬೆಟ್ಟದ ಜಾಜಿಗಿರಿ ಹೂವನ್ನು ನೋಡಿ ಮನಸೋತು ಇದರ ವಾಸನೆಯನ್ನು ಸವಿಯಲು ಇಲ್ಲಿಗೆ ಬರುತ್ತಾರೆ. ಈ ಜಾಜಿಗಿರಿ ಗಿಡಗಳ ಪಕ್ಕದಲ್ಲಿಯೇ ಒಂದು ದೊಣೆಯಿದೆ. ಈ ದೊಣೆಯನ್ನು ಕಂಡು ಏಳು ಮಂದಿ ಅಕ್ಕತಂಗಿಯರು ಜಾಜಿಗಿರಿ ಹೂವನ್ನು ಕಟ್ಟಿಕೊಂಡು ಈಜಾಡುತ್ತಿದ್ದರೆಂದು ಹೇಳುತ್ತಾರೆ. ಅಲ್ಲದೆ ಪ್ರತಿವರ್ಷ ಜಾಜಿಗಿರಿ ಹೂವು ಬಿಡುವ ಸಂದರ್ಭದಲ್ಲಿ ಈ ಏಳು ಜನ ಅಕ್ಕತಂಗಿಯರು ಹೂವನ್ನು ಉಡುಗೆ ಮಾಡಿಕೊಂಡು ಈಜಾಡುತ್ತಾರಂತೆ. ಇದು ಯಾರ ಕಣ್ಣಿಗೂ ಬೀಳುವುದಿಲ್ಲ ಎಂದು ಸ್ಥಳೀಯರು ಹೇಳುತ್ತಾರೆ. ಈ ಹಿನ್ನೆಲೆಯಿರುವ ಕಾರಣದಿಂದ ಈ ದೊಣೆಗೆ 'ಏಳು ಮಂದಿ ಅಕ್ಕಮ್ಮಂದಿರ ದೊಣೆ' ಎಂಬ ಹೆಸರು

ಬಂದಿದೆ. ದೇವಕನ್ಯೆಯರು ಇಲ್ಲಿ ಈಜಾಡುವುದನ್ನು ತಿಳಿದ ಇಲ್ಲಿನ ಸುತ್ತಮುತ್ತ ಸ್ತ್ರೀಯರು ಈ ದೊಣೆಯ ಬಳಿ ಹಲವಾರು ಆಚರಣೆಗಳನ್ನು ಆಚರಿಸುತ್ತಾರೆ.

ನಾಮದ ಚಿಲುಮೆಯು ದೇವರಾಯನ ದುರ್ಗದ ಬುಡದಲ್ಲಿದೆ. ಶ್ರೀರಾಮನು ತನ್ನ ವನವಾಸದ ಕೆಲವು ದಿನಗಳನ್ನು ಇಲ್ಲಿ ಕಳೆದನಂತೆ. ವನವಾಸದಲ್ಲಿದ್ದಾಗ ರಾಮ, ಸೀತೆ, ಲಕ್ಷ್ಮಣರು ಒಂದು ಮುಂಜಾನೆ ಎದ್ದು ನಾಮ ಇಟ್ಟುಕೊಳ್ಳಲು ನೀರು ಎಲ್ಲಿಯೂ ಸಿಗದಿದ್ದಾಗ ಅಲ್ಲಿಯೇ ಇದ್ದ ಬಂಡೆಗೆ ಬಾಣವನ್ನು ಬಿಟ್ಟರು. ಇದರಿಂದ ನೀರು ಮೇಲಕ್ಕೆ ಚಿಮ್ಮಿತು. ನಂತರ ನಾಮವನ್ನು ನೀರಿನಲ್ಲಿ ತೇಯ್ದು ಹಣೆಗೆ ತಿಲಕವನ್ನಿಟ್ಟುಕೊಂಡರು. ಈ ಚಿಲುಮೆಯು ನಾಮಹಚ್ಚಿಕೊಳ್ಳಲು ಸೃಷ್ಟಿಯಾದ್ದರಿಂದ ಇದಕ್ಕೆ 'ನಾಮದ ಚಿಲುಮೆ' ಎಂದು ಹೆಸರಾಯಿತು.

ಧನುಸ್ ತೀರ್ಥ ಕೂಡ ದೇವರಾಯನ ದುರ್ಗದಲ್ಲಿದೆ. ಇಲ್ಲಿನ ಬಂಗಲೆ ಬೆಟ್ಟದಲ್ಲಿರುವ ಈ ದೊಣೆಯಲ್ಲಿ ಮಿಂದರೆ ಧನುಷ್ಕೋಟಿ ಕ್ಷೇತ್ರದಲ್ಲಿ ಮಿಂದ ಪುಣ್ಯವು ಬರುತ್ತದೆಂದು ಜನರು ನಂಬಿದ್ದಾರೆ. ಒಮ್ಮೆ ರಾಮ, ಲಕ್ಷ್ಮಣ ಸೀತೆಯರು ವನವಾಸದ ಸಂದರ್ಭದಲ್ಲಿ ದೇವರಾಯನ ದುರ್ಗಕ್ಕೆ ಬಂದಿದ್ದರಂತೆ. ಆಗ ಸೀತೆಗೆ ಬಹಳ ಬಾಯಾರಿಕೆಯಾಯಿತು. ಇಲ್ಲಿ ಸುತ್ತಮುತ್ತಲು ಎಷ್ಟು ಹುಡುಕಿದರೂ ನೀರು ಸಿಗದಿದ್ದಾಗ ಲಕ್ಷ್ಮಣನು ತನ್ನ ಬತ್ತಳಿಕೆಯಲ್ಲಿದ್ದ ಒಂದು ಧನಸ್ಸನ್ನು ಬಳಸಿ ಈ ದೊಣೆಯನ್ನು ನಿರ್ಮಿಸಿದನೆಂಬ ಪ್ರತೀತಿ ಇದೆ. ಧನಸ್ಸಿನಿಂದ ನಿರ್ಮಾಣವಾದ ದೊಣೆಯಾದ್ದರಿಂದ ಇದಕ್ಕೆ ಧನುಸ್‌ತೀರ್ಥ ಎಂಬ ಹೆಸರು ಬಂದಿದೆ.

ಪರಾಶರತೀರ್ಥವೂ ಸಹ ದೇವರಾಯನ ದುರ್ಗದಲ್ಲಿದೆ. ಇದನ್ನು 'ಪಾವನತೀರ್ಥ' ಎಂತಲೂ ಕರೆಯುತ್ತಾರೆ. ಒಮ್ಮೆ ಪರಾಶರ ಮುನಿಗಳು ಬಹುಕಾಲ ಕುಳಿತು ತಪಸ್ಸು ಮಾಡಿದರಂತೆ. ತಪ್ಪಸ್ಸಿಗೆ ಮೆಚ್ಚಿದ ವಿಷ್ಣುವು ಶ್ರೀ ಲಕ್ಷ್ಮಿನರಸಿಂಹಸ್ವಾಮಿ ರೂಪದಲ್ಲಿ ಬಂದು ದರ್ಶನ ನೀಡಿ ಅವರ ಇಷ್ಟಾರ್ಥವನ್ನು ನೆರವೇರಿಸಿದನಂತೆ. ಈ ಘಟನೆ ನಡೆದ ಸ್ಥಳ ಇದೇ ಆದ್ದರಿಂದ ಈ ಹೊಂಡಕ್ಕೆ ಪರಾಶರತೀರ್ಥ ಎಂಬ ಹೆಸರು ಬಂದಿದೆ. ಪ್ರತಿವರ್ಷ ಶ್ರೀಲಕ್ಷ್ಮಿನರಸಿಂಹಸ್ವಾಮಿಯ ಜಾತ್ರೆ ಸಂದರ್ಭದಲ್ಲಿ ಇಲ್ಲಿ ತೀರ್ಥಸ್ನಾನ ಮಾಡುವ ಆಚರಣೆ ಇದೆ.

**೫.೪ ನಿರೂಪಣಾ ಸಾಹಿತ್ಯ**

ಜನಮನದಲ್ಲಿರುವ ಕೆಲವು ವೃತ್ತಾಂತಗಳು ಯಾವುದೋ ಸಂದರ್ಭದಲ್ಲಿ ದಾಖಲಾಗಿರುತ್ತವೆ ಅಥವಾ ಯಾರೋ ಒಬ್ಬ ವ್ಯಕ್ತಿಯು ತನ್ನ ವೃತ್ತಾಂತವನ್ನು ಇನ್ನೊಬ್ಬ ವ್ಯಕ್ತಿಗೆ ನಿರೂಪಿಸಿರುತ್ತಾನೆ. ಈ ನಿರೂಪಣೆಯು ಅಕ್ಷರ ರೂಪದಲ್ಲಿ

ದಾಖಲಾಗಿರುತ್ತದೆ. ಅಂತಹ ಸಾಹಿತ್ಯಗಳನ್ನು ನಿರೂಪಣಾ ಸಾಹಿತ್ಯ ಎಂಬ ಹೊಸ ಚೌಕಟ್ಟಿನಲ್ಲಿ ಚರ್ಚಿಸಿದ್ದೇನೆ. ನಿರೂಪಣಾ ಸಾಹಿತ್ಯದ ಚೌಕಟ್ಟಿನಲ್ಲಿ ಕೈಫಿಯತ್ತುಗಳು, ಬಖೈರುಗಳು, ನಾಮೆಗಳು ಇತ್ಯಾದಿಗಳು ಬರುತ್ತವೆ. ಇಲ್ಲಿ ವೃತ್ತಾಂತಗಳನ್ನು ಯಾವನೋ ಒಬ್ಬ ವ್ಯಕ್ತಿ ನಿರೂಪಿಸುತ್ತಾನೆ ಅದನ್ನು ಮತ್ತೊಬ್ಬ ವ್ಯಕ್ತಿ ಬರಹರೂಪಕ್ಕಿಳಿಸುತ್ತಾನೆ. ಆದ್ದರಿಂದ ಈ ಪ್ರಕಾರದ ಸಾಹಿತ್ಯಗಳನ್ನು ನಿರೂಪಣಾ ಸಾಹಿತ್ಯವೆಂದು ನಿರ್ವಚಿಸಲಾಗಿದೆ.

ಅತ್ತಿಕುಪ್ಪೆ ಗ್ರಾಮದ ಕೈಫಿಯತ್ತಿನಲ್ಲಿ ಕೋಟೆಗೆ ಸಂಬಂಧಿಸಿದಂತೆ ಕಥೆಯೊಂದು ಈ ರೀತಿ ನಿರೂಪಣೆಗೊಂಡಿದೆ. ಅದನ್ನು ಸಂಗ್ರಹಿಸಿ ಕೊಡಲಾಗಿದೆ. ಕಾವೇರಿ ನದಿ ಸಮೀಪದಲ್ಲಿರುವ ಥಣನಾಯಕನಕೋಟೆಯಲ್ಲಿ ರಾಜ್ಯಭಾರ ಮಾಡುತ್ತಿರುವಾಗ ಒಂದು ದಿನ ರಾಜನು ಸಂಚಾರಾರ್ಥವಾಗಿ ಹೊರಟು ಹೇಮಾವತಿ ತೀರದಲ್ಲಿರುವ ಹೇಮಗಿರಿ ಸಮೀಪದ ಹೊಲ್ಲಾರಿ ಎಂಬ ಹಳ್ಳಿಗೆ ಬಂದನು. ಗ್ರಾಮವನ್ನು ನಾಲ್ಕೂ ಕಡೆ ನೋಡಿ ಈ ಗ್ರಾಮವನ್ನು ಪಟ್ಟಣ ಮಾಡಬೇಕೆಂದು ತನ್ನ ಮಂತ್ರಿ ಕಂಠೀರವನ ಕರೆದು, ಈ ಸ್ಥಳದಲ್ಲಿ ಏಳುಸುತ್ತು ಕೋಟೆಯನ್ನು ಕಟ್ಟಿ, ಇದರ ಮುಂದೆ ಬೆಟ್ಟಗಳಿಂದ ಬರುವ ಹಳ್ಳವನ್ನು ಕಡಿದು ದೂರದಲ್ಲಿ ಕೆರೆಯನ್ನೂ ಕಟ್ಟಿಸಿ, ಎದುರಲ್ಲಿ ಒಂದು ದೇವಸ್ಥಾನವನ್ನು ಕಟ್ಟಿಸಿ, ನಮ್ಮ ಠಾಣ್ಯವನ್ನು ಇಡಬೇಕು ಎಂದು ಅಪ್ಪಣೆ ನೀಡಿದನು. ಮಂತ್ರಿಯು ಕೋಟೆಯನ್ನು ಕಟ್ಟಿಸುತ್ತಾ, ಈ ಕೋಟೆಗೆ ಆಗ್ನೇಯ ಪೂರ್ವೋತ್ತರವಾಗಿ ಒಂದು ಕೆರೆಯನ್ನು ಕಟ್ಟಿಸುತ್ತಾ ಇರಬೇಕಾದರೆ, ಮಂದಿರದಲ್ಲಿ ರಾಜನ ಪ್ರೀತಿಯ ಪುತ್ರಿಯಾದ ಕಲಾವತಿ ಎಂಬುವವಳು ರಾಯನಿಗೆ ನೀನು ಕಟ್ಟಿಸುವ ಕೋಟೆಯನ್ನು ನಾನು ನೋಡಬೇಕೆಂದಳು. ಅವಳನ್ನು ಕೋಟೆಗೆ ಕರೆದೊಯ್ದು ರಾಜನು ತೋರಿಸುತ್ತಾ, ಈ ಕೋಟೆಗೆ ನನ್ನ ಮಂದಿ ಮಕ್ಕಳು ಬಂದಲಿ ಗೆಲ್ಲಬಹುದು ಎಂದು ಹೇಳಿದನು. ಆಗ ಕಲಾವತಿಯು "ಇಂಥ ಕೋಟೆ ಕೊತ್ತಳಗಳು ಅಳ್ಳುವರ್ರಿ ಮುಂತಾದುವ ಇರಲಾಗಿ, ಶತ್ರುಗಳು ಬಂದು ಠಾಣ್ಯ ಇಟ್ಟಲ್ಲಿ ನಮ್ಮ ದೊರೆಯಾದವರು ಇದು ಕಾದಲೇಕೆ? ನನ್ನಂತ ಮುಗ್ಧೆಯು ಅಂತಃಪುರಗೊಳೆಯಿದ್ದು ಶತ್ರುಗಳ ನಿರ್ವರ್ತಿಯ ಪಡೆದು ಪಡೆಯಬಹುದೆ" ಎನಲು ರಾಜನು ಖಿನ್ನನಾದನು. ನಂತರ ರಾಜನು ಮಂತ್ರಿ ಕಂಠೀರವನನ್ನು ಕರೆದು ಕಲಾವತಿಯು ಹೇಳಿದ ಸಂಗತಿಯನ್ನು ಹೇಳಿದನು. ಅದಕ್ಕೆ ಮಂತ್ರಿಯು "ಇದು ನಮಗೆ ತರವಲ್ಲ, ಮುಂದೆ ಯಾರಾದರ್ರೂ ಕಟ್ಟಿಕೊಳ್ಳಲಿ" ಎಂದು ಕೋಟೆಯ ಕೆಲಸವನ್ನು ಸ್ಥಗಿತಗೊಳಿಸಿದನು. ರಾಜನು ತನ್ನ ಪಟ್ಟಣಕ್ಕೆ ಹಿಂತಿರುಗಿದ ಕೆಲವೇ ದಿನಗಳಲ್ಲಿ ತೀರಿಕೊಂಡನು. ನಂತರ ಅಧಿಕಾರಕ್ಕೆ ಬಂದ ಅವನ ಮಗ ಹರಿರಾಯನು ಒಂದು ದಿನ ಮಂತ್ರಿಯಿಂದ ತಮ್ಮ ತಂದೆ ಕಟ್ಟಿದ ಕೋಟೆಯ ವಿಚಾರಗಳನ್ನು ಕೇಳಿ ತಿಳಿದನು. ನಂತರ ಇದು ನಮ್ಮ ಕೋಟೆ, ನಾವು ಕಡೆಗೂ

ಕಟ್ಟಿಸಬೇಕೆಂದು ಕೋಟೆ ಬಳಿಗೆ ಬಂದು ನೋಡಿ, ಹರಿಹರೇಶ್ವರ ಎಂಬ ದೇವಾಲಯವನ್ನು ಕಟ್ಟಿಸಿದನು. ದೇವಾಲಯದ ಪೂರ್ವ ದಿಕ್ಕಿನಲ್ಲಿ ಕೊಳವನ್ನು ಕಟ್ಟಿಸಿದನು. ಊರಿನ ಪೂರ್ವದಿಕ್ಕಿನಲ್ಲಿ ಕೈವಲ್ಯೇಶ್ವರಗಿರಿಯಿಂದ ಬರುವ ನೀರಿಗೆ ಏರಿಯನ್ನು ಕಟ್ಟಿಸಿ, ಈ ಕೆರೆಗೆ ತೂಬು ಕಟ್ಟಿಸಿ ಬೆಳೆ ಬೆಳೆಯಲು ಅನುಕೂಲ ಮಾಡಿದನು. ಕೋಟೆಯ ಉತ್ತರದಲ್ಲಿ ಒಂದು ಸಣ್ಣ ಬಾವಿ ಇದ್ದಿತು. ಆ ಗ್ರಾಮವನ್ನು ಮಂತ್ರಿಗೆ ಉಂಬಳಿ ಕೊಟ್ಟನೆಂದು ತಿಳಿಸುತ್ತದೆ (ಕಲಬುರ್ಗಿ ೧೯೯೪: ೩೪). ಕೋಟೆಯನ್ನು ಕಟ್ಟುವ ಸ್ಥಳವನ್ನು ರಾಜನು ಹೇಗೆ ಆಯ್ಕೆ ಮಾಡಿಕೊಳ್ಳುತ್ತಿದ್ದ ಎಂಬ ಅಂಶ ಈ ವೃತ್ತಾಂತದಿಂದ ಗೋಚರಿಸುತ್ತದೆ. ಅಲ್ಲದೆ, ಒಂದು ಗ್ರಾಮವನ್ನು ಪಟ್ಟಣವಾಗಿ ಮಾರ್ಪಡಿಸುವ ಕ್ರಮದಲ್ಲಿ ಕೋಟೆಯ ಪಾತ್ರವನ್ನು ಅರಿಯಬಹುದು. ಏಕೆಂದರೆ, ಕೋಟೆಯ ಜೊತೆ ಜೊತೆಗೆ ಪೇಟೆಗಳು ನಿರ್ಮಾಣಗೊಂಡಿರುವುದಕ್ಕೆ ಸಾಕಷ್ಟು ನಿದರ್ಶನಗಳಿವೆ. ಕೋಟೆ ಮತ್ತು ಪೇಟೆಯ ನಡುವೆ ಒಂದು ಬಗೆಯ ಜೈವಿಕ ಸಂಬಂಧವಿದೆ.[೨]

***

ಚರಿತ್ರೆ ಕಟ್ಟುವ ಸಂದರ್ಭದಲ್ಲಿ ಜಾನಪದ ಸಾಹಿತ್ಯಕ್ಕೆ ವಿಶಿಷ್ಟವಾದ ಸ್ಥಾನವಿದೆ. ದಾಖಲು ಸಾಹಿತ್ಯಗಳನ್ನೇ ಪ್ರಧಾನ ಆಕರಗಳಾಗಿ ಸ್ವೀಕರಿಸಿ, ಚರಿತ್ರೆಯನ್ನು ನಿರ್ವಚಿಸುವಾಗ ಇತಿಹಾಸಕಾರ ದಾರಿ ತಪ್ಪುವ ಸಾಧ್ಯತೆಗಳಿರುತ್ತವೆ. ಅಂತಹ ಸಂದರ್ಭಗಳಲ್ಲಿ ಜಾನಪದ ಸಾಹಿತ್ಯವು ಅವನನ್ನು ಎಚ್ಚರಿಸುವ ಕೆಲಸ ಮಾಡುತ್ತವೆ. ಜಾನಪದ ಚರಿತ್ರೆಯ ಮುಖಗಳು ಯಾವಾಗಲೂ ಕತ್ತಲೆಯಲ್ಲಿಯೇ ಇರುತ್ತದೆ. ಪ್ರಸ್ತುತ ಅಧ್ಯಾಯದಲ್ಲಿ ಕೋಟೆಗಳಿಗೆ ಸಂಬಂಧಿಸಿದ ಆ ಅಗೋಚರ ಮುಖವನ್ನು ಅನಾವರಣಗೊಳಿಸಲು ಪ್ರಯತ್ನಿಸಲಾಗಿದೆ.

ಮೌಖಿಕ ಅಥವಾ ಜಾನಪದ ಆಕರಗಳನ್ನು ಐತಿಹ್ಯಗಳು, ಲಾವಣಿಗಳು, ನಂಬಿಕೆ ಮತ್ತು ಆಚರಣೆಗಳು ಹಾಗೂ ನಿರೂಪಣಾ ಸಾಹಿತ್ಯ ಎಂಬ ನಾಲ್ಕು ಪ್ರಕಾರಗಳ ವರ್ಗೀಕರಣದ ಅಡಿಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಧ್ಯಯನದ ಹಿನ್ನೆಲೆಯಲ್ಲಿ ಕೆಲವು ವಿಚಾರಗಳನ್ನು ಕಂಡುಕೊಳ್ಳಲಾಗಿದೆ.

ಒಂದು – ಕೋಟೆಗಳ ನಿರ್ಮಾಣದ ಸ್ಥಳ ಆಯ್ಕೆಯಲ್ಲಿ ಕೆಲವು ಕಥನ ನಿರೂಪಣೆಗಳು ಕರ್ನಾಟಕದ ಎಲ್ಲಾ ಕಡೆಗಳಲ್ಲಿಯೂ ಕಂಡುಬರುತ್ತವೆ. ಮುಖ್ಯವಾಗಿ ಮೊಲವೊಂದು ನಾಯಿ ಅಥವಾ ನರಿಯನ್ನು ಬೆನ್ನಟ್ಟಿ ಹೋಗುವ ಕಥನ ನಿರೂಪಣೆ. ಇದರ ಆಶಯ ಬಹಳ ಸರಳ. ಗಂಟುಮೆಟ್ಟಿನ ನೆಲ ಎಂದು ಬಿಂಬಿಸುವ ಮೂಲಕ ಈ ಪ್ರದೇಶವನ್ನು ಸುಲಭವಾಗಿ ಗೆಲ್ಲಲಾಗದು ಎಂಬ ಮಾನಸಿಕ ಸೋಲನ್ನು ಆಕ್ರಮಣಕ್ಕೆ ಮೊದಲೇ ಶತ್ರುಗಳ ಮನದಲ್ಲಿ ಮೂಡಿಸುವುದು ಒಂದು ಬಗೆಯ ನಿರೂಪಣ ತಂತ್ರವಾಗಿದೆ.

ಎರಡು – ದೇವರ ಕೃಪೆಯಿಂದ ನಿರ್ಮಿಸಿದ ಕೋಟೆ ಎಂಬಂತಹ ಕಥನಗಳ ಮೂಲಕ ಕೋಟೆಗೆ ದೈವಿಕ ಕೃಪೆ / ಶಕ್ತಿ ಇದೆ ಎಂಬುದನ್ನು ಬಿಂಬಿಸುವುದು. ಆದ್ದರಿಂದ ಅಂತಹ ಕೋಟೆಗಳನ್ನು ಮುತ್ತಬಾರದು ಎಂಬ ಅಗೋಚರ ಭಯವನ್ನು ಶತ್ರುಗಳ ಮನದಲ್ಲಿ ಬಿತ್ತುವುದು ಈ ಕಥೆಗಳ ಹಿಂದಿನ ಆಶಯವಿರುವಂತೆ ತೋರುತ್ತದೆ.

ಮೂರು – ನಂದಿದುರ್ಗದ ಕೋಟೆಯನ್ನು ಕಲ್ಲು ಮತ್ತು ಗಾರೆಯಿಂದ ನಿರ್ಮಿಸಿದೆ ಎಂಬುದು ಕೂಡ ಅಭೇದ್ಯ ಎಂಬ ಭಾವನೆಯನ್ನು ಉಂಟು ಮಾಡುವುದಾಗಿದೆ. ಜೊತೆಗೆ ಅಲ್ಲಿನ ಕಥನದಲ್ಲಿ ಬರುವ ಬೇಟೆ ನಾಯಿ ಕೂಡ ಎಚ್ಚರಿಕೆಯ ಮತ್ತು ರಕ್ಷಣೆಯ ಸಂಕೇತವಾಗಿ ತೋರುತ್ತದೆ.

ನಾಲ್ಕು – ಭಸ್ಮಾಂಗಿ ದುರ್ಗ, ನಿಡುಗಲ್ಲುದುರ್ಗ, ಚನ್ನರಾಯನದುರ್ಗ, ಮಧುಗಿರಿ ಕೋಟೆ, ಹುತ್ರಿದುರ್ಗ, ಕಳವರದುರ್ಗ ಮೊದಲಾದ ಕೋಟೆಗಳನ್ನು ತಂದೆ ಮತ್ತು ಮಗ ಇಬ್ಬರೇ ಕಟ್ಟುತ್ತಿರುತ್ತಾರೆ. ಅಲ್ಲಿ ಹೆಣ್ಣೊಬ್ಬಳು ಸುಳಿಯುತ್ತಾಳೆ, ಮಗನು ವೀರ್ಯಸ್ಖಲನ ಮಾಡಿಕೊಳ್ಳುತ್ತಾನೆ. ಕೋಟೆಯು ಬೀಳುತ್ತದೆ ಮುಂತಾದ ರೀತಿಯಲ್ಲಿ ಕಥನಗಳು ಇವೆ. ಇದು ಕೋಟೆಗಳನ್ನು ಕಟ್ಟುವಾಗ ಏಕಾಗ್ರತೆ ಮತ್ತು ಶಕ್ತಿ ಅಗತ್ಯ ಎಂಬುದನ್ನು ಈ ಕಥನಗಳು ಬಿಂಬಿಸುತ್ತವೆ. ಕೋಟೆಗಳ ನಿರ್ಮಾಣ ಎಂಬುದು ಒಂದು ವಿಧದ ವ್ರತವಿದ್ದಂತೆ, ಆ ಕಾರ್ಯವನ್ನು ನಿರ್ವಹಿಸುವಾಗ ಮನಸ್ಸು ದೃಢವಾಗಿರಬೇಕೇ ವಿನಃ ಚಂಚಲಗೊಳ್ಳಬಾರದು. ಅಲ್ಲದೆ ಇದೊಂದು ಪವಿತ್ರ ಕಾರ್ಯವಾದ್ದರಿಂದ ಮೈಲಿಗೆಯಾಗಬಾರದು ಎಂಬುದನ್ನು ನಿರೂಪಿಸುವುದಕ್ಕಾಗಿ ಈ ಮಾದರಿಯ ಕಥನಗಳು ಹುಟ್ಟಿಕೊಂಡಂತೆ ತೋರುತ್ತದೆ.

ಹೆಣ್ಣನ್ನು ಚಂಚಲೆ ಎಂದು ನಿರೂಪಿಸುವ ಮತ್ತು ಕೋಟೆ ಎಂಬುದು ಪುರುಷ ಸಂಕೇತ ಎಂಬ ಪುರುಷ ಪ್ರಧಾನ ಸಮಾಜದ ನಿರೂಪಣೆಯಾಗಿದೆ. ಜಾನಪದದಲ್ಲಿಯೂ ಪುರುಷ ಪ್ರಾಧಾನ್ಯತೆ ಮೆರೆದಿರುವುದು ಅಚ್ಚರಿಯ ಸಂಗತಿ. ಆದರೆ, ಚಿತ್ರದುರ್ಗದ ಕೋಟೆಯೊಳಕ್ಕೆ ನುಸುಳಿ ಬರುತ್ತಿದ್ದ ಶತ್ರುಗಳನ್ನು ಬಡಿದು ಹಾಕಿದ ಓಬವ್ವೆ ಇಂತಹ ನಂಬಿಕೆ ಮತ್ತು ಭ್ರಮೆಗಳನ್ನು ಒಡೆದು ಹಾಕಿದ್ದಾಳೆ.

ಐದು – ಕೋಟೆಗಳಿಗೆ ಸಂಬಂಧಿಸಿದ ಬಲಿ ಆಚರಣೆಗಳು ಪಾವಗಡ ಮತ್ತು ಬೆಂಗಳೂರು ಕೋಟೆಯ ಹಿನ್ನೆಲೆಯಲ್ಲಿ ಕಂಡುಬರುತ್ತವೆ. ಇಲ್ಲಿನ ವೃತ್ತಾಂತಗಳಲ್ಲಿ ಕೋಟೆಗೆ ಬಲಿಯಾದವರು ಗರ್ಭಿಣಿ ಸ್ತ್ರೀಯರು. ಹೀಗೆ ಗರ್ಭಿಣಿಯರನ್ನು ಬಲಿ ಕೊಡಲು ಮುಖ್ಯವಾಗಿ ಅವರನ್ನು ಫಲವತ್ತತೆ ಮತ್ತು ಸೃಷ್ಟಿಯ ಸಂಕೇತವೆಂಬುದು ತಜ್ಞರ ಅಭಿಮತ. ಹೀಗೆ ಬಲಿಯಾಗುವ ವಿಚಾರವನ್ನು ಒಂದು ಮೌಲ್ಯವೆಂದು ಸಮಾಜವು ಸ್ವೀಕರಿಸಿಬಿಟ್ಟಿದೆ. ಗರ್ಭಿಣಿಯರು ಸಹ ಇಂತಹ ಕಾರ್ಯಕ್ಕಾಗಿ ಮುಂದೆ

ಬರುವುದನ್ನು ಗಮನಿಸಿದರೆ ಅವರು ಇದನ್ನು ಪರಮ ಪವಿತ್ರ ಕಾರ್ಯವೆಂದು ಭಾವಿಸಿದ್ದಿರಬೇಕು. ಈ ರೀತಿ ಆತ್ಮಾರ್ಪಣೆ ಮಾಡಿಕೊಳ್ಳುವವರನ್ನು ದೈವತ್ವಕ್ಕೇರಿಸುವ ಮೂಲಕ ಪ್ರಭುತ್ವವು ಆಚರಣೆಗಳನ್ನು ಪೋಷಿಸುವ ಕೆಲಸ ಮಾಡುತ್ತದೆ. ಅಲ್ಲದೆ, ಅದನ್ನು ಶ್ರೇಷ್ಠ ಜೀವನ ಮೌಲ್ಯವೆಂಬಂತೆ ಪ್ರಚುರಪಡಿಸುತ್ತದೆ. ಇಂತಹ ನರಬಲಿಗಳು ಕಾಲದಿಂದ ಕಾಲಕ್ಕೆ ಬದಲಾವಣೆಯಾಗುತ್ತಾ ಬಂದಿವೆ. ಕೋಟೆಗಳಿಗೆ ಹಿಂದೆ ಇದ್ದ ನರಬಲಿಯು ನಾಗರಿಕತೆಯ ವೇಳೆಗಾಗಲೇ ಸಾಕಷ್ಟು ಕಣ್ಮರೆಯಾಗಿ ಬಲಿಗೆ ಬದಲಿ ವ್ಯವಸ್ಥೆಯನ್ನು ಮಾಡಿಕೊಂಡಿರುವುದನ್ನು ಕಾಣಬಹುದು. ನರಬಲಿಯೂ ಧಾರ್ಮಿಕ ವಿಧಿಯ ಒಂದು ಅಂಗವಾದ್ದರಿಂದ ಅದನ್ನು ಯಾವುದಾದರೂ ಸಾಂಕೇತಿಕ ರೂಪದಲ್ಲಿ ಆಚರಿಸುವ ಸಲುವಾಗಿ ನರಬಲಿಯ ಬದಲು ಬಂದೆರಡು ರಕ್ತದ ಹನಿಯನ್ನು ಚೆಲ್ಲುವಂತೆ ಮಾಡುವುದು, ಮನುಷ್ಯ ಬಲಿಯ ಬದಲಾಗಿ ಒಂದು ಪ್ರಾಣಿಯನ್ನು ಬಲಿ ಕೊಡುವುದು, ಅಲ್ಲದೆ ನರಬಲಿಯಂತೆ ಬೂದುಗುಂಬಳಕ್ಕೆ ಕುಂಕಮವಿಟ್ಟು ಒಡೆಯುವುದು, ನಿಂಬೆಹಣ್ಣನ್ನು ಎರಡು ಚೂರು ಮಾಡುವುದು, ಬಾಳೆಯಹಣ್ಣಿನ ತುದಿ ಮುರಿಯುವುದು. ತೆಂಗಿನ ಕಾಯಿ ಒಡೆಯುವುದು ಇವೆಲ್ಲವೂ ಮನುಷ್ಯನ ತಲೆಯ ಸಾಂಕೇತಿಕ ರೂಪ ಎನ್ನಬಹುದಾಗಿದೆ. ಆದರೂ ಇವೆಲ್ಲವೂ ಬಲಿಯ ಸಂಕೇತಗಳೆಂದು ಸಮಾಜವು ಅಂಗೀಕರಿಸಿದೆ. ಈ ರೀತಿ ಬದಲಾವಣೆಯಾದರೂ ಹಿಂದಿನ ಸಾಂಸ್ಕೃತಿಕ ನೆನಪುಗಳು ಒಂದು ಸಮಾಜದೊಳಗೆ ಬಂದು ರೂಪಿತವಾಗಿರುತ್ತವೆ. ಅವುಗಳನ್ನು (ನರಬಲಿ) ಗಟ್ಟಿಗೊಳಿಸುವುದಕ್ಕಾಗಿ ಬಲಿಯ ಸಂಕೇತವೆಂಬಂತೆ ಈ ರೀತಿಯ ಬದಲಿ ವ್ಯವಸ್ಥೆಯನ್ನು ಮನುಷ್ಯ ಮತ್ತೆ ಮತ್ತೆ ರೂಢಿಸಿಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ಮೈಸೂರು ನಗರದ ಬಳಿಯ ಕಾಳಿ ದೇವಾಲಯವೊಂದರಲ್ಲಿ ನಡೆಯುತ್ತಿದ್ದ ನರಬಲಿ ನೀಡುವ ಪದ್ಧತಿಯನ್ನು ಟಿಪ್ಪು ಸುಲ್ತಾನ್ ಕೂಡ ನಿಲ್ಲಿಸಿದುದನ್ನು ಇಲ್ಲಿ ಸ್ಮರಿಸಬಹುದು (ಷೇಕ್‌ಅಲಿ ೧೯೯೭: ೪೯೭).

ಈ ಬಲಿ ಆಚರಣೆಯನ್ನು ಮತ್ತಷ್ಟು ವಿಸ್ತೃತವಾಗಿ ನೋಡುವುದಾದರೆ, ಕೆಲವು ವೇಳೆ ಆ ಕುಟುಂಬ ಅಥವಾ ಆ ಊರಿನ ಗರ್ಭಿಣಿ ಸ್ತ್ರೀ ಅಥವಾ ಸಾಮಾನ್ಯ ಸ್ತ್ರೀಯೋರ್ವಳು ಸ್ವಯಂಪ್ರೇರಿತಳಾಗಿ ಕೋಟೆಗೆ ಬಲಿಯಾಗುವುದನ್ನು ಮೌಖಿಕ ಕಥನಗಳಲ್ಲಿ ಕಾಣುತ್ತೇವೆ. ಇದು ಬದುಕುವ ಅನಿವಾರ್ಯತೆಯನ್ನು ಕಂಡ ವ್ಯಕ್ತಿ ತನ್ನ ವೈಯಕ್ತಿಕತೆಯ ನಡುವೆಯೂ ತನಗೆ ಮತ್ತು ಎಲ್ಲರಿಗಾಗಿ ಸಾಂಘಿಕ ಹಿಂಸೆಗೆ ಒಳಗಾಗಲು ಒಪ್ಪುವ ಪ್ರಕ್ರಿಯೆ. ಇದೊಂದು ಬಗೆಯ ಯೋಜಿತ ಹಾಗೂ ಸಾಂಘಿಕ ಹಿಂಸೆಯ ಸ್ವರೂಪವದ್ದು. ಕಾಮ–ಪ್ರೇಮದ ಹಿಂಸೆಗಳು ಸೃಜನಾತ್ಮಕ ಹಿಂಸೆಗಳಾದರೆ ಧರ್ಮ, ದೇವರು, ಕರ್ಮ, ಮೋಕ್ಷ ಇಂಥವು ಸ್ಥಾಪಿತ ಹಿಂಸೆಗಳು, ಜಾತಿ, ವರ್ಗ, ವರ್ಣ ಇಂಥವು ಯೋಜಿತ

ಹಿಂಸೆಗಳು, ಸೃಜನಾತ್ಮಕ ಹಿಂಸೆಯೊಳಗೆ ಸ್ಥಿರತೆಗಳೆಂಬ ಜಡ ಬೀಜಗಳಿರುವುದಿಲ್ಲ. ಚಾರಿತ್ರಿಕ ಘಟನೆಗಳು ಅದರ ಸ್ಥಿರತೆಯಾಗಿರುತ್ತವೆ. ಯೋಜಿತ ಹಿಂಸೆಯಲ್ಲಿ ಕೇವಲ ಮೌಲ್ಯಗಳು ದಾಳಗಳಾಗುತ್ತವೆ. ಹೊರಗಿನದು ಒಳಕ್ಕೆ ಬರಲು, ಅನ್ಯತೆ ಎನ್ನುವುದು ನಮ್ಮದಾಗಲು, ಶೋಷಣೆಯು ಸಹ್ಯವಾಗಲು ನಡೆಸುವ ಸಾಂಸ್ಕೃತಿಕ ಪ್ರಕ್ರಿಯೆಯ ಫಲವೇ ಯೋಜಿತ ಅಥವಾ ಸಂಚಿನ ಸಂಸ್ಕೃತಿಯ ಪರಿಣಾಮ. ಈ ಇಡೀ ಸಂಸ್ಕೃತಿಯ ಹಿಂದೆ ಒಂದು ಸಂಚಿನ ಮನಸ್ಸು (ಅಧಿಕಾರ ಚಲಾಯಿಸುವ ಗಂಡು ಅಥವಾ ಸಂಸ್ಥೆ) ಕೆಲಸ ಮಾಡಿರುತ್ತದೆ. ಯಜಮಾನಿಕೆ ಸಂಸ್ಕೃತಿಯ ಕಪಿಮುಷ್ಟಿಗೆ ಸಿಕ್ಕ ಅಬಲರೂ, ಮುಗ್ಧರೂ ಆದ ಸಾಮಾನ್ಯ ಜನಸಮುದಾಯ ನಿರಂತರ ಹಿಂಸೆಗೆ ಒಳಗಾಗುತ್ತದೆಂಬುದು ಕೋಟೆಗಳ ನಿರ್ಮಾಣದ ಸಂದರ್ಭದಲ್ಲಿ ಆಗಿರುವ ಸ್ತ್ರೀಬಲಿಯ ವಿಚಾರದಲ್ಲಿ ಧ್ವನಿತವಾಗುತ್ತದೆ.

ಆರು – ಕೇವಲ ತಳವರ್ಗದ ಹೆಣ್ಣು ಮಗಳನ್ನು ಆತ್ಮಾರ್ಪಣೆಗೆ ದೂಡಲಾಗುತ್ತದೆ ಎಂಬ ಊಹಾವಾದವನ್ನು ಪುನರ್‌ಪರಿಶೀಲಿಸಿಕೊಳ್ಳಬೇಕಿದೆ. ಏಕೆಂದರೆ, ಬೆಂಗಳೂರಿನ ಕೋಟೆ ಬಾಗಿಲಿಗೆ ಬಲಿ ಹೋದವಳು ಅರಸನ ಸೊಸೆ. ಅದೇ ರೀತಿ ಪಾವಗಡದಲ್ಲಿ ಹೆಬ್ಬಾಗಿಲಿಗೆ ಆತ್ಮಾರ್ಪಣೆ ಮಾಡಿಕೊಂಡವಳು ಬ್ರಾಹ್ಮಣ ಹೆಣ್ಣು ಮಗಳು. ಪುರುಷ ಸಮಾಜವು ರೂಪಿಸಿರುವ ಗೊಡ್ಡು ಆದರ್ಶಗಳಿಗೆ ಹೆಣ್ಣು ಅಂದರೆ ಒಂದೇ. ಅಲ್ಲಿ ಯಾವ ಜಾತಿ ಅಥವಾ ವರ್ಣದ ಶ್ರೇಷ್ಠತೆಗಳು ಇಲ್ಲ ಎಂಬುದನ್ನು ನಿರೂಪಿಸುವ ಮೂಲಕ ಎಲ್ಲಾ ಹೆಣ್ಣುಗಳು ಶೋಷಣೆಯ ನೆಲೆಯಲ್ಲಿ ಸಮಾನರು ಎಂಬುದನ್ನು ತೋರಿಸಿಕೊಡುತ್ತದೆ.

ಏಳು – ಯಾವುದೇ ಊರು, ಪಾಳೆಪಟ್ಟು, ಸಾಮ್ರಾಜ್ಯದ ನಿರ್ಮಾಣವು ಆಯಾ ಸ್ಥಳದ ನೀರಿನ ಸೌಕರ್ಯದೊಂದಿಗೆ ಮೇಳೈಸಿರುತ್ತದೆ. ಮೂಲಭೂತ ಅವಶ್ಯಕತೆಗಳಲ್ಲಿ ಒಂದಾದ ನೀರಿನ ಲಭ್ಯತೆಯು ಮುಂದೆ ಕೃಷಿ–ವ್ಯಾಪಾರ–ವಹಿವಾಟುಗಳೊಂದಿಗೆ ಅಂತಃಸಂಬಂಧ ಹೊಂದಿ ಕಂದಾಯದ ರೂಪದಲ್ಲಿ ಸಾಮ್ರಾಜ್ಯದ ಬೊಕ್ಕಸಕ್ಕೆ ಹಣಹರಿದು ಬರುವ ಮೂಲ ಮಾರ್ಗವಾಗಿರುತ್ತದೆ. ಅಂತೆಯೇ ಸಾಮ್ರಾಜ್ಯದ ಕೇಂದ್ರ ಸ್ಥಳಗಳಿರುವ ಎಡೆಗಳಲ್ಲಿ ಕೋಟೆಗಳು ನಿರ್ಮಾಣವಾಗುವಾಗಲೂ ಜಲಸಮೃದ್ಧಿಯ ಕಡೆಗೆ ಹೆಚ್ಚಿನ ಗಮನ ನೀಡಲಾಗಿರುತ್ತದೆ. ಹೀಗಾಗಿ ಕೋಟೆಗಳಲ್ಲಿ ನೀರು ಸಂಗ್ರಹ ಮತ್ತು ನೀರಿನ ದೊಣೆ ಅಥವಾ ಹೊಂಡಗಳನ್ನು ಕಟ್ಟಲಾಗಿರುತ್ತದೆ. ಜೊತೆಗೆ ಇವುಗಳು ಪವಿತ್ರೀಕರಣದ ಅಧ್ಯಯವನ್ನು ಸೇರಿಸಿ ಕಥೆ, ಐತಿಹ್ಯ, ಗಾದೆ, ಲಾವಣಿಗಳು ಹುಟ್ಟಿಕೊಂಡಿವೆ.

ಒಟ್ಟಿನಲ್ಲಿ ಜಾನಪದದ ಒಂದು ಅಂಶವನ್ನು ವಿಶ್ಲೇಷಣಾತ್ಮಕವಾಗಿ ಒಳಗೊಂಡಿರುವ ಯಾವುದೇ ವಿಷಯವಾಗಿರಲಿ ಅದನ್ನು ಜಾನಪದದಲ್ಲಿ 'ಆಶಯ' ಎಂದು

ವಿಶ್ಲೇಷಿಸಲಾಗುತ್ತಿದೆ. ಅಂತೆಯೇ ಟಿಪ್ಪು ಕಾಲದ ಅಥವಾ ಅವನ ಆಳ್ವಿಕೆಗೊಳಪಟ್ಟ ಪ್ರದೇಶಗಳಲ್ಲಿನ ಕೋಟೆಗಳಿಗೆ ಸಂಬಂಧಿಸಿದಂತಹ ಜನಪದ ಲಾವಣಿ, ಕಥನ, ಐತಿಹ್ಯ ಇತ್ಯಾದಿಗಳಲ್ಲಿ ಈ ಆಶಯಗಳಿವೆ. ಬಲಿ ನೀಡುವ ಘಟನೆ, ಕೋಟೆಯ ನಿರ್ಮಾಣದ ಸಂದರ್ಭದಲ್ಲಿ ಹಸು ಹಾಲು ಕರೆಯುವ ಪ್ರಸಂಗ, ದೇವಲೋಕದ ಸ್ತ್ರೀಯರ ಉಲ್ಲೇಖ, ದೇವರ ಮಹಿಮೆಯ ವಿಚಾರ, ತಂದೆ-ಮಗನ ಕೋಟೆ ನಿರ್ಮಾಣದ ಸನ್ನಿವೇಶ ಇತ್ಯಾದಿಗಳೆಲ್ಲವು ಆಶಯಗಳೇ ಆಗಿವೆ.

ಜನಪದ ವಸ್ತುವಿಷಯಗಳು ಯಾವಾಗಲೂ ತಮಗೆ ವಿಶಿಷ್ಟವಾದ ಒಂದು ನಿರ್ದಿಷ್ಟ ಸಂಖ್ಯೆಯಲ್ಲಿ ಕಂಡುಬಂದಿರುವುದು ಗಮನಾರ್ಹ. ಎರಡು, ಮೂರು, ಏಳು, ಎಂಟು, ಹತ್ತು, ಹನ್ನೆರಡು ಇತ್ಯಾದಿ ಸಂಖ್ಯೆಗಳು ಅನಾದಿ ಕಾಲದಿಂದ ಕಥೆಯ ಪರಂಪರೆಯುದ್ದಕ್ಕೂ ಪಾಲಿತವಾಗಿರುವಂಥಹವು. ಒಂದೇ ಕಥೆಯಲ್ಲಿ ಈ ಸಂಖ್ಯೆಗಳು ಪದೇ ಪದೇ ಪುನರಾವರ್ತನೆಯಾಗುವುದುಂಟು. ಇಬ್ಬರು ಅಕ್ಕತಂಗಿಯರು, ಏಳು ಮಂದಿ ಸೋದರರು, ಹನ್ನೆರಡು ಕೊಪ್ಪರಿಗೆ ಹಣ, ಹತ್ತು ಸುತ್ತಿನ ಕೋಟೆ, ಏಳು ಬೆಟ್ಟಗಳು, ಎಂಟು, ಮೂರು ಸುತ್ತಿನ ಕೋಟೆ ಇತ್ಯಾದಿ ಉಲ್ಲೇಖಗಳು ಜಾನಪದ ಆಶಯಗಳಾಗಿವೆ. ಸಾಮಾನ್ಯವಾಗಿ ಕಥನವು ಹೆಚ್ಚು ಸ್ಮರಣೆಯಲ್ಲಿ ಉಳಿಯಲೆಂಬ ಕಾರಣಕ್ಕೆ, ದೀರ್ಘ ಅಥವಾ ಹೆಚ್ಚು ಎಂದು ಅಭಿವ್ಯಕ್ತಿಸಲೋ ತುಂಬ ವಿಶಿಷ್ಟ ಸ್ವರೂಪ ಎಂಬುದಕ್ಕೋ ಈ ಬಗೆಯ ಸಂಖ್ಯಾ ಆಶಯಗಳು ಹುಟ್ಟಿಕೊಂಡಿವೆ. ಕಥನ ಪರಂಪರೆಯು ವಾಕ್ಸಂಪ್ರದಾಯದಲ್ಲಿ ಕೆಡದಂತೆ ಉಳಿಯುವುದಕ್ಕೆ ಕಥೆಯ ಆಂತರಿಕ ಗುಣವಾದ ಕ್ರಿಯೆವೇಗವನ್ನು ಯಶಸ್ವಿಯಾಗುವುದಕ್ಕೆ ಈ ಆಶಯಗಳು ಸಹಕಾರಿ. ಇದೂ ಕೂಡ ಜಾನಪದ ಸಾಹಿತ್ಯದ ಶೈಲಿ ಹಾಗೂ ತಂತ್ರವಾಗಿ ಮೇಳೈಸಿದೆ.

ಸಾಮಾನ್ಯವಾಗಿ ಇತಿಹಾಸಕಾರರು ಚರಿತ್ರೆಯನ್ನು ನಿರ್ಮಿಸುವಲ್ಲಿ ಮತ್ತು ಪುನರ್ರಚಿಸುವಲ್ಲಿ ಮೌಖಿಕ ಆಕರಗಳನ್ನು ನಂಬಲಾರ್ಹ ಆಕರಗಳೆಂದು ಪರಿಗಣಿಸದೆ ಹೋದ ಉದಾಹರಣೆಗಳು ಹೆಚ್ಚು. ಆದರೆ ಸೂಕ್ಷ್ಮ ಒಳನೋಟಗಳೊಂದಿಗೆ ಮೌಖಿಕ ಪರಂಪರೆಯು ಆಗಾಗ ಚರಿತ್ರೆ ನಿರ್ಮಾಣ ಪ್ರಕ್ರಿಯೆಯಲ್ಲಿ ಬಳಕೆಯಾಗಿರುವುದುಂಟು. ಮೌಖಿಕ ಪರಂಪರೆ – ಚರಿತ್ರೆ ಶಿಸ್ತಿನ ಚೌಕಟ್ಟಿನ ಅಂತರವನ್ನು ಕಡಿಮೆ ಮಾಡುತ್ತಾ ಹೋದರೆ ಬಹುಶಃ ಮತ್ತಷ್ಟು ಐತಿಹಾಸಿಕ ಸಂಗತಿಗಳ ಮರುನಿರ್ಮಾಣ ಸಾಧ್ಯವಾಗಬಹುದು.

## ಟಿಪ್ಪಣಿಗಳು

೧. ಜನರ ಮನಸ್ಸಿನಲ್ಲಿ ಮಹಾರಾಜರಿಗಿಂತ ಸ್ಥಳೀಯ ವೀರರು, ಪಾಳೇಗಾರರು, ಜನಾನುರಾಗಿಗಳಾಗಿ ಉಳಿದಿರುವುದನ್ನು ಲಭ್ಯವಿರುವ ಮೌಖಿಕ ಸಾಹಿತ್ಯದಿಂದ ಅರಿಯಬಹುದು. ಜನಪದರು ಕಂಪಿಲಿಯ ಕುಮಾರರಾಮನನ್ನು ಹಾಡಿಕೊಂಡಾಡಿದಂತೆ, ಅವನ ನಂತರದ ಕೃಷ್ಣದೇವರಾಯನನ್ನು ಕೊಂಡಾಡಲಿಲ್ಲ. ಇದರಾರ್ಥ ಯಾರು ಜನಸಾಮಾನ್ಯರ ನಡುವೆ ಇದ್ದು, ಜನಸಾಮಾನ್ಯರ ಕಷ್ಟಸುಖಗಳಲ್ಲಿ ಭಾಗಿಗಳಾಗುತ್ತಾರೆಯೋ, ಜನರ ಆಶೋತ್ತರಗಳಿಗೆ ಸ್ಪಂದಿಸುತ್ತಾರೆಯೋ ಅಂಥವರನ್ನು ಜನರು ನೆನೆಯುತ್ತಾರೆ. ಈ ನೆನಪು ಒಂದು ಪೀಳಿಗೆಗೆ ಸೀಮಿತವಲ್ಲ ಪೀಳಿಗೆಯಿಂದ ಪೀಳಿಗೆಗೆ ಐತಿಹ್ಯಗಳ ರೂಪದಲ್ಲಿ, ಕಥನಗಳ ರೂಪದಲ್ಲಿ, ಲಾವಣಿಗಳ ರೂಪದಲ್ಲಿ, ಜನಪದ ಗೀತೆಗಳಾದ ಕೋಲಾಟ, ಬೀಸುವ ಹಾಡುಗಳು, ಕುಟ್ಟುವ ಹಾಡುಗಳು ಮೊದಲಾದ ರೂಪಗಳಲ್ಲಿ ಮುಂದುವರಿಯುತ್ತವೆ (ಉಜಿರಾ ೨೦೧೬: ೭೦). ಇವುಗಳ ಮೂಲ ಆಶಯ ಮೌಲ್ಯಗಳ ಚರಿತ್ರೆಯನ್ನು ಮುಂದಿನ ಪೀಳಿಗೆಗೆ ವರ್ಗಾಯಿಸುವುದಾಗಿದೆ. ಒಂದು ಕಾಲಘಟ್ಟದಲ್ಲಿ ವ್ಯಕ್ತಿಯೊಬ್ಬ ತೋರಿದ ಶೌರ್ಯ, ಮಾಡಿದ ತ್ಯಾಗ, ತನ್ನ ಸಮಾಜದ ಒಳಿತಿಗಾಗಿ ನಡೆಸಿದ ಕೆಲಸ ಇವೆಲ್ಲವೂ ಮುಂದಿನವರಿಗೂ ಆದರ್ಶಗಳಾಗಲಿ ಎಂಬ ದೃಷ್ಟಿಯಿಂದ ಈ ಮೌಲ್ಯಗಳನ್ನು ಉಳಿಸಿ, ಪಸರಿಸುವ ಕೆಲಸ ಮಾಡುತ್ತಾರೆ. ಮೌಲ್ಯಗಳನ್ನು ಉಳಿಸುವ ಮತ್ತು ಪಸರಿಸುವ ಮಾರ್ಗ ಮಾತ್ರ ಬಹಳ ವಿಶಿಷ್ಟವಾದುದು. ಇದು ಸಂಸ್ಕೃತದ ಮಾರ್ಗ ಸಾಹಿತ್ಯವೂ ಅಲ್ಲ; ಪ್ರಾದೇಶಿಕ ಭಾಷೆಗಳಲ್ಲಿ ಬರೆಯಲ್ಪಟ್ಟ ದೇಸಿ ಸಾಹಿತ್ಯವೂ ಅಲ್ಲ. ಏಕೆಂದರೆ, ಅಕ್ಷರದ ಪರಿಚಯವೇ ಇಲ್ಲದ ಜನಸಾಮಾನ್ಯರ ಸಾಹಿತ್ಯ. ಅದು ಮೌಖಿಕವಾಗಿ(ಬಾಯ್ದೆರೆಯಲ್ಲಿ)ಯೇ ಪೀಳಿಗೆಯಿಂದ ಪೀಳಿಗೆಗೆ, ಜನರಿಂದ ಜನರಿಗೆ ಪಸರಿಸುತ್ತಾ ಬಂದ ಸಾಹಿತ್ಯ. ಆದ್ದರಿಂದ ಇದನ್ನು 'ಮೌಖಿಕ ಸಾಹಿತ್ಯ' ಎಂದು ಕರೆಯುತ್ತಾರೆ. ಈ ಮೌಖಿಕ ಸಾಹಿತ್ಯವು ಜನಸಾಮಾನ್ಯರೇ ರಚಿಸಿದ ಸಾಹಿತ್ಯವಾದ್ದರಿಂದ 'ಜನಪದ ಸಾಹಿತ್ಯ' ಎಂದು ಕರೆಯುವುದೂ ಉಂಟು. ಆದರೆ ಜನರ ಮನ ಮಾರ್ಗದಲ್ಲಿ ಉಳಿದು, ರೂಪಾಂತರಗೊಳ್ಳುತ್ತಾ ಬಂದ ಈ ಸಾಹಿತ್ಯ ಮಾರ್ಗವನ್ನು 'ಜನಪದ ಸಾಹಿತ್ಯ' ಎನ್ನುವುದಕ್ಕಿಂತಲೂ 'ಜನಮಾರ್ಗ ಸಾಹಿತ್ಯ' ಎನ್ನುವುದು ಸಮಂಜಸವೆಂದು ತೋರುತ್ತದೆ.

೨. ಕೋಟೆ ಮತ್ತು ಪೇಟೆಗಳು ಪರಸ್ಪರ ಪೂರಕವಾಗಿ ನಿರ್ಮಾಣಗೊಂಡಿರುತ್ತವೆ. ಕೋಟೆಯೊಳಗಿನ ಜನರಿಗೆ ಬೇಕಾದ ಸರಕು ಸರಂಜಾಮುಗಳನ್ನು ಪೂರೈಸುವುದು ಈ ಪೇಟೆಗಳೇ ಆಗಿರುತ್ತವೆ. ಅದೇ ರೀತಿ ಪೇಟೆಗಳ ಮೇಲೆ ನಡೆಯಬಹುದಾದ ಆಕ್ರಮಣಗಳಿಂದ ರಕ್ಷಣೆಯನ್ನು ಈ ಕೋಟೆಗಳಲ್ಲಿರುವ ಸೇನೆಯು ನೀಡುತ್ತದೆ. ಅಲ್ಲದೆ ವ್ಯಾಪಾರಿಗಳು ಪಾವತಿಸುವ ಸುಂಕಗಳನ್ನು ಸಂಗ್ರಹಿಸುವ ಠಾಣ್ಯಗಳಾಗಿಯೂ ಕೋಟೆಗಳು ಇರುತ್ತವೆ. ಅಂತೆಯೇ ಅದಕ್ಕೆ ಪ್ರತಿಯಾಗಿ ಆ ಮಾರ್ಗದಲ್ಲಿ ಕಳ್ಳಕಾಕರಿಂದ ಭದ್ರತೆಯನ್ನು ಕೊಡಬೇಕಾದ ಜವಾಬ್ದಾರಿಯನ್ನು ಆ ಕೋಟೆಯ ಅಧಿಕಾರಿಯೇ ಹೊತ್ತಿರುತ್ತಾನೆ. ಹೀಗೆ ಕೋಟೆ ಮತ್ತು ಪೇಟೆಗಳು ಬಹು ಆಯಾಮಗಳ ಸಂಬಂಧವನ್ನು

ಹೊಂದಿರುವುದನ್ನು ಗುರುತಿಸಬಹುದು. ನೋಡಿ: ಶಿವಕುಮಾರಿ ಎಂ.ಎಸ್., ೨೦೧೪, '೧೮ ಮತ್ತು ೧೯ನೇ ಶತಮಾನದ ಮೈಸೂರು ಸಂಸ್ಥಾನದಲ್ಲಿ ಕೆಲವು ಕೋಟೆಯುಕ್ತ ಪೇಟೆ ಮತ್ತು ಪಟ್ಟಣಗಳ ವಿಕಾಸ', (ಸಂ.) ಜಿ.ಎಸ್. ಪುಟ್ಟಸ್ವಾಮಿ, ಎಸ್. ಹರ್ಷ, **ಫೆಸೆಟ್ಸ್ ಆಫ್ ಅರ್ಬನೈಸೇಷನ್**, ಪು.೧೪೬-೧೫೫.

# ಅಧ್ಯಾಯ – ೬

# ಸಮಾರೋಪ

ಚರಿತ್ರೆ ಬರವಣಿಗೆಗಳಲ್ಲಿ ಟಿಪ್ಪುವಿನ ವ್ಯಾಪಕತೆಯನ್ನು ಬಹುತೇಕವಾಗಿ ಅವನ ರಾಜಕೀಯ ಚರಿತ್ರೆ, ಮತಾಂತರ ಇತ್ಯಾದಿ ವಿಷಯಗಳಿಗೆ ಸೀಮಿತಗೊಳಿಸಿರುವುದನ್ನು ಗಮನಿಸಬಹುದಾಗಿದೆ. ವರ್ತಮಾನದಲ್ಲಂತೂ ಟಿಪ್ಪುವಿನ ರಾಜಕೀಯ ಸಾಧನೆಯ ಬಗೆಗಿನ ಪರ ಮತ್ತು ವಿರೋಧಗಳು ವ್ಯಾಪಕವಾಗಿ ಕಾಣುತ್ತವೆ. ಅನೇಕ ಕಡೆ ಇಂಗ್ಲಿಷ್ ಮತ್ತು ಟಿಪ್ಪು ಸುಲ್ತಾನ್ ಎನ್ನುವ ಪರಿಧಿಯೊಳಗೆ, ಇನ್ನೂ ಅನೇಕ ಕಡೆ ಹಿಂದೂಗಳು ಮತ್ತು ಟಿಪ್ಪು ಸುಲ್ತಾನ್ ಎನ್ನುವ ಪರಿಪ್ರೇಕ್ಷೆಯೊಳಗೆ ಎಲ್ಲಾ ವಾದಗಳು ಸುತ್ತುತ್ತಿವೆ. ಟಿಪ್ಪುವಿನ ಕಂದಾಯ, ಆರ್ಥಿಕ ಸುಧಾರಣೆಗಳ ಬಗ್ಗೆ, ಅವನು ಆಧುನಿಕ ಮೈಸೂರನ್ನು ರೂಪಿಸಿದ ಬರವಣಿಗೆಗಳು ಬಹುಸಂಖ್ಯೆಗಳಲ್ಲಿವೆ. ಆಧುನಿಕ ಮೈಸೂರು ಸಂಸ್ಥಾನವನ್ನು ಸ್ಥಾಪಿಸುವ ಸಂದರ್ಭದಲ್ಲಿ ಅವನಿಗೆ ವರವಾದದ್ದು ಅವನಲ್ಲಿದ್ದ ಸಮರ್ಥ ಸೈನ್ಯ ಮತ್ತು ಆಯಕಟ್ಟಿನ ಸ್ಥಳಗಳನ್ನು ತನ್ನದಾಗಿಸಿಕೊಳ್ಳುವ ಅವನ ಪ್ರಯತ್ನ. ತನ್ನ ಸೈನ್ಯದ ಮೂಲಕ ಆತ ತನ್ನ ಸಂಸ್ಥಾನದ ರಕ್ಷಣೆಗಾಗಿ ಆಯಕಟ್ಟಿನ ಪ್ರದೇಶಗಳನ್ನು, ಸಂಸ್ಥಾನಗಳನ್ನು, ಬಂದರುಗಳನ್ನು ಆಕ್ರಮಿಸಿಕೊಂಡ. ಹೈದರನ ಕಾಲದಲ್ಲಿ ವಶಪಡಿಸಿಕೊಂಡ ಅನೇಕ ಕೋಟೆ ಕೊತ್ತಳಗಳು ಅವನ ಮಹತ್ವಕಾಂಕ್ಷೆಯನ್ನು ಈಡೇರಿಸಿಕೊಳ್ಳಲು ಸಾಧ್ಯವಾಯಿತು. ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ವಿವರಿಸಿದಂತೆ ಪ್ರಸ್ತುತ ಮಹಾಪ್ರಬಂಧವು

ಇಂತಹ ಕೋಟೆಗಳ ರಚನೆ, ತಂತ್ರಜ್ಞಾನಗಳನ್ನು ಶಿಷ್ಟಸಾಹಿತ್ಯ ಪ್ರಕಾರಗಳ ಮೂಲಕ ಕಟ್ಟಿಕೊಡಲು ಪ್ರಯತ್ನಿಸಿದೆ.

ಯೂರೋಪಿಯನ್ ಶಕ್ತಿಗಳ ಪ್ರವೇಶವಾಗುವುದಕ್ಕಿಂತ ಮೊದಲೇ ಮೈಸೂರಿನಲ್ಲಿ ಸಶಕ್ತ ಸರ್ಕಾರವಿತ್ತು. ಆ ಸರ್ಕಾರದ ಮೂಲಕ ಪ್ರಭಾವಿ ವ್ಯವಸ್ಥೆಯನ್ನು ರೂಪಿಸಲಾಗಿತ್ತು. ಈಗಾಗಲೇ ಚರ್ಚಿಸಿದಂತೆ ಬಲಿಷ್ಠವಾದ ಕೋಟೆಗಳ ಮತ್ತು ಸಮರ್ಥವಾದ ಸೈನ್ಯ ಶಕ್ತಿಯ ಮೂಲಕ ಸಂಸ್ಥಾನದ ಒಳಗಿನ ಮತ್ತು ಹೊರಗಿನ ಶತ್ರುಗಳನ್ನು ನಿಯಂತ್ರಿಸುವ ಕೆಲಸವನ್ನು ಮಾಡುವುದು ಟಿಪ್ಪುವಿಗೆ ಅನಿವಾರ್ಯವಾಗಿತ್ತು. ದಕ್ಷಿಣ ಭಾರತದಲ್ಲಿ ಅತಿ ಬಲಿಷ್ಠ ಸಂಸ್ಥಾನವಾಗಿದ್ದ ಟಿಪ್ಪುವಿನ ಸರ್ಕಾರವನ್ನು ಬೀಳಿಸಲು ಉಳಿದ ಭಾರತೀಯ ಸಂಸ್ಥಾನಗಳು ಇಂಗ್ಲಿಷರ ಜೊತೆಗೆ ಕೈಜೋಡಿಸಿದಾಗ, ತನ್ನ ಸಂಸ್ಥಾನದಲ್ಲಿದ್ದ ಅವನ ಶತ್ರುಗಳು ಅವನ ವಿರುದ್ಧ ಕತ್ತಿಮಸೆಯುತ್ತಿದ್ದಾಗ ಟಿಪ್ಪುವು ಅನಿವಾರ್ಯವಾಗಿ ಯುದ್ಧತಂತ್ರಗಳನ್ನು ರೂಪಿಸಲೇ ಬೇಕಿತ್ತು. ದೇಸಿ ಸಂಸ್ಥಾನವೊಂದು ಯೂರೋಪಿನ ಶಕ್ತಿಯೊಡನೆ ಹೋರಾಡುವಾಗ ತನ್ನ ನಾಯಕತ್ವವನ್ನು ಬಲಬರ್ಧಿಸಲು ಸಹಾಯಕವಾದ ಅಂಶ ಖಂಡಿತವಾಗಿಯೂ ಆ ಸಂಸ್ಥಾನದ ಆರ್ಥಿಕತೆ, ಸೈನ್ಯ ಮತ್ತು ನಾಯಕತ್ವಗಳು. ಇವುಗಳೆಲ್ಲವನ್ನು ಅರ್ಥಮಾಡಿಕೊಳ್ಳುತ್ತಲೇ ಪ್ರಸ್ತುತ ಮಹಾಪ್ರಬಂಧವು ಆ ಕಾಲದ ಜನಸಾಮಾನ್ಯರು ಕೋಟೆಗಳ ಬಗ್ಗೆ ಪಟ್ಟ ಅಭಿಪ್ರಾಯಗಳನ್ನು ಮೌಖಿಕ ಕಥನಗಳ ಮೂಲಕ ಗ್ರಹಿಸಲು ಪ್ರಯತ್ನಿಸಿದ್ದನ್ನು ಈ ನಿಟ್ಟಿನಲ್ಲಿ ನೋಡಬಹುದಾಗಿದೆ. ಒಂದು ಪ್ರದೇಶದ ಜನಜೀವನ, ನಾಗರಿಕತೆ ಮುಂತಾದವುಗಳು ಧುತ್ತನೆ ಕಳೆದೆರಡು ಶತಮಾನಗಳಿಂದ ವಿಕಾಸವಾಗುವುದಿಲ್ಲ. ನೂರಾರು ವರ್ಷಗಳ ಕಾಲದಿಂದ ಸ್ಥಳೀಯರಲ್ಲಿ ಮನೆಮಾಡಿದ್ದ ತಂತ್ರಜ್ಞಾನ, ವಿನ್ಯಾಸ, ವಿಜ್ಞಾನಗಳ ಮೂಲಕ ಅವುಗಳು ಉಳಿದುಕೊಂಡಿವೆ ಎಂದರೆ ಉತ್ಪ್ರೇಕ್ಷೆಯಾಗುವುದಿಲ್ಲ. ಇಂಗ್ಲಿಷ್ ಕಂಪನಿ ರಾಜ್ಯವು ಕಾಲಿಡುವುದಕ್ಕೆ ಮೊದಲೇ ಮೈಸೂರು ರಾಜ್ಯದಲ್ಲಿ ವಿಜ್ಞಾನ, ತಂತ್ರಜ್ಞಾನ ಅಥವಾ ರಾಕೆಟ್ ಉಡಾವಣೆ ಮಾಡುವಂತಹ ವೈಜ್ಞಾನಿಕತೆಯ ಅಭಿವೃದ್ಧಿಯಿದ್ದದ್ದನ್ನು ಗಮನಿಸಬಹುದು. ಈ ವಿವರಗಳು ಚರಿತ್ರೆಯ ರಚನಾ ಶಾಸ್ತ್ರದ ಇನ್ನೊಂದು ಮುಖವನ್ನು ಅನಾವರಣ ಮಾಡುತ್ತದೆ. ನಾಗರಿಕತೆಯ ಉಸಿರೇ ಸ್ವಾಸ್ಥ್ಯ ಸಮಾಜದ ನಿರಂತರ ಬದುಕು. ಬಹುಶಃ ಇಂದಿನ ನಾಗರಿಕತೆಯು ಉಳಿಯುವುದಕ್ಕೆ ಒಂದಲ್ಲಾ ಒಂದು ರೀತಿಯಲ್ಲಿ ಸಹಾಯಕವಾದ ಟಿಪ್ಪುವಿನ ಕೋಟೆಗಳ ರಚನೆ, ತಂತ್ರಜ್ಞಾನಗಳು ಹಾಗೂ ಇವುಗಳೊಂದಿಗೆ ಮೇಳೈಸಿದ ನೆನೆಪಿನ ಪುಟಗಳು, ಮೌಖಿಕ ಕಥನಗಳು ಕಾರಣವಾಗಿವೆ ಎಂದರೆ ಉತ್ಪ್ರೇಕ್ಷೆಯಲ್ಲ. ಈ ಬಗೆಯ ಅರ್ಥೈಸುವಿಕೆಯು ಕರ್ನಾಟಕ ಚರಿತ್ರೆಯ ಇನ್ನೊಂದು ಮಗ್ಗುಲನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗುವುದರಲ್ಲಿ ಯಾವುದೇ ಸಂಶಯವಿಲ್ಲ.

***

ಇಂಗ್ಲಿಷ್ ಕಂಪನಿ ರಾಜ್ಯವು ಬೆರಗುಗಣ್ಣಿನಿಂದ ಮೈಸೂರಿನ ಆರ್ಥಿಕತೆ ಮತ್ತು ತಾಂತ್ರಿಕತೆಯನ್ನು ನೋಡುವಂತೆ ಮಾಡಿದ ಕೀರ್ತಿ ಟಿಪ್ಪು ಸುಲ್ತಾನನಿಗೆ ಸಲ್ಲುತ್ತದೆ. ದೇಶೀಯ ಸಂಸ್ಥಾನಗಳಲ್ಲಿ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿ, ಯೂರೋಪಿನ ಆರ್ಥಿಕತೆಗೆ ಪರ್ಯಾಯ ಶಕ್ತಿಯಾಗಿ ನಿಂತ ಸಂಸ್ಥಾನ ಮೈಸೂರು. ಮೈಸೂರಿನ ಉತ್ಪನ್ನಗಳ ಮಾರಾಟಕ್ಕೆ ದೇಶ ವಿದೇಶಗಳಲ್ಲಿ ಮಳಿಗೆಗಳನ್ನು ತೆರೆದು ಬ್ರಿಟನ್ನಿಗೆ ಮುಕ್ತ ಸ್ಪರ್ಧೆಯನ್ನು ನೀಡಿದ್ದು ಟಿಪ್ಪುವಿನ ಮೈಸೂರು ಸಂಸ್ಥಾನ ಮಾತ್ರ. ಟಿಪ್ಪುವಿನ ಮತ್ತೊಂದು ಆದ್ಯತೆಯ ಕ್ಷೇತ್ರ ವಿಜ್ಞಾನ ಮತ್ತು ತಂತ್ರಜ್ಞಾನ. ಪ್ರಸ್ತುತ ಮಹಾಪ್ರಬಂಧದಲ್ಲಿ ಈಗಾಗಲೇ ಚರ್ಚಿಸಿದಂತೆ ೧೮ನೆಯ ಶತಮಾನದ ಉತ್ತರಾರ್ಧದಲ್ಲಿ ರಕ್ಷಣಾ ವಾಸ್ತುವಿನಲ್ಲಾದ ಬದಲಾವಣೆಗಳನ್ನು ಮತ್ತು ಕೋಟೆಗಳ ತಂತ್ರಜ್ಞಾನದ ಉನ್ನತಿಯನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ವಿಶೇಷವಾಗಿ ಟಿಪ್ಪುವಿನ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿನ ಕೋಟೆಗಳನ್ನು ಪೂರಕ ಅಧ್ಯಯನ ಮತ್ತು ಕ್ಷೇತ್ರಕಾರ್ಯದ ಮೂಲಕ ಸರ್ವೇಕ್ಷಣೆ ನಡೆಸಿ, ಅಧ್ಯಯನ ಕೈಗೊಳ್ಳಲಾಗಿದೆ. ಮೊದಲಿಗೆ ಭಾರತದಲ್ಲಿ, ವಿಶೇಷವಾಗಿ ಕರ್ನಾಟಕದಲ್ಲಿ ಇತಿಹಾಸದ ಆರಂಭಕಾಲದಿಂದ ೧೮ನೆಯ ಶತಮಾನದವರೆಗೂ ಕೋಟೆಗಳ ರಚನೆ, ವಿನ್ಯಾಸ ಮತ್ತು ತಂತ್ರಜ್ಞಾನಗಳಲ್ಲಿ ಆಗಿರುವ ಬದಲಾವಣೆಗಳನ್ನು ಗುರುತಿಸಲಾಗಿದೆ.

ಟಿಪ್ಪುವಿನ ಮೈಸೂರು ಸಂಸ್ಥಾನ ಕರ್ನಾಟಕ, ತಮಿಳುನಾಡು, ಕೇರಳ ಮತ್ತು ಆಂಧ್ರಪ್ರದೇಶದ ಕೆಲವು ಭಾಗಗಳನ್ನು ಒಳಗೊಂಡಿತ್ತು. ಇಷ್ಟು ವಿಶಾಲವಾದ ಭೂ ಪ್ರದೇಶದಲ್ಲಿ ಸಾವಿರಾರು ಕೋಟೆಗಳು ಟಿಪ್ಪುವಿನ ಆಳ್ವಿಕೆಗೆ ಒಳಪಟ್ಟಿದ್ದವು. ಇಷ್ಟೆಲ್ಲ ಕೋಟೆಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳುವ ಬದಲು ಮಾದರಿ ಸಮೀಕ್ಷೆಯ (ಸ್ಯಾಂಪಲ್ ಸರ್ವೇ) ಮೂಲಕ ನಾಲ್ಕೂ ರಾಜ್ಯಗಳಲ್ಲಿನ ಆಯ್ದ ಕೋಟೆಗಳನ್ನು ಪ್ರಾತಿನಿಧಿಕವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮುಖ್ಯವಾಗಿ ಕರ್ನಾಟಕದ ಶ್ರೀರಂಗಪಟ್ಟಣ, ಬೆಂಗಳೂರು, ಚಿತ್ರದುರ್ಗ, ಮಂಜರಾಬಾದ್, ಮಧುಗಿರಿ, ಮಿಡಿಗೇಶಿ, ಶಿರಾ, ನಂದಿದುರ್ಗ, ಗುಡಿಬಂಡೆ, ಹುತ್ರಿದುರ್ಗ, ದೇವನಹಳ್ಳಿ, ತಮಿಳುನಾಡಿನ ವೆಲ್ಲೂರು, ಕೇರಳದ ಬೇಕಲ್ ಮತ್ತು ಆಂಧ್ರಪ್ರದೇಶದ ಪೆನುಗೊಂಡೆಗಳಲ್ಲಿ ಕ್ಷೇತ್ರಕಾರ್ಯ ಕೈಗೊಳ್ಳಲಾಗಿತ್ತು. ಈ ಸಂದರ್ಭದಲ್ಲಿ ಟಿಪ್ಪುವು ಹೊಸದಾಗಿ ನಿರ್ಮಿಸಿದ ಕೋಟೆಗಳಿಗಿಂತ ಹಳೆಯ ಕೋಟೆಗಳನ್ನು ಪುನರ್‌ರಚಿಸಿ ಬಳಸಿರುವುದು ಬಹುತೇಕವಾಗಿ ಕಂಡುಬರುತ್ತದೆ.

ಕ್ಷೇತ್ರಕಾರ್ಯ ಹಾಗೂ ಅಧ್ಯಯನದ ಸಂದರ್ಭದಲ್ಲಿ ಕಂಡುಕೊಂಡಿರುವಂತೆ ಹಳೆಯ ಕೋಟೆಗಳಲ್ಲಿ ಚೌಕಾಕಾರವಾಗಿದ್ದ ಕೊತ್ತಲಗಳನ್ನು ಟಿಪ್ಪುವು ವೃತ್ತಾಕಾರವಾಗಿ ಮಾರ್ಪಡಿಸಿರುತ್ತಾನೆ. ಹೀಗೆ ಪರಿವರ್ತಿಸುವುದರಿಂದ ಫಿರಂಗಿಯನ್ನು ೩೬೦ ಕೋನಗಳಲ್ಲಿ ತಿರುಗಿಸಿ, ಧಾಳಿಯನ್ನು ಮಾಡಬಹುದಾಗಿರುತ್ತದೆ. ಟಿಪ್ಪುವಿನ ಕೋಟೆಗಳಲ್ಲಿನ ಮತ್ತೊಂದು

ಮುಖ್ಯವಾದ ಲಕ್ಷಣ ವಿಶಿಷ್ಟವಾದ ಮದ್ದಿನ ಮನೆಗಳು. ಇಟ್ಟಿಗೆ, ಕಲ್ಲು ಮತ್ತು ಗಾರೆಯಿಂದ ಪಟ್ಟಕದ ಮಾದರಿಯಲ್ಲಿ ನಿರ್ಮಿಸಿರುವ ಮದ್ದಿನ ಮನೆಗಳು ಭೂಕಂಪ ನಿರೋಧಕಗಳಾಗಿರುವುದು ವಿಶೇಷ. ಇವುಗಳನ್ನು ಭೂಮಟ್ಟದಿಂದ ಸಾಮಾನ್ಯವಾಗಿ ಐದು ಅಡಿಗಳಿಗೂ ಹೆಚ್ಚು ಕೆಳಗೆ ನಿರ್ಮಿಸಿರುವುದನ್ನು ಕಾಣಬಹುದು. ಏಕೆಂದರೆ, ಮದ್ದುಗುಂಡುಗಳು ಆಕಸ್ಮಿಕವಾಗಿ ಸ್ಫೋಟಿಸಿದರೂ ಹೆಚ್ಚಿನ ಅನಾಹುತಗಳು ಸಂಭವಿಸಬಾರದೆಂಬ ಉದ್ದೇಶ ಇವುಗಳದಾಗಿತ್ತು. ಹಿಂದಿನ ಕೋಟೆಗಳಲ್ಲಿ ಕೆಲವೇ ಅಡಿಗಳಷ್ಟು ಅಗಲವಿದ್ದ ಪಹರೆಕಟ್ಟೆಗಳನ್ನು ಟಿಪ್ಪು ಕಾಲದಲ್ಲಿ ಸುಮಾರು ೪–೮ ಮೀ.ಗಳಷ್ಟು ವಿಶಾಲವಾಗಿ ನಿರ್ಮಿಸಲಾಗಿರುವುದನ್ನು ಗುರುತಿಸಬಹುದು. ಇದರಿಂದ ಸರಾಗವಾಗಿ ಫಿರಂಗಿಗಳನ್ನು ಮತ್ತು ಮದ್ದುಗುಂಡಿನ ಬಂಡಿಗಳನ್ನು ಸಾಗಿಸಲು ಅನುಕೂಲಕರವಾಗಿತ್ತು. ಅಲ್ಲದೆ ಪಹರೆಕಟ್ಟೆಯ ಕೆಳಭಾಗಗಳನ್ನು ಬಂದಿಖಾನೆ, ಕಚೇರಿ, ವಿಶ್ರಾಂತಗೃಹ ಮೊದಲಾದ ಉದ್ದೇಶಗಳಿಗಾಗಿ ಬಳಸಿಕೊಳ್ಳಲಾಗುತ್ತಿತ್ತು. ಹಳೆಯ ಕೋಟೆಗಳಲ್ಲಿ ಮೂರ್‍ನಾಲ್ಕು ಅಡಿಗಳ ಎತ್ತರವಿದ್ದ ಕೈಪಿಡಿಗಳನ್ನು ಟಿಪ್ಪುವಿನ ಕಾಲದಲ್ಲಿ ಐದಾರು ಅಡಿಗಳವರೆಗೆ ಎತ್ತರಿಸಲಾಗುತ್ತದೆ. ಇದರಿಂದ ಪಹರೆಕಟ್ಟೆಯಲ್ಲಿ ಓಡಾಡುವ ಸೈನಿಕರಿಗೆ ಹೊರಗಿನಿಂದ ಹಾರಿಸುವ ಮದ್ದುಗುಂಡುಗಳು ತಾಗದಿರಲಿ ಎಂಬುದಾಗಿತ್ತು. ಅಲ್ಲದೆ, ಈ ಗೋಡೆಗಳನ್ನು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಸಲಾಗಿದೆ. ಸುಮಾರು ೫ ಮೀ. ಗಳಿಗೂ ಹೆಚ್ಚು ಗಾತ್ರ ಇರುವ ಈ ಗೋಡೆಗಳನ್ನು ಹೊರಭಾಗಕ್ಕೆ ಇಳಿಜಾರಾಗಿ ನಿರ್ಮಿಸುವ ಮೂಲಕ ಕೈಪಿಡಿಗೆ ತಾಗಿದ ಗುಂಡುಗಳು ಹೊರಭಾಗಕ್ಕೆ ಉರುಳಿ ಬೀಳುವಂತೆ ವ್ಯವಸ್ಥೆ ಕಲ್ಪಿಸಲಾಗಿದೆ. ಈ ಕೈಪಿಡಿಗಳಲ್ಲಿ ಬಂದೂಕಿನ ಕಿಂಡಿಗಳನ್ನು ಬಹುಕೋನಗಳಲ್ಲಿ ಮಾಡಲಾಗಿದೆ. ಇದರ ಮೂಲಕ ಹೊರಗಿನ ಆಕ್ರಮಣಕಾರರ ಮೇಲೆ ಸುಲಭವಾಗಿ ಧಾಳಿ ನಡೆಸಬಹುದು. ಈ ಗೋಡೆಗಳಲ್ಲಿ ಫಿರಂಗಿ ಕಿಂಡಿಗಳು ಸಹ ಇರುವುದನ್ನು ಕಾಣಬಹುದು. ಟಿಪ್ಪು ಕೋಟೆಗಳಲ್ಲಿನ ಮತ್ತೊಂದು ಪ್ರಮುಖ ಲಕ್ಷಣ ರ‍್ಯಾಂಪ್‌ಗಳು. ನೆಲಮಟ್ಟದಿಂದ ಪಹರೆಕಟ್ಟೆಗೆ ಏರಲು ಮತ್ತು ಇಳಿಯಲು ಮೆಟ್ಟಿಲುಗಳ ಬದಲಿಗೆ ರ‍್ಯಾಂಪ್‌ಗಳನ್ನು ಬಳಸಲಾಗಿದೆ. ಇವುಗಳನ್ನು ಭಾರವಾದ ಫಿರಂಗಿಯಂತಹ ವಸ್ತುಗಳನ್ನು ಕೋಟೆಯ ಮೇಲಕ್ಕೆ ಸಾಗಿಸಲು ನಿರ್ಮಿಸಲಾಗಿದೆ. ಟಿಪ್ಪುವಿನ ಕೊಡುಗೆಗಳಲ್ಲಿ ರಾಕೆಟ್ ಬಹುಮುಖ್ಯವಾದುದು. ಟಿಪ್ಪುವಿನ ರಾಕೆಟ್‌ಗಳನ್ನು ಕುರಿತು ಅಬ್ದುಲ್ ಕಲಾಂ, ರೊದ್ದ ನರಸಿಂಹ ಅವರಂತಹ ಶ್ರೇಷ್ಠ ವಿಜ್ಞಾನಿಗಳು ಅತ್ಯಂತ ಆಸಕ್ತಿಯಿಂದ ಅಧ್ಯಯನಗಳನ್ನು ನಡೆಸಿದ್ದಾರೆ. ಹೈದರಾಲಿ ಮೊಟ್ಟಮೊದಲ ಬಾರಿಗೆ ಯುದ್ಧದಲ್ಲಿ ರಾಕೆಟ್ ಬಳಕೆ ಮಾಡಿದ ಭಾರತೀಯ. ಟಿಪ್ಪುವು ಈ ರಾಕೆಟ್‌ಗಳಲ್ಲಿ ಗಮನಾರ್ಹವಾದ ಬದಲಾವಣೆಗಳನ್ನು ಮಾಡುತ್ತಾನೆ. ಮುಖ್ಯವಾಗಿ ಕಬ್ಬಿಣದ ಕೊಳವೆಗಳನ್ನು ಬಳಸಿ ಹೆಚ್ಚು ದೂರ ಕ್ರಮಿಸುವ ರೀತಿಯಲ್ಲಿ ರೂಪಿಸುತ್ತಾನೆ. ರೊದ್ದಂ ಅವರ ಪ್ರಕಾರ

ಟಿಪ್ಪುವಿನ ರಾಕೆಟ್‌ಗಳು ೨.೪ ಕಿ.ಮೀ. ದೂರ ಕ್ರಮಿಸಬಲ್ಲವಾಗಿದ್ದರೆ, ಕೆಲವು ಇತಿಹಾಸಕಾರರ ಪ್ರಕಾರ ೧.೪ ಕಿ.ಮೀ. ದೂರ ಕ್ರಮಿಸುತ್ತಿದ್ದವೆಂದು ಹೇಳಲಾಗಿದೆ. ಎಷ್ಟೇ ದೂರ ಕ್ರಮಿಸಿದರೂ ಸಹ ಟಿಪ್ಪುವಿನ ರಾಕೆಟ್‌ಗಳನ್ನು ಇಂಗ್ಲೆಂಡಿನ ತಂತ್ರಜ್ಞ ಕಾಂಗ್ರೀವ್ ನಕಲು ಮಾಡಿ ಪ್ರಯೋಗಿಸಿದರೂ ಕೂಡ ಟಿಪ್ಪುವಿನ ರಾಕೆಟ್‌ನ ಅರ್ಧದಷ್ಟು ದೂರವನ್ನು ಸಹ ಕ್ರಮಿಸಲಿಲ್ಲ ಎಂಬುದು ವಿಶೇಷ. ಶ್ರೀರಂಗಪಟ್ಟಣದ ಕೋಟೆಯಲ್ಲಿ ರಾಕೆಟ್ ಉಡಾವಣೆಗಾಗಿ ಅಂಕಣವನ್ನು ಕೂಡ ನಿರ್ಮಿಸಿರುವುದನ್ನು ಇಂದಿಗೂ ನಾವು ಕಾಣಬಹುದು. ಶಸ್ತ್ರಾಸ್ತ್ರಗಳ ಉತ್ಪಾದನೆಗಾಗಿ ಹೈದರ್ ಮತ್ತು ಟಿಪ್ಪು ಸಂಸ್ಥಾನದ ಬೆಂಗಳೂರು, ಬಿದನೂರು, ಚಿತ್ರದುರ್ಗ ಮತ್ತು ಶ್ರೀರಂಗಪಟ್ಟಣಗಳಲ್ಲಿ ತಾರಾಮಂಡಲಗಳನ್ನು ನಿರ್ಮಿಸಿದ್ದರೆಂದು ತಿಳಿದುಬರುತ್ತದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಚಿತ್ರದುರ್ಗದಲ್ಲಿರುವ ತಾರಾಮಂಡಲವನ್ನು ಅವಲೋಕಿಸಲಾಗಿದೆ. ಟಿಪ್ಪುವು ಫ್ರೆಂಚರಿಂದ ಫಿರಂಗಿ ತಂತ್ರಜ್ಞಾನವನ್ನು ಎರವಲು ಪಡೆದು ಅಭಿವೃದ್ಧಿಪಡಿಸಿದನು. ಎಷ್ಟರ ಮಟ್ಟಿಗೆ ಈ ಫಿರಂಗಿಗಳು ದಕ್ಷವಾಗಿದ್ದವೆಂದರೆ ಇವುಗಳನ್ನು ಬ್ರಿಟಿಷರು ಒಂದನೆಯ ಮಹಾಯುದ್ಧದ ಸಂದರ್ಭದಲ್ಲಿ ಬಳಸಿದರೆಂದು ಹೇಳಲಾಗುತ್ತದೆ. ಮೈಸೂರು ಸಂಸ್ಥಾನದಲ್ಲಿ ಗುಣಮಟ್ಟದ ಬೀಡುಕಬ್ಬಿಣವನ್ನು ಮಾಗಡಿ, ಮಧುಗಿರಿ ಮುಂತಾದ ಕಡೆಗಳಲ್ಲಿ ಉತ್ಪಾದಿಸಲಾಗುತ್ತಿತ್ತು. ಈ ಕಬ್ಬಿಣದಿಂದ ಉತ್ಕೃಷ್ಟವಾದ ಫಿರಂಗಿಗಳನ್ನು ಬೆಂಗಳೂರು ಮತ್ತು ಶ್ರೀರಂಗಪಟ್ಟಣದ ತಾರಾಮಂಡಲಗಳಲ್ಲಿ ನಿರ್ಮಿಸಲಾಗುತ್ತಿತ್ತೆಂದು ಹೇಳಲಾಗುತ್ತದೆ. ಟಿಪ್ಪುವು ಯುದ್ಧ ಖೈದಿಗಳನ್ನು ಬಂಧಿಸುವ ಸಲುವಾಗಿ ಸಂಸ್ಥಾನದ ಪ್ರಮುಖ ಕೋಟೆಗಳಲ್ಲಿ ಬಂದಿಖಾನೆಗಳನ್ನು ನಿರ್ಮಿಸಿದ್ದನು. ಮುಖ್ಯವಾಗಿ ಶ್ರೀರಂಗಪಟ್ಟಣದಲ್ಲಿನ ಬೈಲಿ ಕಾರಾಗೃಹ, ದೋಂಡಿಯವಾಘ್ ಕಾರಾಗೃಹಗಳನ್ನು ಹೆಸರಿಸಬಹುದು. ಬೆಂಗಳೂರಿನ ಕೋಟೆಯೊಳಗಿನ ಕಾರಾಗೃಹ ಕತ್ತಲಕೋಣೆಯಾಗಿದೆ. ಇದೇ ರೀತಿ ವೆಲ್ಲೂರು, ಮಡಿಕೇರಿ, ಚಿತ್ರದುರ್ಗ ಮೊದಲಾದ ಕಡೆಗಳಲ್ಲಿ ಇವುಗಳನ್ನು ಗುರುತಿಸಲಾಗಿದೆ. ಕೋಟೆಗಳ ಒಳಗೆ ಅರಮನೆಗಳನ್ನು ವಿಶೇಷವಾಗಿ ಕಾಣಬಹುದು. ಶ್ರೀರಂಗಪಟ್ಟಣದಲ್ಲಿದ್ದ ಲಾಲ್ ಮಹಲನ್ನು ಬ್ರಿಟಿಷರೇ ೧೮೦೭ರ ಸುಮಾರಿಗೆ ನಾಶಪಡಿಸುತ್ತಾರೆ. ಆದರೆ ದರಿಯಾದೌಲತ್ ಅರಮನೆಯನ್ನು ಮಾತ್ರ ಇಂದು ಕಾಣಬಹುದು. ಅದೇ ರೀತಿ ಬೆಂಗಳೂರು, ನಂದಿದುರ್ಗ, ವೆಲ್ಲೂರು, ಪೆನುಗೊಂಡೆ ಮೊದಲಾದ ಕಡೆಗಳಲ್ಲಿ ಅರಮನೆಯನ್ನು ಗುರುತಿಸಬಹುದು. ಟಿಪ್ಪುವಿನ ಕೆಲವು ಕೋಟೆಗಳಲ್ಲಿ ಕಂಡು ಬಂದಿರುವ ವಿಶೇಷ ಲಕ್ಷಣಗಳಲ್ಲಿ ಒಂದು ಶೌಚಾಲಯಗಳು. ಇವುಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಂಜರಾಬಾದ್, ನಂದಿದುರ್ಗ, ಶ್ರೀರಂಗಪಟ್ಟಣ, ಬೇಕಲ್ ಮೊದಲಾದ ಕಡೆಗಳಲ್ಲಿ ಗುರುತಿಸಲಾಗಿದೆ. ಟಿಪ್ಪು ಕೋಟೆಗಳನ್ನು ಮೇಲ್ನೋಟದಲ್ಲಿಯೆ ನಿರ್ಧರಿಸಬಹುದಾದ ಒಂದು ಲಕ್ಷಣ ಎಂದರೆ ಗಾರೆಗಚ್ಚುಗಳ

ಬಳಕೆ. ಟಿಪ್ಪುವು ಕಲ್ಲು ಮತ್ತು ಗಾರೆಗಚ್ಚುಗಳನ್ನು ಬಳಸಿ ಬಲಿಷ್ಠವಾದ ಕೋಟೆಗಳನ್ನು ನಿರ್ಮಿಸುತ್ತಿದ್ದನೆಂಬುದನ್ನು ಕಂಡುಕೊಳ್ಳಲಾಗಿದೆ.

ಇವಲ್ಲದೆ ಒಳಚರಂಡಿ ವ್ಯವಸ್ಥೆ, ಹೆಬ್ಬಾಗಿಲುಗಳು, ನೀರು ಸರಬರಾಜು ವ್ಯವಸ್ಥೆ, ಮಳೆಕೊಯ್ಲು ವ್ಯವಸ್ಥೆ ಮೊದಲಾದವುಗಳನ್ನು ಟಿಪ್ಪುವಿನ ಕೋಟೆಗಳಲ್ಲಿ ಗುರುತಿಸಬಹುದು. ಅಲ್ಲದೆ, ಶೀಘ್ರಗತಿಯ ಆಕ್ರಮಣಕ್ಕೆ ಫಿರಂಗಿ ಮತ್ತು ಶಸ್ತ್ರಾಸ್ತ್ರಗಳನ್ನು ಸಾಗಿಸಲು ಬೇಕಾದ ಅಮೃತ್‌ಮಹಲ್ ಹಸುಗಳ ತಳಿಯ ಸಂವರ್ಧನೆಯನ್ನು ಟಿಪ್ಪು ಮಾಡಿದನೆಂಬುದನ್ನು ಅಧ್ಯಯನದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ.

***

ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಮಹಾನ್ ಯೋಧರು. ಆದರೆ, ಟಿಪ್ಪುವು ಹೈದರಾಲಿಯಂತೆ ಯಶಸ್ವಿ ಯುದ್ಧಚತುರನಲ್ಲ ಎಂಬುದು ಐತಿಹಾಸಿಕ ಘಟನೆಗಳು ಮತ್ತು ಚಾರಿತ್ರಿಕ ಮಹತ್ವದ ಅಂಶಗಳಿಂದ ಸ್ಪಷ್ಟವಾಗುತ್ತದೆ. ಹೈದರಾಲಿ ಅನಕ್ಷರಸ್ಥನಾದರೂ ರಣತಂತ್ರದ ಎಲ್ಲಾ ಪಟ್ಟುಗಳನ್ನು ಕರಗತ ಮಾಡಿಕೊಂಡಿದ್ದನು. ಟಿಪ್ಪುವು ಲೋಕಜ್ಞಾನ ಬಲ್ಲವನಾದರೂ ತಂದೆಯಂತೆ ಸ್ವಯಂಪ್ರತಿಭೆಯಲ್ಲ; ಬಾಹ್ಯಪ್ರತಿಭೆ. ಹೈದರನು ಅನೇಕ ಕಷ್ಟದ ಸಂದರ್ಭಗಳನ್ನು ಎದುರಿಸಿ ಮೇಲೆ ಬಂದವನು. ಯಾವುದೇ ಪ್ರತಿಕೂಲ ಸನ್ನಿವೇಶದಲ್ಲಿಯೂ ವಿಚಲಿತನಾಗದೆ, ಸನ್ನಿವೇಶವನ್ನು ತನ್ನಪರವಾಗಿ ಪರಿವರ್ತಿಸಿಕೊಳ್ಳಬಲ್ಲ ಜಾಣ್ಮೆ, ತಾಳ್ಮೆ ಮತ್ತು ಚಾಕಚಕ್ಯತೆ ಅವನಿಗಿತ್ತು. ಖಂಡೇರಾವನು ಮರಾಠರೊಡನೆ ಸೇರಿ ನಡೆಸಿದ ಮಸಲತ್ತಿನಲ್ಲಿ ಹೈದರಾಲಿಯ ಅಂತ್ಯವೇ ಸಂಭವಿಸಬೇಕಿತ್ತು. ಅಂತಹ ದುರ್ದಿನಗಳಲ್ಲಿಯೂ ಪರಿಸ್ಥಿತಿಯ ಲಾಭಪಡೆದು ಚರಿತ್ರೆಯ ಪುಟದಲ್ಲಿ ಮೆರೆದನು. ಒಂದೂವರೆ ವರ್ಷಗಳ ಕಾಲ ಚಿತ್ರದುರ್ಗವನ್ನು ಮುತ್ತಿದ ಸಂದರ್ಭದಲ್ಲಿ ಕೋಟೆಯ ಒಳಗಿನ ಮುಸಲ್ಮಾನರನ್ನು ಮಾತ್ರವಲ್ಲ; ದೊಡ್ಡಮದಕರಿ ನಾಯಕನನ್ನು ಕೂಡ ತನ್ನ ಕಡೆಗೆ ಸೆಳೆದುಕೊಳ್ಳುವಲ್ಲಿ ಯಶಸ್ವಿಯಾದನು. ಶತ್ರು ಪಾಳೆಯದವರನ್ನು ಕೂಡ ಸಮ್ಮೋಹನಗೊಳಿಸಿ ಮಾಹಿತಿಯನ್ನು ತಿಳಿಯುವ ಕೌಶಲ್ಯ ಹೈದರಾಲಿಯಲ್ಲಿತ್ತು. ಇದನ್ನು ಗುತ್ತಿಯ ಆಕ್ರಮಣದ ಸಂದರ್ಭದಲ್ಲಿ ಕೂಡ ಗಮನಿಸಲಾಗಿದೆ.

ಎರಡನೇ ಆಂಗ್ಲೋ-ಮೈಸೂರು ಯುದ್ಧಗಳಲ್ಲಿ ಕರ್ನಲ್ ಬೈಲಿ ಮತ್ತು ಐರ್‌ಕೂಟ್‌ನಂತಹ ಚತುರ ಕಂಪನಿ ಸೇನಾನಿಗಳಿಗೂ ಮಣ್ಣುಮುಕ್ಕಿಸುವಲ್ಲಿ ಯಶಸ್ವಿಯಾದನು. ಮೊಟ್ಟಮೊದಲ ಬಾರಿಗೆ ಯುದ್ಧದ ಸಂದರ್ಭದಲ್ಲಿ ರಾಕೆಟ್ ಉಡಾಯಿಸಿ ಶತ್ರುಗಳನ್ನು ಸದೆಬಡಿದ ಭಾರತೀಯ ಎಂಬ ಕೀರ್ತಿಗೆ ಹೈದರಾಲಿ ಪಾತ್ರನಾಗಿದ್ದಾನೆ. ಹೈದರಾಲಿಯು ತನ್ನ ಸೈನಿಕರನ್ನು ವಿಶೇಷವಾಗಿ ಕಾಳಜಿ ಮಾಡುವ ಮೂಲಕ ಅವರ ವಿಶ್ವಾಸವನ್ನು ಗಳಿಸುತ್ತಿದ್ದನು ಎಂಬುದನ್ನು ಕಂಡುಕೊಳ್ಳಲಾಗಿದೆ.

ಆದರೆ, ಟಿಪ್ಪುವಿನ ವ್ಯಕ್ತಿತ್ವ ಹೈದರಾಲಿಯ ವ್ಯಕ್ತಿತ್ವಕ್ಕಿಂತ ಭಿನ್ನವಾದುದಾಗಿದೆ. ಟಿಪ್ಪು ಯುದ್ಧತಂತ್ರ ರೂಪಿಸುವಲ್ಲಿ ಕೆಲವು ಬಾರಿ ವೈಫಲ್ಯ ಹೊಂದಿರುವುದುಂಟು. ಮೂರನೆಯ ಆಂಗ್ಲೋ–ಮೈಸೂರು ಯುದ್ಧದ ಸಂದರ್ಭದಲ್ಲಿ ಶತ್ರು ಸೈನ್ಯವು ನಿರಾತಂಕವಾಗಿ ಶ್ರೀರಂಗಪಟ್ಟಣದತ್ತ ಸಾಗಿಬರುವುದನ್ನು ಯಾವುದೇ ರೀತಿಯಲ್ಲಿ ನಿರ್ಬಂಧಿಸುವ ಪ್ರಯತ್ನವನ್ನು ಟಿಪ್ಪುವು ಮಾಡಲೇ ಇಲ್ಲ. ಬದಲಿಗೆ, ಕೋಟೆಯನ್ನು ಭದ್ರಪಡಿಸುವ ಕಡೆಗೆ ಗಮನವಿತ್ತಿದ್ದು ಅವನ ತಪ್ಪು ನಿರ್ಧಾರವಾಗಿತ್ತು. ಇಂಥದೇ ಸಂದರ್ಭ ಒದಗಿ ಬಂದಿದ್ದಾಗ ಹೈದರಾಲಿಯು ಮರಾಠರ ಸೈನ್ಯವನ್ನು ಮಾರ್ಗಮಧ್ಯದಲ್ಲಿಯೇ ಕಾಡಿ ಹಿಮ್ಮೆಟ್ಟಿಸಿದನು. ಯಾವುದೇ ಶತ್ರುಸೈನ್ಯ ರಾಜಧಾನಿಯವರೆಗೂ ಬರುವುದಕ್ಕೆ ಬಿಟ್ಟುಕೊಡದೆ ತಡೆಹಾಕುವ ನಿಟ್ಟಿನಲ್ಲಿ ಎಲ್ಲಾ ಬಗೆಯ ಯುದ್ಧತಂತ್ರಗಳನ್ನು ಹೈದರ್ ಪ್ರಯೋಗಿಸುತ್ತಿದ್ದನು. ಆದರೆ, ಟಿಪ್ಪು ಆ ರೀತಿಯ ಚತುರತೆಯನ್ನು ಎಂದೂ ಮೈಗೂಡಿಸಿಕೊಳ್ಳಲಿಲ್ಲ ಮತ್ತು ಪ್ರದರ್ಶಿಸಲಿಲ್ಲ.

೧೭೯೨ರಲ್ಲಿ ಬೆಂಗಳೂರನ್ನು ಮುತ್ತುವ ಸನ್ನಾಹದಲ್ಲಿ ಕಾರನ್‌ವಾಲೀಸ್ ಇದ್ದರೂ, ಅವನನ್ನು ಎದುರುಗೊಳ್ಳದೆ ಟಿಪ್ಪುವು ಕೆಂಗೇರಿಯ ಬಳಿಯ ಬೀಡುಬಿಟ್ಟಿದ್ದು ಅವನ ತಪ್ಪು ನಿರ್ಧಾರವಾಗಿತ್ತು. ಇದು ಟಿಪ್ಪುವಿನ ಅಪ್ರಬುದ್ಧ ಯುದ್ಧತಂತ್ರಕ್ಕೆ ಸಾಕ್ಷಿಯಾಗಿದೆ. ಹೈದರನು ಎರಡು ಆಂಗ್ಲೋ – ಮೈಸೂರು ಯುದ್ಧಗಳಲ್ಲಿ ಜಯಿಸಿದನು. ಆದರೆ, ಟಿಪ್ಪುವು ತನ್ನ ಕಾಲದಲ್ಲಿ ನಡೆದ ಎರಡೂ ಆಂಗ್ಲೋ – ಮೈಸೂರು ಯುದ್ಧಗಳಲ್ಲಿ ಸೋತು ಸತ್ತನು. ಇದು ಹೈದರ್ ಮತ್ತು ಟಿಪ್ಪು ನಡುವಿನ ಯುದ್ಧ ಸಾಮರ್ಥ್ಯವನ್ನು ಬಿಂಬಿಸುತ್ತದೆ.

ದಕ್ಷಿಣ ಭಾರತದ ಸಂದರ್ಭದಲ್ಲಿ ತಾಂತ್ರಿಕ ಮತ್ತು ಭದ್ರತೆಯ ದೃಷ್ಟಿಯಿಂದ ಟಿಪ್ಪು ಸುಲ್ತಾನನ ಕಾಲದ ಕೋಟೆಗಳು ಉತ್ಕೃಷ್ಟವಾದ ಗುಣಮಟ್ಟವನ್ನು ಹೊಂದಿದ್ದವು. ಅದಕ್ಕಾಗಿ ಟಿಪ್ಪುವು ಫ್ರೆಂಚ್ ತಂತ್ರಜ್ಞರ ನೆರವನ್ನು ಪಡೆದುಕೊಂಡಿದ್ದನು. ಅಲ್ಲದೆ, ಕೋಟೆಗಳನ್ನು ರಕ್ಷಣೆ ಮತ್ತು ಆಕ್ರಮಣದ ದೃಷ್ಟಿಯಿಂದ ಪ್ರಯೋಗಶೀಲತೆಗೆ ಒಳಪಡಿಸುತ್ತಲೂ ಇದ್ದಂತೆ ಕಂಡುಬರುತ್ತದೆ. ಪ್ರತಿ ಕೋಟೆಗಳನ್ನು ಕೈವಶ ಮಾಡಿಕೊಂಡ ನಂತರ ಅವುಗಳನ್ನು ದುರಸ್ತಿ ಮಾಡಿಸಲು ಮತ್ತು ಪುನರ್‌ರಚಿಸಲು ಅಧಿಕಾರಿಗಳನ್ನು ನೇಮಿಸುತ್ತಿದ್ದ ನಿದರ್ಶನಗಳನ್ನು ಹೈದರ್ ಮತ್ತು ಟಿಪ್ಪು ಕಾಲಗಳಲ್ಲಿ ಕಾಣಬಹುದಾಗಿದೆ. ಇದು ಅವರು ಕೋಟೆಗೆ ಕೊಟ್ಟ ಮಹತ್ವವನ್ನು ತೋರ್ಪಡಿಸುತ್ತದೆ.

ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಇಬ್ಬರ ವ್ಯಕ್ತಿತ್ವಗಳು ಮೇಲ್ನೋಟಕ್ಕೆ ಒಂದೇ ಎಂಬಂತೆ ಕಂಡರೂ, ಹೋಲಿಕೆಗಳಿಗಿಂತ ವ್ಯತ್ಯಾಸಗಳಿವೆ. ಹೈದರಾಲಿ ಅನಕ್ಷರಸ್ಥ. ಆದರೆ, ಸೇನೆಯನ್ನು ಸಂಘಟಿಸುವಲ್ಲಿ ಮತ್ತು ಯುದ್ಧತಂತ್ರ ಹೆಣೆಯುವಲ್ಲಿ

ನಿಪುಣನಾಗಿದ್ದನು. ಟಿಪ್ಪುವು ವಿದ್ಯಾವಂತ, ಲೋಕಜ್ಞಾನ ತಿಳಿದವನು. ರಕ್ಷಣೆಯ ಸಾಧನಗಳಾದ ಕೋಟೆಗಳನ್ನು ತಾಂತ್ರಿಕವಾಗಿ ಅಭಿವೃದ್ಧಿ ಪಡಿಸುವ ನಿಟ್ಟಿನಲ್ಲಿ ಆಲೋಚಿಸುತ್ತಿದ್ದನು. ಹೈದರಾಲಿಯು ಸದಾ ಸೇನೆಯೊಂದಿಗೆ ಯುದ್ಧ ಮತ್ತು ಆಕ್ರಮಣಗಳಲ್ಲಿಯೇ ತನ್ನ ಬದುಕಿನ ಬಹುಕಾಲವನ್ನು ಕಳೆದನು. ಟಿಪ್ಪು ರಕ್ಷಣೆಯ ಸಾಧನಗಳಾದ ಕೋಟೆಗಳನ್ನು ಪುನರ್‌ರಚಿಸಿ ಬಲಗೊಳಿಸಿದನು.

ಕಳೆದ ಎರಡು ದಶಕಗಳಿಂದ ಚರಿತ್ರೆ ಅಧ್ಯಯನವನ್ನು ಮೌಖಿಕ ಪರಂಪರೆಯಿಂದ ದೊರೆತ ಆಕರಗಳ ಮೂಲಕ ನೋಡುವ ಪ್ರಯತ್ನವಾಗುತ್ತಿದೆ. ಇತ್ತೀಚಿನ ವರ್ಷಗಳಲ್ಲಿ ಚರಿತ್ರೆಯ ಸಂಶೋಧಕರು ಮೌಖಿಕ ಪರಂಪರೆಯನ್ನು ಚರಿತ್ರೆಯ ಭಾಗವಾಗಿ ಅಧ್ಯಯನವನ್ನು ಕೈಗೆತ್ತಿಕೊಂಡಿದ್ದಾರೆ. ದೇಸಿಯವಾಗಿ ಸಿಡಿಮದ್ದನ್ನು ತಯಾರಿಸಿಕೊಳ್ಳುವ ಕಲೆ ಇಂದಿಗೂ ಪರಿಚಯವಿದೆ. ಇದ್ದಿಲು, ಗಂಧಕ, ಪೆಟ್ಲುಪ್ಪುಗಳನ್ನು ಸೂಕ್ತ ಪ್ರಮಾಣದಲ್ಲಿ ಸೇರಿಸಿ ಅರೆದು ಕರಿಮದ್ದನ್ನು ತಯಾರಿಸುವ ಬಗೆಗೆ ತಿಳುವಳಿಕೆ ಮತ್ತು ಗಾರೆಯನ್ನು ತಯಾರಿಸಲು ಸುಣ್ಣದ ಕಲ್ಲಿನ ಜೊತೆಗೆ ಸೂಕ್ತ ಪ್ರಮಾಣದಲ್ಲಿ ಬೆಲ್ಲ ಮತ್ತು ಮೊಟ್ಟೆಯನ್ನು ಸೇರಿಸಿ ಅರೆದು ತಯಾರಿಸುವ ಬಗೆಗಿ ಜ್ಞಾನವನ್ನು ಕೆಲವು ಜನರು ಹೊಂದಿರುವುದು ಕ್ಷೇತ್ರಕಾರ್ಯದ ವೇಳೆ ಕಂಡುಕೊಳ್ಳಲಾಗಿದೆ. ರಾಕೆಟ್‌ಗಳನ್ನು ತಯಾರಿಸುವ ಮತ್ತು ಅವುಗಳನ್ನು ಗಮ್ಯಸ್ಥಾನ ಸೇರಿಸಲು ಎಷ್ಟು ಎತ್ತರದಲ್ಲಿ, ಎಷ್ಟು ಕೋನದಲ್ಲಿ ಹಾರಿಸಬೇಕು ಎಂಬುದನ್ನು ಟಿಪ್ಪುವಿನ ಸೈನಿಕರು ಬಲ್ಲವರಾಗಿದ್ದರೆಂದು ಸಮಕಾಲೀನ ದಾಖಲೆಗಳು ಮಾಹಿತಿ ನೀಡುತ್ತವೆ. ಟಿಪ್ಪುವಿನ ಬಗೆಗೆ ಎಷ್ಟೇ ಶಿಷ್ಟ ಆಕರಗಳು ಇದ್ದರೂ ಕೂಡ ಮೌಖಿಕ ಆಕರಗಳು ಅಪರೂಪದ ಸಂಗತಿಗಳನ್ನು ತಿಳಿಸಿಕೊಡುತ್ತವೆ.

ಟಿಪ್ಪು ಎಷ್ಟೇ ಆಧುನಿಕತೆಯನ್ನು ಅಳವಡಿಸಿಕೊಂಡಿದ್ದರೂ ಕೂಡ ಆತನಿಗೆ ಜ್ಯೋತಿಷ್ಯದ ಬಗೆಗೆ ಅಪಾರವಾದ ನಂಬಿಕೆ ಇತ್ತು ಎಂಬುದನ್ನು ಶಿಷ್ಟ ಸಾಹಿತ್ಯಗಳು ತಿಳಿಸಿಕೊಡುತ್ತವೆ. ಈ ಮಾತನ್ನು ಮೌಖಿಕ ಸಾಹಿತ್ಯಗಳು ಕೂಡ ದೃಢಪಡಿಸುವುದನ್ನು ಕಾಣಬಹುದು. ಶ್ರೀರಂಗಪಟ್ಟಣದ ಬಿದ್ದಗೋಡೆಯ ಹಿನ್ನೆಲೆಯಲ್ಲಿರುವ ಕಥನ ಇದನ್ನು ಖಾತ್ರಿ ಪಡಿಸುತ್ತದೆ. ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಕೇವಲ ಟಿಪ್ಪು ಮತ್ತು ಹೈದರಾಲಿಗೆ ಸಂಬಂಧಿಸಿದ ಮೌಖಿಕ ಕಥನಗಳಿಗೆ ಸೀಮಿತಗೊಳ್ಳದೆ, ಕೋಟೆಗಳ ಬಗೆಗೆ ಇರುವ ಮೌಖಿಕ ಕಥನಗಳನ್ನು ಕೂಡ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆ ಸಂದರ್ಭದಲ್ಲಿ ಕೆಲವು ವಿಶಿಷ್ಟ ಸಂಗತಿಗಳನ್ನು ಗುರುತಿಸಲಾಗಿದೆ. ಅವುಗಳಲ್ಲಿ ಶಿರಾದ ಕೋಟೆಯನ್ನು ಅಕ್ಕಿ ಮತ್ತು ಗೋಧಿ ಹಿಟ್ಟನ್ನು ಬಳಸಿ ಗಿಲಾವ್ ಮಾಡಲಾಗಿದೆ ಎಂಬ ಅಪರೂಪದ ವಿಷಯವನ್ನು ಮೌಖಿಕ ಸಾಹಿತ್ಯದಿಂದ ತಿಳಿಯಲಾಗಿದೆ. ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಕಂಡುಕೊಂಡ ಮತ್ತೊಂದ ಪ್ರಮುಖ ಸಂಗತಿ ಎಂದರೆ ಕೋಟೆಗಳ ವಿಚಾರದಲ್ಲಿ

ಹೆಣ್ಣನ್ನು ಬಲಿಪಶುವಂತೆ ಚಿತ್ರಿಸಲಾಗಿರುವುದು. ಕೋಟೆ ದ್ವಾರಗಳು, ಕೊತ್ತಳ, ಬತೇರಿಗಳು ನಿಲ್ಲದೆ ಹೋದಾಗ ಗರ್ಭಿಣಿ ಸ್ತ್ರೀಯರನ್ನು ಬಲಿಕೊಟ್ಟಿರುವ ನಿದರ್ಶನಗಳನ್ನು ಜಾನಪದ ಕಥೆ, ಲಾವಣಿ ಮತ್ತು ಐತಿಹ್ಯಗಳು ತಿಳಿಸುತ್ತವೆ. ಅದೇ ರೀತಿ ಕೋಟೆಯನ್ನು ನಿರ್ಮಿಸುವಾಗ ಹೆಣ್ಣಿನ ಆಗಮನದಿಂದ ನಿರ್ಮಾಣಕಾರರಿಗೆ ಚಂಚಲವಾಗಿ ಕೋಟೆಗಳು ಬಿದ್ದು ಹೋಯಿತು. ಮೊದಲಾದ ಈ ಮಾದರಿಗಳನ್ನು ಗಮನಿಸಿದರೆ ಹೆಣ್ಣು ಶೌರ್ಯಕ್ಕೆ ತಕ್ಕನಾದವಳಲ್ಲ ಕೇವಲ ಅವಳು ತ್ಯಾಗಕ್ಕೆ ಅಷ್ಟೇ ಸೀಮಿತ ಎಂಬ ಭಾವನೆ ಅಂದಿನ ಸಮಾಜದಲ್ಲಿ ಸ್ಥಿರಗೊಂಡಿರುವಂತೆ ಕಾಣುತ್ತದೆ. ಈ ರೀತಿಯ ಸಂಪ್ರದಾಯವನ್ನು, ಸಾಂಪ್ರದಾಯಕ ಸಮಾಜದಲ್ಲಿದ್ದ ಕೋಟೆಯೊಳಗಿನ ಲಿಂಗಾಧಾರಿತ ತಾರತಮ್ಯವನ್ನು ಮೊಟ್ಟಮೊದಲ ಬಾರಿಗೆ ಮುರಿದವಳು ಓಬವ್ವ. ಓಬವ್ವ ಚಿತ್ರದುರ್ಗದ ಕೋಟೆಯೊಳಗೆ ನುಸುಳುತ್ತಿದ್ದ ಹೈದರಾಲಿಯ ಸೈನಿಕರನ್ನು ಸದೆ ಬಡಿದಿದ್ದಳು. ಅವಳನ್ನು ಪ್ರಶಂಸಿಸಿ ಹೇಳುವ ಕಥೆಗಳು ಜಾನಪದ ಮತ್ತು ಶಿಷ್ಟ ಸಾಹಿತ್ಯಗಳಲ್ಲಿಯೂ ಕಾಣಬಹುದು. ಪರಾಕ್ರಮದ ಸಂಗತಿಗಳು ಕೇವಲ ಪುರುಷನ ಸ್ವತ್ತು ಎಂಬ ಮನೋಭಾವವನ್ನು ಓಬವ್ವ ಮೊದಲ ಬಾರಿಗೆ ಮುರಿದಳು. ಅವಳು ಹೈದರಾಲಿಯ ಸೈನ್ಯವನ್ನಷ್ಟೇ ಅಳಿಯಲಿಲ್ಲ, ಕೋಟೆಯ ಹಿನ್ನೆಲೆಯಲ್ಲಿದ್ದ ಪುರುಷನ ಸಾಂಪ್ರದಾಯಕ ಮನೋಭಾವವನ್ನು ಕೂಡ ಅಳಿದಳು ಎಂದು ಹೇಳುವುದು ಅರ್ಥ ಪೂರ್ಣವಾಗುತ್ತದೆ.

### ೬.೧ ಫಲಿತಗಳು

ಫಲಿತಗಳು ಸಂಶೋಧನೆಯ ಅಂತಿಮ ಭಾಗವಾಗಿದೆ. ಊಹಾತ್ಮಕ ವಾದಗಳೊಂದಿಗೆ ಅಧ್ಯಯನದ ಕ್ಷೇತ್ರವನ್ನು ಪ್ರವೇಶಿಸಿದ ನಂತರ ಕಂಡುಕೊಂಡ ಫಲಿತಾಂಶವನ್ನು ಹೊರಗೆಡುವುದು ಈ ಭಾಗದ ಮುಖ್ಯ ಉದ್ದೇಶವಾಗಿದೆ. ಅವುಗಳು ಈ ರೀತಿ ಇವೆ.

೧. ಟಿಪ್ಪು ಸುಲ್ತಾನನ ಕೋಟೆಗಳು ಹಿಂದಿನ ಕೋಟೆಗಳಿಗಿಂತ ತಾಂತ್ರಿಕ ಮತ್ತು ಕೌಶಲ್ಯದ ದೃಷ್ಟಿಯಿಂದ ಅತ್ಯುತ್ತಮವಾಗಿದ್ದವು. ಕೋಟೆಗಳ ತಂತ್ರಜ್ಞಾನದ ಹಿನ್ನೆಲೆಯಲ್ಲಿ ಅವನ ಕಾಲದಲ್ಲಿ ಕೋಟೆಗಳು ಉಚ್ಛ್ರಾಯ ಸ್ಥಿತಿಯನ್ನು ಕಂಡವು. ಟಿಪ್ಪುವಿನ ಅವನತಿಯು ಕೋಟೆಗಳ ಅವನತಿಯನ್ನು ಸಂಕೇತಿಸುವುದು ಪ್ರಸ್ತುತ ಅಧ್ಯಯನದಿಂದ ತಿಳಿದು ಬಂದಿದೆ.

೨. ಟಿಪ್ಪುವು ಸಂಸ್ಥಾನದಲ್ಲಿ ತಂದ ಆರ್ಥಿಕ ಸುಧಾರಣೆ ಮತ್ತು ಉತ್ಪಾದನಾ ಸ್ವಾವಲಂಬನೆಯ ಪರಿಣಾಮವಾಗಿ ಆರ್ಥಿಕ ಸದೃಢತೆಯನ್ನು ಹೊಂದಲು ಸಾಧ್ಯವಾಯಿತು. ಇದರಿಂದ ಬಲಿಷ್ಠವಾದ ಕೋಟೆ ಮತ್ತು ಕೋಟೆಗೆ ಸಂಬಂಧಿಸಿದ ಹೊಸ ಹೊಸ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳಲು ಸಾಧ್ಯವಾಯಿತು.

೩. ಟಿಪ್ಪುವು ಹೊಸ ಹೊಸ ತಂತ್ರಜ್ಞಾನದ ಕಡೆಗೆ ಒಲವುಳ್ಳವನಾದ್ದರಿಂದ ದೂರದ ದೇಶಗಳಿಂದ ತಂತ್ರಜ್ಞಾನವನ್ನು ಎರವಲು ಪಡೆದು ದೇಶಿಯವಾಗಿ ಸುಧಾರಿಸಿ ಅಭಿವೃದ್ಧಿಪಡಿಸಿ ಯಶಸ್ವಿಯಾದ. ಉದಾಹರಣೆಗೆ ರಾಕೆಟ್. ಇದನ್ನು ಚೀನಾ ಅಥವಾ ಮಧ್ಯ ಏಷ್ಯಾದ ದೇಶಗಳಿಂದ ಎರವಲು ಪಡಿದಿರಬಹುದೆಂದು ತೀರ್ಮಾನಿಸಬಹುದು.

೪. ಯುದ್ಧದಲ್ಲಿ ರಾಕೆಟ್ ತಂತ್ರಜ್ಞಾನವನ್ನು ಮೊಟ್ಟಮೊದಲ ಬಾರಿಗೆ ಭಾರತದಲ್ಲಿ ಬಳಸಿದ ಕೀರ್ತಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರಿಗೆ ಸಲ್ಲುತ್ತದೆ. ಈ ವಿಶೇಷ ತಂತ್ರಜ್ಞಾನವನ್ನು ವಿಲಿಯಂ ಕಾಂಗ್ರೀವ್ ಎಂಬ ಇಂಗ್ಲಿಷ್ ತಂತ್ರಜ್ಞನು ನಕಲು ಮಾಡಿ ಆಧುನಿಕ ರಾಕೆಟ್‌ನ ಬೆಳವಣಿಗೆಗೆ ಕಾರಣನಾದನು.

೫. ಟಿಪ್ಪುವು ಯುದ್ಧಗಳಲ್ಲಿ ಬಳಸುತ್ತಿದ್ದ ರಾಕೆಟ್‌ಗಳು ಉಪಯೋಗಕ್ಕಿಂತ ಹೆಚ್ಚಿನ ವೆಚ್ಚದಾಯಕವಾಗಿದ್ದವೆಂದು ಕಂಡುಕೊಳ್ಳಲಾಗಿದೆ. ಇವುಗಳಿಂದ ಶತ್ರುಗಳ ಪ್ರಾಣಹಾನಿಯಾದ ಬಗೆಗೆ ಹೆಚ್ಚಿನ ವಿವರಗಳೇನು ಕಂಡುಬಂದಿರುವುದಿಲ್ಲ. ಟಿಪ್ಪುವಿನ ಅಂತ್ಯಕ್ಕೆ ಎರಡು ದಿನ ಮೊದಲು ರಾಕೆಟ್‌ನ ಗೋದಾಮಿಗೆ ಶತ್ರುಗಳು ಹಾರಿಸಿದ ಬಂದೂಕಿನ ಕಿಡಿ ತಗುಲಿ ಗಗನದೆತ್ತರಕ್ಕೆ ಬೆಂಕಿಯ ಕೆನ್ನಾಲಿಗೆಯನ್ನು ಚಾಚಿತೆಂದು ಹೇಳಲಾಗುತ್ತದೆ. ಈ ವೇಳೆ ಟಿಪ್ಪುವಿನ ಕಡೆಯ ಅನೇಕ ಸೈನಿಕರು ಸತ್ತರು. ಇಂತಹದೇ ಒಂದು ಅವಗಡ ಹೈದರ್ ಕಾಲದಲ್ಲಿಯೂ ಉಂಟಾಗಿ ಅಪಾರ ಜೀವಹಾನಿಗಳಾಗಿದ್ದನ್ನು ಸ್ಮರಿಸಬಹುದು.

೬. ಟಿಪ್ಪುವು ಶಸ್ತ್ರಾಸ್ತ್ರಗಳ ತಯಾರಿಕೆಗಾಗಿಯೇ ತಾರಾಮಂಡಲಗಳನ್ನು ಬೆಂಗಳೂರು, ಚಿತ್ರದುರ್ಗ, ಶ್ರೀರಂಗಪಟ್ಟಣ ಮತ್ತು ಬಿದನೂರುಗಳಲ್ಲಿ ಸ್ಥಾಪಿಸಿದ್ದನೆಂದು ಹೇಳಲಾಗುವ ಸಾಹಿತ್ಯಿಕ ಉಲ್ಲೇಖಗಳಿಗೆ ಇಂದು ಚಿತ್ರದುರ್ಗದಲ್ಲಿ ಮಾತ್ರ ಪುರಾತತ್ತ್ವಿಕ ಅವಶೇಷಗಳು ದೊರಕುತ್ತವೆ. ಬೆಂಗಳೂರಿನಲ್ಲಿ ಆ ಹೆಸರಿನಲ್ಲಿ ತಾರಾಮಂಡಲ ಪೇಟೆ ಎಂಬುದು ಇತ್ತು ಎಂದು ಮಾತ್ರ ತಿಳಿಯುತ್ತದೆ. ಬಹುಶಃ ನಗರೀಕರಣದ ಹಿನ್ನೆಲೆಯಲ್ಲಿ ಅವಶೇಷಗಳು ನಶಿಸಿ ಹೋಗಿರಬಹುದು. ಇದೇ ರೀತಿ ಶ್ರೀರಂಗಪಪಟ್ಟಣ ಮತ್ತು ಬಿದನೂರುಗಳಲ್ಲಿಯೂ ಅವಶೇಷಗಳನ್ನು ಗುರುತಿಸುವ ಕಾರ್ಯ ನಡೆಯಬೇಕಿದೆ.

೭. ಟಿಪ್ಪುವಿನ ಫಿರಂಗಿ ಮತ್ತು ರಾಕೆಟ್‌ಗಳು ಅತ್ಯುತ್ತಮ ಗುಣಮಟ್ಟವನ್ನು ಹೊಂದಿದ್ದವು. ಅಂದರೆ ಟಿಪ್ಪುವಿನ ಫಿರಂಗಿಯ ಗುಣಮಟ್ಟ ಅವನ ಕಾಲಕ್ಕಿಂತಲೂ ಸುಮಾರು ೧೧೦ ವರ್ಷಗಳಷ್ಟು ಉನ್ನತೀಕರಿಸಲ್ಪಟ್ಟಿದ್ದವು. ಏಕೆಂದರೆ ಒಂದನೇ ಮಹಾಯುದ್ಧದ ಸಂದರ್ಭದಲ್ಲಿ ಬ್ರಿಟಿಷರು ಭಾರತದಿಂದ ತೆಗೆದುಕೊಂಡು ಹೋದ ಟಿಪ್ಪುವಿನ

ಫಿರಂಗಿ ಮತ್ತು ಸುಧಾರಿಸಲ್ಪಟ್ಟ ರಾಕೆಟ್‌ಗಳು ಮತ್ತೆ ಬಳಸಲ್ಪಟ್ಟವು ಎಂಬುದು ಟಿಪ್ಪುವಿನ ಸೈನಿಕ ತಾಂತ್ರಿಕೆಗೆ ಹಿಡಿದ ಕನ್ನಡಿಯಾಗಿದೆ.

೮. ಹೈದರಾಲಿಯು ಸೈನಿಕ ಕಾರ್ಯಾಚರಣೆ ಮತ್ತು ತಂತ್ರಗಳನ್ನು ರೂಪಿಸುವುದರಲ್ಲಿ ಚಾಣಾಕ್ಷನಾಗಿದ್ದನು. ಆದರೆ, ಟಿಪ್ಪುವು ಯುದ್ಧತಂತ್ರದ ಬದಲು ಯುದ್ಧದಲ್ಲಿ ತಂತ್ರಜ್ಞಾನ ಅಳವಡಿಸಿಕೊಳ್ಳುವುದರಲ್ಲಿ ಯಶಸ್ವಿಯಾಗಿದ್ದನು ಎಂಬುದನ್ನು ಅಧ್ಯಯನದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ.

೯. ಟಿಪ್ಪುವಿನ ಮರಣಾನಂತರ ಟಿಪ್ಪುವಿನ ಕೋಟೆಗಳು ಮತ್ತೆ ಶತ್ರುಗಳ ಪಾಳಯಕ್ಕೆ ದಕ್ಕದಿರಲೆಂದು ಬ್ರಿಟಿಷರು ಅವುಗಳನ್ನು ನಾಶ ಮಾಡಿದರೆಂಬ ಈವರೆಗಿನ ಕೆಲವು ತಜ್ಞರ ಅಭಿಪ್ರಾಯ ಮತ್ತು ಆ ಹಿನ್ನೆಲೆಯಲ್ಲಿ ರೂಪುಗೊಂಡ ನನ್ನ ಊಹಾತ್ಮಕವಾದವನ್ನು ಪರಿಷ್ಕರಿಸಿಕೊಳ್ಳಬೇಕಾಗಿದೆ. ಏಕೆಂದರೆ ಬ್ರಿಟಿಷರು ಟಿಪ್ಪುವಿನ ಕೋಟೆಗಳನ್ನು ನಾಶಪಡಿಸದೆ ಕೋಟೆಗಳ ಪ್ರದೇಶದಲ್ಲಿ ತಮ್ಮ ಕಚೇರಿಗಳನ್ನು ತೆರೆದರು. ಉದಾಹರಣೆಗೆ: ಬೆಂಗಳೂರು, ಮಧುಗಿರಿ, ವೆಲ್ಲೂರು, ನಂದಿಬೆಟ್ಟ, ಮಡಿಕೇರಿ ಇತ್ಯಾದಿ. ಆದರೆ ಈವರೆಗಿನ ಊಹಾತ್ಮಕವಾದಕ್ಕೆ ವ್ಯತಿರಿಕ್ತವಾಗಿ ಕಾಣುವ ಅಂಶವೇನೆಂದರೆ ಟಿಪ್ಪುವೇ ಹಲವು ಕೋಟೆಗಳನ್ನು ನಾಶಪಡಿಸಿದನು. ಏಕೆಂದರೆ, ಕೋಟೆಗಳು ಮುಂದೆ ಬ್ರಿಟಿಷರು ನೆಲೆಗಳಾಗಿ ತನಗೆ ಎದುರಾಗಬಹುದಾದ ಅಪಾಯವನ್ನು ಅರಿತು ನಾಶಪಡಿಸಿದನು. ಈ ಹಿನ್ನೆಲೆಯಲ್ಲಿ ಮುಖ್ಯವಾಗಿ ಬೆಂಗಳೂರಿನ ಕೋಟೆ ಮತ್ತು ಶ್ರೀರಂಗಪಟ್ಟಣ ಸಮೀಪದ ಗಂಜಾಂನ ಕೋಟೆಗಳನ್ನು ಹೆಸರಿಸಬಹುದು.

೧೦. ಟಿಪ್ಪುವು ಅಳವಡಿಸಿಕೊಂಡಿರುವ ತಂತ್ರಜ್ಞಾನಗಳಲ್ಲಿ ಕೆಲವು ಫ್ರೆಂಚರಿಂದ ಎರವಲು ಪಡೆದವುಗಳಾಗಿವೆ. ಫಿರಂಗಿ ಮತ್ತು ಬಂದೂಕುಗಳ ತಂತ್ರಜ್ಞಾನವನ್ನು ಗುರುತಿಸಬಹುದು. ಅದೇ ರೀತಿ ಫ್ರೆಂಚರ ನೆರವಿನಿಂದ ಮಂಜರಾಬಾದ್ ಕೋಟೆಯನ್ನು ನಿರ್ಮಿಸಿದ ಬಗೆಗೆ ಸರಿಯಾದ ಸಾಹಿತ್ಯಿಕ ಆಕರಗಳು ದೊರಕುವುದಿಲ್ಲವಾದರೂ ವಾಸ್ತುಶಿಲ್ಪದ ದೃಷ್ಟಿಯಿಂದ ಅದನ್ನು ಖಾತ್ರಿ ಪಡಿಸಿಕೊಳ್ಳಬಹುದು. ಸಮಕಾಲೀನ ಫ್ರಾನ್ಸಿನಲ್ಲಿ ರಚಿಸಲ್ಪಟ್ಟಿರುವ ಕೋಟೆಗಳು ಕೂಡ ಮಂಜರಾಬಾದ್ ಕೋಟೆಯಂತೆ ನಕ್ಷತ್ರಾಕಾರದ ವಿನ್ಯಾಸವನ್ನು ಹೊಂದಿದೆ.

೧೧. ಫಿರಂಗಿಗಳಲ್ಲಿ ದಕ್ಷತೆ ಹೆಚ್ಚಿದಂತೆ ಕೋಟೆಯ ನಿರ್ಮಾಣ ಕಲೆಯಲ್ಲಿಯೂ ಮತ್ತು ಕೋಟೆಯನ್ನು ದಕ್ಷವಾಗಿ ನಿರ್ಮಿಸುವ ಕೌಶಲ್ಯಗಳಲ್ಲಿಯೂ ಸುಧಾರಣೆಯಾಗಿರುವುದನ್ನು ಗುರುತಿಸಲಾಗಿದೆ. ಹೈದರ್ ಮತ್ತು ಟಿಪ್ಪು ಕಾಲದಲ್ಲಿ ಮಣ್ಣಿನ ಕೋಟೆಗಳನ್ನು

ಕಲ್ಲಿನ ಕೋಟೆಗಳನ್ನಾಗಿ ಪರಿವರ್ತಿಸಿ, ಗಾರೆ ಮತ್ತು ಇಟ್ಟಿಗೆಗಳನ್ನು ಬಳಸಿ ನಿರ್ಮಿಸಿರುವುದನ್ನು ಕಂಡುಕೊಳ್ಳಲಾಗಿದೆ.

೧೨. ಫಿರಂಗಿಗಳ ಸಾಗಾಣೆಗೆ ನೆರವಾಗಬಲ್ಲ ರ್‍ಯಾಂಪ್‌ಗಳನ್ನು ರಚಿಸಿರುವುದು ಟಿಪ್ಪು ಕಾಲದ ಕೋಟೆಗಳ ತಾಂತ್ರಿಕ ವಿಶೇಷವೆಂದು ಹೇಳಬಹುದು. ಅದೇ ರೀತಿಯಲ್ಲಿ ಕೊತ್ತಳಗಳ ಸಮೀಪದಲ್ಲಿರುವ ಸಿಪಾಯಿಗಳ ಕೋಣೆಯ ಉದ್ದೇಶಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದೆ. ಬ್ರಿಸ್ಟಾವ್ ಎಂಬ ಟಿಪ್ಪುವಿನ ಖೈದಿಯು ಹೇಳುವಂತೆ ಏಷ್ಯಾದ ಸೈನಿಕರು ತುಸು ಮಳೆ ಬಂದರೂ ಓಡಿ ಹೋಗಿ ಆಸರೆ ಪಡೆಯುತ್ತಾರೆ ಎಂಬ ಮಾತಿಗೆ ಈ ನಿರ್ಮಾಣ ಅರ್ಥವನ್ನು ಒದಗಿಸುತ್ತದೆ. ಮಳೆ ಅಥವಾ ಬಿಸಿಲಿಗೆ ಹೆದರಿ ಸಿಪಾಯಿಗಳು ಓಡಿ ಹೋಗದೆ ಪಕ್ಕದ ಕೋಣೆಯಲ್ಲಿಯೇ ಆಸರೆ ಪಡೆದು ಶತ್ರುಗಳ ಚಲನವಲನಗಳನ್ನು ಅವಲೋಕಿಸಲೆಂದು ಕಿಂಡಿಗಳನ್ನು ಬಿಡಲಾಗಿದೆ.

೧೩. ಮೌಖಿಕ ಕಥನಗಳ ಹಿನ್ನೆಲೆಯಲ್ಲಿ ಕೋಟೆಗಳ ಹಿನ್ನೆಲೆಯಲ್ಲಿರುವ ಲಿಂಗತಾರತಮ್ಯ ಮತ್ತು ಶೋಷಣೆಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗಿದೆ. ಯುದ್ಧ, ಕೋಟೆ, ಸೈನ್ಯ ಎಂಬುದು ಪುರುಷನ ಸಂಕೇತವಾಗಿ ತೋರುತ್ತದೆ. ಆದ್ದರಿಂದ ಹೆಣ್ಣನ್ನು ಫಲವತ್ತತೆಯ ಹೆಸರಿನಲ್ಲಿ ಬಲಿದಾನಕ್ಕಷ್ಟೆ ಸೀಮಿತಗೊಳಿಸಿದ್ದಂತೆ ತೋರುತ್ತದೆ. ಆದರೆ ಹೆಣ್ಣು ಕೂಡ ಕೋಟೆಯ ರಕ್ಷಣೆಯಲ್ಲಿ ಪ್ರಧಾನ ಪಾತ್ರ ವಹಿಸಬಲ್ಲಳು ಎಂಬುದನ್ನು ಚಿತ್ರದುರ್ಗದ ಒನಕೆ ಓಬವ್ವಳ ಪ್ರಕರಣ ನಮಗೆ ನಿದರ್ಶನವಾಗಿದೆ. ಇದು ಕೂಡ ಮೌಖಿಕ ಕಥನ ರೂಪದಲ್ಲಿಯೇ ಉಳಿದು ಬಂದಿರುವುದು ವಿಶೇಷ.

೧೪. ಕೋಟೆ, ಕೊತ್ತಳಗಳಿಗೆ ನೀಡಲಾಗುವ ಬಲಿದಾನದ ಗರ್ಭಿಣಿಯರು ತಳಸಮುದಾಯ ಮತ್ತು ರಾಜ ಪರಿವಾರದವರಿಗೆ ಮಾತ್ರ ಸೀಮಿತವಿರಬಹುದೆಂಬ ಊಹಾತ್ಮಕ ಅಭಿಪ್ರಾಯವಿತ್ತು. ಆದರೆ ಪಾವಗಡದ ಕೋಟೆಯ ಪ್ರಕರಣದಲ್ಲಿ ಬ್ರಾಹ್ಮಣ ಸಮುದಾಯದ ಹೆಣ್ಣು ಮಗಳು ಕೂಡ ಬಲಿದಾನವಾಗಿರುವ ಪ್ರಕರಣವನ್ನು ಗಮನಿಸಿದರೆ ಹೆಣ್ಣನ್ನು ಶೋಷಿಸುವ ವಿಚಾರದಲ್ಲಿ ಯಾವುದೇ ಜಾತಿ ಮತಗಳ ಅಂತರವಿರಲಿಲ್ಲ ಎಂಬ ತೀರ್ಮಾನಕ್ಕೆ ಬರಬಹುದಾಗಿದೆ.

೧೫. ಅಂತಿಮವಾಗಿ, ಈವರೆಗಿನ ಅಧ್ಯಯನದಲ್ಲಿ ಹೈದರನು ಸೇನೆಯ ಪ್ರತೀಕವಾಗಿ ಕಂಡರೆ, ಟಿಪ್ಪುವು ಕೋಟೆಯ ಪ್ರತೀಕವಾಗಿ ಕಾಣುತ್ತಾನೆ. ಸೇನೆಯ ಪ್ರತೀಕನಾದ ಹೈದರನು ಸೇನಾ ಬಿಡಾರದಲ್ಲಿಯೇ ಕೊನೆಯುಸಿರೆಳೆದನು. ಕೋಟೆಯ ಪ್ರತೀಕನಾದ ಟಿಪ್ಪುವು ತನ್ನ ಕೋಟೆಯ ಆವರಣದಲ್ಲಿಯೇ ಕೊನೆಯುಸಿರೆಳೆದನು. ಆದ್ದರಿಂದ

ಹೈದರ್ ಮತ್ತು ಟಿಪ್ಪು ಎಂಬ ವ್ಯಕ್ತಿತ್ವಗಳು ಆಕ್ರಮಣ ಮತ್ತು ರಕ್ಷಣಾ ಸಾಧನಗಳಾದ ಸೇನೆ ಮತ್ತು ಕೋಟೆಯ ಪ್ರತೀಕಗಳಾಗಿ ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ಕಂಡುಬರುತ್ತಾರೆ.

***

# ಪರಾಮರ್ಶನ

## ಪ್ರಕಟಿತ ಆಕರಗಳು

### ಕನ್ನಡ ಭಾಷಾ ಆಕರಗಳು


**ಗ್ಯಾಸೆಟಿಯರ್‌ಗಳು**

೧. ಚಂದ್ರಶೇಖರ್ ಎನ್., ೨೦೧೭, **ತುಮಕೂರು ಜಿಲ್ಲಾ ಗ್ಯಾಸೆಟಿಯರ್,** ಬೆಂಗಳೂರು: ಗ್ಯಾಸೆಟಿಯರ್ ಇಲಾಖೆ.

೨. ಪಾರ್ಥಸಾರಥಿ ಟಿ.ಎ. (ಸಂ.), ೨೦೦೩, **ಮಂಡ್ಯ ಜಿಲ್ಲಾ ಗ್ಯಾಸೆಟಿಯರ್,** ಬೆಂಗಳೂರು: ಗ್ಯಾಸೆಟಿಯರ್ ಇಲಾಖೆ.

೩. ಸೂರ್ಯನಾಥ ಯು. ಕಾಮತ್ (ಸಂ.), ೧೯೮೪, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂಪುಟ–೧,** ಬೆಂಗಳೂರು: ಗ್ಯಾಸೆಟಿಯರ್ ಇಲಾಖೆ.

೪. ಸೂರ್ಯನಾಥ ಯು. ಕಾಮತ್, (ಸಂ.) ೧೯೯೨, **ಕೊಡಗು ಜಿಲ್ಲಾ ಗ್ಯಾಸೆಟಿಯರ್,** ಬೆಂಗಳೂರು: ಗ್ಯಾಸೆಟಿಯರ್ ಇಲಾಖೆ.

೫. ಮುಂಬೈ ಗ್ಯಾಸೆಟಿಯರ್ ಇಲಾಖೆ, ೧೮೯೨, **ಮುಂಬೈ ಕರ್ನಾಟಕ ಕನ್ನಡ ಗ್ಯಾಸೆಟಿಯರ್,** (ಬೆಂಗಳೂರು ಗ್ಯಾಸೆಟಿಯರ್ ಇಲಾಖೆ ವೆಬ್‌ಸೈಟ್‌ನಲ್ಲಿ ಲಭ್ಯ).

**ಆನುಷಂಗಿಕ ಆಕರಗಳು**

೧. ಅರುಣಿ ಎಸ್.ಕೆ., ೨೦೦೭, **ಯಲಹಂಕ ನಾಡ ಪ್ರಭುಗಳ ವಾಸ್ತುಶಿಲ್ಪ–ಶಿಲ್ಪಕಲೆ,** ಬೆಂಗಳೂರು: ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.

೨. ಕಾವಲಮ್ಮ ಆರ್., ೨೦೦೫, **ಮಧುಗಿರಿ ಮಹಾನಾಡು ಪ್ರಭುಗಳು,** ಬೆಂಗಳೂರು: ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್ – ಕೃಷ್ಣಾಪುರದೊಡ್ಡಿ.

೩. ಉದಯ ಬಾರ್ಕೂರು, ೨೦೦೩, **ಹೈದರಾಲಿ–ಟಿಪ್ಪೂ: ಇತಿಹಾಸ ಕಥನ,** ಮಂಗಳೂರು: ಮಾನವತಾ ವೇದಿಕೆ.

೪. ಕಲಬುರ್ಗಿ ಎಂ.ಎಂ., ೧೯೯೪, **ಕರ್ನಾಟಕದ ಕೈಫಿಯತ್ತುಗಳು,** ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೫. ಸೂರ್ಯನಾಥ ಯು ಕಾಮತ್., ೧೯೮೪, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ–೧,** ಬೆಂಗಳೂರು: ಕರ್ನಾಟಕ ರಾಜ್ಯ ಸರ್ಕಾರ.

೬. ಕಿಟ್ಟೆಲ್ ಎಫ್, ೧೯೮೨(೧೮೯೪), **ಕನ್ನಡ–ಇಂಗ್ಲಿಷ್ ಡಿಕ್ಷನರಿ,** ನವದೆಹಲಿ: ಏಷ್ಯನ್ ಎಜುಕೇಷನ್ ಸರ್ವಿಸಸ್.

೭. ಕೃಷ್ಣಭಟ್ಟ ಕೆ. ೨೦೧೬(೧೯೬೨), **ಕೌಟಿಲ್ಯನ ಅರ್ಥಶಾಸ್ತ್ರ,** ಧಾರವಾಡ: ಸಮಾಜ ಪುಸ್ತಕಾಲಯ.

೮. ಕೃಷ್ಣಯ್ಯ ಡಿ.ಎನ್., ೧೯೯೫ (೧೯೭೪), **ಕೊಡಗಿನ ಇತಿಹಾಸ,** ಮೈಸೂರು: ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ.

೯. ಬೆಟಗೇರಿ ಕೃಷ್ಣಶರ್ಮ, ೧೯೮೩, **ಕರ್ನಾಟಕ ಜನಜೀವನ,** ಬೆಂಗಳೂರು: ಪ್ರಥಮ ವಿಶ್ವಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ, ಕರ್ನಾಟಕ ಸರ್ಕಾರ.

೧೦. ಕೃಷ್ಣಸ್ವಾಮಿ, ಕ.ರಾ., ೧೯೮೪, **ನಾಡಪ್ರಭು ಕೆಂಪೇಗೌಡ,** ಬೆಂಗಳೂರು: ಜನಪದ ಅಕಾಡಮಿ.

೧೧. ಕೊಟ್ರೇಶ್ ಎಂ. ೨೦೧೧, **ಬಳ್ಳಾರಿ ಜಿಲ್ಲೆಯ ಕೋಟೆಗಳು,** ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೧೨. ಗುಂಡಪ್ಪ ಎಲ್. ೧೯೪೩, **ನಾಡಪದಗಳು,** ಮೊದಿ ಪವರ್ ಪ್ರೆಸ್, ನರಸಿಂಹರಾಜ ರಸ್ತೆ, ಬೆಂಗಳೂರು ಸಿಟಿ.

೧೩. ಗೋಪಾಲ್ ಆರ್., ೨೦೧೦, **ಟಿಪ್ಪು ಸುಲ್ತಾನ್ ದಿ ಟೈಗರ್ ಆಫ್ ಮೈಸೂರು,** ಮೈಸೂರು: ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯ.

೧೪. ಗೋಪಾಲಗೌಡ ಕಲ್ವಮಂಜಲಿ, ೨೦೧೪(೧೯೯೮), **ನಂದಿ ಮತ್ತು ರಂಗಸ್ಥಳ,** ಚಿಕ್ಕಬಳ್ಳಾಪುರ: ಅರುಣ ಪ್ರಕಾಶನ.

೧೫. ಸುಂಕಂ ಗೋವರ್ಧನ, ೨೦೧೨, **ಕನ್ನಡ ನಾಡಿನ ಪ್ರಮುಖ ಕೋಟೆಗಳು,** ಬೆಂಗಳೂರು: ಓದು ಬರಹ ಬಳಗ.

೧೬. ಚಂದ್ರಶೇಖರ್ ಎಸ್., ೧೯೯೯, **ಕರ್ನಾಟಕದ ಆಂದೋಲನಗಳು,** ತಿಪಟೂರು: ನಮ್ಮ ಪ್ರಕಾಶನ.

೧೭. ಚಂದ್ರಶೇಖರ್ ಎಸ್., ೧೯೯೯, **ಸಾಹಿತ್ಯ ಮತ್ತು ಚರಿತ್ರೆ,** ತಿಪಟೂರು: ನಮ್ಮ ಪ್ರಕಾಶನ.

೧೮. ಚಿದಾನಂದಮೂರ್ತಿ ಎಂ., ೨೦೦೨(೧೯೬೬), **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ. ೪೫೦–೧೧೫೦),** ಬೆಂಗಳೂರು: ಸ್ವಪ್ನ ಬುಕ್ ಹೌಸ್.

೧೯. ಬಂಜಗೆರೆ ಜಯಪ್ರಕಾಶ್, ೨೦೦೦, **ಕನ್ನಡ ರಾಷ್ಟ್ರೀಯತೆ ಸಾಮಾಜಿಕ, ಸಾಂಸ್ಕೃತಿಕ ಬೇರುಗಳು: ರಾಜಕೀಯಾರ್ಥಿಕ ಅಧ್ಯಯನ,** ಬೆಂಗಳೂರು: ಕ್ರಾಂತಿಸಿರಿ ಪ್ರಕಾಶನ.

೨೦. ಜೋಶಿ ಎಸ್.ಕೆ, ೨೦೧೨, **ಕರ್ನಾಟಕದ ಕೋಟೆ–ಕೊತ್ತಳಗಳು,** ಧಾರವಾಡ: ಕರ್ನಾಟಕ ಇತಿಹಾಸ ಸಂಶೋಧನ ಮಂಡಲ.

೨೧. ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ್ ಎಂ.ವಿ., (ಸಂ.), ೧೯೭೬, **ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು,** ಚಿತ್ರದುರ್ಗ: ಹುಲ್ಲೂರು ಶ್ರೀನಿವಾಸ ಜೋಯಿಸ ಗ್ರಂಥ ಪ್ರಕಟಣ ಸಮಿತಿ.

೨೨. ಲಕ್ಷ್ಮಣ್ ತೆಲಗಾವಿ, ೨೦೦೪, **ಮೌರ್ಯ ಮತ್ತು ಶಾತವಾಹನ ಯುಗ,** ಹಂಪಿ: **ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ.

೨೩. ಲಕ್ಷ್ಮಣ್ ತೆಲಗಾವಿ, ೨೦೧೦, **ಎಪ್ಪತ್ತೇಳು ಪಾಳೆಯಗಾರರು: ಸಂಖ್ಯಾ ಆಶಯ ನೆಲೆಯ ಚಾರಿತ್ರಿಕ ವಿವೇಚನೆ,** ಹರ್ತಿಕೋಟೆ: ವಾಲ್ಮಿಕಿ ಸಾಹಿತ್ಯ ಸಂಪದ.

೨೪. ಲಕ್ಷ್ಮಣ್ ತೆಲಗಾವಿ, ೨೦೧೦, **ಚಿತ್ರದುರ್ಗದ ಒನಕೆ ಓಬವ್ವೆ: ಚಾರಿತ್ರಿಕ ವಿವೇಚನೆ,** ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೨೫. ತೆಲಗಾವಿ, ಲಕ್ಷ್ಮಣ್, ೨೦೧೬, **ಚಿತ್ರದುರ್ಗಕ್ಕೆ ಬನ್ನಿ, ಹರ್ತಿಕೋಟೆ:** ವಾಲ್ಮೀಕಿ ಸಾಹಿತ್ಯ ಸಂಪದ.

೨೬. ದಾಸ್ ಎಸ್.ಕೆ (ಅನು: ಟಿ.ಆರ್. ಅನಂತರಾಮು), ೨೦೧೧, **ರಾಕೆಟ್: ಇತಿಹಾಸ–ವಿಜ್ಞಾನ–ತಂತ್ರಜ್ಞಾನ,** ಬೆಂಗಳೂರು: ಪ್ರಿಸಂ.

೨೭. ದೇವರಕೊಂಡಾರೆಡ್ಡಿ, (ಸಂ.) ೨೦೦೩, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೩,** ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೨೮. ನಾಗೇಗೌಡ ಎಚ್.ಎಲ್., ೧೯೮೨, **ಹೆಳವರು ಮತ್ತು ಅವರ ಕಾವ್ಯಗಳು,** ಬೆಂಗಳೂರು: ಸಾಹಿತ್ಯ ಸದನ ಪ್ರಕಾಶನ.

೨೯. ನಾರಾಯಣಾಚಾರ್ಯ, ೧೯೪೫, **ಮಧುಗಿರಿ ಚರಿತ್ರೆ,** ಬೆಂಗಳೂರು: ಸುಬ್ಬಯ್ಯ ಅಂಡ್ ಸನ್ಸ್.

೩೦. ನಂಜರಾಜೇ ಅರಸ್ ಪಿ.ವಿ., ೨೦೦೭, **ಮೈಸೂರು ನೂರಿನ್ನೂರು ವರ್ಷಗಳ ಹಿಂದೆ,** ಮೈಸೂರು: ಅಭಿರುಚಿ ಪ್ರಕಾಶನ.

೩೧. ನಂಜುಂಡಸ್ವಾಮಿ ಎ.ಎಸ್., ೧೯೮೬, **ಪಾಳೆಯಗಾರರು ಮತ್ತು ಒಡೆಯರ ಇತಿಹಾಸ,** ಧಾರವಾಡ: ಸಮಾಜ ಪುಸ್ತಕಾಲಯ.

೩೨. ನಂದೀಶ್ವರ ಎನ್., ೨೦೦೮, **ಸಿರಾ ತಾಲ್ಲೂಕಿನ ಸ್ಮಾರಕಗಳು ಹಾಗೂ ಶಾಸನಗಳು,** ಸಿರಾ: ಪೂರ್ಣಚಂದ್ರ ತೇಜಸ್ವಿ ಪ್ರಕಾಶನ.

೩೩. ಪರಮಶಿವಮೂರ್ತಿ ಡಿ.ವಿ., ೧೯೯೯, **ಕನ್ನಡ ಶಾಸನಶಿಲ್ಪ,** ಹಂಪಿ: ಪ್ರಾಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೩೪. ಚನ್ನಬಸಪ್ಪ ಎಸ್. ಪಾಟೀಲ., ೧೯೯೯, **ಕರ್ನಾಟಕ ಕೋಟೆಗಳು ಸಂಪುಟ-೧,** ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೩೫. ಚಿನ್ನಸ್ವಾಮಿ ಎನ್. ಸೋಸಲೆ., ೨೦೧೬, **ಒನಕೆ ಓಬವ್ವೆ : ದಲಿತ ಸಂವೇದನೆಯೊಂದಿಗೆ ಮುಖಾಮುಖಿ,** ಕಮಲಾಪುರ: ಗೌತಮ ಬುಕ್ ಹೌಸ್.

೩೬. ಪುಟ್ಟಸ್ವಾಮಿ ಬಿ.ಎಸ್., ೨೦೦೭, **ಕೈಫಿಯತ್ತು ಕಂಡ ಮೈಸೂರು ರಾಜಕೀಯ ಚರಿತ್ರೆ,** ಬೆಂಗಳೂರು: ಮುದ್ದು ಶ್ರೀ ಗ್ರಂಥ ಮಾಲೆ.

೩೭. ಪಂಚಮುಖಿ ಆರ್.ಎಸ್., (ಸಂ.), ೧೯೪೧, **ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್ ಸಂಪುಟ-೧ ಮತ್ತು ೨.,** ಧಾರವಾಡ: ಕರ್ನಾಟಕ ವಿಶ್ವವಿದ್ಯಾಲಯ.

೩೮. ಮಜುಂದಾರ್ ಆರ್.ಸಿ (ಪ್ರ.ಸಂ.)(ಕನ್ನಡ ಅನುವಾದ), ೧೯೯೪, **ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ, ಸಂಪುಟ-೩ (ಸಾಮ್ರಾಜ್ಯ ಏಕತಾಯುಗ),** ಬೆಂಗಳೂರು: ಭಾರತೀಯ ವಿದ್ಯಾಭವನ.

೩೯. ಮೊಹಿಬುಲ್ ಹಸನ್, (ಅನು: ಸಮೇತನಹಳ್ಳಿ ರಾಮರಾಯ), ೧೯೮೮, **ಟಿಪುಸುಲ್ತಾನನ ಇತಿಹಾಸ,** ಮೈಸೂರು: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ.

೪೦. ಮಂಜುನಾಥ ಎಂ.ಜಿ., ೨೦೦೬, **ಬೆಂಗಳೂರಿನ ಬಖೈರುಗಳು,** ಬೆಂಗಳೂರು: ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.

೪೧. ಮಂಜುನಾಥ್ ಸಿ.ಯು., ೨೦೧೨, **ಶಾಸನಗಳು ಮತ್ತು ಕರ್ಣಾಟಕ ಸಂಸ್ಕೃತಿ ಕ್ರಿ.ಶ. ೧೧೫೦-೧೩೪೦,** ಕುಪ್ಪಂ: ಚಿತ್ಕಲಾ ಪ್ರಕಾಶನ.

೪೨. ಯೋಗೀಶ್ವರಪ್ಪ ಡಿ.ಎನ್., ೨೦೧೨, **ಕಲ್ಪಶೋಧ,** ಬೆಂಗಳೂರು: ಪ್ರಗತಿ ಗ್ರಾಫಿಕ್ಸ್.

೪೩. ಯೋಗೀಶ್ವರಪ್ಪ ಡಿ.ಎನ್., ೨೦೦೯, **ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು,** ಬೆಂಗಳೂರು: ಧಾತ್ರಿ ಪ್ರಕಾಶನ.

೪೪. ರಾಜಶೇಖರಪ್ಪ ಬಿ., ೨೦೦೧, **ದುರ್ಗಶೋಧನ,** ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು.

೪೫. ರಾಜಶೇಖರಪ್ಪ ಬಿ., ೨೦೦೭, **ಚಿತ್ರದುರ್ಗ ಪಾಳೆಗಾರರ ದಾಖಲೆಗಳು,** ಬೆಂಗಳೂರು: ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ.

೪೬. ರಾಮಕೃಷ್ಣ ಜಿ., ೨೦೧೬, **ಋಗ್ವೇದ ಪ್ರವೇಶಿಕೆ ಐತಿಹ್ಯ ಮತ್ತು ವಾಸ್ತವ,** ಬೆಂಗಳೂರು: ನವಕರ್ನಾಟಕ ಪ್ರಕಾಶನ.

೪೭. ಎಸ್.ಆರ್.ರಾವ್., (ಅನು: ಗುರುರಾಜಾಚಾರ್ ಎಸ್.), ೧೯೯೪, **ಲೋಥಲ್ ಮತ್ತು ಸಿಂಧೂ ನಾಗರಿಕತೆ,** ಧಾಡವಾಡ: ಶ್ರೀಹರಿ ಪ್ರಕಾಶನ.

೪೮. ಮೋಹನ ಕೃಷ್ಣ ರೈ, ೨೦೦೭, **ವಸಾಹತುಶಾಹಿ ಮತ್ತು ನಗರೀಕರಣ,** ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೪೯. ಮೋಹನ ಕೃಷ್ಣ ರೈ, ೨೦೧೭, **ಯುದ್ಧ ಮತ್ತು ಒಪ್ಪಂದ,** ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೫೦. ರೈಸ್ ಬಿ.ಎಲ್., ೧೮೮೫–೧೯೦೫, **ಎಪಿಗ್ರಾಫಿಯ ಕರ್ನಾಟಿಕ, ೧ – ೧೨ ಸಂಪುಟಗಳು,** ಮೈಸೂರು.

೫೧. ಲಿಂಗದೇವರು ಹಳೆಮನೆ (ಸಂ.), ೨೦೦೩, **ಧೀರ ಟೀಪುವಿನ ಲಾವಣಿಗಳು,** ಮೈಸೂರು: ಸಂವಹನ.

೫೨. ಲಿಂಗಯ್ಯ ಡಿ., ೨೦೦೫, **ಯಲಹಂಕ ನಾಡಪ್ರಭುಗಳು ಜಾನಪದ ಸಂಪುಟ,** ಬೆಂಗಳೂರು: ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.

೫೩. ವಸು ಎಂ.ವಿ., ೨೦೦೪, **ಮೌಖಿಕ ಇತಿಹಾಸ,** ಬೆಂಗಳೂರು: ಅಂಕಿತ ಪುಸ್ತಕ.

೫೪. ವಿಜಯ್ ಪೂಣಚ್ಚ ತಂಬಂಡ, ೨೦೦೪, ಪಳಮೆ: **ಮೌಖಿಕ ಆಕರಗಳು ಕಟ್ಟಿಕೊಡುವ ಕನ್ನಡ–ಕೊಡಗು–ತುಳುನಾಡಿನ ಅಧ್ಯಯನ,** ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೫೫. ವಿಜಯ್ ಪೂಣಚ್ಚ ತಂಬಂಡ (ಪ್ರ.ಸಂ.), ೨೦೧೦, **ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ –೧: ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ,** ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೫೬. ವೃಷಭ ಕುಮಾರ್, ೨೦೧೦, **ಮೈಸೂರು ಜಿಲ್ಲೆಯ ಐತಿಹ್ಯಗಳು : ಒಂದು ಅಧ್ಯಯನ,** ಬೆಂಗಳೂರು: ಕರ್ನಾಟಕ ಜಾನಪದ ಅಕಾಡೆಮಿ.

೫೭. ಷೇಕ್‌ಅಲಿ ಬಿ., ೧೯೯೭, **ಕರ್ನಾಟಕ ಚರಿತ್ರೆ ಸಂಪುಟ–೫,** ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೫೮. ಷೇಕ್‌ಅಲಿ ಬಿ., ೨೦೦೬, **ಟಿಪ್ಪುಸುಲ್ತಾನ್,** ಬೆಂಗಳೂರು: ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

೫೯. ಷೇಕ್‌ಅಲಿ ಬಿ., (ಸಂ.) ೧೯೯೩, **ಟಿಪ್ಪುಸುಲ್ತಾನ್ ಎ ಗ್ರೇಟ್ ಮಾರ್ಟಿಯರ್,** ಬೆಂಗಳೂರು: ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.

೬೦. ಶರ್ಮ ತಿ.ತಾ., (ಸಂ.) ೧೯೯೯(೧೯೭೩), **ಚಾರಿತ್ರಿಕ ದಾಖಲೆಗಳು,** ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು.

೬೧. ಶರ್ಮಾ ಎಚ್.ಡಿ., (ಕನ್ನಡಕ್ಕೆ: ಪ್ರಧಾನ್ ಗುರುದತ್ತ), ೨೦೦೩, **ಟಿಪ್ಪೂ ನಿಜಸ್ವರೂಪ,** ಬೆಂಗಳೂರು: ಸಾಹಿತ್ಯ ಸಿಂಧು.

೬೨. ಶ್ರೀಧರ್ ಎಚ್.ಜಿ., ೨೦೦೨, **ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ (ಕ್ರಿ.ಶ. ೪೫೦–೧೩೫೦),** ಪುತ್ತೂರು: ಶಿವರಾಮ ಕಾರಂತ ಅಧ್ಯಯನ ಕೇಂದ್ರ.

೬೩. ಶ್ರೀನಿವಾಸ ಮೂರ್ತಿ ಎಸ್.ಎಲ್., ವಸಂತಶ್ರೀ ವಿ., (ಸಂ.) ೨೦೧೧, **ಜಂಗ್‌ನಾಮ,** ಬೆಂಗಳೂರು: ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್.

೬೪. ಶ್ಯಾಮಲ ಸಿ.ಆರ್., ೨೦೧೭, **ಪೂರ್ವ ಕರ್ನಾಟಕದ ಪಾಳೆಯಗಾರರು: ಒಂದು ಅಧ್ಯಯನ,** ಮುಂಬೈ: ಕನ್ನಡ ವಿಭಾಗ, ಮುಂಬೈ ವಿಶ್ವವಿದ್ಯಾಲಯ.

೬೫. ಶಂಕರ ಭಾರತೀ, ಸಚ್ಚಿದಾನಂದ ಸ್ವಾಮಿ, ೨೦೧೦ (೧೯೬೩), **ಕೌಟಿಲೀಯ ಅರ್ಥಶಾಸ್ತ್ರ,** ಬೆಂಗಳೂರು: ಅಂಕಿತ ಪ್ರಕಾಶನ.

೬೬. ಸಾಕಿ, ೧೯೯೮, **ಮೇಕಿಂಗ್ ಹಿಸ್ಟ್ರಿ ಕರ್ನಾಟಕಸ್ ಪೀಪಲ್ ಅಂಡ್ ದೇರ್ ಪಾಸ್ಟ್,** ವಿಮುಕ್ತಿ ಪ್ರಕಾಶನ, ಬೆಂಗಳೂರು

೬೭. ಸುಬ್ಬರಾಯಪ್ಪ ಬಿ.ವಿ., (ಅನು: ಲಕ್ಷ್ಮಿಕಾಂತ್ ಹೆಗಡೆ) ೨೦೧೬, **ಭಾರತದಲ್ಲಿ ವಿಜ್ಞಾನ ಒಂದು ಐತಿಹಾಸಿಕ ನೋಟ,** ಬೆಂಗಳೂರು: ಕುವೆಂಪು ಭಾಷಾ ಭಾರತಿ ಪ್ರಾಧಿಕಾರ.

೬೮. ಸುರೇಶ್ ಮೂನ, ೨೦೦೯, **ಇದು ನಮ್ಮ ಬೆಂಗಳೂರು,** ಬೆಂಗಳೂರು: ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು.

೬೯. ಸುಂದರ್ ರಾವ್ ಬ.ನ., ೧೯೮೫ (೨೦೧೧), **ಬೆಂಗಳೂರಿನ ಇತಿಹಾಸ,** ಬೆಂಗಳೂರು: ಅಂಕಿತ ಪುಸ್ತಕ.

೭೦. ಸೋಮನಾಥಯ್ಯ ಬೆಳ್ಳಾವೆ, ೧೯೧೧, **ಶ್ರೀರಂಗಪಟ್ಟಣ ಹುಟ್ಟಿ ಬೆಳೆದ ಕತೆ,** ಬೆಂಗಳೂರು: ಒಕ್ಕಲಿಗರಸಂಘ ಪ್ರೆಸ್.

## ಲೇಖನಗಳು

೧. ಅರುಣಿ ಎಸ್.ಕೆ., ೨೦೦೯, 'ಕೋಟೆಗಳು', ಸುಂದರ, ಅ. (ಸಂ.) **ಕನ್ನಡ ವಿಷಯ ವಿಶ್ವಕೋಶ: ಇತಿಹಾಸ ಮತ್ತು ಪುರಾತತ್ತ್ವ,** ಮೈಸೂರು: ಮೈಸೂರು ವಿಶ್ವವಿದ್ಯಾನಿಲಯ. ಪು: ೨೮೧–೨೮೭.

೨. ಅರುಣಿ ಎಸ್.ಕೆ., ೨೦೧೧, 'ಬೆಂಗಳೂರು ರಕ್ಷಣೆ ಮಾಡಿದ ಕಿಲ್ಲೆದಾರ ಬಹದ್ದೂರ್ ಖಾನ್ ೧೭೯೧' (ಸಂ.) ಎಸ್.ಕೆ.ಅರುಣಿ ಮತ್ತು ಹಂ.ಗು.ರಾಜೇಶ್, **ನಮ್ಮ ಬೆಂಗಳೂರು,** ಇತಿಹಾಸ ದರ್ಪಣ ಪುಸ್ತಕ–೮, ಬೆಂಗಳೂರು. ಪು:೪೦–೪೪,

೩. ಕಾರ್ತಿಕ್ ಎಸ್., ೨೦೧೬, 'ಬೆಂಗಳೂರು ಸ್ಥಳನಾಮ ನಿಷ್ಪತ್ತಿ ಲಿಖಿತ ಆಕರಗಳ ಹಿನ್ನೆಲೆಯಲ್ಲಿ', ರಾಜಶೇಖರ್ ಕೆ.ಎಲ್. (ಸಂ.) **ನುಡಿಜಾಗರ,** ಬೆಂಗಳೂರು: ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು. ಪುಟಗಳು: ೧೨೨–೧೩೬.

೪. ಕಾವಲಮ್ಮ ಆರ್., ೨೦೦೦, 'ಮಧುಗಿರಿಗೆ ಸಂಬಂಧಿಸಿದ ಮೆಕೆಂಜಿಯವರ ಅಪ್ರಕಟಿತ ಕೈಫಿಯತ್ತು', ಸೂರ್ಯನಾಥ ಯು. ಕಾಮತ್ (ಸಂ.), **ಇತಿಹಾಸ ದರ್ಶನ ಸಂಪುಟ–೧೫,** ಪು.೧೨೫–೧೨೮.

೫. ಚನ್ನಬಸಪ್ಪ ಎಸ್. ಪಾಟೀಲ, ೧೯೯೬, 'ಟೀಪು ಸುಲ್ತಾನನ ಖಡ್ಗಗಳು', **ಇತಿಹಾಸ ದರ್ಶನ, ಸಂಪುಟ**–೧೧:೯೭–೯೯.

೬. ಜೋಶಿ ಎಸ್.ಕೆ., ೧೯೯೪, 'ಸನ್ನತಿ ದುರ್ಗದ ಪುನರ್ದರ್ಶನ', ಸೂರ್ಯನಾಥ ಯು. ಕಾಮತ್ (ಸಂ.), **ಇತಿಹಾಸ ದರ್ಶನ ಸಂ–೯,** ಪು.೧೫–೧೭.

೭. ಜೋಶಿ ಎಸ್.ಕೆ., ೧೯೯೬, 'ಬೆಳಗಾವಿಯ ರಕ್ಷಣಾ ಗೋಡೆಗಳು', ಸೂರ್ಯನಾಥ ಯು. ಕಾಮತ್ (ಸಂ.), **ಇತಿಹಾಸ ದರ್ಶನ ಸಂ–೯,** ಪು.೧೦೨–೧೦೬.

೮. ವಿಜಯ್ ಪೂಣಚ್ಚ ತಂಬಂಡ, ೨೦೦೧ 'ಹಾಲೇರಿ ಅರಸರು', ರಾಜಾರಾಮ ಹೆಗಡೆ, ಅಶೋಕ ಶೆಟ್ಟರ್ (ಸಂ.) **ಮಲೆಕರ್ನಾಟಕದ ಅರಸು ಮನೆತನಗಳು,** ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಪು.೩೦೮–೩೩೦.

೯. ನಾಗರಾಜ್ ಎಂ.ಜಿ., ೧೯೯೮, 'ಕೊಡಗಿನ ದೊಡ್ಡ ವೀರರಾಜೇಂದ್ರನ ಶಿಸ್ತು, ಹುಕುಂ ನಾಮ ನಿರೂಪಗಳು', **ಇತಿಹಾಸ ದರ್ಶನ, ಸಂಪುಟ-೧೩,** ಪು.೨೫೮-೨೬೫.

೧೦. ಯೋಗೀಶ್ವರಪ್ಪ ಡಿ.ಎನ್., ೧೯೯೯, 'ಮದ್ದಗಿರಿ ನಾಡಪ್ರಭುಗಳ ರಕ್ಷಣಾ ವ್ಯವಸ್ಥೆ', ಸೂರ್ಯನಾಥ ಯು. ಕಾಮತ್ (ಸಂ.), **ಇತಿಹಾಸ ದರ್ಶನ ಸಂ-೧೪,** ಪು;೮೧-೮೯.

೧೧. ಶಿವಕುಮಾರಿ ಎಂ.ಎಸ್., ೨೦೧೪, '೧೮ ಮತ್ತು ೧೯ನೇ ಶತಮಾನದ ಮೈಸೂರು ಸಂಸ್ಥಾನದಲ್ಲಿ ಕೆಲವು ಕೋಟೆಯುಕ್ತ ಪೇಟೆ ಮತ್ತು ಪಟ್ಟಣಗಳ ವಿಕಾಸ (ವಿಶೇಷವಾಗಿ ಚನ್ನಪಟ್ಟಣವನ್ನು ಅನುಲಕ್ಷಿಸಿದಂತೆ)', (ಪ್ರಸಂ.) ಶ್ರೀನಿವಾಸ್ ಎಂ.ವಿ., (ಸಂ.) **ಪುಟ್ಟಸ್ವಾಮಿ ಬಿ.ಎಸ್. ಮತ್ತು ಹರ್ಷ ಎಸ್., ಫೆಸೆಟ್ಸ್ ಆಫ್ ಅರ್ಬನೈಸೇಷನ್,** ಬೆಂಗಳೂರು: ಮನೋಜ್ ಪಬ್ಲಿಕೇಷನ್.

೧೨. ಶಿವರಾಮ ಶೆಟ್ಟಿ ಬಿ., ೨೦೧೦, 'ಮೌಖಿಕ ಚರಿತ್ರೆ: ಜನಪದರ ಚರಿತ್ರೆಯ ಆಯಾಮಗಳು', ವಿಜಯ್ ಪೂಣಚ್ಚ ತಂಬಂಡ (ಪ್ರಸಂ.) **ಕರ್ನಾಟಕ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ -೧:** ಚರತ್ರೆ ಬರವಣಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ,. ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೧೩. ಷಡಕ್ಷರಯ್ಯ ರು.ಮ. ೧೯೯೪, 'ಬಸವ ಕಲ್ಯಾಣದ ಕೋಟೆ' ಗೋಪಾಲ್ ರಾವ್ ಎಚ್.ಎಸ್.(ಸಂ.) **ನಾಗಾಭಿನಂದನ,** ಪು.೨೭೩-೨೮೬.

೧೪. ಸುಜಾತ ಮಲ್ಲನಗೌಡ, ೧೯೯೮, 'ರಾಯಚೂರು ಕೋಟೆಯಲ್ಲಿನ ಕೊತ್ತಲಗಳು', ಸೂರ್ಯನಾಥ ಯು. ಕಾಮತ್ (ಸಂ.), **ಇತಿಹಾಸ ದರ್ಶನ ಸಂಪುಟ-೧೩** :೮೫-೮೬.

೧೫. ಸುಜಾತ ಮಲ್ಲನಗೌಡ, ೧೯೯೯, 'ಬಹದ್ದೂರು ಬಂಡಾ ಕೋಟೆ', **ಇತಿಹಾಸ ದರ್ಶನ ಸಂಪುಟ-೧೪** :೧೮೬.

೧೬. ಸುರೇಂದ್ರರಾವ್ ಬಿ., ೨೦೧೬, 'ಹೈದರಾಲಿ ಟಿಪ್ಪುಸುಲ್ತಾನ ಮತ್ತು ಮಂಗಳೂರು (೧೭೬೩-೧೭೯೯)', ವಿವೇಕರೈ ಬಿ.ವಿ. (ಪ್ರ.ಸಂ.), **ಮಂಗಳೂರು ದರ್ಶನ ಸಂಪುಟ-೧,** ಮಂಗಳೂರು: ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ.

೧೭. ಸುರೇಂದ್ರರಾವ್ ಬಿ., ೨೦೧೬, 'ಕರಾವಳಿ ಜಾನಪದವು ಅನಾವರಣಗೊಳಿಸುವ ಸಮಾಜ ಮತ್ತು ಆರ್ಥಿಕತೆ', ಚಂದ್ರಶೇಖರ್ ಎಸ್., ಮತ್ತು ಸುರೇಂದ್ರರಾವ್ ಬಿ.,

(ಸಂ.), **ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು ಸಂಪುಟ–೬,** ಬೆಂಗಳೂರು: ಕುವೆಂಪು ಭಾಷಾ ಭಾರತಿ ಪ್ರಾಧಿಕಾರ.

## ಇಂಗ್ಲಿಷ್ ಭಾಷಾ ಆಕರಗಳು

### ಪ್ರಾಥಮಿಕ ಆಕರಗಳು

೧. ದಿ ಕರೆಸ್ಪಾಂಡೆನ್ಸ್ ಆಫ್ ದಿ ಫ್ರೆಂಚ್ ಡ್ಯೂರಿಂಗ್ ದಿ ರೇನ್ ಆಫ್ ಹೈದರ್ ಅಲಿ ಅಂಡ್ ಟಿಪು ಸುಲ್ತಾನ್, ವಾಲ್ಯೂಂ–೨, ೧೭೮೪–೧೭೮೭, ಬೆಂಗಳೂರು: ಕರ್ನಾಟಕ ಸ್ಟೇಟ್ ಆರ್ಕೆವ್ಸ್ ಡಿಪಾರ್ಟ್‌ಮೆಂಟ್.

೨. ಆನ್ಯೂಯಲ್ ರಿಪೋರ್ಟ್ ಆಫ್ ದಿ ಮೈಸೂರು ಆರ್ಕಿಯೋಲಜಿಕಲ್ ಡಿಪಾರ್ಟ್‌ಮೆಂಟ್ ೧೯೧೫–೧೬, ಮೈಸೂರು ಪುರಾತತ್ತ್ವ ಇಲಾಖೆ.

೩. ಆನ್ಯೂಯಲ್ ರಿಪೋರ್ಟ್ ಆಫ್ ದಿ ಮೈಸೂರು ಆರ್ಕಿಯೋಲಜಿಕಲ್ ಡಿಪಾರ್ಟ್‌ಮೆಂಟ್ ೧೯೩೨, ಮೈಸೂರು: ಮೈಸೂರು ವಿಶ್ವವಿದ್ಯಾಲಯ.

೪. ಆನ್ಯೂಯಲ್ ರಿಪೋರ್ಟ್ ಆಫ್ ದಿ ಮೈಸೂರು ಆರ್ಕಿಯೋಲಜಿಕಲ್ ಡಿಪಾರ್ಟ್‌ಮೆಂಟ್ ೧೯೪೦, ಮೈಸೂರು: ಮೈಸೂರು ವಿಶ್ವವಿದ್ಯಾಲಯ.

೫. ಆನ್ಯೂಯಲ್ ರಿಪೋರ್ಟ್ ಆಫ್ ದಿ ಮೈಸೂರು ಆರ್ಕಿಯೋಲಜಿಕಲ್ ಡಿಪಾರ್ಟ್‌ಮೆಂಟ್ ೧೯೪೧, ಮೈಸೂರು: ಮೈಸೂರು ವಿಶ್ವವಿದ್ಯಾಲಯ.

೬. ಆನ್ಯೂಯಲ್ ರಿಪೋರ್ಟ್ ಆಫ್ ದಿ ಮೈಸೂರು ಆರ್ಕಿಯೋಲಜಿಕಲ್ ಡಿಪಾರ್ಟ್‌ಮೆಂಟ್ – ೧೯೪೨, ಮೈಸೂರು: ಮೈಸೂರು ವಿಶ್ವವಿದ್ಯಾಲಯ.

೭. ಸೀಕ್ರೇಟ್ ಕರಾಸ್ಪಂಡೆನ್ಸ್ ಆಫ್ ಟಿಪ್ಪು ಸುಲ್ತಾನ್, ಬೆಂಗಳೂರು ಪತ್ರಾಗಾರ.

೮. ಸೈನ್ಯದ ಯುದ್ಧಭೂಮಿಯ ಪತ್ರವ್ಯವಹಾರಗಳು, ಸಂಪುಟ –೩೬, ೩೮ ಮತ್ತು ೪೦, ಮದ್ರಾಸ್ ಮ್ಯೂಸಿಯಂ..

೯. ಮಿಲಿಟರಿ ಮಿಸಿಲೇನಿಯಸ್ ಬುಕ್ಸ್ ಸಂಪುಟ– ೧೦೬, ಮದ್ರಾಸ್ ಮ್ಯೂಸಿಯಂ.

೧೦. ಮಿಲಿಟರಿ ಮಿಸಿಲೇನಿಯಸ್ ಬುಕ್ಸ್ ಸಂಪುಟ– ೧೦೯ ಎ ಮತ್ತು ೧೦೯ ಬಿ., ಮದ್ರಾಸ್ ಮ್ಯೂಸಿಯಂ.

೧೧. 'ಹೈದರ್‌ನಾಮ', ಆನ್ಯೂಯಲ್ ರಿಪೋರ್ಟ್ ಆಫ್ ದಿ ಮೈಸೂರು ಆರ್ಕಿಯೋಲಜಿಕಲ್ ಡಿಪಾರ್ಟ್‌ಮೆಂಟ್ ೧೯೩೦, ಮೈಸೂರು: ಮೈಸೂರು ವಿಶ್ವವಿದ್ಯಾಲಯ.

**ಗ್ಯಾಸೆಟಿಯರ್‌ಗಳು**


೧. ಇಂಪೀರಿಯಲ್ **ಗ್ಯಾಸೆಟಿಯರ್ ಆಫ್ ಇಂಡಿಯಾ ಪ್ರಾವಿನ್ಷಿಯಲ್ ಸೀರೀಸ್: ಹೈದ್ರಾಬಾದ್ ಸ್ಟೇಟ್ ರಾಯ್‌ಚೂರ್,** ೨೦೧೧ (ಮರುಮುದ್ರಣ), ಬೆಂಗಳೂರು:ಗ್ಯಾಸೆಟಿಯರ್ ಇಲಾಖೆ.

೨. ಜಾನ್ ಸ್ಟ್ರೋಕ್, ೨೦೦೩ (ಮರುಮುದ್ರಣ), **ಸೌಥ್ ಕೆನರಾ ವಾಲ್ಯೂಂ–೧,** ಬೆಂಗಳೂರು: ಗ್ಯಾಸೆಟಿಯರ್ ಇಲಾಖೆ.

೩. ಜೇಮ್ಸ್ ಎಚ್. ಕ್ಯಾಂಬೆಲ್, ೨೦೦೩ (ಮರುಮುದ್ರಣ), **ಧಾರವಾರ್ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್,** ಬೆಂಗಳೂರು: ಗ್ಯಾಸೆಟಿಯರ್ ಇಲಾಖೆ.

೪. ಜೇಮ್ಸ್ ಎಚ್. ಕ್ಯಾಂಬೆಲ್, ೨೦೦೩ (ಮರುಮುದ್ರಣ), **ಕೆನರಾ,** ಬೆಂಗಳೂರು: ಗ್ಯಾಸೆಟಿಯರ್ ಇಲಾಖೆ.

೫. ಬೆಂಜಮಿನ್ ಲೂಯಿ ರೈಸ್, ೨೦೦೪(ಮರುಮುದ್ರಣ), **ಮೈಸೂರ್– ಎ ಗ್ಯಾಸೆಟಿಯರ್ ಫಾರ್ ಗೌರ್ನಮೆಂಟ್ (ಎರಡು ಸಂಪುಟಗಳು),** ಬೆಂಗಳೂರು: ಗ್ಯಾಸೆಟಿಯರ್ ಇಲಾಖೆ.

೬. ಬೆಂಜಮೀನ್ ಲೂಯಿ ರೈಸ್, ೨೦೦೪ (ಮರುಮುದ್ರಣ), **ಮೈಸೂರ್ ಅಂಡ್ ಕೂರ್ಗ್ ವಾಲ್ಯೂಮ್ –೩,** ಬೆಂಗಳೂರು: ಗ್ಯಾಸೆಟಿಯರ್ ಇಲಾಖೆ.

೭. ಮೋಗ್ಲಿಂಗ್ ಹೆಚ್. ರೆವರೆಂಡ್, ೧೮೫೫, **ಕೂರ್ಗ್ ಮೆಮ್ವಾ,** ಬೆಂಗಳೂರು: ವೆಸ್ಲಿ ಮಿಷನ್.

೮. ರಿಕ್ಟರ್ ಜಿ., ೨೦೧೪(೧೮೭೦) **ಗ್ಯಾಸೆಟಿಯರ್ ಆಫ್ ಕೂರ್ಗ್,** ಚೆನ್ನೈ: ಏಷ್ಯನ್ ಪಬ್ಲಿಕೇಷನ್ಸ್.

೯. ಸೂರ್ಯನಾಥ ಯು. ಕಾಮತ್, (ಸಂ.) ೧೯೯೦, **ಬೆಂಗಳೂರು ಡಿಸ್ಟ್ರಿಕ್ಟ್ ಗ್ಯಾಸೆಟಿಯರ್,** ಬೆಂಗಳೂರು: ಗ್ಯಾಸೆಟಿಯರ್ ಇಲಾಖೆ.

೧೦. ಹಯವದನರಾವ್, ೧೯೩೦, **ಮೈಸೂರ್ ಗ್ಯಾಸೆಟಿಯರ್, ಸಂಪುಟ–೨, ಪಾರ್ಟ್–೪,** ಬೆಂಗಳೂರು: ಗೌವರ್ನಮೆಂಟ್ ಪ್ರೆಸ್.

೧೧. ಹಯವದನರಾವ್, ೧೯೩೦, **ಮೈಸೂರ್ ಗ್ಯಾಸೆಟಿಯರ್, ಸಂಪುಟ–೫,** ಬೆಂಗಳೂರು: ಗೌವರ್ನಮೆಂಟ್ ಪ್ರೆಸ್.

೧೨. ಹಂಟರ್ ಡಬ್ಲ್ಯೂಡಬ್ಲ್ಯೂ, ೧೮೮೬, ದಿ ಇಂಪಿರಿಯಲ್ **ಗ್ಯಾಸೆಟಿಯರ್ ಆಫ್ ಇಂಡಿಯಾ, ಸಂಪುಟ–೯,** ಮದ್ರಾಸ್ ಪ್ರೆಸಿಡೆನ್ಸಿ, ಮದ್ರಾಸ್.

**ಆನುಷಂಗಿಕ ಆಕರಗಳು**


೧. ಆಲ್ಚಿನ್, ಬ್ರಿಡ್ಜೆಟ್ ಮತ್ತು ರೈಮಂಡ್, ೨೦೧೧(೧೯೯೬), **ದಿ ರೈಸ್ ಆಫ್ ಸಿವಿಲೈಜೇಷನ್ ಇನ್ ಇಂಡಿಯಾ ಅಂಡ್ ಪಾಕಿಸ್ತಾನ್,** ನವದೆಹಲಿ: ಕೇಂಬ್ರಿಡ್ಜ್ ಯುನಿವರ್ಸಿಟಿ ಪ್ರೆಸ್.

೨. ಉಪ್ಪಿಂದರ್ ಸಿಂಗ್, ೨೦೧೨(೨೦೦೯), **ಎ ಹಿಸ್ಟ್ರಿ ಆಫ್ ಏನ್ಷಿಯಂಟ್ ಅಂಡ್ ಅರ್ಲಿಮಿಡಿವಲ್ ಇಂಡಿಯಾ,** ನವದೆಹಲಿ: ಪಿಯರ್‌ಸನ್.

೩. ಕಿರ್ಮಾನಿ, ಹುಸೇನ್ ಅಲಿ, ೧೯೯೭ (೧೮೬೪), **ಹಿಸ್ಟ್ರಿ ಆಫ್ ಟಿಪು ಸುಲ್ತಾನ್ – ಬಿಯಿಂಗ್ ಎ ಕಂಟಿನೇಷನ್ ಆಫ್ ದ ನಿಷಾನಿ ಹೈದುರಿ,** ಮದ್ರಾಸ್: ಏಷ್ಯನ್ ಎಡುಕೇಷನಲ್ ಸರ್ವಿಸ್.

೪. ಕುಂಕುಮ್ ರಾಯ್, ೨೦೦೯, **ಹಿಸ್ಟಾರಿಕಲ್ ಡಿಕ್ಷನರಿ ಆಫ್ ಏನ್ಷಿಯಂಟ್ ಇಂಡಿಯಾ,** ಯು.ಎಸ್.ಎ: ಸ್ಕೇರ್ ಕ್ರೋ ಪ್ರೆಸ್.

೫. ಹರ್ಮನ್ ಕುಲ್ಕೆ, ಮತ್ತಿತರರು, ೨೦೦೪(೧೯೮೬), **ಎ ಹಿಸ್ಟ್ರಿ ಆಫ್ ಇಂಡಿಯಾ,** ನ್ಯೂಯಾರ್ಕ್: ರೌಟ್ಲೆಡ್ಜ್.

೬. ಗಾಯ್ ಜಿ.ಎಸ್., ೧೯೭೨, **ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, ಸಂಪುಟ–೧೬,** ನವದೆಹಲಿ: ಭಾರತೀಯ ಪುರಾತತ್ತ್ವ ಸರ್ವೇಕ್ಷಣಾ ಇಲಾಖೆ.

೭. ಘೋಷ್.ಎ., ೧೯೮೯, **ಆನ್ ಎನ್‌ಸೈಕ್ಲೋಪೀಡಿಯ ಆಫ್ ಇಂಡಿಯನ್ ಆರ್ಕಿಯೋಲಜಿ,** ನವದೆಹಲಿ: ಮುನ್ಷಿರಾಮ್ ಮನೋಹರ್‌ಲಾಲ್ ಪಬ್ಲಿಷರ್ಸ್.

೮. ಜೋಶಿ ಎಸ್.ಕೆ., ೧೯೮೫, **ಡಿಫೆನ್ಸ್ ಆರ್ಕಿಟೆಕ್ಚರ್ ಇನ್ ಅರ್ಲಿ ಕರ್ನಾಟಕ,** ಡೆಲ್ಲಿ: ಸಂದೀಪ್ ಪ್ರಕಾಶನ.

೯. ಜೀನ್ ಡಿಲೋಷ್, ೨೦೦೭, **ಸ್ಟಡೀಸ್ ಆನ್ ಫೋರ್ಟಿಫಿಕೇಷನ್ ಇನ್ ಇಂಡಿಯಾ,** ಪಾಂಡಿಚೆರಿ: ಇನ್‌ಸ್ಟಿಟ್ಯೂಟ್ ಫ್ರಾನ್ಸಿಸ್ ಡೆ ಪಾಂಡಿಚೆರಿ.

೧೦. ರೊಮಿಲಾ ಥಾಪರ್, ೨೦೦೨, **ಅರ್ಲಿ ಇಂಡಿಯಾ: ಫ್ರಂ ದಿ ಒರಿಜನ್ಸ್ ಟು ಎ.ಡಿ. ೧೩೦೦,** ನವದೆಹಲಿ: ಪೆಂಗ್ವಿನ್.

೧೧. ದೇವರಾಜ್ ಸಿ.ಎಚ್., (ಪ್ರ.ಸಂ.), ೧೯೯೭, **ಸೆಲೆಕ್ಷನ್ಸ್ ಫ್ರಂ ದ ರೆಕಾರ್ಡ್ಸ್ ಆಫ್ ದ ಮೈಸೂರು ಪ್ಯಾಲೇಸ್, ವಾಲ್ಯೂಂ–೨,** ಬೆಂಗಳೂರು: ಡಿಪಾರ್ಟ್‌ಮೆಂಟ್ ಆರ್ಕೇವ್ಸ್.

೧೨. ನಿಕೋಲಸ್ ಬಿ. ಡರ್ಕ್ಸ್, ೨೦೦೮, **ದಿ ಸ್ಕ್ಯಾಂಡಲ್ ಆಫ್ ಎಂಪೈರ್: ಇಂಡಿಯಾ ಅಂಡ್ ದಿ ಕ್ರಿಯೆಷನ್ ಆಫ್ ಇಂಪೀರಿಯಲ್ ಬ್ರಿಟನ್,** ನ್ಯೂಡೆಲ್ಲಿ: ಪರ್ಮನೆಂಟ್ ಬ್ಲಾಕ್.

೧೩. ಶ್ರೀನಿವಾಸ್ ಪಾಡಿಗಾರ್ ವಿ., ೨೦೧೧, **ಇನ್ಸ್ಕ್ರಿಪ್ಷನ್ಸ್ ಆಫ್ ದಿ ಚಾಲುಕ್ಯಾಸ್ ಆಫ್ ಬಾದಾಮಿ,** ಬೆಂಗಳೂರು: ಐ.ಸಿ.ಎಚ್.ಆರ್.

೧೪. ಬಾಲಸುಬ್ರಮಣ್ಯಮ್ ಆರ್. ೨೦೦೮, **ದಿ ಸಾಗ ಆಫ್ ಇಂಡಿಯನ್ ಕೆನಾನ್ಸ್, ನ್ಯೂಡೆಲ್ಲಿ:** ಆರ್ಯನ್ ಬುಕ್ ಇಂಟರ್‌ನ್ಯಾಷನಲ್.

೧೫. ಕ್ಯಾತೆ ಬ್ರಿಟಲ್‌ಬ್ಯಾಂಕ್, ೧೯೯೭, **ಟಿಪು ಸುಲ್ತಾನ್ಸ್ ಸರ್ಚ್ ಫಾರ್ ಲೆಜಿಟಿಮಸಿ: ಇಸ್ಲಾಂ ಅಂಡ್ ಕಿಂಗ್‌ಷಿಪ್ ಇನ್ ಎ ಹಿಂದೂ ಡೊಮೈನ್,** ಡೆಲ್ಲಿ: ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್.

೧೬. ಫ್ರಾನ್ಸಿಸ್ ಬುಕನಾನ್, ೧೮೦೭, **ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರಿಸ್ ಆಫ್ ಮೈಸೂರು, ಕೆನರಾ ಅಂಡ್ ಮಲಬಾರ್, ವಾಲ್ಯೂಂ ೧–೩,** ಲಂಡನ್: ಪ್ರಿಂಟೆಡ್ ಫೋರ್ಟ್.

೧೭. ಬೌರಿಂಗ್, ಎಲ್.ಬಿ., ೧೮೯೩, **ಹೈದರ್ ಅಲಿ ಅಂಡ್ ಟಿಪು ಸುಲ್ತಾನ್,** ಆಕ್ಸ್‌ಫರ್ಡ್: ಕ್ಲಾರೆಂಡಾನ್ ಪ್ರೆಸ್.

೧೮. ಭಾಷಂ, ಎ.ಎಲ್., ೨೦೦೪(೧೯೫೪), **ದಿ ವಂಡರ್ ದಟ್ ವಾಸ್ ಇಂಡಿಯಾ,** ಲಂಡನ್: ಪಿಕಡೋರ.

೧೯. ಗೋಲಮ್ ಮಹಮ್ಮದ್, ೧೮೫೫, **ಹಿಸ್ಟ್ರಿ ಆಫ್ ಹೈದರ್ ಅಲಿ ಅಂಡ್ ಟಿಪ್ಪೂಸುಲ್ತಾನ್,** ಲಂಡನ್: ಥ್ಯಾಕರ್ ಅಂಡ್ ಕಂ.

೨೦. ಮಲ್ಲೆಸನ್ ಜಿ.ಬಿ., ೧೮೭೬, **ಸೆರಿಂಗಪಟಂ: ಪಾಸ್ಟ್ ಅಂಡ್ ಪ್ರೆಸೆಂಟ್,** ಮದ್ರಾಸ್: ಹಿಗ್ಗಿನ್ಸ್ ಬಾಥಂ.

೨೧. ಜಾರ್ಜ್ ಮಿಷಲ್, ೨೦೧೩, **ಸದರ್ನ್ ಇಂಡಿಯ ಎ ಗೈಡ್ ಟು ಮಾನ್ಯುಮೆಂಟ್ಸ್ ಸೈಟ್ ಅಂಡ್ ಮ್ಯೂಸಿಯಂ,** ನವದೆಹಲಿ: ರೊಲಿ ಬುಕ್ಸ್.

೨೨. ರಾಜಯ್ಯನ್, ೨೦೧೨, **ಸೌಥ್ ಇಂಡಿಯನ್ ರೆಬಿಲಿಯನ್,** ಚೆನ್ನೈ: ಅಕನಿ ವೇಲಿಯಿಡು.

೨೩. ವಿಲ್ಕ್ಸ್, ಕರ್ನಲ್ ಮಾರ್ಕ್, ೧೮೧೦, **ಹಿಸ್ಟ್ರಿ ಆಫ್ ಸೌಥ್ ಇಂಡಿಯ ವಾಲ್ಯೂಂ–೧,** ಲಂಡನ್: ಪ್ರಿಂಟೆಡ್ ಫಾರ್ ಲಾಂಗ್‌ಮನ್.

೨೪. ವಿಲ್ಕ್ಸ್, ಕರ್ನಲ್ ಮಾರ್ಕ್, ೧೮೧೭, **ಹಿಸ್ಟ್ರಿ ಆಫ್ ಸೌಥ್ ಇಂಡಿಯ ವಾಲ್ಯೂಂ-೨ & ೩,** ಲಂಡನ್: ಪ್ರಿಂಟೆಡ್ ಫಾರ್ ಲಾಂಗ್‌ಮನ್.

೨೫. ಶೇಷಾದ್ರಿ ಎ.ಕೆ., ೨೦೦೬, **ವೆಲ್ಲೂರ್ ಫೋರ್ಟ್ ಅಂಡ್ ದ ಟೆಂಪಲ್ ಥ್ರೂ ದ ಏಜೆಸ್,** ವೆಲ್ಲೂರು: ಶ್ರೀಜಲಕಂಠೇಶ್ವರ ಧರ್ಮಸಂಸ್ಥಾನ.

೨೬. ಸೇನ್ ಎಸ್.ಪಿ., ೧೯೭೧, **ದಿ ಫ್ರೆಂಚ್ ಇನ್ ಇಂಡಿಯಾ ೧೭೬೩-೧೮೧೬,** ನವದೆಹಲಿ: ಮುನ್ಷಿರಾಮ್ ಮನೋಹರ್‌ಲಾಲ್.

೨೭. ಸ್ವಾಮಿ ಎಲ್.ಎನ್., ೧೯೯೬, **ಹಿಸ್ಟ್ರಿ ಆಫ್ ಶ್ರೀರಂಗಪಟ್ಟಣ,** ನವದೆಹಲಿ : ಹರ್ಮನ್ ಪಬ್ಲಿಷಿಂಗ್ ಹೌಸ್.

೨೮. ಇರ್ಫಾನ್ ಹಬೀಬ್, ೧೯೯೯, **ರೆಸಿಸ್ಟೆನ್ಸ್ ಅಂಡ್ ಮಾಡರ್ನೈಜೇಷನ್ ಅಂಡರ್ ಹೈದರ್ ಅಲಿ ಅಂಡ್ ಟಿಪು ಸುಲ್ತಾನ್,** ನ್ಯೂಡೆಲ್ಲಿ: ತುಲಿಕಾ ಪಬ್ಲಿಕೇಷನ್.

೨೯. ಹಯವದನರಾವ್, ೧೯೪೩, **ಹಿಸ್ಟರಿ ಆಫ್ ಮೈಸೂರು,** ಬೆಂಗಳೂರು: ಗೌವರ್ನಮೆಂಟ್ ಪ್ರೆಸ್.

೩೦. ಹಸನ್, ಫಜ್ಲುಲ್ ಎಂ., ೧೯೭೦, **ಬೆಂಗಳೂರು ಥ್ರೂ ದಿ ಸೆಂಚುರಿಸ್,** ಬೆಂಗಳೂರು: ಹಿಸ್ಟಾರಿಕಲ್ ಪಬ್ಲಿಕೇಷನ್ಸ್.

೩೧. ಹೋಮ್, ೧೮೦೮, **ಸೆಲೆಕ್ಟೆಟ್ ವ್ಯೂಸ್ ಆಫ್ ಮೈಸೂರ್,** ಲಂಡನ್: ಬೋಯರ್.

**ಲೇಖನಗಳು**

೧. ಕೌಶಿಕ್‌ರಾಯ್, ೨೦೦೫, 'ರಾಕೆಟ್ಸ್ ಅಂಡರ್ ಹೈದರ್ ಅಲಿ ಅಂಡ್ ಟಿಪ್ಪುಸುಲ್ತಾನ್', ಇನ್ **ಇಂಡಿಯನ್ ಜರ್ನಲ್ ಹಿಸ್ಟರಿ ಅಂಡ್ ಸೈನ್ಸ್,** ೪೦, ಪು.೬೩೫-೬೫೬.

೨. ಕೌಶಿಕ್ ರಾಯ್, ೨೦೦೧, 'ಹಿಸ್ಟೋರಿಯೊಗ್ರಫಿಕಲ್ ಸರ್ವೆ ಆಫ್ ದ ರೈಟಿಂಗ್ಸ್ ಆನ್ ಇಂಡಿಯನ್ ಮಿಲಿಟರಿ ಹಿಸ್ಟರಿ', (ಸಂ.) ಸಭ್ಯಸಾಚಿ ಭಟ್ಟಾಚಾರ್ಯ, **ಅಪ್ರೋಚ್ ಟು ಹಿಸ್ಟರಿ ಎಸ್ಸೇಸ್ ಇನ್ ಇಂಡಿಯನ್ ಹಿಸ್ಟರಿಯೊಗ್ರಫಿ,** ನವದೆಹಲಿ: ಪ್ರೈಮಸ್ ಬುಕ್ಸ್.

೩. ಗುಡ್‌ವಿಲ್ ಎಫ್, ೧೯೧೫, 'ಬ್ರಿಟಿಷ್ ಪ್ರಿಸಿನರ್ಸ್ ಇನ್ ಮೈಸೂರು ಫೋರ್ಟ್ರೆಸ್ಸಸ್' **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೬(೩):೨೦೩-೨೨೧.

೪. ಗುಡ್‌ವಿಲ್ ಎಫ್, ೧೯೧೮, 'ಸಮ್ ಫೋರ್ಟ್ಸ್ ಆಫ್ ಈಸ್ಟ್ ಮೈಸೂರು' **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೮(೨):೧೫೪-೧೬೫.

೫. ಗುಡ್‌ವಿಲ್ ಎಫ್, ೧೯೧೯, 'ನಂದಿದುರ್ಗ', **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೯(೪):೨೯೮-೩೦೭.

೬. ಗುಡ್‌ವಿಲ್ ಎಫ್, ೧೯೨೨, 'ಎನ್ಷಿಯಂಟ್ ಸ್ಟೋರಿ ಆಫ್ ದೇವರಾಯನದುರ್ಗ' **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೧೨(೪): ೩೪೯-೩೫೬.

೭. ಗುಡ್‌ವಿಲ್ ಎಫ್, ೧೯೪೨, 'ಹುತ್ರಿದುರ್ಗ ಅಂಡ್ ಹುಲಿಯೂರುದುರ್ಗ' **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೧೪(೨):೭೩-೮೧.

೮. ಜಾನಕಿ ನಾಯರ್, ೨೦೦೬, 'ಟಿಪ್ಪು ಸುಲ್ತಾನ್, ಹಿಸ್ಟರಿ ಪೇಂಟಿಂಗ್ಸ್ ಅಂಡ್ ದ ಬ್ಯಾಟಲ್ ಫರ್ ಪರ್ಸ್ಪೆಕ್ಟಿವ್', **ಸ್ಟಡೀಸ್ ಇನ್ ಹಿಸ್ಟರಿ,** ೨೨(೧):೯೭-೧೪೩.

೯. ತಬಾರ್ಡ್ ಎ.ಎಂ., ೧೯೧೭, **'ಟಿಪ್ಪು ಸುಲ್ತಾನ್ ಎಂಬಸಿಸ್ ಟು ದ ಫ್ರೆಂಚ್ ಕೋರ್ಟ್ ಇನ್ ೧೭೮೮' ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೭(೨): ೭೭-೧೦೧.

೧೦. ಥಾಮ್ಸನ್ ಈ.ಡಬ್ಲ್ಯೂ, ೧೯೦೯, **'ಲಾಸ್ಟ್ ಸೀಜ್ ಆಫ್ ಸಿರಂಗಪಟಂ' ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೧(೩):೯೦-೯೯.

೧೧. ನರಸಿಂಹಮೂರ್ತಿ ಪಿ.ಎನ್., ೨೦೧೦, 'ಪಾಲಿಸಿ ಫಾಲೋಡ್ ಬೈ ಟಿಪ್ಪು ಸುಲ್ತಾನ್ ಟುವರ್ಡ್ಸ್ ಸೌಥ್ ಕೆನರಾ ಅಂಡ್ ಕೂರ್ಗ್', **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೧೦೧(೨): ೨೬-೫೦.

೧೨. ನಿಗಂ ಎಂ.ಎಲ್., ೧೯೯೩, **'ಆರ್ಮ್ಸ್ ಅಂಡ್ ಆರ್ಮರ್ ಆಫ್ ದಿ ಮೆಡಿವಲ್ ಡೆಖನ್ ವಿಥ್ ಸ್ಪೆಷಲ್ ರೆಫರೆನ್ಸ್ ಟು ಟಿಪ್ಪು ಸುಲ್ತಾನ್'** ಇನ್ ಶೇಕ್ ಅಲಿ ಬಿ. (ಸಂ.) **ಟಿಪ್ಪು ಸುಲ್ತಾನ್ ಎ ಗ್ರೇಟ್ ಮಾರ್ಟಿಯರ್,** ಬೆಂಗಳೂರು: ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.

೧೩. ಪದ್ದಯ್ಯ ಕೆ., ೨೦೦೨, 'ದಿ ಪ್ರಾಬ್ಲಂ ಆಫ್ ಆಶ್‌ಮೌಂಡ್ಸ್ ಆಫ್ ಸದರನ್ ಡೆಖನ್ ಇನ್ ದಿ ಲೈಟ್ ಆಫ್ ರೀಸೆಂಟ್ ರಿಸರ್ಚ್', **ರೀಸೆಂಟ್ ಸ್ಟಡೀಸ್ ಇನ್ ಇಂಡಿಯನ್ ಆರ್ಕಿಯೋಲಜಿ,** ನವದೆಹಲಿ: ಮುನ್ಷಿರಾಂ ಮನೋಹರ್‌ಲಾಲ್.

೧೪. ಪ್ರವೀಣ್ ರುಕ್ಸಾನ್, ೨೦೦೨, 'ಮಿಲಿಟರಿ ಅಡ್ಮಿಸ್ಟ್ರೇಷನ್ ಅಂಡರ್ ಟಿಪು ಸುಲ್ತಾನ್ ಎ ಸ್ಟಡಿ', **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೯೩(೧) ೭೦-೭೭.

೧೫. ಪ್ರಶಾಂತ್.ಕೆ.ಸಿ., ೨೦೦೪, 'ಪ್ರಾಮಿಸ್ ಬಿಲಿಡ್ ಇವ್ಯಾಲ್ಯುಯೇಷನ್ ಆಫ್ ಟಿಪ್ಪುಸುಲ್ತಾನ್ ಬೈ ದ ಮೈಸೂರ್ ಹಿಸ್ಟೋರಿಯನ್ಸ್,' **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೯೫(೨): ೩೬–೫೭.

೧೬. ಪ್ರವೀಣ್ ಪ್ರಕಾಶನ್, ೨೦೦೨, 'ಮಿಲಿಟರಿ ಅಡ್ಮಿನಿಸ್ಟರೇಷನ್ ಅಂಡರ್ ಟಿಪ್ಪು ಸುಲ್ತಾನ್: ಎ ಸ್ಟಡಿ', **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೯೩(೧) : ೭೦–೭೭.

೧೭. ಬ್ಯಾರಿ ಲೂಯಿಸ್, ೨೦೦೯, 'ವಿಲೇಜ್ ಡಿಫೆನ್ಸಸ್ ಒಫ್ ದಿ ಕರ್ನಾಟಕ ಮೈದಾನ್, ಎ.ಡಿ ೧೬೦೦–೧೮೦೦', ಇನ್ **ಏಷಿಯನ್ ಸ್ಟಡೀಸ್** ೨೫, ಪು.೯೧–೧೧೧.

೧೮. ಬ್ಯಾರಿ ಲೂಯಿಸ್, ೨೦೧೨, 'ಬ್ರಿಟಿಷ್ ಅಸೆಸ್‌ಮೆಂಟ್ ಆಫ್ ಟಿಪ್ಪುಸುಲ್ತಾನ್ಸ್ ಹಿಲ್ ಫೋರ್ಟ್ಸ್ ಇನ್ ನಾರ್ಥರನ್ ಮೈಸೂರು, ಸೌಥ್ ಇಂಡಿಯಾ, ೧೮೦೨', **ಇಂಟ್ ಜೆ ಹಿಸ್ಟರ್ ಆರ್ಕಿಯಾಲಜಿ,** ೧೬: ೧೬೪–೧೯೮.

೧೯. ಫತೆಮ್ಹಾ ತಗಾವಿ, ೨೦೧೨, 'ಸ್ಪೀಕ್ ಆಫ್ ದ ವಾಲ್ಸ್ ಆಫ್ ದರಿಯಾದೌಲತ್, ದ ಶ್ರೀರಂಗಪಟ್ಟಣ', **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೧೦೩(೧): ೨೭–೩೪.

೨೦. ಮ್ಯಾಥ್ಯೂ ಕೆ.ಎಂ., ೧೯೮೨, 'ಸರ್ವೇ ಆಫ್ ದಿ ಪೋರ್ಚುಗೀಸ್ ಫೋರ್ಟ್ಸ್ ಆನ್ ದಿ ವೆಸ್ಟ್ ಕೋಸ್ಟ್ ಆಫ್ ಇಂಡಿಯಾ', **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೭೩(೨): ೫೫–೭೨.

೨೧. ಮೊಹಮ್ಮದ್ ಮೊಯಿನ್‌ಉದ್ದೀನ್, ೨೦೦೦, 'ಡಿಸ್ಟರ್ಸನ್ಸ್ ಆಫ್ ಇಂಡಿಯನ್ ಹಿಸ್ಟರಿ ವಿತ್ ರೆಫ್ರೆನ್ಸ್ ಟು ಟಿಪ್ಪು ಸುಲ್ತಾನ್', **ಇಂಡಿಯನ್ ಹಿಸ್ಟರಿ ಕಾಂಗ್ರೆಸ್ ಪ್ರೊಸಿಡಿಂಗ್ಸ್.**

೨೨. ರಿಚರ್ಡ್ ಈಟನ್, ಫಿಲಿಪ್ ಬಿ ವ್ಯಾಗನರ್, ೨೦೧೪, 'ವಾರ್‌ಫೇರ್ ಆನ್ ದಿ ಡೆಕ್ಕನ್ ಪ್ಲಾಟೂ, ೧೪೫೦–೧೬೦೦: ಎ ಮಿಲಿಟರಿ ರೆವಲ್ಯೂಷನ್ ಇನ್ ಅರ್ಲಿ ಮಾಡರ್ನ್ ಇಂಡಿಯಾ', **ಜರ್ನಲ್ ಆಫ್ ವರ್ಲ್ಡ್ ಹಿಸ್ಟರಿ,** ೨೫(೧): ೫–೫೫.

೨೩. ವಸಂತ ಮಾಧವ ಕೆ.ಜಿ., ೨೦೧೨, 'ವಿಜನ್ಸ್ ಆಫ್ ಟಿಪು ಸುಲ್ತಾನ್ ಆನ್ ಸೈಂಟಿಫಿಕ್ ಡೆವಲಪ್‌ಮೆಂಟೆ ಎ ಕ್ರಿಟಿಕಲ್ ಅಫ್ರೋಚ್', **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೧೦೩(೪): ೪೩–೯೦.

೨೪. ಸಾಲ್ತೊರೆ ಆರ್.ಎನ್., ೧೯೩೭, 'ದಿ ಮೊನಿಟರಿ ಅರೆಂಜ್‌ಮೆಂಟ್ಸ್ ಆಫ್ ದ ಮೈಸೂರ್ ಸುಲ್ತಾನೆಟ್' **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೨೮(೨):೫೫-೭೨.

೨೫. ಸಾಲ್ತೊರೆ ಆರ್.ಎನ್., ೧೯೩೮, 'ಕಾನ್‌ಕ್ವೆಸ್ಟ್ ಆಫ್ ಚಿತ್ರದುರ್ಗ ಬೈ ಹೈದರ್ ಅಲಿ' **ಕ್ವಾರ್ಟರ್ಲಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ,** ೨೯(೨):೧೭೧-೧೮೮.

೨೬. ಸಿಮೊನ್ ವೆರೆಟ್, ೨೦೧೨, 'ಟೆಕ್ನಾಲಜಿ ಆನ್ ದಿ ಸ್ಪಾಟ್: ದಿ ಟ್ರಯಲ್ ಆಫ್ ದಿ ಕಾಂಗ್ರೆವ್ ರಾಕೆಟ್ ಇನ್ ಇಂಡಿಯಾ ಇನ್ ದಿ ಅರ್ಲಿ ನೈಂಟೀನ್ತ್ ಸೆಂಚುರಿ', **ಪ್ರಾಜೆಕ್ಟ್ ಮ್ಯೂಸ್** (ನಿಯತಕಾಲಿಕೆ), ಸಂ.೫೩, ನಂಬರ್೩, ಜುಲೈ ೨೦೧೨, ಪು.೫೯೮-೬೨೪.

## ಅಪ್ರಕಟಿತ ಆಕರಗಳು

### ಕನ್ನಡ ಭಾಷಾ ಎಂ.ಫಿಲ್ ಮತ್ತು ಪಿಎಚ್.ಡಿ ಸಂಪ್ರಬಂಧಗಳು

೧. ಉಜಿರಾ ಬಾನು ೨೦೧೬, **ಟಿಪ್ಪು ಜನಪದ ಕಥನ,** ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿ.ಹೆಚ್.ಡಿ ಸಂಪ್ರಬಂಧ, ಹಂಪಿ.

೨. ಪುಟ್ಟರಾಜ ೨೦೧೦, **ಮೈಸೂರು ಸಂಸ್ಥಾನದ ಇತಿಹಾಸದಲ್ಲಿ ಜಾನುವಾರು-ಅಮೃತಮಹಲ್ ತಳಿ ಕುರಿತು ವಿಶೇಷ ಅಧ್ಯಯನ** (೧೫೭೨-೧೯೪೭), ಬೆಂಗಳೂರು ವಿಶ್ವ ವಿಶ್ವವಿದ್ಯಾಯಲಕ್ಕೆ ಸಲ್ಲಿಸಿದ ಪಿಎಚ್.ಡಿ ಸಂಪ್ರಬಂಧ.

೩. ಬಸವರಾಜ ಸಿ., ೨೦೧೦, **ಚಿತ್ರದುರ್ಗ ಕೋಟೆಯ ಐತಿಹ್ಯಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ. ಇಲ್ಲಿ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಸಂಶೋಧನಾ ಪ್ರಬಂಧ.

೪. ಬೇಬಿ, ೨೦೦೭, **ಬೀದರ್ ಕೋಟೆಯ ಐತಿಹ್ಯಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ. ಇಲ್ಲಿ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಸಂಶೋಧನಾ ಪ್ರಬಂಧ.

೫. ಮುನಿರಾಜ, ೨೦೧೨, **ತುಮಕೂರು ಜಿಲ್ಲೆಯ ಗಿರಿದುರ್ಗಗಳ ಐತಿಹಾಸಿಕ ಅಧ್ಯಯನ,** ಬೆಂಗಳೂರು ವಿಶ್ವವಿದ್ಯಾಯಲಕ್ಕೆ ಸಲ್ಲಿಸಿದ ಪಿಎಚ್.ಡಿ ಸಂಪ್ರಬಂಧ.

೬. ಯಶೋಧ ಪಿ., ೨೦೧೬, **ಬೆಂಗಳೂರಿನ ವರ್ತಕ ಸಮುದಾಯಗಳು: ವಸಾಹತು ಕಾಲಘಟ್ಟದ ಅಧ್ಯಯನ** (೧೭೯೯-೧೯೪೭), ಕನ್ನಡ ವಿಶ್ವ ವಿಶ್ವವಿದ್ಯಾಯಲಕ್ಕೆ ಸಲ್ಲಿಸಿದ ಪಿಎಚ್.ಡಿ ಸಂಪ್ರಬಂಧ.

೭. ರಂಗಪ್ಪ ಎಂ., ೨೦೦೬, **ಮೈಸೂರು ಒಡೆಯರ ಕಾಲದ ಕೋಟೆಗಳು ಮತ್ತು ಅರಮನೆಗಳು –ಒಂದು ಅಧ್ಯಯನ,** ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಪಿಎಚ್.ಡಿ ಸಂಪ್ರಬಂಧ.

೮. ವಿಶ್ವನಾಥ್ ಕೆ.ಎಸ್., ೨೦೧೬, **ಟಿಪ್ಪುಸುಲ್ತಾನ್ ಹಾಗೂ ಫ್ರೆಂಚರು: ಮಿಲಿಟರಿ ಮತ್ತು ರಾಜಕಾರಣ ನೆಲೆಯ ಅಧ್ಯಯನ,** ಕನ್ನಡ ವಿಶ್ವ ವಿಶ್ವವಿದ್ಯಾಯಲಕ್ಕೆ ಸಲ್ಲಿಸಿದ ಪಿಎಚ್.ಡಿ ಸಂಪ್ರಬಂಧ.

೯. ಶಿವಪ್ಪ, ಜಿ. ೨೦೦೪, **ಮಿಲಿಟರಿ ಆರ್ಗನೈಜೇಷನ್ ಅಂಡರ್ ಹೈದರ್ ಅಲಿ ಅಂಡ್ ಟಿಪು ಸುಲ್ತಾನ್ (೧೭೬೦–೧೮೦೦),** ಮೈಸೂರು ವಿಶ್ವ ವಿಶ್ವವಿದ್ಯಾಯಲಕ್ಕೆ ಸಲ್ಲಿಸಿದ ಪಿಎಚ್.ಡಿ ಸಂಪ್ರಬಂಧ.

**ಇಂಗ್ಲಿಷ್ ಭಾಷಾ ಎಂ.ಫಿಲ್ ಮತ್ತು ಪಿಎಚ್.ಡಿ ಸಂಪ್ರಬಂಧಗಳು**

೧. ಖಾನ್, ಮುಜಾನಿದ್, ೨೦೦೭, **ಆ್ಯನ್ ಅಡ್ಮಿನಿಸ್ಟೇಟಿವ್ ಹಿಸ್ಟ್ರಿ ಆಫ್ ಮೈಸೂರ್ ಅಂಡರ್ ಹೈದರ್ ಅಲಿ ಅಂಡ್ ಟಿಪು ಸುಲ್ತಾನ್ ಫ್ರಂ ೧೭೬೧ ಟು ೧೭೯೯ ಎ.ಡಿ. (ವಿಥ್ ಸ್ಪೆಷಲ್ ಎಂಫ್ಹಸಿಸ್ ಆನ್ ಮಿಲಿಟರಿ ಅಡ್ಮಿನಿಸ್ಟ್ರೇಷನ್),** ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ.

೨. ಥೌಫಿಕ್ ಅಹಮದ್ ಟೀಪು, ೨೦೧೫, **ಡೆವೆಲಪ್‌ಮೆಂಟ್ ಆಫ್ ಆರ್ಟ್ ಅಂಡ್ ಆರ್ಕಿಟೆಕ್ಚರ್ ಅಂಡರ್ ಹೈದರ್ ಅಲಿ ಅಂಡ್ ಟಿಪು ಸುಲ್ತಾನ್ ಫ್ರಂ ೧೭೬೧–೧೭೯೯ ಎ.ಡಿ (ವಿಥ್ ಸ್ಪೆಷಲ್ ಎಂಪಸಿಸ್ ಆನ್ ಇಂಡೋ–ಇಸ್ಲಾಮಿಕ್ ಆರ್ಟ್),** ಬೆಂಗಳೂರು ವಿಶ್ವ ವಿಶ್ವವಿದ್ಯಾಯಲಕ್ಕೆ ಸಲ್ಲಿಸಿದ ಪಿಎಚ್.ಡಿ ಸಂಪ್ರಬಂಧ.

೩. ಲೋರ್ದುಸಾಮಿ, ಕೆ., ೨೦೧೦, **ಸೇಂಟ್ ಎಂಜೊಲೋ ಅಂಡ್ ಬೇಕಲ್ ಫೋರ್ಟ್ರೆಸ್: ಎ ಕಂಪ್ಯಾರಿಟಿವ್ ಸ್ಟಡಿ,** (ಕಣ್ಣೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ ಸಂಪ್ರಬಂಧ).

**ಪತ್ರಿಕಾ ಲೇಖನಗಳು ಮತ್ತು ವರದಿಗಳು**

೧. ಅಶ್ವಿನಿ ಸತ್ಯನಾರಾಯಣ, ದಿ:೧೮.೧೧.೨೦೦೭ 'ಟಿಪ್ಪೂಸ್ ಟೆಕ್ನಾಲಜಿ', **ಡೆಕ್ಕನ್ ಹೆರಾಲ್ಡ್.**

೨. **ಡೆಕ್ಕನ್ ಹೆರಾಲ್ಡ್** ದಿ: ೧೭.೧೨.೨೦೧೨.

೩. **ಟೈಮ್ಸ್ ಆಫ್ ಇಂಡಿಯಾ** ದಿ: ೨೬.೧೧.೧೨.

೪. **ಡೆಕ್ಕನ್ ಕ್ರಾನಿಕಲ್** ೨೬.೧೧.೨೦೧೨.

೫. **ಪ್ರಜಾವಾಣಿ** ದಿ: ೨೫.೧೧.೧೨

೬. **ವಿಜಯವಾಣಿ** ದಿ: ೨೬.೧೧.೧೨

**ಸಂದರ್ಶನಗಳು**

೧. ಅರುಣಿ ಎಸ್.ಕೆ., (೫೨) ಕಾರ್ಯದರ್ಶಿಗಳು, ಐ.ಸಿ.ಎಚ್.ಆರ್, ನವದೆಹಲಿ, ದಿ:೧೨.೦೪.೨೦೧೪; ೨೮.೦೩.೨೦೧೫; ೨೪.೦೮.೨೦೧೭.

೨. ಕಾವಲಮ್ಮ (೫೨) ಉಪನ್ಯಾಸಕಿ, ಬೆಂಗಳೂರು. ದಿ: ೦೮.೦೫.೨೦೧೭.

೩. ಕೆಂಪಯ್ಯ ಕೆ. (೫೫), ಕೃಷಿಕ, ಹುಲಿಯೂರು ದುರ್ಗ, ದಿ: ೧೩.೦೫.೨೦೧೬ ಮತ್ತು ೨೮.೦೨.೨೦೧೭.

೪. ಗಂಗಯ್ಯ (೭೦), ಕೃಷಿಕ, ಅಂತಳ್ಳಿ, ದಿ: ೧೩.೦೫.೨೦೧೬.

೫. ಜಮುನಾ ಎಂ. ಪ್ರಾಧ್ಯಾಪಕರು, ಬೆಂಗಳೂರು. ದಿ: ೨೨.೦೬.೨೦೧೭.

೬. ನಾಗರಾಜ್ (೫೦) ವಕೀಲರು, ಯಲಗಲವಾಡಿ. ದಿ: ೨೬.೦೧.೨೦೧೬

೭. ನಾಗರಾಜ ಟಿ.ಎನ್. (೫೭) ಅರ್ಚಕರು, ನಂದಿಬೆಟ್ಟ, ದಿ:೩೦.೦೫.೨೦೧೭

೮. ನಾಗರಾಜಯ್ಯ ವಡ್ಡಗೆರೆ (೫೧) ಸಾಹಿತಿ, ವಡ್ಡಗೆರೆ, ದಿ: ೦೮.೦೯.೨೦೧೬.

೯. ಪುಟ್ಟರಾಜು, (೬೦) ಕೃಷಿಕ, ಗಂಜಾಂ, ದಿ:೩೦.೦೫.೨೦೧೭

೧೦. ಪೂವಯ್ಯ (೫೨) ಉಪನ್ಯಾಸಕರು, ಬೆಂಗಳೂರು. ದಿ: ೧೨.೦೪.೨೦೧೫.

೧೧. ಪ್ರಕಾಶಮೂರ್ತಿ (೪೫) ಪ್ರಕಾಶಕರು, ಬೆಂಗಳೂರು, ದಿ: ೧೦.೧೧.೨೦೧೫ ಮತ್ತು ೧೮.೦೬.೨೦೧೭.

೧೨. ಮುನಿವೆಂಕಟಪ್ಪ (೬೫) ಕುರಿಗಾಹಿ, ಕಳವಾರ ಗ್ರಾಮ. ದಿ: ೧೫.೦೮.೨೦೧೪.

೧೩. ಮುದ್ದುವೀರಪ್ಪ (೪೦) ಉಪನ್ಯಾಸಕರು, ಸಿರಾ, ದಿ: ೦೬.೧೦.೨೦೧೭.

೧೪. ಯೋಗೀಶ್ವರಪ್ಪ (೫೮) ಪ್ರಾಂಶುಪಾಲರು, ತುಮಕೂರು. ೨೩.೧೧.೨೦೧೨.

೧೫. ರಾಮಲಿಂಗಯ್ಯ (೬೨), ನಿವೃತ್ತ ಶಿಕ್ಷಕರು, ಹಂದಲಗೆರೆ, ದಿ:೧೫.೦೮.೨೦೧೪.

೧೬. ರಂಗಕ್ಕ (೬೪) ಕೃಷಿ ಕೆಲಸ, ಮಿಡಿಗೇಶಿ, ದಿ: ೧೭.೦೬.೨೦೧೭.

೧೭. ಸುಮ (೬೫) ಗೃಹಿಣಿ, ನಾಪೋಕ್ಲು, ದಿ: ೨೨.೧೦.೨೦೧೬.

೧೮. ಶಂಕರಪ್ಪ (೬೨), ಕೃಷಿಕ, ಜೋಡಿಗಟ್ಟೆ ಗ್ರಾಮ, ದಿ: ೨೨.೦೯.೨೦೧೫.

೧೯. ಶಿವರಾಮ್ (೪೮) ಪೋಲೀಸ್, ಬೇಕಲ್, ದಿ: ೧೩.೦೮.೨೦೧೬.

೨೦. ಹೊನ್ನಪ್ಪ, (೮೫), ನಿವೃತ್ತ ಶಿಕ್ಷಕರು, ಹಂದಲಗೆರೆ, ದಿ:೧೨.೦೪.೨೦೧೬.

೨೧. ಕೇಶವ ಟಿ.ಎಂ., (೬೩), ಪುರಾತತ್ವವಿದರು, ಬೆಂಗಳೂರು, ದಿ.೧೭.೦೪.೨೦೧೭.

***

